# ಕೆ.ಬಿ.ಗಟ್ಟಿಯವರ ಕೃತಿಗಳಲ್ಲಿ ಪ್ರತಿರೋಧದ ನೆಲೆಗಳು

ಪಿಎಚ್.ಡಿ. ಪದವಿಗಾಗಿ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು

ರಾಜೇಶ್ ಬಿ.

ಮಾರ್ಗದರ್ಶಕರು

ಡಾ. ತಾಳ್ತಜೆ ವಸಂತ ಕುಮಾರ
ವಿಶ್ರಾಂತ ಪ್ರಾಧ್ಯಾಪಕರು,
ಮುಂಬಯಿ ವಿಶ್ವವಿದ್ಯಾನಿಲಯ, ಮುಂಬಯಿ

ಮೂಲಕ

ಡಾ. ಹಾಮಾನಾ ಸಂಶೋಧನ ಕೇಂದ್ರ
ಶ್ರೀ ಧ. ಮಂ. ಕಾಲೇಜು, ಉಜಿರೆ, ದ.ಕ.

ಮಾನ್ಯತೆ

ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬

೨೦೧೧

# ಕೆ.ಟಿ.ಗಟ್ಟಿಯವರ ಕೃತಿಗಳಲ್ಲಿ ಪ್ರತಿರೋಧದ ನೆಲೆಗಳು

ಪಿಎಚ್.ಡಿ. ಪದವಿಗಾಗಿ
ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಮಹಾಪ್ರಬಂಧ

**ಸಂಶೋಧಕರು**

ರಾಜೇಶ್ ಬಿ.

**ಮಾರ್ಗದರ್ಶಕರು**

ಡಾ. ತಾಳ್ತಜೆ ವಸಂತ ಕುಮಾರ
ವಿಶ್ರಾಂತ ಪ್ರಾಧ್ಯಾಪಕರು,
ಮುಂಬಯಿ ವಿಶ್ವವಿದ್ಯಾನಿಲಯ, ಮುಂಬಯಿ

**ಮೂಲಕ**

ಡಾ.ಹಾಮಾನಾ ಸಂಶೋಧನ ಕೇಂದ್ರ
ಶ್ರೀ ಧ.ಮಂ. ಕಾಲೇಜು, ಉಜಿರೆ, ದ.ಕ.

**ಮಾನ್ಯತೆ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩೨೭೬

೨೦೧೧

# ಪ್ರಮಾಣ ಪತ್ರ

'ಕೆ.ಟಿ.ಗಟ್ಟಿಯವರ ಕೃತಿಗಳಲ್ಲಿ ಪ್ರತಿರೋಧದ ನೆಲೆಗಳು' ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಸಿದ್ಧಪಡಿಸಲಾಗಿದೆ. ಡಾ. ತಾಳ್ತಜೆ ವಸಂತ ಕುಮಾರ, ವಿಶ್ರಾಂತ ಪ್ರಾಧ್ಯಾಪಕರು, ಕನ್ನಡ ವಿಭಾಗ, ಮುಂಬಯಿ ವಿಶ್ವವಿದ್ಯಾನಿಲಯ ಇವರು ಈ ಪ್ರಬಂಧ ರಚನೆಗೆ ಮಾರ್ಗದರ್ಶನ ಮಾಡಿದ್ದಾರೆ. ಈ ಮಹಾಪ್ರಬಂಧವನ್ನು ಅಥವಾ ಇದರ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಲಿ, ಪ್ರಕಟಣೆಗಾಗಲಿ ಬಳಸಿಕೊಂಡಿರುವುದಿಲ್ಲ ಎಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.



ದಿನಾಂಕ: 15.06.2011

ಸ್ಥಳ : ಉಜಿರೆ

(ರಾಜೇಶ್ ಬಿ.)

ಸಂಶೋಧಕರು

# ದೃಢೀಕರಣ ಪತ್ರ

ರಾಜೇಶ್ ಬಿ. ಇವರು 'ಕೆ.ಟಿ.ಗಟ್ಟಿಯವರ ಕೃತಿಗಳಲ್ಲಿ ಪ್ರತಿರೋಧದ ನೆಲೆಗಳು' ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಮಂಡಿಸಲು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಈ ಮಹಾಪ್ರಬಂಧದ ವಿಷಯವನ್ನು ಅಥವಾ ಇದರ ಯಾವುದೇ ಭಾಗವನ್ನು ಅಭ್ಯರ್ಥಿಯು ಈ ಮೊದಲು ಯಾವುದೇ ಪದವಿಗಾಗಲೀ, ಉದ್ದೇಶಗಳಿಗಾಗಲೀ ಬಳಸಿಕೊಂಡಿರುವುದಿಲ್ಲವೆಂದು ಈ ಮೂಲಕ ದೃಢೀಕರಿಸುತ್ತೇನೆ.



ದಿನಾಂಕ: 15.06.2011

ಸ್ಥಳ : ಉಜಿರೆ

(ಡಾ. ತಾಳ್ತಜೆ ವಸಂತ ಕುಮಾರ)

ಮಾರ್ಗದರ್ಶಕರು

# ವಿಷಯಾನುಕ್ರಮಣಿಕೆ

# ಅಧ್ಯಾಯ-೧
# ಅಧ್ಯಯನದ ಉದ್ದೇಶ, ವ್ಯಾಪ್ತಿ

## ೧.೧: ಪೀಠಿಕೆ

ಕೆ.ಟಿ.ಗಟ್ಟಿಯವರು ಸೃಜನಶೀಲ ಮತ್ತು ಸೃಜನೇತರ ವಲಯದಲ್ಲಿ ಬಹಳಷ್ಟು ಕೃತಿಗಳನ್ನು ರಚಿಸಿದ ಕನ್ನಡದ ಪ್ರಸಿದ್ಧ ಬರಹಗಾರರು. ಪ್ರಬಂಧ, ವಿಮರ್ಶೆ, ಕಾದಂಬರಿ, ಸಣ್ಣಕಥೆ, ನಾಟಕ, ಪ್ರವಾಸಕಥನ, ಭಾಷಾ ಅಧ್ಯಯನ, ಕಾವ್ಯ, ಶಿಕ್ಷಣ ಹೀಗೆ ಸಾಹಿತ್ಯದ ಹಲವಾರು ಪ್ರಕಾರಗಳಲ್ಲಿ ಕೆಲಸ ಮಾಡಿದ್ದಾರೆ. ತೀರಾ ವಾಸ್ತವವಾದಿಯಾದ ಕೆ.ಟಿ.ಗಟ್ಟಿಯವರು ನಿಷ್ಠುರ, ನೇರ ಮಾತಿನವರು. ಇವರು ಬರೆದ ಕಾದಂಬರಿಗಳಲ್ಲಿ ಹೆಚ್ಚಿನವುಗಳು ತರಂಗ, ಸುಧಾ, ಪ್ರಜಾವಾಣಿ, ಕರ್ಮವೀರ, ತುಷಾರ, ಮಲ್ಲಿಗೆ ಮೊದಲಾದ ಪತ್ರಿಕೆಗಳಲ್ಲಿ ಧಾರಾವಾಹಿಯ ರೂಪದಲ್ಲಿ ಪ್ರಕಟಗೊಂಡಿವೆ. ನವಭಾರತ, ಇಂದ್ರಧನುಸ್ಸು, ಗೋಕುಲ, ಬಾಲಚಂದ್ರ, ನವಯುಗ ಪತ್ರಿಕೆಗಳಲ್ಲಿ ಇವರ ಕಥೆ, ಕವನಗಳು ಪ್ರಕಟಗೊಂಡಿವೆ.

ಕಾದಂಬರಿಕಾರರಾಗಿ ಹೆಚ್ಚು ಜನಪ್ರಿಯರಾಗಿರುವ ಕೆ.ಟಿ.ಗಟ್ಟಿಯವರು ತಮ್ಮ ವಿಶಿಷ್ಟವಾದ ಶೈಲಿಯ ಮೂಲಕ ಜನರನ್ನು ಮೋಡಿ ಮಾಡಿದವರು. ಸಮಾಜದಲ್ಲಿ ನಡೆಯುವ ಅನ್ಯಾಯಗಳನ್ನು ಕಂಡು ಸುಮ್ಮನಿರುವ ಸ್ವಭಾವ ಇವರದಲ್ಲ. ಬದುಕು ಎಂದರೆ ಬರಹವೇ ಆಗಿರುವ ಕೆ.ಟಿ.ಗಟ್ಟಿಯವರು ತಮ್ಮ ಬರವಣಿಗೆಯ ಮೂಲಕ ಸಮಾಜದ ಓರೆ ಕೋರೆಗಳನ್ನು, ಬದುಕಿನ ನಾನಾ ಮುಖಗಳನ್ನು ಪರಿಣಾಮಕಾರಿಯಾಗಿ ಕಟ್ಟಿಕೊಟ್ಟಿದ್ದಾರೆ. ಇವರು ಯಾವುದೇ ಪಂಥ, ಸಿದ್ಧಾಂತಗಳಿಗೆ ಕಟ್ಟು ಬೀಳದೆ ತನ್ನದೇ ಆದ ರೀತಿಯಲ್ಲಿ ಬರೆದವರು. ಸಾಮಾಜಿಕ ಸಮಸ್ಯೆಗಳನ್ನು ವೈಚಾರಿಕ ನೆಲೆಗಟ್ಟಿನಲ್ಲಿ ತಮ್ಮ ಕೃತಿಗಳ ಮೂಲಕ ಶೋಧಿಸುವ ಕೆಲಸ ಮಾಡಿದ್ದಾರೆ.

ಯಾವುದೇ ಒಂದು ಬರಹ ಸಮಾಜದ ಕೈಗನ್ನಡಿಯೂ ಹೌದು. ಬದುಕಿನಲ್ಲಿ ಸಂಘರ್ಷ, ಪ್ರತಿರೋಧಗಳು ಸಹಜ. ಯಾವುದಾದರೂ ಒಂದು ರೀತಿಯ ಸಂಘರ್ಷವಿಲ್ಲದೆ ಬದುಕು ಇರಲು ಅಸಾಧ್ಯ. ಪ್ರತಿರೋಧ ಎನ್ನುವುದು ಸಂಘರ್ಷದ ಇನ್ನೊಂದು ಮುಖ. ವ್ಯಕ್ತಿಯೊಬ್ಬ ತನ್ನ ಬದುಕಿನಲ್ಲಿ ಹಲವಾರು ರೀತಿಯ ಅನುಭವಗಳಿಗೆ ಅನಿವಾರ್ಯವಾಗಿ ತನ್ನನ್ನು ತಾನು ಒಡ್ಡಿಕೊಳ್ಳುತ್ತಾನೆ. ಅವುಗಳಲ್ಲಿ ಕೆಲವು ಇಷ್ಟವಾಗಬಹುದು, ಮತ್ತೆ ಕೆಲವು ಇಷ್ಟವಾಗದಿರಬಹುದು. ಅನುಭವಗಳು ವ್ಯಕ್ತಿಯೊಬ್ಬನಿಗೆ ಜೀವನದಲ್ಲಿ ಪಾಠವನ್ನು ಕಲಿಸಿಕೊಡುತ್ತವೆ. ಪ್ರತಿಯೊಬ್ಬ

ಮನುಷ್ಯನಲ್ಲಿಯೂ ಪ್ರಶ್ನಿಸುವ ಗುಣವಿರುತ್ತದೆ. ನಮ್ಮನ್ನು ನಾವು ಯಾವುದೋ ಒಂದು ಅನುಭವಕ್ಕೆ ಒಡ್ಡಿಕೊಂಡಾಗ ನಮ್ಮ ಮನಸ್ಸು ಆ ಬಗ್ಗೆ ಒಳಗೊಳಗೇ ಪ್ರಶ್ನಿಸುತ್ತಿರುತ್ತದೆ. ಪ್ರಶ್ನಿಸುವ ಮನೋಭಾವ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತದೆ. ತನ್ನ ಮನಸ್ಸಿನಲ್ಲಿ ಮೂಡುವ ಇಂತಹ ಪ್ರಶ್ನೆಗಳಿಗೆ ಸಕಾರಾತ್ಮಕ ಉತ್ತರ ಸಿಗದಿದ್ದಾಗ ಮನಸ್ಸಿನಲ್ಲಿ ಪ್ರತಿರೋಧದ ಭಾವನೆಗಳು ಮೂಡಲಾರಂಭಿಸುತ್ತವೆ.

ವ್ಯಕ್ತಿಯೊಬ್ಬನಲ್ಲಿ ಮೂಡುವ ಇಂತಹ ಪ್ರತಿರೋಧಗಳು ಸಮಾಜದ ನಾನಾ ನಡವಳಿಕೆಗಳಿಗೆ ಆತನ ಪ್ರತಿಕ್ರಿಯೆಯೇ ಆಗಿರುತ್ತದೆ. ಈ ಬಗೆಯ ಅನುಭವಗಳಿಂದಾಗಿ ಬರಹಗಾರನ ಕಲೆಗಳಲ್ಲಿಯೂ ಇದು ವ್ಯಕ್ತವಾಗುವುದು ಸಾಮಾನ್ಯ ಸಂಗತಿ. ಸ್ವಾತಂತ್ರ್ಯ ಪೂರ್ವದಲ್ಲಿ ಬ್ರಿಟಿಷ್ ವಸಾಹತುಶಾಹಿ ತನ್ನ ಪ್ರಭುತ್ವವನ್ನು ಉಳಿಸಿ ಬೆಳೆಸಿಕೊಳ್ಳಲು ತನ್ನದೇ ಆದ ಸಾಂಸ್ಕೃತಿಕ ಯಾಜಮಾನ್ಯವನ್ನು ಭಾರತದ ಮೇಲೆ ಹೇರುವುದರಲ್ಲಿ ಯಶಸ್ವಿಯಾಗಿತ್ತು. ಇಂಗ್ಲಿಷ್ ಶಿಕ್ಷಣದ ಮೂಲಕ ವೈಚಾರಿಕತೆ ಪ್ರಗತಿ ಎಂಬ ವಿಚಾರವನ್ನು ಪ್ರಚುರ ಪಡಿಸುವ ಮೂಲಕ ಭಾರತೀಯರು ಅದನ್ನು ಒಪ್ಪಿಕೊಳ್ಳುವಂತೆ ಮಾಡಿದ್ದರು. ಜಾತಿ, ಧರ್ಮ, ಲಿಂಗಭೇದವನ್ನಾಧರಿಸಿದ ಭಾರತೀಯ ಸಮಾಜದಲ್ಲಿ ತಿರಸ್ಕಾರಕ್ಕೆ ಒಳಗಾಗಿದ್ದ ವರ್ಗಗಳಿಗೆ ಮತ್ತು ಸಮುದಾಯಗಳಿಗೆ ಬ್ರಿಟಿಷ್ ಪ್ರಭುತ್ವವು ಬಿಡುಗಡೆಯ ದಾರಿಯಾಗಿ ಕಂಡುಬಂತು. ಆದುದರಿಂದ ಬ್ರಿಟಿಷರ ಸಾಂಸ್ಕೃತಿಕ ಯಾಜಮಾನ್ಯವನ್ನು ಒಪ್ಪಿಕೊಂಡು ದೇಶೀ ಯಾಜಮಾನ್ಯದಿಂದ ಮುಕ್ತಿ ಪಡೆಯುವ ವೈಚಾರಿಕತೆ ಸುಧಾರಣಾವಾದವಾಗಿ ಕನ್ನಡ ಸಾಹಿತ್ಯದ ಮೇಲೆ ಗಾಢವಾದ ಪ್ರಭಾವ ಬೀರಿತು. ಇದನ್ನು ಒಳಗಿನವ ಹೊರಗಿನವನಾಗಿ ಪರಿವರ್ತನೆಗೊಳ್ಳುವ ವಿನ್ಯಾಸವೆಂದು ಗುರುತಿಸಬಹುದು. ಕನ್ನಡದಲ್ಲಿ ರಚಿತವಾದ ವೈಚಾರಿಕ ಕಾದಂಬರಿ ಪರಂಪರೆಯನ್ನು ಗಮನಿಸಿದಾಗ ಅಲ್ಲಿ ಬರುವ ಮುಖ್ಯ ಪಾತ್ರಗಳು ಈ ದೇಶದ ಒಳಗಿನವರಾಗಿದ್ದರೂ ಆಂಗ್ಲ ಶಿಕ್ಷಣದಿಂದಾಗಿ ಹೊರಗಿನವರಾಗುತ್ತಾರೆ. ನವೋದಯ ಕಾಲದಿಂದ ಹಿಡಿದು ದಲಿತ ಬಂಡಾಯ ಕಾಲದವರೆಗೂ ನಾವು ಇದನ್ನು ಕಾಣಬಹುದು. ದೇಶಕ್ಕೆ ಸ್ವಾತಂತ್ರ್ಯ ಲಭಿಸಿದ ನಂತರ ಜಾತಿ – ಲಿಂಗ ಆಧಾರಿತವಾದ ದೇಶೀ ಸಾಂಸ್ಕೃತಿಕ ಯಾಜಮಾನ್ಯವೇ ಸಂಪೂರ್ಣವಾಗಿ ಪ್ರತಿರೋಧದ ಗುರಿಯಾಯಿತು. ಜಾತಿ ವರ್ಗಾಧಾರಿತ ಅಸಮಾನತೆ ದೂರವಾಗದೆ ರಾಜಕೀಯ ಸ್ವಾತಂತ್ರ್ಯದಿಂದ ಏನೂ ಸಾಧಿಸಿದಂತಾಗಲಾರದು.

ಅನೇಕ ಶತಮಾನಗಳ ಕಾಲ ರಾಜರ ಆಸ್ಥಾನಗಳಿಗೆ ಮತ್ತು ಮಠಗಳಿಗೆ ಸೀಮಿತವಾಗಿದ್ದ ಸಾಹಿತ್ಯ ಇಂದು ಸರ್ವ ಶಿಕ್ಷಣದ ಮೂಲಕ ಸಾಮಾಜಿಕ ಶಕ್ತಿಯಾಗಿ ಬೆಳೆಯುತ್ತಾ ಬಂದಿದೆ. ಹಿಂದೂ ಸಮಾಜದಲ್ಲಿ ಉಪೇಕ್ಷೆಗೆ ಗುರಿಯಾಗಿದ್ದ ವರ್ಗಗಳಾದ

ದಲಿತರು, ಬುಡಕಟ್ಟು ಜನಾಂಗದವರು, ಸ್ತ್ರೀಯರು, ಶೋಷಣೆಗೆ ಒಳಗಾದವರು ಇವರೆಲ್ಲರೂ ಪ್ರತಿರೋಧದ ಮುಖವಾಣಿಗಳಾಗಿ ದಲಿತ – ಬಂಡಾಯ – ಸ್ತ್ರೀವಾದಿ ಸಾಹಿತ್ಯವನ್ನು ರಚಿಸುತ್ತಾರೆ. ಅನೇಕ ಶತಮಾನಗಳ ಕಾಲ ಭಾರತೀಯ ಸಮಾಜದಲ್ಲಿ ಉಪೇಕ್ಷಿತವಾದ ಸಮುದಾಯಗಳು ವರ್ಗಗಳು ತಮ್ಮ ಅಸ್ತಿತ್ವವನ್ನೂ ಆಶೋತ್ತರಗಳನ್ನು ಕನ್ನಡ ಸಾಹಿತ್ಯದ ಮೂಲಕ ದಾಖಲಿಸಲು ತೊಡಗುತ್ತಾರೆ.

ಕೆ.ಟಿ.ಗಟ್ಟಿಯವರ ಕೃತಿಗಳಲ್ಲಿ ಬರುವ ನಾಯಕರಲ್ಲಿ ಹೆಚ್ಚಿನವರು ಶಿಕ್ಷಣ ಪಡೆದವರು. ಕೆಲವು ಪಾತ್ರಗಳು ಕೆಳವರ್ಗದಿಂದ ಬಂದ ಸುಶಿಕ್ಷಿತರು. ಶಿಕ್ಷಣವೇ ಇವರಲ್ಲಿ ಒಂದು ಬಗೆಯ ಸಾಮಾಜಿಕ ಅರಿವನ್ನು ಮೂಡಿಸಿದೆ. ಸಮಾಜದ ಅವ್ಯವಸ್ಥೆ, ಅಸಮಾನತೆಯ ಅರಿವು ಉಂಟಾಗಿ ಆ ಪಾತ್ರಗಳು ಅಂತಹ ಸಾಮಾಜಿಕ ವ್ಯವಸ್ಥೆಯ ವಿರುದ್ಧ ಪ್ರತಿರೋಧ ವ್ಯಕ್ತಪಡಿಸುತ್ತವೆ. ಕೆ.ಟಿ.ಗಟ್ಟಿಯವರ ಕೃತಿಗಳನ್ನು ಓದುತ್ತಿದ್ದಂತೆ ಅವರ ಕೃತಿಗಳಲ್ಲಿ ನೇಯಲ್ಪಟ್ಟಿರುವ ಹತ್ತು ಹಲವು ಎಳೆಗಳನ್ನು ಬಿಚ್ಚುತ್ತಾ ಹೋದಂತೆ ಬದುಕಿನ ಸಂಘರ್ಷಗಳು ತೆರೆದುಕೊಳ್ಳುತ್ತಾ ಹೋಗುತ್ತವೆ. ಕೃತಿಗಳಲ್ಲಿ ಕಂಡು ಬರುವ ಸಂಘರ್ಷದ ಎಳೆಗಳನ್ನು, ಪ್ರತಿರೋಧಗಳನ್ನು ಶೋಧಕ್ಕೆ ಒಳಪಡಿಸುವ ಅಗತ್ಯವಿದೆಯೆಂದು ಕಂಡು ಬರುತ್ತದೆ. ಹಾಗಾಗಿ ಅವರ ಒಟ್ಟು ಕೃತಿಗಳಲ್ಲಿ ಜಾತಿ, ರಾಜಕೀಯ, ಪುರೋಹಿತಶಾಹಿ, ಬ್ರಾಹ್ಮಣ್ಯ, ದೇವರು, ದೇವಾಲಯ, ಮಠ, ಸ್ವಾಮಿಗಳ ಮೋಸ, ವಂಚನೆ, ಧಾರ್ಮಿಕ ಮೌಢ್ಯ, ಕುತಂತ್ರ, ದುರಾಡಳಿತ ವ್ಯವಸ್ಥೆಯ ಭ್ರಷ್ಟ ಮುಖಗಳು ಮುಂತಾದ ವಿಚಾರಗಳ ಕುರಿತು ಕಂಡು ಬರುವ ಪ್ರತಿರೋಧದ ನೆಲೆಗಳನ್ನು ಗುರುತಿಸುವ ಅಗತ್ಯವನ್ನು ಮನಗಂಡು ಸಂಶೋಧನ ಕಾರ್ಯವನ್ನು ಕೈಗೊಂಡಿರುತ್ತೇನೆ. ಪ್ರತಿರೋಧ ಎನ್ನುವ ಪದಕ್ಕೆ 'ಅಡ್ಡಿ', 'ಮುತ್ತಿಗೆ' ಎಂಬ ಅರ್ಥವನ್ನು ನಿಘಂಟು ಸೂಚಿಸುತ್ತದೆ.

**(ಕನ್ನಡ ರತ್ನಕೋಶ, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು 2001, ಪುಟ 186)**

ಪ್ರತಿರೋಧವೆಂದರೆ ಪ್ರತಿಭಟನೆಯೆಂದೂ ಒಂದು ರೀತಿಯ ಬಂಡಾಯದ ಸ್ಥಿತಿಯೆಂದೂ, ವಿರೋಧಿಸುವ ಮನೋಭಾವನೆಯೆಂದೂ ಅರ್ಥೈಸಿಕೊಳ್ಳಬಹುದು.

ಪ್ರತಿರೋಧ ಮಾತಿನ ಮೂಲಕ, ನಡವಳಿಕೆಯ ಮೂಲಕ ಅಥವಾ ಬರಹದ ಮೂಲಕ ವ್ಯಕ್ತವಾಗಬಹುದು. ಬರಹಗಾರನೊಬ್ಬನು ಬದುಕಿನಲ್ಲಿ ಪಡೆದುಕೊಂಡ ಅನುಭವಗಳಿಂದ ಕೃತಿಗಳಲ್ಲಿ ಪಾತ್ರವನ್ನು ಸೃಷ್ಟಿಸುತ್ತಾನೆ. "ಬದುಕು ಮತ್ತು ಸಂಘರ್ಷ ವ್ಯಕ್ತಿ ಹಾಗೂ ಸಮಾಜದ ಚಾಲನ ಶಕ್ತಿಯಾಗಿ ಕೆಲಸ ಮಾಡುತ್ತದೆ. ಇವೆರಡೂ ಒಂದನ್ನೊಂದು ಬಿಟ್ಟು ಅಗಲುವುದಿಲ್ಲ. ಯಾವುದಾದರೂ ಬಗೆಯ ಸಂಘರ್ಷವಿಲ್ಲದ

ಬದುಕನ್ನು ಊಹಿಸಿಕೊಳ್ಳಲೂ ಸಾಧ್ಯವಿಲ್ಲ. ವ್ಯಕ್ತಿ ತಾನು ಬದುಕುವ ಪರಿಸರದಲ್ಲಿ ಚಲನೆಗೊಂಡಾಗ ಒಂದು ಬಗೆಯ ಸಂಘರ್ಷ ಉಂಟಾಗಬಹುದು. ಸಮಾಜದೊಡನೆ ಸಂಬಂಧವಿಟ್ಟುಕೊಳ್ಳಲು ಪ್ರಯತ್ನಿಸುವಾಗ ಇನ್ನೊಂದು ಬಗೆಯ ಸಂಘರ್ಷ ಉಂಟಾಗಬಹುದು. ಬಡವ ಮತ್ತು ಶ್ರೀಮಂತನ ನಡುವೆ ಇರುವ ಸಂಘರ್ಷ ಜನಪ್ರಿಯತೆಯನ್ನು ಪಡೆದುಕೊಂಡಿರುವುದರಿಂದ ಇದು ಸುಲಭವಾಗಿ ಎದ್ದು ಕಾಣುತ್ತದೆ. ಆದರೆ ವ್ಯಕ್ತಿಯು ತನ್ನ ಕ್ಷೇತ್ರದೊಳಗೆ ನಡೆಸುವ ಸಂಘರ್ಷ ಗುಪ್ತ ಗಾಮಿನಿ ಯಾಗಿರುವುದರಿಂದ ಕೆಲಮಟ್ಟಿಗೆ ನಿರ್ಲಕ್ಷ್ಯಕ್ಕೆ ಒಳಗಾಗುತ್ತದೆ." ಬದುಕಿನ ಇಂತಹ

**(ಕೋದಂಡರಾಮ ಎನ್.ಕೆ, 1996. ಪುಟ 11)**

ಸಂಘರ್ಷಗಳು ಪ್ರತಿಭಟನೆಯ ರೂಪದಲ್ಲಿ ಅಭಿವ್ಯಕ್ತಗೊಳ್ಳುತ್ತವೆ. ಲೇಖಕನೊಬ್ಬ ತನ್ನ ಕೃತಿಗಳ ಪಾತ್ರಗಳ ಮೂಲಕ ಪ್ರತಿರೋಧ ವ್ಯಕ್ತಪಡಿಸುತ್ತಾನೆ. ಇಂತಹ ಪ್ರತಿರೋಧಗಳು ಬೇರೆ ಬೇರೆ ನೆಲೆಗಳಲ್ಲಿ ವ್ಯಕ್ತವಾಗುತ್ತಾ ಹೋಗುತ್ತವೆ.

## ೧.೨: ಉದ್ದೇಶ

ಸಾಹಿತ್ಯ ಕೃಷಿಯಲ್ಲಿ ತನ್ನನ್ನು ತಾನು ತೊಡಗಿಸಿಕೊಂಡು ಸಾಕಷ್ಟು ಕೃತಿಗಳನ್ನು ಬರೆದ ಕೆ.ಟಿ.ಗಟ್ಟಿಯವರನ್ನು ಕನ್ನಡದ ವಿಮರ್ಶಕರು ಮುಖ್ಯ ಬರಹಗಾರರೆಂದು ಪರಿಗಣಿಸಲಿಲ್ಲ. ಅವರ ಕೃತಿಗಳ ಬಗ್ಗೆ ಹೆಚ್ಚಾಗಿ ಚರ್ಚಿಸಲಿಲ್ಲ. ಅವರ ಕೃತಿಗಳನ್ನು ಜನಪ್ರಿಯ ಸಾಹಿತ್ಯದ ವರ್ಗಕ್ಕೆ ಸೇರಿಸಿರುವುದೇ ಈ ಬಗೆಯ ನಿರ್ಲಕ್ಷ್ಯಕ್ಕೆ ಕಾರಣ. ಇಂದು ಸಾಹಿತ್ಯ ಕ್ಷೇತ್ರದಲ್ಲಿ 'ಗಂಭೀರ' ಮತ್ತು 'ಜನಪ್ರಿಯ'ವೆಂಬ ಎರಡು ವರ್ಗಗಳಾಗಿ ಅವುಗಳ ನಡುವೆ ಆಳವಾದ ಕಂದಕ ಏರ್ಪಟ್ಟಿದೆ. "ಜನಪ್ರಿಯ ಸಾಹಿತ್ಯಕ್ಕೆ ಅಪಾರ ಓದುಗರಿದ್ದರೂ ಆ ವರ್ಗವನ್ನು ಸಾಹಿತ್ಯಿಕ ಸಂಸ್ಥೆಗಳು ಮತ್ತು ವಿಮರ್ಶಕರು ಸಂಪೂರ್ಣವಾಗಿ ನಿರ್ಲಕ್ಷಿಸಿದ್ದಾರೆ."

**(ರಾಮಚಂದ್ರ ಸಿ.ಎಸ್, 2002, ಪುಟ 7)**

ಸಿ.ಎನ್.ರಾಮಚಂದ್ರರವರು ಚರ್ಚಿಸುವಂತೆ "ಜನಪ್ರಿಯತೆ ಎಂಬುದು ಕಾಲದಿಂದ ಕಾಲಕ್ಕೆ ಬದಲಾಗುತ್ತಾ ಹೋಗುವ ಲಕ್ಷಣ. ಇಷ್ಟೇ ಅಲ್ಲದೆ ಓದುಗನಿಗೂ ಕೂಡ ಒಂದು ಕಾಲದಲ್ಲಿ ರಚಿಸಿದ ಕೃತಿಗಳು ಮತ್ತೊಂದು ಕಾಲದಲ್ಲಿ ನೀರಸವಾಗಿ ತೋರಬಹುದು" ಎನ್ನುತ್ತಾರೆ.

**(ರಾಮಚಂದ್ರನ್ ಸಿ.ಎನ್, 1995, ಪುಟ 26)**

ಆರಂಭದ ದಿನಗಳಲ್ಲಿ ಕೆ.ಟಿ.ಗಟ್ಟಿಯವರ ಕಾದಂಬರಿಗಳು ಪತ್ರಿಕೆಗಳಲ್ಲಿ ಧಾರಾವಾಹಿಗಳಾಗಿ ಪ್ರಕಟಗೊಳ್ಳುತ್ತಿದ್ದು ಅತಿಹೆಚ್ಚು ಓದುಗರನ್ನು ಸೆಳೆದುಕೊಂಡಿದ್ದವು.

ನವ್ಯ ಸಾಹಿತ್ಯ ಪಂಥ ಹುಟ್ಟಿಕೊಂಡ ನಂತರದ ಕಾಲದಲ್ಲಿ, ನವ್ಯ ಸಾಹಿತ್ಯ ಮತ್ತು ವಿಮರ್ಶೆ ಕನ್ನಡದಲ್ಲೂ ಆರಂಭಗೊಂಡ ನಂತರದ ಕಾಲದಲ್ಲಿ ಧಾರಾವಾಹಿಗಳಾದ ಕಾದಂಬರಿಗಳು ಗಂಭೀರ ಚರ್ಚೆಗೆ ಒಳಗಾಗಲಿಲ್ಲ. ಇಂತಹ ಕೃತಿಗಳನ್ನು ಕಡಿಮೆ ಗುಣಮಟ್ಟದ ಕೃತಿಗಳು, ಮನರಂಜನೆಯನ್ನು ನೀಡುವುದೇ ಇವುಗಳ ಗುರಿ ಎಂದು ವಿಮರ್ಶೆಯ ಪರಿಧಿಯಿಂದ ಹೊರಗಿಡಲಾಯಿತು.

ಈಗಾಗಲೇ ಕನ್ನಡ ಸಾಹಿತ್ಯದ ಹಲವಾರು ಮಹಾನ್ ಕೃತಿಕಾರರ ಕುರಿತಾದ ಚಿಂತನೆ, ಸಂಶೋಧನೆಗಳು ನಡೆದಿದ್ದು ಗ್ರಾಮೀಣ ಪ್ರದೇಶದಲ್ಲಿದ್ದುಕೊಂಡು ಕನ್ನಡ ಸಾಹಿತ್ಯ ಲೋಕಕ್ಕೆ ವಿಶಿಷ್ಟ ಕೊಡುಗೆಗಳನ್ನು ನೀಡುತ್ತಿರುವ ಹಲವಾರು ಬರಹಗಾರರು ಎಲೆ ಮರೆಯ ಕಾಯಿಯಂತೆ ವಿಮರ್ಶಕರಿಂದ, ಸಂಶೋಧಕರಿಂದ ದೂರ ಉಳಿದಿದ್ದಾರೆ. ಪ್ರಸ್ತುತ ಸಂದರ್ಭದಲ್ಲಿ ಇಂತಹ ಬರಹಗಾರರ ಬರಹಗಳಲ್ಲಿನ ಶ್ರೇಷ್ಠತೆಯನ್ನು ಗುರುತಿಸುವುದು ಬಹಳ ಅಗತ್ಯವಾಗಿದೆ. ಇಂತಹ ಕೃತಿಗಳ ಬಗ್ಗೆ ಸಂಶೋಧನೆ ನಡೆದಾಗಲೇ ಅವರ ಬರಹಗಳ ವಿಶಿಷ್ಟತೆ ಬೆಳಕಿಗೆ ಬಂದು ಸಾಹಿತ್ಯಾಸಕ್ತರಲ್ಲಿ ಅವರ ಸಾಹಿತ್ಯ ಅಧ್ಯಯನದ ಕಡೆಗೆ ಒಲವು ಬೆಳೆಯುವುದು ಸಾಧ್ಯವಾಗುತ್ತದೆ. ಈ ಎಲ್ಲಾ ಹಿನ್ನಲೆಯಲ್ಲಿ ಕೆ.ಟಿ.ಗಟ್ಟಿಯವರ ಕೃತಿಗಳ ಅಧ್ಯಯನವು ಮಹತ್ವಪೂರ್ಣ ಹಾಗೂ ಅನಿವಾರ್ಯವೆನಿಸುತ್ತದೆ.

## ೧.೩: ವ್ಯಾಪ್ತಿ

ಕೆ.ಟಿ.ಗಟ್ಟಿಯವರು ಇಲ್ಲಿಯವರೆಗೆ ನಲುವತ್ತಾರು ಕಾದಂಬರಿಗಳನ್ನು, ನಾಲ್ಕು ಕಥಾ ಸಂಕಲನಗಳನ್ನು ಏಳು ಪ್ರಬಂಧ ಸಂಕಲನಗಳನ್ನು, ಹದಿನೈದು ಬಾನುಲಿ ನಾಟಕಗಳನ್ನು, ಒಂದು ಆಕಾಶವಾಣಿ ಸರಣಿ ನಾಟಕವನ್ನು, ಹತ್ತೊಂಬತ್ತು ರಂಗ ನಾಟಕಗಳನ್ನು, ಒಂದು ಪ್ರವಾಸ ಕಥನ, ಎರಡು ಕಾವ್ಯಗಳನ್ನು, ಆತ್ಮಕಥನ ಶಿಶುಸಾಹಿತ್ಯ ಅಲ್ಲದೆ ಇಪ್ಪತ್ತು ಇಂಗ್ಲಿಷ್ ನಾಟಕಗಳು, ತುಳುಭಾಷೆಯಲ್ಲಿ ಒಂದು ಕಾದಂಬರಿ ಮತ್ತು ಒಂದು ಕವನ ಸಂಕಲನ, ಎರಡು ಉಭಯ ಭಾಷಾ ಕೃತಿಗಳನ್ನು, ಎರಡು ಶಿಕ್ಷಣಕ್ಕೆ ಸಂಬಂಧಪಟ್ಟ ಪುಸ್ತಕಗಳನ್ನು ಬರೆದಿದ್ದಾರೆ.

ಈ ಪ್ರಬಂಧವು ಮುಖ್ಯವಾಗಿ ಕೆ.ಟಿ.ಗಟ್ಟಿಯವರ ಕೃತಿಗಳನ್ನು ಕುರಿತು ಚರ್ಚಿಸುವುದರೊಂದಿಗೆ – ಅವರ ಬರಹಗಳಲ್ಲಿರುವ ಪ್ರತಿರೋಧದ ನೆಲೆಗಳನ್ನು ಗುರುತಿಸುವ ಪ್ರಯತ್ನ ನಡೆಸುತ್ತದೆ. ಇದಕ್ಕಾಗಿ ಅವರ ಬರಹಗಳಲ್ಲಿನ ಕೆಲವು ಕೃತಿಗಳನ್ನು

ಮಾತ್ರ ಆಯ್ಕೆ ಮಾಡಿಕೊಳ್ಳಲಾಗಿದೆ. ಲೇಖಕರ ಎಲ್ಲಾ ಕೃತಿಗಳನ್ನು ಕುರಿತು ಚರ್ಚಿಸಿ ನಿಲುವನ್ನು ವ್ಯಕ್ತಪಡಿಸುವುದು ಸಂಶೋಧನೆಯ ಕಾಲಮಿತಿಯಿಂದ ಅಸಾಧ್ಯದ ಕೆಲಸ. ಹಾಗಾಗಿ ಪ್ರಾತಿನಿಧಿಕವಾಗಿ ಅವರ ಹದಿನಾಲ್ಕು ಕಾದಂಬರಿಗಳನ್ನು, ನಾಲ್ಕು ಕಥಾಸಂಕಲನಗಳನ್ನು, ಹದಿನೈದು ನಾಟಕಗಳನ್ನು, ಒಂದು ಕವನ ಸಂಕಲನ, ಆತ್ಮಕಥೆ, ಪ್ರವಾಸ ಸಾಹಿತ್ಯ ಹಾಗೂ ಮೂರು ಪ್ರಬಂಧ ಸಂಕಲನಗಳನ್ನು ಇಟ್ಟುಕೊಂಡು ಅವುಗಳಲ್ಲಿ ಪ್ರತಿರೋಧದ ನೆಲೆಗಳನ್ನು ಗುರುತಿಸುವ ಪ್ರಯತ್ನ ಮಾಡಲಾಗಿದೆ. ಜಾತಿ, ಧರ್ಮ, ದೇವರು, ಪುರೋಹಿತರು, ಲಿಂಗ ಹೀಗೆ ಪ್ರತಿರೋಧದ ಬೇರೆ ಬೇರೆ ನೆಲೆಗಳನ್ನು ಒಡೆಯುವ ವಿಧಾನದ ಮೂಲಕ ಅವರ ಗುರಿ, ಗಮ್ಯತೆಗಳನ್ನು ಕಂಡುಕೊಳ್ಳಲು ಹೊರಡಲಾಗಿದೆ. ಹೀಗೆ ಹೊರಟ ಈ ಸಂಶೋಧನೆಯ ದಾರಿಯಲ್ಲಿ ಲೇಖಕರ ಕೃತಿಯ ಒಳಗೆ ಬರುವ ಪ್ರತಿರೋಧದ ಅಂಶಗಳನ್ನು ಬಯಲಿಗೆಳೆಯುವ ವ್ಯಾಪ್ತಿಯನ್ನು ಇಟ್ಟುಕೊಳ್ಳಲಾಗಿದೆ. ಈ ಉದ್ದೇಶಕ್ಕೆ ಪೂರಕವಾಗಿ ಎರಡನೇ ಅಧ್ಯಾಯವು ಕೆ.ಟಿ.ಗಟ್ಟಿಯವರ ಬರಹಗಳ ಹಿನ್ನೆಲೆಯನ್ನು ಒಳಗೊಂಡಿದೆ. ಕೆ.ಟಿ.ಗಟ್ಟಿಯವರ ಬದುಕಿನ ತತ್ವಗಳನ್ನು ಕೃತಿಗಳಲ್ಲಿ ಗ್ರಹಿಸುವ ಬರಹಗಳು ಬಂದಿರುವುದಿಲ್ಲ. ಕೆ.ಟಿ.ಗಟ್ಟಿಯವರ ಬಾಲ್ಯ, ಕಲಿಕೆ, ಉದ್ಯೋಗ, ಕುಟುಂಬ, ಸಾಮಾಜಿಕ ಹಿನ್ನೆಲೆ, ಈ ಎಲ್ಲಾ ಹಿನ್ನೆಲೆಗಳ ಮೂಲಕ ಕೆ.ಟಿ.ಗಟ್ಟಿಯವರು ಲೇಖಕರಾಗಿ ರೂಪುಗೊಂಡ ಬಗೆಯನ್ನು ಈ ಅಧ್ಯಾಯವು ತಿಳಿಸುತ್ತದೆ. ಇಲ್ಲಿ ಅವರ ಕೃತಿಗಳ ಸ್ಥೂಲ ಪರಿಚಯ ಮಾಡಲಾಗಿದೆ.

ಅಧ್ಯಾಯ ಮೂರರಲ್ಲಿ ಕೆ.ಟಿ.ಗಟ್ಟಿಯವರ ಕಾವ್ಯಗಳಲ್ಲಿ ಅಡಗಿರುವ ವಿಚಾರ ಶಕ್ತಿಯನ್ನು ಅಧ್ಯಯನ ಮಾಡಲಾಗಿದೆ. ಅಧ್ಯಾಯ ನಾಲ್ಕರಲ್ಲಿ ಕೆ.ಟಿ.ಗಟ್ಟಿಯವರ ಕಾದಂಬರಿಗಳಲ್ಲಿನ ಪ್ರತಿರೋಧದ ನೆಲೆಗಳ ಕುರಿತು ವಿವೇಚಿಸಲಾಗಿದೆ. ಅಧ್ಯಾಯ ಐದರಲ್ಲಿ ಕೆ.ಟಿ.ಗಟ್ಟಿಯವರ ಸಣ್ಣ ಕತೆಗಳು ಸಮಕಾಲೀನ ಸ್ಥಿತಿಗೆ ವೈಚಾರಿಕವಾಗಿ ತೆರೆದುಕೊಳ್ಳುವ ಬಗೆಯನ್ನು ಅಧ್ಯಯನ ನಡೆಸಲಾಗಿದೆ. ಆರನೇ ಅಧ್ಯಾಯವು ಕೆ.ಟಿ.ಗಟ್ಟಿಯವರ ನಾಟಕಗಳ ಪ್ರತಿರೋಧದ ಹಲವು ಆಯಾಮಗಳನ್ನು ಒಳಗೊಂಡಿದೆ. ಅಧ್ಯಾಯ ಏಳರಲ್ಲಿ ಕೆ.ಟಿ.ಗಟ್ಟಿಯವರ ಇತರ ಗದ್ಯಗಳಾದ ಆತ್ಮಕಥನ, ಪ್ರವಾಸ ಸಾಹಿತ್ಯ, ಪ್ರಬಂಧಗಳ ಅಧ್ಯಯನ ಕೈಗೊಳ್ಳಲಾಗಿದೆ. ಇಲ್ಲಿರುವ ಪ್ರತಿರೋಧದ ಅಂಶಗಳನ್ನು ಗುರುತಿಸಲಾಗಿದೆ. ಅಧ್ಯಾಯ ಎಂಟರಲ್ಲಿ ಒಟ್ಟು ಅಧ್ಯಯನದ ಫಲಶ್ರುತಿ ಹಾಗೂ ಫಲಿತಾಂಶಗಳ ಕುರಿತು ಚರ್ಚಿಸಲಾಗಿದೆ.

***********

## ಅಧ್ಯಾಯ-೨: ಕೆ.ಟಿ.ಗಟ್ಟಿಯವರ ಬರಹಗಳ ಹಿನ್ನೆಲೆ

೨.೧: ಬಾಲ್ಯ, ಕೌಟುಂಬಿಕ ಹಿನ್ನೆಲೆ

೨.೨: ವಿದ್ಯಾಭ್ಯಾಸ

೨.೩: ವೃತ್ತಿ ಜೀವನ

೨.೪: ಲೇಖಕರಾಗಿ ಕೆ.ಟಿ.ಗಟ್ಟಿ

# ಅಧ್ಯಾಯ–೨

# ಕೆ.ಟಿ.ಗಟ್ಟಿಯವರ ಬರಹಗಳ ಹಿನ್ನೆಲೆ

ಯಾವುದೇ ಬರಹಗಾರನ ಕೃತಿ ಆತನ ಬದುಕಿನ ಅನುಭವಗಳ ಹಿನ್ನೆಲೆಯಿಂದ ಆಕಾರ ಪಡೆದುಕೊಂಡು ಬಂದಿರುತ್ತದೆ. ಲೇಖಕನ ಬದುಕಿಗೂ ಬರಹಕ್ಕೂ ಸಂಬಂಧವಿರುತ್ತದೆ. ಆತನಿಗೆ ಬದುಕಿನಲ್ಲಿ ಆದ ಅನುಭವಗಳು, ಸಮಾಜದಲ್ಲಿನ ಬೇರೆ ಬೇರೆ ನಿಲುವುಗಳಿಗೆ ಅವನ ಪ್ರತಿಕ್ರಿಯೆ, ನಿರ್ಧಾರಗಳು ಅವನ ಬರಹದಲ್ಲಿ ಮೂಡಿಬರುತ್ತವೆ. ಅವು ಕಥೆ, ಕವನ, ಕಾದಂಬರಿ, ನಾಟಕ, ಪ್ರಬಂಧ ಸಾಹಿತ್ಯಗಳ ಮೂಲಕ ವ್ಯಕ್ತವಾಗುತ್ತವೆ. ತಾನು ಕಂಡುಕೊಂಡ ಸಮಸ್ಯೆಗಳನ್ನು ಬರಹಗಾರ ಕೃತಿಯ ಪಾತ್ರಗಳ ಮೂಲಕ ವಿಶ್ಲೇಷಿಸುತ್ತಾನೆ. ಕೆ.ಟಿ.ಗಟ್ಟಿಯವರ ಬರಹಗಳ ಹಿನ್ನೆಲೆಯನ್ನು ತಿಳಿದುಕೊಳ್ಳುವುದು ಅವರ ಕೃತಿಗಳನ್ನು ಅರ್ಥೈಸಿಕೊಳ್ಳಲು ಸಹಾಯವಾಗಬಲ್ಲದು. ಅವರ ಬಾಲ್ಯ, ವಿದ್ಯಾಭ್ಯಾಸ, ಉದ್ಯೋಗಗಳ ಬಗೆಗಿನ ತಿಳುವಳಿಕೆ ಅವರು ಬರಹಗಾರರಾಗಿ ರೂಪುಗೊಂಡ ರೀತಿಯನ್ನು ತಿಳಿಯಲು ಸಹಾಯಕವಾಗಬಲ್ಲದು.

## ೨.೧: ಬಾಲ್ಯ, ಕೌಟುಂಬಿಕ ಹಿನ್ನೆಲೆ

ಕೆ.ಟಿ.ಗಟ್ಟಿ ಎಂಬುದಾಗಿ ಸಾಹಿತ್ಯಲೋಕದಲ್ಲಿ ಪರಿಚಿತರಾಗಿರುವ ಕೂಡ್ಲು ತಿಮ್ಮಪ್ಪ ಗಟ್ಟಿಯವರು ಕಾಸರಗೋಡು ಸಮೀಪದ ಪುಟ್ಟ ಊರಾದ ಕೂಡ್ಲು ಎಂಬ ಸ್ಥಳದಲ್ಲಿ 1938ರಲ್ಲಿ ಜನಿಸಿದರು. ತಂದೆ ದೂಮಪ್ಪ ಗಟ್ಟಿ, ತಾಯಿ ಪರಮೇಶ್ವರಿ. ಐದು ಮಂದಿ ಮಕ್ಕಳಲ್ಲಿ ಕೆ.ಟಿ.ಗಟ್ಟಿಯವರೇ ಹಿರಿಯ ಮಗ. ಗಟ್ಟಿಯೆಂಬುದು ತುಳುಭಾಷೆ ಮಾತನಾಡುವ ಜನಾಂಗ. ಗಟ್ಟಿಯವರು ಉನ್ನತ ವರ್ಗವೂ ಅಲ್ಲದ ದಲಿತ ಸಮಾಜಕ್ಕೂ ಸೇರಿಕೊಳ್ಳದ ಮಧ್ಯದ ಶೂದ್ರ ಸಂಸ್ಕೃತಿಯ ಕೌಟುಂಬಿಕ ಹಿನ್ನೆಲೆಯಿಂದ ಬಂದವರು. ದೂಮಪ್ಪ ಗಟ್ಟಿಯವರದು ಬಹಳ ಶಿಸ್ತಿನಿಂದ ಕೂಡಿದ ಬದುಕು. ಇವರಿಗೆ ಸ್ವಲ್ಪ ಕೃಷಿಭೂಮಿ ಇತ್ತು. ಆದರೆ ಅದರಲ್ಲಿ ಬದುಕು ಸಾಗಿಸುವುದು ಕಷ್ಟವಾಗಿತ್ತು. ಹಾಗಾಗಿ ದೂಮಪ್ಪ ಗಟ್ಟಿಯವರು ಕೂಡ್ಲು ಶಾನುಭೋಗರ ಮನೆಯ ಯಕ್ಷಗಾನ ಮೇಳದಲ್ಲಿ ಕಲಾವಿದರಾಗಿ ಸೇರಿಕೊಂಡರು. ಆರು ತಿಂಗಳು ಯಕ್ಷಗಾನ ಮೇಳದಲ್ಲಿ ಊರೂರು ತಿರುಗಿ ದುಡಿಯುತ್ತಿದ್ದರು. ಉಳಿದ ಆರು ತಿಂಗಳು ತಮ್ಮ ಕೃಷಿ ಭೂಮಿಯಲ್ಲಿ ದುಡಿಯುತ್ತಿದ್ದರು. ಕೆಲವೊಮ್ಮೆ ಶಾನುಭೋಗರ ಮನೆಯ ಕೆಲಸಗಳನ್ನು ಮಾಡಬೇಕಾಗುತ್ತಿತ್ತು. ದಕ್ಷಿಣ ಕನ್ನಡ ಕಾಸರಗೋಡು ಪರಿಸರದಲ್ಲಿದ್ದ ಧಣಿ – ಒಕ್ಕಲು

ವ್ಯವಸ್ಥೆಯ ಚೌಕಟ್ಟಿನಲ್ಲಿ ಬದುಕುತ್ತಿದ್ದ ಕುಟುಂಬ ಅವರದು. ತಾಯಿ ಪರಮೇಶ್ವರಿ ವಿದ್ಯಾವಂತೆಯಲ್ಲ. ಆದರೆ ಧೈರ್ಯಶಾಲಿ. ಗಂಡ ತೀರಿಕೊಂಡಾಗಲೂ ಧೃತಿಗೆಡದೆ, ಸಂಬಂಧಿಕರ ಸಹಾಯವನ್ನೂ ನೆಚ್ಚಿಕೊಳ್ಳದೆ, ಧಣಿ – ಒಕ್ಕಲು ವ್ಯವಸ್ಥೆಯಲ್ಲಿಯೇ ಬದುಕು ಸಾಗಿಸಿದವರು. ತಂದೆಯ ಶಿಸ್ತು, ಸಂಸ್ಕಾರ, ತಾಯಿಯ ಧೈರ್ಯ ಗಟ್ಟಿಯವರಿಗೆ ಬದುಕಿನ ಪಾಠ ಕಲಿಸಿತು. ಬಾಲ್ಯದ ಬಡತನ ಜೀವನದಲ್ಲಿ ಮಹತ್ತರವಾದುದನ್ನು ಸಾಧಿಸುವ ಹಂಬಲ ಮೂಡಿಸಿತು. ಬಡತನದ ಬದುಕು ಕೆಳವರ್ಗದವರ ಬಗ್ಗೆ ಯೋಚಿಸುವಂತೆ ಮಾಡಿತು. ಧಣಿ – ಒಕ್ಕಲು ವ್ಯವಸ್ಥೆ ಉಳ್ಳವರಿಂದಾಗುವ ಶೋಷಣೆಯನ್ನು ವಿರೋಧಿಸುವಂತೆ ಮಾಡಿತು. ಕೆ.ಟಿ.ಗಟ್ಟಿಯವರು ಅಧ್ಯಾಪಕರಾಗಿ ಕೆಲಸ ಮಾಡುತ್ತಿದ್ದಾಗ ವಿದ್ಯಾರ್ಥಿಯಾಗಿದ್ದ ಯಶೋದಾರನ್ನು ಪ್ರೀತಿಸಿ ಮದುವೆಯಾದರು. ಯಶೋದಾರವರ ತಂದೆ ಈ ವಿವಾಹವನ್ನು ವಿರೋಧಿಸುತ್ತಿದ್ದರು.

## ೨.೨: ವಿದ್ಯಾಭ್ಯಾಸ

ಕೆ.ಟಿ.ಗಟ್ಟಿಯವರ ತಂದೆ ದೂಮಪ್ಪ ಗಟ್ಟಿಯವರು ಕೂಡ್ಲು ಶಾನುಭೋಗರ ಮನೆತನದ ಯಕ್ಷಗಾನ ಮೇಳದ ಪ್ರಮುಖ ಪಾತ್ರಧಾರಿಯಾಗಿ ಕೆಲಸ ಮಾಡುತ್ತಿದ್ದುದರಿಂದ ಸಹಜವಾಗಿಯೇ ಮನೆಯಲ್ಲಿ ಜೈಮಿನಿ ಭಾರತ, ಕುಮಾರವ್ಯಾಸ ಭಾರತ, ತೊರವೆ ರಾಮಾಯಣದಂತಹ ನಡುಗನ್ನಡ ಕೃತಿಗಳನ್ನು ಓದುತ್ತಿದ್ದರು. ತಂದೆಯ ಈ ಓದು ಬಾಲ್ಯದಲ್ಲಿ ಕೆ.ಟಿ.ಗಟ್ಟಿಯವರ ಮೇಲೆ ಬಹಳಷ್ಟು ಪ್ರಭಾವ ಬೀರಿತು. ಚಿಕ್ಕ ವಯಸ್ಸಿನಲ್ಲಿಯೇ ಕಲಿಯಬೇಕು, ಓದಬೇಕು ಎಂಬ ಹಂಬಲವನ್ನು ಮೂಡಿಸಿತು. ಕೆ.ಟಿ.ಗಟ್ಟಿಯವರು ಆ ಕಾವ್ಯಗಳನ್ನು ಓದಿ ತಂದೆಯವರಿಂದ ಅದರ ವ್ಯಾಖ್ಯಾನವನ್ನು ಕೇಳಿ ತಿಳಿದುಕೊಳ್ಳುತ್ತಿದ್ದರು. ಹೀಗೆ ಕೆ.ಟಿ.ಗಟ್ಟಿಯವರ ಬಾಲ್ಯದ ವಿದ್ಯಾಭ್ಯಾಸ ಮನೆಯಲ್ಲಿಯೇ ಆರಂಭಗೊಂಡಿತ್ತು. ದೂಮಪ್ಪ ಗಟ್ಟಿಯವರು ಬಡವತನವಿದ್ದರೂ ತಮ್ಮ ಎಲ್ಲಾ ಮಕ್ಕಳಿಗೂ ಪ್ರಾಥಮಿಕ ವಿದ್ಯಾಭ್ಯಾಸವನ್ನು ಕೊಡಿಸಿದ್ದರು. ಕೆ.ಟಿ.ಗಟ್ಟಿಯವರು ಪ್ರಾಥಮಿಕ ಶಿಕ್ಷಣವನ್ನು ಮಾಯಿಪ್ಪಾಡಿಯಲ್ಲಿ ಪೂರೈಸಿದರು. ಆಗ ಕಾಸರಗೋಡು ಮದರಾಸು ಸಂಸ್ಥಾನಕ್ಕೆ ಸೇರಿತ್ತು. ನಂತರ ಮದರಾಸು ಸರಕಾರ ನಡೆಸುತ್ತಿದ್ದ ಪರೀಕ್ಷೆಗೆ ಕುಳಿತು ಎಂಟನೇ ತರಗತಿಯಲ್ಲಿಯೂ ಪಾಸಾದರು.

ಶಿಕ್ಷಣವನ್ನು ಪಡೆಯುವ ಅವರ ಹೋರಾಟದ ಬದುಕು ಇಲ್ಲಿಂದಲೇ ಆರಂಭವಾಯಿತು. ಮನೆಯ ಬಡತನದಿಂದಾಗಿ ಮುಂದೆ ಶಾಲೆಯ ಶುಲ್ಕ ಭರಿಸಿ ಓದಿಸುವುದು ತಂದೆಯಿಂದ ಸಾಧ್ಯವಾಗಲಿಲ್ಲ. ಮುಂದಿನ ಎರಡು ವರ್ಷ ಪ್ರಾಥಮಿಕ

ಶಾಲೆಯ ಶಿಕ್ಷಕರಾಗಲು ಅಗತ್ಯವಿರುವ ತರಬೇತಿಯನ್ನು ಮುಗಿಸಿದರು. ಅದು 8ನೇ ತರಗತಿವರೆಗೆ ಕಲಿತು, ಇ.ಎಸ್.ಎಲ್.ಸಿ. ಪರೀಕ್ಷೆ ಪಾಸಾದವರಿಗೆ ಮಾತ್ರ ಇದ್ದ ಕೋರ್ಸ್ ಆಗಿತ್ತು. ಕಾಸರಗೊಡಿನ ಮಾಯಿಪ್ಪಾಡಿ ಬುನಾದಿ ಶಿಕ್ಷಣ ಶಾಲೆಯಲ್ಲಿ ಜೂನಿಯರ್ ಬೇಸಿಕ್ ಟೀಚರ್ಸ್ ಟ್ರೈನಿಂಗ್ ಮುಗಿಸಿದರು. ಅವರ ಸಹಾಧ್ಯಾಯಿಯಾಗಿದ್ದ ಪ್ರೊ । ಎಂ. ರಾಮು ಅವರು ಹೇಳುವಂತೆ "ಅಂದಿನ ಶಾಲಾ ಜೀವನವು ಒಂದು ಆಶ್ರಮ ಜೀವನವೇ ಆಗಿತ್ತು. ವಿದ್ಯಾಭ್ಯಾಸದೊಂದಿಗೆ ಶಿಸ್ತು ಬದ್ಧವಾದ ಜೀವನ ಕ್ರಮಕ್ಕೆ ತರಬೇತಿ ದೊರಕಿತ್ತು. ಗಾಂಧೀಜಿಯವರು ತಂದ ಬುನಾದಿ ವಿದ್ಯಾಭ್ಯಾಸದಲ್ಲಿ ವಿಷಯಗಳ ಕಲಿಕೆಯಷ್ಟೇ ಪ್ರಾಧಾನ್ಯತೆಯು ಇತರ ಚಟುವಟಿಕೆಗಳಿಗಿತ್ತು. ಮುಖ್ಯವಾಗಿ ನೂಲುವಿಕೆ, ನೆಯ್ಗೆ, ಕೃಷಿ ಇತ್ಯಾದಿಗಳು. ಇವುಗಳಲ್ಲೆಲ್ಲ ತರಬೇತಿ ಅಧ್ಯಾಪಕರು ಏಕ ಸಮವಾಗಿ ಭಾಗವಹಿಸಬೇಕಿತ್ತು, ಭಾಗವಹಿಸುತ್ತಿದ್ದರು. ಈ ಎಲ್ಲ ಕೆಲಸಗಳನ್ನು, ಕಲಿಕೆಯನ್ನು ಗಟ್ಟಿಯವರು ಯಥಾವತ್ತು ನೆರವೇರಿಸುತ್ತಿದ್ದರು. ಇವರು ಇತರ ಸಹಪಾಠಿಗಳಿಗಿಂತ ಹೆಚ್ಚು ಓದುವ ಹವ್ಯಾಸನ್ನಿಟ್ಟು ಕೊಂಡಿದ್ದರು." ಕೂಡಲೇ ಕುಂಬಳೆಯ ಪ್ರಾಥಮಿಕ ಶಾಲೆಯಲ್ಲಿ ಅಧ್ಯಾಪಕನಾಗಿ ಕೆಲಸ

**(ಶ್ರೀಧರ್ ಹೆಚ್.ಜಿ.(ಸಂ) 2009. ಪುಟ 35)**

ಸಿಕ್ಕಿತು. ಕೆ.ಟಿ.ಗಟ್ಟಿಯವರು ಉದ್ಯೋಗ ಮಾಡುತ್ತಲೇ ತಮ್ಮ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಕೇರಳ ಸರಕಾರ ನಡೆಸುತ್ತಿದ್ದ ಪರೀಕ್ಷೆಗೆ ಕುಳಿತು 1959ರಲ್ಲಿ ಹತ್ತನೇ ತರಗತಿ ಮುಗಿಸಿದರು. 1960ರಲ್ಲಿ ಪದವಿ ಪೂರ್ವ ಶಿಕ್ಷಣವನ್ನು, 1963ರಲ್ಲಿ ಬಿ.ಎ. ಪದವಿಯನ್ನು ಪಡೆದರು. ಉಪ್ಪಳದ ಹೈಸ್ಕೂಲಿನಲ್ಲಿ ಅಧ್ಯಾಪಕನಾಗಿ ಕೆಲಸ ನಿರ್ವಹಿಸುತ್ತಿರುವ ಸಂದರ್ಭದಲ್ಲಿ ಬಿ.ಎಡ್. ಪದವಿ ಮಾಡಿರದ ಅಧ್ಯಾಪಕರಿಗಾಗಿ ಸರಕಾರ ಬಿ.ಎಡ್.ಗೆ ಕಳುಹಿಸುವ ಅವಕಾಶ ಕಲ್ಪಿಸಿತ್ತು. ಸರಕಾರದ ಈ ನಿಯಮದ ಅವಕಾಶ ಪಡೆದು ಕೆ.ಟಿ.ಗಟ್ಟಿಯವರು ಬಿ.ಎಡ್. ಮುಗಿಸಿದರು. ಆ ಸಂದರ್ಭದಲ್ಲಿ ಅವರು ಆರ್ಥಿಕ ಮುಗ್ಗಟ್ಟನ್ನು ಅನುಭವಿಸಿದರು. 1967ರಲ್ಲಿ ಇಂಗ್ಲಿಷ್ ವಿಷಯವನ್ನು ಆಯ್ದುಕೊಂಡು ಎಂ.ಎ. ಮಾಡಿ ಮುಗಿಸಿದರು. ನಂತರ ತಾನು ಇಥಿಯೋಪಿಯಾದಲ್ಲಿದ್ದಾಗ 1974ರ ಕಾಲದಲ್ಲಿ ಲಂಡನ್ನಿನ ಟ್ರಿನಿಟಿ ಕಾಲೇಜಿನಿಂದ ದ್ವಿತೀಯ ಬೋಧನಾ ಭಾಷೆ ಇಂಗ್ಲಿಷ್ ಡಿಪ್ಲೊಮಾ, ಆಕ್ಸ್‌ಫರ್ಡ್ ಕಾಲೇಜ್ ಆಫ್ ಫ್ರಿಸೆಪ್ಪಸ್‌ನಿಂದ ಶಿಕ್ಷಣದಲ್ಲಿ ಡಿಪ್ಲೊಮಾ ಮಾಡಿದರು.

ಕೆ.ಟಿ.ಗಟ್ಟಿಯವರು ತಮ್ಮ ಉದ್ಯೋಗದೊಂದಿಗೆಯೇ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ವಿದ್ಯಾಭ್ಯಾಸಕ್ಕೆ ಬೇಕಾದ ಹಣವನ್ನು ತನ್ನ ಉದ್ಯೋಗದ ಮೂಲಕವೇ ಗಳಿಸಬೇಕಾದ ಅನಿವಾರ್ಯತೆ ಅವರಿಗಿತ್ತು. ತಮ್ಮ 'ಪರುಷ' ಕಾದಂಬರಿಯ ಮುನ್ನುಡಿಯಲ್ಲಿ "ಅಭಿವೃದ್ಧಿ ಹೊಂದಿದ ಪಶ್ಚಿಮದ ಹಲವು ದೇಶಗಳಲ್ಲಿ ಮಾತ್ರವಲ್ಲ

ಆಫ್ರಿಕದ ಅಭಿವೃದ್ಧಿ ಹೊಂದುತ್ತಿರುವ ಎಷ್ಟೋ ದೇಶಗಳಲ್ಲಿ ಶಾಲೆ – ಕಾಲೇಜುಗಳು ಒಂದು ಹೊತ್ತು ಮಾತ್ರ ನಡೆಯುತ್ತವೆ. ಉಳಿದ ಅರ್ಧ ದಿನ ವಿದ್ಯಾರ್ಥಿಗಳು ಲೈಬ್ರರಿಯಲ್ಲಿ, ಲ್ಯಾಬೊರೇಟರಿಯಲ್ಲಿ, ವಿಶೇಷ ಶಿಕ್ಷಣ ಸಂಸ್ಥೆಗಳಲ್ಲಿ ಅಥವಾ ಖಾಸಗಿಯಾಗಿ ಕಲಿಯುತ್ತಾರೆ. ಹೈಸ್ಕೂಲು ಓದಿನ ನಡುವೆಯೇ ಟೈಪ್ ರೈಟಿಂಗ್, ಹೊಲಿಗೆ ಮತ್ತಿತರ ಕರ ಕೌಶಲ್ಯ, ಸಂಗೀತ ಇತ್ಯಾದಿ ತಮ್ಮ ಆಸಕ್ತಿಯ ವಿಷಯಗಳನ್ನು ಸ್ವೇಚ್ಛೆಯಿಂದ ಖಾಸಗಿಯಾಗಿ ಕಲಿತುಕೊಳ್ಳುತ್ತಾರೆ. ನಾನಾ ತೆರನ ಉದ್ಯೋಗ ಮಾಡಿ ತಮ್ಮ ಪುಸ್ತಕಗಳ, ಬಟ್ಟೆ ಬರೆಯ ವೆಚ್ಚಕ್ಕೆ ಬೇಕಾದ ಹಣವನ್ನು ಸಂಪಾದಿಸಿಕೊಳ್ಳುತ್ತಾರೆ. ಸ್ವತಂತ್ರವಾಗಿ ಜೀವನ ನಿರ್ವಹಣೆ ಮಾಡುವವರೂ ಇದ್ದಾರೆ. ಹೀಗೆ ಕಲಿಯುತ್ತಿರುವ ಕಾಲದಲ್ಲಿ ಹೆಚ್ಚಿನ ವಿದ್ಯಾರ್ಥಿಗಳು ತಮ್ಮ ಜೀವನದ ದಾರಿಯನ್ನು ಕಂಡುಕೊಳ್ಳುತ್ತಾರೆ. ವಿದ್ಯಾಭ್ಯಾಸ ಮುಗಿದಾಗ ಏನಾದರೂ ಮಾಡಲು ಸಮರ್ಥರಾಗಿರುತ್ತಾರೆ. ನಮ್ಮ ಯುವಕ ಯುವತಿಯರಂತೆ ತಾಯ್ತಂದೆಯರಿಗೆ, ಸಮಾಜಕ್ಕೆ ಹೊರೆಯಾಗುವುದಿಲ್ಲ."

**(ಕೆ.ಟಿ.ಗಟ್ಟಿ, ಪರುಷ, 1985, ಪುಟ 4)**

ಎಂದು ಹೇಳುತ್ತಾ ನಮ್ಮ ದೇಶದಲ್ಲೂ ಬೇರೆಯವರಿಗೆ ಹೊರೆಯಾಗದಂತೆ ಶಿಕ್ಷಣದೊಂದಿಗೆ ಉದ್ಯೋಗದ ಅಗತ್ಯತೆಯನ್ನು ತಿಳಿಸುತ್ತಾರೆ. ಅವರ 'ಮೂರನೆಯ ಧ್ವನಿ' ಪುಸ್ತಕದಲ್ಲಿ ಒಳ್ಳೆಯ ವಿದ್ಯಾಭ್ಯಾಸ ಎಲ್ಲರಿಗೂ ದೊರೆಯುವುದರಿಂದ ದೇಶದ ಪ್ರಗತಿ ಸಾಧ್ಯ ಎನ್ನುತ್ತಾರೆ.

## ೨.೩: ವೃತ್ತಿ ಜೀವನ

ಅಧ್ಯಾಪಕ ವೃತ್ತಿ ಕೆ.ಟಿ. ಗಟ್ಟಿಯವರು ಇಷ್ಟ ಪಟ್ಟ ಉದ್ಯೋಗವಾಗಿತ್ತು. ಇದು ಅವರ ಚಿಂತನೆ, ಓದು ಮುಂದುವರಿಸಿಕೊಂಡು ಹೋಗಲು ಅನುಕೂಲವಾಯಿತು. ಗಾಂಧೀಜಿಯವರ ವಿಚಾರಧಾರೆ ಆಧಾರಿತ ಜೂನಿಯರ್ ಬೇಸಿಕ್ ಟೀಚರ್ ಟ್ರೈನಿಂಗ್ ಪಡೆದ ಕೆ.ಟಿ.ಗಟ್ಟಿಯವರು ಕುಂಬಳೆಯ ಪ್ರಾಥಮಿಕ ಶಾಲೆಯಲ್ಲಿ ಅಧ್ಯಾಪಕರಾಗಿ ದುಡಿದು ನಂತರ ಕುಂಜತ್ತೂರು, ಎಡನೀರು ಎಂಬ ಪ್ರದೇಶಗಳಲ್ಲಿ ತಮ್ಮ ಕೆಲಸವನ್ನು ಮುಂದುವರಿಸಿದರು. 1957ರ ಸಮಯಕ್ಕೆ ತಂದೆಯವರು ತೀರಿಕೊಂಡಿದ್ದರಿಂದ ಮನೆಯ ಜವಾಬ್ದಾರಿ ತನ್ನ ಹೆಗಲ ಮೇಲೆ ಬಂದಿತ್ತು. ತನ್ನ ತಮ್ಮಂದಿರನ್ನು ಓದಿಸುವ ಹೊಣೆಗಾರಿಕೆಯೂ ಬಂದಿತ್ತು. ಹೀಗಾಗಿ ತನ್ನ ಮನೆಗೆ ಹತ್ತಿರವಿರುವ ಬದಿಯಡ್ಕ ಪ್ರಾಥಮಿಕ ಶಾಲೆಗೆ ವರ್ಗವಾಗಿ ಬಂದು ತನ್ನ ವೃತ್ತಿಯನ್ನು ಮುಂದುವರಿಸಿದರು. 1963ರಲ್ಲಿ ಬಿ.ಎ. ಪದವಿ ಮುಗಿಸಿ ಉಪ್ಪಳದ ಹೈಸ್ಕೂಲಿನಲ್ಲಿ ಅಧ್ಯಾಪಕರಾಗಿ

ನೇಮಕಗೊಂಡರು. 1967ರಲ್ಲಿ ಇಂಗ್ಲಿಷ್ ಎಂ.ಎ. ಮುಗಿಸಿ ಮಣಿಪಾಲ ಇಂಜಿನಿಯರಿಂಗ್ ಕಾಲೇಜಿನಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿ ಸೇರಿಕೊಂಡರು. ಅಲ್ಲದೆ ಮಣಿಪಾಲದ ಬಿ.ಎಡ್. ಕಾಲೇಜಿನಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿದರು.

ವಿದೇಶಕ್ಕೆ ಹೋಗಬೇಕೆಂಬ ಬಯಕೆ ಕೆ.ಟಿ.ಗಟ್ಟಿಯವರಿಗೆ ಮೊದಲಿನಿಂದಲೂ ಇತ್ತು. ಅವರ ಬಯಕೆ ಕೈಗೂಡಿತೋ ಎಂಬಂತೆ ಅವರಿಗೆ ವಿದೇಶಕ್ಕೆ ಹೋಗುವ ಅವಕಾಶವೂ ಲಭಿಸಿತು. ಅಭಿವೃದ್ಧಿಶೀಲ ದೇಶಗಳಿಗೆ ಭಾರತದಿಂದ ಶಿಕ್ಷಣ, ವೈದ್ಯಕೀಯ ಹೀಗೆ ವಿವಿಧ ಕ್ಷೇತ್ರಗಳಿಗೆ ಸಂಬಂಧಿಸಿದ ಸಂಪನ್ಮೂಲ ವ್ಯಕ್ತಿಗಳನ್ನು ಕಳುಹಿಸುವ ಪದ್ಧತಿಯಿತ್ತು. ಅಂತಹ ಯೋಜನೆಯಲ್ಲಿ ಕೆ.ಟಿ.ಗಟ್ಟಿಯವರಿಗೆ ಅವಕಾಶ ಲಭಿಸಿತು. ಮೊದಲು 1973ರಲ್ಲಿ ದೆಹಲಿಯಲ್ಲಿ ನಡೆದ ಆಯ್ಕೆಯಲ್ಲಿ ಅಫಘಾನಿಸ್ಥಾನಕ್ಕೆ ಹೋಗುವ ಅವಕಾಶ ಲಭಿಸಿತ್ತು. ಆದರೆ ಅಲ್ಲಿ ನಡೆದ ಮೊದಲ ಸೈನಿಕ ದಂಗೆಯಿಂದಾಗಿ ಅದು ರದ್ದುಗೊಂಡಿತು. ನಂತರ ಮದರಾಸಿನಲ್ಲಿ ನಡೆದ ಆಯ್ಕೆ ಪ್ರಕ್ರಿಯೆಯಲ್ಲಿ ಕೆ.ಟಿ.ಗಟ್ಟಿಯವರಿಗೆ ಆಫ್ರಿಕಾದ ಇಥಿಯೋಪಿಯಾಕ್ಕೆ ಶಿಕ್ಷಕರಾಗಿ ಹೋಗುವ ಅವಕಾಶ ದೊರೆಯಿತು. ಇಥಿಯೋಪಿಯಾಕ್ಕೆ ಹೋದ ಕೆ.ಟಿ.ಗಟ್ಟಿಯವರು ಆಫ್ರಿಕಾದ ಜಾಂಬಿಯಾ, ನೈಜೀರಿಯಾ ಮೊದಲಾದ ಹಲವು ದೇಶಗಳನ್ನು ಸುತ್ತಾಡಿದರು. ಇಥಿಯೋಪಿಯಾದ ರಾಜಕೀಯ ಕ್ರಾಂತಿ, ಸೈನಿಕರ ದಬ್ಬಾಳಿಕೆ, ಬಡತನಗಳನ್ನು ಕಣ್ಣಾರೆ ಕಂಡರು. ಅಲ್ಲಿನ ಬದುಕು, ಸಂಸ್ಕೃತಿ, ಜೀವನ ಶೈಲಿಗಳು ಕೆ.ಟಿ.ಗಟ್ಟಿಯವರಿಗೆ ಹೆಚ್ಚಿನ ಜೀವನಾನುಭವವನ್ನು ನೀಡಿದವು. ಕಾದಂಬರಿ, ಪ್ರವಾಸ ಕಥನದ ಮೂಲಕ ಕೆ.ಟಿ.ಗಟ್ಟಿಯವರು ಅವುಗಳನ್ನು ಹೊರಹಾಕಿದರು. ಅವರು ಒಂಬತ್ತು ವರ್ಷಗಳ ಕಾಲ ಇಥಿಯೋಪಿಯಾದಲ್ಲಿ ಅಧ್ಯಾಪಕರಾಗಿದ್ದರು. ಕೆ.ಟಿ.ಗಟ್ಟಿಯವರೇ ಹೇಳುವಂತೆ ಉನ್ನತ ಅಧಿಕಾರಿಗಳು ಕೆಳಸ್ತರದ ಅಧಿಕಾರಿಗಳ ಮೇಲೆ ನಡೆಸುವ ದಬ್ಬಾಳಿಕೆ ಅವರಿಗೆ ಇಷ್ಟವಾಗುತ್ತಿರಲಿಲ್ಲ. ಒಂದೇ ಕಡೆ ತನ್ನನ್ನು ತಾನು ಕಟ್ಟಿಕೊಳ್ಳುವುದೂ ಅವರಿಗೆ ಇಷ್ಟವಿರಲಿಲ್ಲ. ಬರವಣಿಗೆಯನ್ನು ಜೀವನ ಉದ್ದೇಶವನ್ನಾಗಿ ಮಾಡಿಕೊಂಡ ಕೆ.ಟಿ.ಗಟ್ಟಿಯವರಿಗೆ ಅಧ್ಯಾಪಕ ವೃತ್ತಿ ತೊಡಕಾಗಿ ತೋರಿರಬಹುದು. ಹಾಗಾಗಿ ವಿದೇಶದಿಂದ ಮರಳಿ ಬಂದ ಕೂಡಲೇ ತನ್ನ ಅಧ್ಯಾಪಕ ವೃತ್ತಿಗೆ ರಾಜೀನಾಮೆಯನ್ನು ಸಲ್ಲಿಸಿದರು. ಬರವಣಿಗೆಗಾಗಿ ತನ್ನ ಬದುಕನ್ನು ಮುಡಿಪಾಗಿಟ್ಟರು. ಬರವಣಿಗೆಯನ್ನೇ ಮುಖ್ಯ ವೃತ್ತಿಯನ್ನಾಗಿರಿಸಿಕೊಂಡ ಕೆ.ಟಿ.ಗಟ್ಟಿಯವರು ದೇಶ ವಿದೇಶಗಳಲ್ಲಿ ಸಂಚರಿಸಿ ತಮ್ಮ ಅನುಭವ ಸಂಪತ್ತನ್ನು ಬೆಳೆಸಿಕೊಂಡರು. ಈ ಅನುಭವಗಳಿಂದ ವೈವಿಧ್ಯಮಯವಾದ ವೈಚಾರಿಕ ಕಾದಂಬರಿಗಳನ್ನು ಬರೆದರು.

## ೨.೪: ಲೇಖಕರಾಗಿ ಕೆ.ಟಿ.ಗಟ್ಟಿ

ಕೆ.ಟಿ.ಗಟ್ಟಿಯವರ ಬರಹಗಳಲ್ಲಿನ ಬೇರೆ ಬೇರೆ ನೆಲೆಗಳನ್ನು ಅವರ ಬದುಕಿನ ಅನುಭವಗಳ ಮೂಲಕ ಗುರುತಿಸಬಹುದು. ಬಾಲ್ಯದಲ್ಲಿದ್ದ ಬಡತನ, ತನ್ನ ಸುತ್ತಮುತ್ತಲಿನ ಜನರ ಬದುಕು ಇವುಗಳ ಪ್ರಭಾವ ಅವರ ಮೇಲೆ ಆಗದೆ ಇರಲಿಲ್ಲ. ಅನೇಕ ಸಮಸ್ಯೆಗಳನ್ನು ಎದುರಿಸುತ್ತಾ ಬದುಕಿದ ಕೆ.ಟಿ.ಗಟ್ಟಿಯವರು ಕೆಳವರ್ಗದವರ ಪರವಾಗಿ ಯೋಚಿಸತೊಡಗಿದರು. ಹಾಗಾಗಿ ಇವರು ಬರಹಗಾರರಾಗಿ ರೂಪುಗೊಳ್ಳುವುದಕ್ಕೆ ಅವರ ಕುಟುಂಬದ ಸ್ಥಿತಿ, ಸಾಮಾಜಿಕ ವಾತಾವರಣ, ಬಡತನ ಪ್ರೇರಣೆಯನ್ನು ನೀಡಿದೆ ಎನ್ನಬಹುದು. ಅವರಿಗೆ ದೊರೆತ ಸಾಂಸ್ಕೃತಿಕ ಹಿನ್ನೆಲೆ, ಊಳಿಗಮಾನ್ಯ ಪದ್ಧತಿಗೆ ಸಮನಾಗಿದ್ದ ಧಣಿ – ಒಕ್ಕಲು ಸಂಬಂಧ, ಯಕ್ಷಗಾನ, ಭೂತದ ಕೋಲ, ಕೋಳಿ ಅಂಕ ಮೊದಲಾದ ಜಾನಪದ ಜಗತ್ತು ಅವರು ಲೇಖಕರಾಗಿ ರೂಪುಗೊಳ್ಳಲು ಸಹಾಯಕವಾಯಿತು. "ಸ್ವಾತಂತ್ರ್ಯೋತ್ತರ ಕಾಲಘಟ್ಟದ ಭಾರತೀಯ ಬದುಕಿಗೆ ಪ್ರತಿಕ್ರಿಯೆಯಾಗಿ ಬರೆಯುವ ಕೆ.ಟಿ.ಗಟ್ಟಿಯವರ ಬರವಣಿಗೆ ನೆಲದ ಬದುಕಿಗೆ ಹತ್ತಿರವಾದುದು. ಅವರು ವರ್ತಮಾನದ ತುರ್ತುಗಳಿಗೆ ಪ್ರತಿಕ್ರಿಯಿಸುತ್ತಲೇ ತಮ್ಮ ಕೃತಿಗಳಿಗೆ ಸಮಕಾಲೀನತೆಯ ಆಯಾಮವನ್ನು ನೀಡುವರು. ಯಜಮಾನಿಕೆಯ ಸ್ಥಿತಿಯನ್ನು ಎಲ್ಲಾ ಸಂದರ್ಭಗಳಲ್ಲೂ ವಿರೋಧಿಸುವರು."

**(ಶ್ರೀಧರ್ ಹೆಚ್.ಜಿ. (ಸಂ), 2009, ಪುಟ 14)**

ಕೆ.ಟಿ. ಗಟ್ಟಿಯವರ ಮೊದಲ ಕೃತಿ 'ಗುಳಿಗೆ' ಪ್ರಬಂಧ ಸಂಕಲನವು 1972ರಲ್ಲಿ ಪ್ರಕಟವಾಯಿತು. ಇದು ವ್ಯಂಗ್ಯ, ವಿಡಂಬನೆ, ಚಿಂತನೆಯ ಬರಹಗಳನ್ನೊಳಗೊಂಡ ಕೃತಿ. 'ಶಬ್ದಗಳು' ಇವರ ಆರಂಭದ ಕಾದಂಬರಿ. ಗಟ್ಟಿಯವರು ಅಧ್ಯಾಪಕರಾಗಿದ್ದಾಗ ಒಮ್ಮೆ ಬ್ರಾಹ್ಮಣರ ಮನೆಗೆ ಊಟಕ್ಕೆ ಹೋಗಿದ್ದಾಗ ಆ ಬ್ರಾಹ್ಮಣರು ಅವರ ಜೊತೆಗೆ ತೋರಿಸಿಕೊಂಡ ಮಡಿ – ಮೈಲಿಗೆತನ ಅವರನ್ನು ಚಿಂತಿಸುವಂತೆ ಮಾಡುತ್ತದೆ. "ನಾನು ಸುಖವಾಗಿರಬೇಕಾದರೆ, ನನ್ನ ಸುತ್ತ ಮುತ್ತಲ ಜನ ಸುಖವಾಗಿರಬೇಕು. ಕೆಟ್ಟ ವ್ಯವಸ್ಥೆಯನ್ನು ವಿರೋಧಿಸುವುದರಿಂದಲೇ ಸುಂದರ ಸುಖದ ಬದುಕನ್ನು ಪ್ರತಿಪಾದಿಸಲು ಸಾಧ್ಯ. ಇಂಥದ್ದನ್ನು ಸರಳವಾಗಿ ಜನರಿಗೆ ಅರ್ಥವಾಗುವ ಹಾಗೆ ಹೇಳುವುದು ಸಾಹಿತ್ಯದ ಜವಾಬ್ದಾರಿ. ಬರೀ ಮನರಂಜನೆಯೇ ಸಾಹಿತ್ಯದ ಕೆಲಸವಾದರೆ ಆ ಸಾಹಿತ್ಯವನ್ನು ಗುಂಡಿಗೆ ಹಾಕಿ. ಕ್ಯಾಬರೆ ನರ್ತನ ಮಾಡಿ ಜನರನ್ನು ರಂಜಿಸಬಹುದು."

**(ಕೆ.ಟಿ.ಗಟ್ಟಿಯವರ ಕಾದಂಬರಿಗಳು, ಅಪ್ರಕಟಿತ ಸಂಪ್ರಬಂಧ, ಮಂಗಳೂರು ವಿ.ವಿ. ಪುಟ 14)**

ಎಂದು ಹೇಳುವ ಕೆ.ಟಿ.ಗಟ್ಟಿಯವರು ತಮ್ಮ ಕೃತಿಗಳ ಮೂಲಕ ಸಮಾಜದ ಕೆಟ್ಟ ವ್ಯವಸ್ಥೆಯನ್ನು ವಿರೋಧಿಸುತ್ತಾರೆ. ಸಾಹಿತ್ಯ ಸುಂದರ ಬದುಕಿನ ಕಲ್ಪನೆಯನ್ನು ಸಮಾಜಕ್ಕೆ ಒದಗಿಸಿಕೊಡಬೇಕು ಎಂಬುದು ಅವರ ನಂಬಿಕೆ.

ಕಾದಂಬರಿ, ಕಥೆ, ನಾಟಕಗಳು ರೂಪುಗೊಳ್ಳುವ ಬಗೆ ಸಮಾಜ ರೂಪುಗೊಂಡ ಬಗೆಯನ್ನು ಪ್ರತಿಬಿಂಬಿಸುತ್ತವೆ. ಕೆ.ಟಿ.ಗಟ್ಟಿಯವರು ತಮ್ಮ ಕೃತಿಗಳಲ್ಲಿ ಪರಂಪರೆಯನ್ನು ಮುರಿದು ಕಟ್ಟುವ ಪ್ರಯತ್ನ ನಡೆಸಿರುವಂತೆ ಕಂಡುಬರುತ್ತದೆ. ಏಕೆಂದರೆ "ಒಂದು ಘಟ್ಟದ ಆಧುನಿಕತೆ ಇನ್ನೊಂದು ಘಟ್ಟದಲ್ಲಿ ಪರಂಪರೆಯಾಗುತ್ತದೆ ಅಥವಾ ಜಡ ಸಂಪ್ರದಾಯವಾಗುತ್ತದೆ. ವಿಘಟನೆ ಹಾಗೂ ನಿರ್ನಾಮಗಳ ಅನುಭವಗಳ ಬೆನ್ನಿಗೇ ಹೊಸ ಹುಟ್ಟಿನ ಆಶಾವಾದವೂ ಮೊಳೆಯಲಾರಂಭಿಸುತ್ತದೆ. ಆಧುನಿಕ ಸವಲತ್ತುಗಳು ಆಕರ್ಷಕವಾಗಿ ಕಾಣತೊಡಗುತ್ತವೆ. ಹಾಗೆಯೇ ಆಧುನಿಕತೆ ಸೃಷ್ಟಿಸುವ ಹಿಂಸೆಯೆದುರು ಆಸರೆ ಗೋಚರಿಸತೊಡಗುತ್ತದೆ. ಸಂಸ್ಕೃತಿಯ ವಿಘಟನೆಯ ಅನುಭವ ನಿರ್ನಾಮದ ಅನುಭವದಂತೆ ಒಂದು ಕೋನದಿಂದ ಕಾಣುತ್ತಿದ್ದರೆ, ಮತ್ತೊಂದೆಡೆಯಿಂದ ಅದು ಸಂಸ್ಕೃತಿಯೊಂದರ ನಿರ್ಮಾಣದ ಅನುಭವದಂತೆಯೂ ಕಾಣುತ್ತಿರುತ್ತದೆ. ಅಂದರೆ ಇದು ಸಂಸ್ಕೃತಿಯೊಂದು ಅನ್ಯ ಸಂಸ್ಕೃತಿಯೆದುರು ಪ್ರತಿರೋಧ ಹಾಗೂ ಅಂಗೀಕಾರಗಳ ಮೂಲಕ ತನ್ನನ್ನು ತಾನು ಮುರಿದು-ಕಟ್ಟುವ ಸಹಜ ಕ್ರಿಯೆಯಂತೆಯೂ ಕಾಣತೊಡಗುತ್ತದೆ".

**(ನಟರಾಜ್ ಹುಳಿಯಾರ್, 2004. ಪುಟ 305)**

ಕೆ.ಟಿ.ಗಟ್ಟಿಯವರ ಮೊದಲ ಕೃತಿ 'ಗುಳಿಗೆಗಳು' ಪ್ರಬಂಧ ಸಂಕಲನ. ಮೊದಲಿನಿಂದಲೂ ಇವರು ಪ್ರಬಂಧಗಳನ್ನು ಬರೆಯುತ್ತಿದ್ದರು. ಕೂಡ್ಲು ಬಳಿಯ ರಾಮದಾಸ್ ನಗರದ ಅವರ ಕೆಲವು ಸ್ನೇಹಿತರು ಆಯ್ದ ಅವರ ಬರಹಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಪಡಿಸುವಂತೆ ತಿಳಿಸಿದ್ದರು. 1957ರಲ್ಲಿ ಪ್ರಕಟವಾದ 'ಮುಂಗಾರ ಮುಗಿಲು' ಕೆ.ಟಿ. ಗಟ್ಟಿಯವರ ಮೊದಲ ಸಣ್ಣ ಕಥೆ. ಇದು 'ನವಭಾರತ' ಪತ್ರಿಕೆಯಲ್ಲಿ ಪ್ರಕಟವಾಯಿತು. ಕೆ.ಟಿ.ಗಟ್ಟಿಯವರು ಬರೆದ ಕವನ ಕಥೆ, ಪ್ರಬಂಧಗಳು ಗೋಕುಲ ಪತ್ರಿಕೆ, ನವಯುಗ, ಇಂದ್ರಧನುಸ್ಸು, ಬಾಲಬಂಧು ಮೊದಲಾದ ಪತ್ರಿಕೆಗಳಲ್ಲಿ ಪ್ರಕಟಗೊಂಡಿದ್ದವು. ಇವರು ಬರೆದ ಕಾದಂಬರಿಗಳು ಕನ್ನಡದ ಸುಧಾ ಮೊದಲಾದ ಪ್ರಮುಖ ಪತ್ರಿಕೆಗಳಲ್ಲಿ ಧಾರಾವಾಹಿಗಳಾಗಿ ಪ್ರಕಟಗೊಂಡಿದ್ದವು. ಸಮಾಜದ ಓರೆ ಕೋರೆಗಳನ್ನು ಗಮನಿಸಿ ಬರೆಯುವ ಕೆ.ಟಿ.ಗಟ್ಟಿಯವರು ಅಧ್ಯಯನಶೀಲರೂ, ಚಿಂತನ

ಶೀಲರೂ ಆಗಿದ್ದಾರೆ. "ಗುತ್ತುದಾಯನ ಗತ್ತ್" ಎಂಬ ತುಳು ನಾಟಕದಲ್ಲಿ ಪಾತ್ರ ಮಾಡಿದ ಗಟ್ಟಿಯವರು ಮುಂದೆ ನಾಟಕಗಳ ರಚನೆಯಲ್ಲಿ ತಮ್ಮನ್ನು ತಾವು ತೊಡಗಿಸಿಕೊಂಡರು.

ಗಟ್ಟಿಯವರು ಅಧ್ಯಾಪಕ ವೃತ್ತಿಯಲ್ಲಿರುವಾಗಲೇ ಸಣ್ಣಕಥೆ, ಕಾದಂಬರಿಗಳನ್ನು ಬರೆಯುತ್ತಿದ್ದರು. ಇವರು ಸಾಹಿತ್ಯದ ಪ್ರಕಾರಗಳಾದ ಕವನ, ಕಥೆ ನಾಟಕ, ಕಾದಂಬರಿ, ಶಿಶುಸಾಹಿತ್ಯ, ಪ್ರಬಂಧ, ಆತ್ಮಕಥೆ, ವೈಚಾರಿಕ ಲೇಖನ, ಪ್ರವಾಸ ಕಥನ ಮುಂತಾದ ವಿಭಾಗಗಳಲ್ಲಿ ಸಾಹಿತ್ಯ ಕೃಷಿಯನ್ನು ಮಾಡಿದ್ದಾರೆ. ತುಳು ಭಾಷೆಯಲ್ಲಿ ಕಾದಂಬರಿ ಮತ್ತು ಕವಿತೆಯನ್ನು ರಚಿಸಿದ್ದಾರೆ. ಕಾಸರಗೋಡಿನ ಶಾಲೆ, ಕಾಲೇಜುಗಳಲ್ಲಿ ಗಟ್ಟಿಯವರ ವಿವಿಧ ಕೃತಿಗಳನ್ನು ಅಧ್ಯಯನ ಸಾಮಾಗ್ರಿಯಾಗಿ ಅಳವಡಿಸಲಾಗಿದೆ. ಇವರು ಕಾಸರಗೋಡಿನ ಕನ್ನಡ ಶಾಲೆಗಳಿಗಾಗಿ ಕೇರಳ ಸರಕಾರವು ನಿಗದಿಪಡಿಸಿದ 10 ರಿಂದ 12ನೇ ತರಗತಿವರೆಗಿನ ಪಠ್ಯ ಪುಸ್ತಕಗಳ ಪರಿಶೋಧನಾ ಸಮಿತಿಯ ಸದಸ್ಯರಾಗಿ ದುಡಿದಿದ್ದಾರೆ. ವಿದ್ಯಾರ್ಥಿಗಳಿಗೆ ಕನ್ನಡ ಮತ್ತು ಇಂಗ್ಲಿಷ್ ಭಾಷಾ ಸಾಮರ್ಥ್ಯವನ್ನು ಹೆಚ್ಚಿಸಿಕೊಳ್ಳಲು ಅನುಕೂಲವಾಗುವಂತಹ ಇಂಗ್ಲಿಷ್ – ಕನ್ನಡ ದ್ವಿಭಾಷಾ ಕೃತಿಗಳನ್ನು ರಚಿಸಿದ್ದಾರೆ.

ಇಬ್ಬರು ಹೆಣ್ಣು ಮಕ್ಕಳು ಹಾಗೂ ಒಬ್ಬ ಮಗನನ್ನು ಪಡೆದಿರುವ ಕೆ.ಟಿ.ಗಟ್ಟಿಯವರದು ಚಿಕ್ಕ ಸಂಸಾರ. ಹಿರಿಯ ಮಗಳು ಚಿತ್ರಭಾ ಮುಂಬೈ ವಿಶ್ವ ವಿದ್ಯಾಲಯದಲ್ಲಿ ಸೈಕಾಲಜಿ ಎಂ.ಎ. ಮುಗಿಸಿ ಮುಂಬೈ ಐ.ಐ.ಟಿ.ಯಲ್ಲಿ ಶಿಕ್ಷಣ ವಿಧಾನ ಪರಿಷ್ಕಾರದ ಬಗ್ಗೆ ಪಿಎಚ್.ಡಿ. ಮಾಡಿ, ಪೂನಾದ ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಎಜುಕೇಶನ್‌ನಲ್ಲಿ ಪಿಎಚ್.ಡಿ. ವಿದ್ಯಾರ್ಥಿಗಳಿಗೆ ಶಿಕ್ಷಕಿಯಾಗಿ ಕೆಲಸ ಮಾಡಿದರು. ಈಗ ಆ್ಯಂಥ್ರಪಾಲಜಿಯಲ್ಲಿ ಸಂಶೋಧನೆಗಾಗಿ ಅಮೇರಿಕಾದಲ್ಲಿ ನೆಲೆಸಿದ್ದಾರೆ. ಕಿರಿಯ ಮಗಳು ಪ್ರಿಯಾ ಪರಿಸರ ವಿಜ್ಞಾನದಲ್ಲಿ ಸಂಶೋಧನಾ ಪದವಿಗಾಗಿ ಅಮೇರಿಕಾ ಸೇರಿ, ಪದವಿ ಪಡೆದು ಉದ್ಯೋಗ ನಿರತರಾಗಿದ್ದಾರೆ. ಮಗ ಸತ್ಯಜಿತ್ ಹಲವು ಕಡೆಗಳಲ್ಲಿ ಉಪನ್ಯಾಸಕನಾಗಿ ಕೆಲಸ ಮಾಡಿ ಬೆಂಗಳೂರಿನಲ್ಲಿ ಭೌತಶಾಸ್ತ್ರದಲ್ಲಿ ಪಿಎಚ್.ಡಿ. ಮಾಡುತ್ತಿದ್ದಾರೆ. ಈಗ ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕಿನ ಉಜಿರೆ ಎಂಬ ಊರಿನ ತಮ್ಮ ಮನೆ "ವನಶ್ರೀ" ಯಲ್ಲಿ ವಾಸಿಸುತ್ತಿರುವ ಕೆ.ಟಿ.ಗಟ್ಟಿಯವರು 1982 ರಿಂದ ಪೂರ್ಣಾವಧಿ ಲೇಖಕರಾಗಿ ಬರವಣಿಗೆಯಲ್ಲಿ ತೊಡಗಿಸಿಕೊಂಡಿದ್ದಾರೆ.

************

# ಅಧ್ಯಾಯ–೩

# ಕೆ.ಟಿ.ಗಟ್ಟಿಯವರ ಕಾವ್ಯ

ಕೆ.ಟಿ.ಗಟ್ಟಿಯವರು ತಮ್ಮ ಆರಂಭದ ದಿನಗಳಿಂದಲೂ ಕವನಗಳನ್ನು ಬರೆಯುತ್ತಿದ್ದರು. ಅವರು ತಿಳಿಸುವಂತೆ ಮೊಟ್ಟಮೊದಲು ಅವರು ಬರೆದದ್ದು ಕವನಗಳನ್ನು. ಎಂಟನೇ ತರಗತಿಯಲ್ಲಿರುವಾಗ ಸಣ್ಣ ಎರಡು ಚುಟುಕುಗಳನ್ನು ಬರೆದಿದ್ದರು. ಅದು ಬಾಲಬಂಧು ಎಂಬ ಮಕ್ಕಳ ಪತ್ರಿಕೆಯಲ್ಲಿ ಪ್ರಕಟಗೊಂಡಿತ್ತು. 18ನೇ ವಯಸ್ಸಿನಲ್ಲಿ ತಾವು ಬರೆದ ಕವನಗಳನ್ನೆಲ್ಲಾ 'ಶೋಭಾ' ಎಂಬ ಶೀರ್ಷಿಕೆಯಲ್ಲಿ ಒಟ್ಟು ಗೂಡಿಸಿ 1957ರಲ್ಲಿ ಬೇಂದ್ರೆಯವರಿಗೆ ಕಳುಹಿಸಿ ಮುನ್ನುಡಿ ಬರೆಯುವಂತೆ ಕೇಳಿಕೊಂಡರು. ಅದರಂತೆ ಬೇಂದ್ರೆಯವರು ಮುನ್ನುಡಿಯನ್ನು ಬರೆದು ಕಳುಹಿಸಿದ್ದರು. ಆದರೆ ಆ ಕವನಗಳನ್ನೆಲ್ಲಾ ಅವರು ಕಳೆದುಕೊಂಡರು. 1994ರಲ್ಲಿ ಪ್ರಕಟವಾದ ಮೊದಲ ಕವನ ಸಂಕಲನ 'ಝೇಂಕಾರದ ಹಕ್ಕಿ' ಯಲ್ಲಿ ಬೇಂದ್ರೆಯವರ ಮುನ್ನುಡಿಯನ್ನು ಮುದ್ರಿಸಿದ್ದಾರೆ. ಈ ಕವನ ಸಂಕಲನದ ಮುನ್ನುಡಿಯಲ್ಲಿ "ನಾನು ಬರೆದ ಮೊತ್ತ ಮೊದಲ ಕವನಗಳು ಕಾಣಿಸಿಕೊಂಡದ್ದು 1954ನೇ ಇಸವಿಯಲ್ಲಿ, ನಾನು ಅಧ್ಯಾಪಕ ತರಬೇತಿ ಪಡೆಯುತ್ತಿದ್ದ ತರಬೇತಿ ಸಂಸ್ಥೆಯ ಹಸ್ತ ಪತ್ರಿಕೆಯಲ್ಲಿ. ಅದರಲ್ಲಿ ಒಂದು ಕವನವನ್ನು ಓದಿದ ಅಧ್ಯಾಪಕರೊಬ್ಬರು ಅದರಲ್ಲಿ ಏನನ್ನು ಕಂಡರೋ! ಈ ಹುಡುಗನನ್ನು ಡಿಸ್‌ಮಿಸ್ ಮಾಡಬೇಕು ಎಂದು ಮುಖ್ಯೋಪಾಧ್ಯಾಯರಲ್ಲಿ ಶಿಫಾರಸ್ಸು ಮಾಡಿದರು. ದಯಾಳುವಾದ ಮುಖ್ಯೋಪಾಧ್ಯಾಯರಲ್ಲದಿರುತ್ತಿದ್ದರೆ ನನ್ನ ಬದುಕಿನ ಗತಿ ಬೇರೆ ಆಗುತ್ತಿತ್ತೇನೊ" ಎಂದು ತಮ್ಮ ಮೊದಲ ಕವನ ಬರೆದ ಸಂದರ್ಭದ ಘಟನೆಯನ್ನು ತಿಳಿಸುತ್ತಾರೆ. ಗಟ್ಟಿಯವರ ಆರಂಭದ ಕವನಗಳಲ್ಲಿ ವ್ಯವಸ್ಥೆಯನ್ನು ವಿರೋಧಿಸುವ ಗುಣಗಳು ಇದ್ದವು. ಮೂಲಭೂತವಾದಿಗಳಿಗೆ ಇವರ ಕವನಗಳು ಸರಿಯಾದ ಹೊಡೆತವನ್ನೇ ನೀಡುತ್ತಿದ್ದವು. ಇವರ ತೀಕ್ಷ್ಣವಾದ ಮಾತುಗಳನ್ನು ಅವರಿಂದ ಸಹಿಸಲಾಗುತ್ತಿರಲಿಲ್ಲ.

"ಕಾವ್ಯ ಸೃಷ್ಟಿಗೆ ಸ್ವಲ್ಪವಾದರೂ ನೋವಿನ ಅನುಭವ ಬೇಕು. ಬರೀ ಅನುಭವವಲ್ಲ. ಆ ಅನುಭವಗಳನ್ನು ವಸ್ತುವಾಗಿ ಗ್ರಹಿಸಿ ಹಿಡಿದಿಟ್ಟುಕೊಳ್ಳುವ ವಿಶಿಷ್ಟ ಸಂವೇದನಾ ಶಕ್ತಿ. ಅದು ಹೆರಿಗೆಯಾದ, ಕೈ ಕಾಲು ಕತ್ತರಿಸಿದಂಥ ಘೋರ ನೋವು ಆಗಬೇಕೆಂದಿಲ್ಲ. ಸಂವೇದನಾ ಶೀಲತೆಯಿದ್ದರೆ, ಬಾಲಕ ಲಾಲ ಬಹದ್ದೂರ್ ಶಾಸ್ತ್ರಿಯ ಕೆನ್ನೆಗೆ ಮಾವಿನ ತೋಟದ ಆಳುಕೊಟ್ಟ ಪೆಟ್ಟಿನ ಹಾಗೆ ಅನ್ಯಾಯವಾಗಿ ಅಥವಾ ನ್ಯಾಯವಾಗಿ ಸಿಕ್ಕ ಒಂದು

ಪೆಟ್ಟಿನ ನೋವು ಕೂಡಾ ಸಾಕು. ಆ ನೋವಿನ ಮೂಲಕ ಪ್ರಪಂಚದ ಎಲ್ಲ ನೋವನ್ನು ಕಾಣುವ ವಿಶಿಷ್ಟ ದಾರ್ಶನಿಕ ಶಕ್ತಿಬೇಕು"

**(ಗಟ್ಟಿ ಕೆ.ಟಿ, ಝೇಂಕಾರದ ಹಕ್ಕಿ ಪ್ರಸ್ತಾಪ, 1994 ಪುಟ 12)**

ಇವು ಕಾವ್ಯ ಹೇಗಿರಬೇಕು, ಕಾವ್ಯದ ಮೂಲಭೂತ ಗುಣಗಳೇನು ಎನ್ನುವುದನ್ನು ಹೇಳುವ ಮುನ್ನುಡಿಯ ಸಾಲುಗಳು. ಡಾ।.ಕೆ. ಮಹಾಲಿಂಗ ಭಟ್ಟರು ಕೆ.ಟಿ.ಗಟ್ಟಿಯವರ ಕವನಗಳ ಬಗ್ಗೆ ಬರೆಯುತ್ತಾ 'ಝೇಂಕಾರದ ಹಕ್ಕಿ'ಗೆ ನವ್ಯದ ಚಹರೆಗಿಂತಲೂ ಬಂಡಾಯ ಸಾಹಿತ್ಯದ ಸಾಮಾಜಿಕ ಕಳಕಳಿ ಹೆಚ್ಚು. ಅನಿಸಿದ್ದನ್ನು ಲಯ, ಪ್ರಾಸ, ಛಂದಸ್ಸುಗಳ ಹಂಗಿಲ್ಲದೆ, ಅದೇ ರೀತಿಯಲ್ಲಿ ಪ್ರತಿಮೆಯನ್ನು ಭಾಷೆಯ ಕುಸುರಿಯ ಮೂಲಕ ಸಾಧಿಸುವ ಸವಾಲಿಗೂ ಕೈ ಹಾಕದೆ; ಮುಕ್ತವಾಗಿ ಬರೆಯುತ್ತಾ ಹೋದ ಕಾವ್ಯದಾರಿ ಅದು. ಅಲ್ಲಿ ಕಾವ್ಯ ಕಟ್ಟುವುದಕ್ಕಿಂತಲೂ ತನ್ನ ಚಿಂತನೆ, ಕಾಳಜಿ ಹಾಗೂ ಅನಿಸಿಕೆಗಳಿಗೆ ಒಂದು ಲಯಬದ್ಧ ಶಾಬ್ದಿಕ ರೂಪ ಕೊಡುವುದರ ಬಗೆಗೆ ಸೃಜನಶೀಲತೆಯ ಕಾತರವಿದೆ." ಎನ್ನುತ್ತಾರೆ.

**(ಶ್ರೀಧರ್ ಹೆಚ್.ಜಿ.(ಸಂ), 2009. ಪುಟ 261).**

## ೩.೧: ಝೇಂಕಾರದ ಹಕ್ಕಿ

ಇವರ ಝೇಂಕಾರದ ಹಕ್ಕಿ ಸಂಕಲನದಲ್ಲಿನ ಕವನಗಳಾದ 'ಚಿತ್ರ', 'ಬಂಡಾಯ', 'ನನ್ನನ್ನು ಕೊಂದವರಿಗೆ', 'ವಿರೋಧಾಭಾಸಗಳು' ಮುಂತಾದ ಕವನಗಳಲ್ಲಿ ಪ್ರತಿರೋಧದ ಧ್ವನಿಗಳಿವೆ. 'ಚಿತ್ರ' ಕವನವನ್ನು ಬರೆಯುತ್ತಾ

ನನ್ನ ಮಗನ ಬೆನ್ನ ಮೇಲಿರುವ
ಬಿಳಿ ಬಾಸುಂಡೆ ಕಲೆಗಳನ್ನು ಕಂಡಾಗಲೆಲ್ಲ
ಪಟ್ಟೆಯ ಹುಲಿಯ ನೆನಪಾಗುತ್ತದೆ ನನಗೆ.
ಒಂದಲ್ಲ ಎರಡಲ್ಲ ಏಳು ಅಡ್ಡ ಪಟ್ಟೆ ;
ಜ್ವರದ ಕಾವಿನಲ್ಲೂ ಹಟಹಿಡಿದು ಶಾಲೆಗೆ ಹೋದ
ಬಾಲಕನ ಬೆನ್ನ ಮೇಲೆ ವೆಂಕಪ್ಪ ಮಾಸ್ತರು
ಬರೆದ ಚಿತ್ತಾರ.

ಇಂಥ ಮಾಸ್ತರುಗಳನ್ನು ಗಲ್ಲಿಗೇರಿಸಬೇಕು
ಮನುಷ್ಯರಲ್ಲದ ಇಂಥ ಭಯೋತ್ಪಾದಕರನ್ನು

ಹಿಮಾಲಯದಲ್ಲಿ ಗಡಿ ಕಾಯಲು ಕಳಿಸಬೇಕು
ಎಂದು ನಾನು ರೇಗಾಡಿದಾಗ
ಇದು ಪೆಟ್ಟಿನ ಕಲೆಯಲ್ಲ
ನನ್ನ ಬೆನ್ನಲ್ಲಿ ಮಾಸ್ತರು ಬಿಡಿಸಿದ ಕಾಮನಬಿಲ್ಲು
ಎಂದು ನಗುತ್ತಾನೆ ಹುಡುಗ ;

ಆ ನಗುವಿನಲ್ಲಿ ಗುಲಾಬಿಗಳಿವೆ, ಮುಳ್ಳುಗಳಿವೆ.
ಬುದ್ಧಿಬಲಿಯದ ಬಾಲಕ ಏನು ತಪ್ಪು ಮಾಡಿಯಾನು?
ಆನೆ ಕಳಲಾರ, ಹುಡುಗಿಯರ ಮಾನಭಂಗ ಮಾಡಲಾರ,
ಲಂಚ ಪಡೆಯಲಾರ, ಯಾರ್‍ಯಾರ ಮನೆಗೆ ಕಿಚ್ಚು ಹಚ್ಚಲಾರ,
ದರೋಡೆ ಮಾಡಲಾರ ;
ಬೊಬ್ಬೆ ಹೊಡೆದಿರಬಹುದು.

**(ಗಟ್ಟಿ ಕೆ.ಟಿ, ಝೇಂಕಾರದ ಹಕ್ಕಿ, 1994, ಪುಟ 07)**

ಇಲ್ಲಿ ಮುಗ್ಧ ಮಕ್ಕಳನ್ನು ಬಾಲ್ಯದಲ್ಲಿ ಕ್ಷುಲ್ಲಕ ಕಾರಣಗಳಿಂದಾಗಿ ಶಿಕ್ಷಿಸುವ ಅಧ್ಯಾಪಕರ ಮನೋಭಾವನೆಯನ್ನು ವಿರೋಧಿಸಲಾಗುತ್ತದೆ. ಹಿರಿಯ ಕಿರಿಯ ತಲೆಮಾರಿನ ಸಂಘರ್ಷವೂ ಇಲ್ಲಿ ಮೂಡಿ ಬಂದಿದೆ. ಮೇಲ್ವರ್ಗದ ತುಳಿತಕ್ಕೆ ಒಳಗಾದವರ ಸಾಮಾಜಿಕ ಬದುಕಿನ ಸ್ಥಿತಿಯನ್ನೂ ಬಂಡಾಯ ಕವನ ತಿಳಿಸುತ್ತದೆ.

ಶಬ್ದಗಳಿಂದ ಕತ್ತಲನು ಸೀಳಬಂದವರು
ಇರುಳಿಡೀ ಕೂಗಿ
ತಮ್ಮ ಶಬ್ದಕ್ಕೆ ತಾವೇ ಮೋಹಿಸಿ
ಕತ್ತಲನೂ ಮರೆತು
ಶಬ್ದ ಕರಗಿ ರಾಗವಾಗಿ
ಉದಯರಾಗವಾಗಿ
ಸುಪ್ರಭಾತವಾಗಿ
ಬೆಳಕು ಹರಿದಾಗ ತಮ್ಮ ಶಬ್ದಕ್ಕೆ ಬೆಳಗಾಯಿತೆಂದು
ಓಂ ಭೂರ್ಭುವಸ್ವ ಎಂದುಲಿದವರ ಹಿಂದೆ ನಿಂತು
ಕರಗಿ ಹೋದರು ಅರ್ಘ್ಯದ ನೀರಿನಲ್ಲಿ
ಅಲ್ಲೇ, ಜೋಡಿಸಿದ ಕೈಗಳಡಿ
ಕಾದಿದ್ದ ಕತ್ತಲೆ ಎದ್ದು ಬಂದಾಗ

ಉಳಿದವರು
ಶಬ್ದಗಳ ತ್ರಿಶುಲ ಶಂಖ ಚಕ್ರ ಗದೆ
ಇಲ್ಲದವರು
ಕಣ್ಮುಚ್ಚಿ ರೋದಿಸಿದ್ದೇ ರೋದಿಸಿದ್ದು;
ಶಬ್ದವೂ ಇಲ್ಲ. ರಾಗವೂ ಇಲ್ಲ
ಬರೀ ರೋದನ.

**(ಅದೇ, ಪುಟ 19).**

ಕೆ.ಟಿ.ಗಟ್ಟಿಯವರ 'ವಿರೋಧಾಭಾಸ' ಕವನ ಪುರೋಹಿತಶಾಹಿಗಳು, ಆಳುವ ವರ್ಗದವರು, ಚಿಂತಕರು, ಸಮಾಜದ ಸುಧಾರಕರೆಂದು ಸೋಗು ಹಾಕುವವರನ್ನು ವಿರೋಧಿಸುತ್ತದೆ. ಸಮಾಜದ ಜನರ ಮೌಢ್ಯವನ್ನು ವಿಡಂಬಿಸುತ್ತದೆ.

ಬದಲಾಯಿಸುವುದು ಹೇಗೆಂದು ತಿಳಿದಿದೆ ನಿಮಗೆ
ಬೇಡ ಹೀಗೇ ಇರಲಿ ಯಾಕೆ ಉಪದ್ವ್ಯಾಪ ಎಂದು
ಅಂಗಿ ಜಾರಿಸಿ ಗರ್ಭಗುಡಿಯೊಳಗೆ ಹೋಗುತ್ತ
ಕುಪ್ಪಸ ಜಾರಿಸಿದವರ ಮೇಲೆ
ಧ್ಯಾನವಿರಿಸುತ್ತೀರಿ.

ಸಮಾಜವಾದದ ಕೂಗು ಹಾಕುತ್ತ
ಮನೆಗೆಲಸಕ್ಕೆ ಆಳು ಸಿಗಲಿಲ್ಲವೆಂದು
ಗೋಳಾಡುತ್ತೀರಿ.

ದೇವರು ಮನುಷ್ಯನ ಕಲ್ಪನೆ ಮಾತ್ರ
ಎಂದು ಬೌದ್ಧಿಕವಾಗುತ್ತಾ
ಈ ಕಡೆಗೆ ಮಾಲಿದ್ದ ಮಾವಿನ ಮರ
ಪಕ್ಕನೆ ಎದ್ದ ಸುಂಟರಗಾಳಿಗೆ
ಪಕ್ಕದ ಮನೆಯ ಮೇಲುರುಳಿದ್ದು
ನೀವು ಹೋಗಲಿದ್ದ ರೈಲು ಸೇತುವೆಯಿಂದುರುಳಿದ್ದು.
ನೀವು ನಂಬಿದ ದೇವರ ದಯದಿಂದಲ್ಲದೆ
ಬೇರಾವುದರಿಂದಲೂ ಅಲ್ಲ

ಎಂದು ಮೃತ್ಯುಂಜಯದ ಹೋಮ ಮಾಡುತ್ತೀರಿ
ಒಳಗೆ ಶಪಿಸುತ್ತಾ
ಶರಣು ಮಹಾಪ್ರಭು ಎಂದು ಕಾಲಿಗೆ ಬೀಳುತ್ತೀರಿ
ಹೇಗಾದರೂ ಬದುಕಬೇಕಲ್ಲ
ಎಂದು ಹಲ್ಲು ಗಿಂಜುತ್ತಾ
ಸಾಯುತ್ತಲೇ ಇರುತ್ತೀರಿ ಅನವರತ.

**(ಅದೇ, ಪುಟ 25)**

'ಝೇಂಕಾರದ ಹಕ್ಕಿ' ಕವನ ಸಂಕಲನದಲ್ಲಿ ಭಾರತೀಯ ಸಾಮಾಜಿಕ ವ್ಯವಸ್ಥೆಯ ಬೇರೆ ಬೇರೆ ಮುಖಗಳನ್ನೂ, ಮುಖವಾಡಗಳನ್ನೂ ಕಾಣಬಹುದು. ಬಾಲಕನ ಮುಗ್ಧತೆ, ಬಡ ಹುಡುಗಿಯ ಪ್ರೀತಿ, ಬಂಡವಾಳಶಾಹಿಗಳ ದೌಷ್ಟ್ಯ, ಶ್ರೀಮಂತರ ವಂಚಕತನ, ಬಡತನಗಳನ್ನು ಈ ಸಂಕಲನದ ಕವಿತೆಗಳಲ್ಲಿ ಕಾಣಬಹುದು.

ಒಟ್ಟಿನಲ್ಲಿ ಕೆ.ಟಿ.ಗಟ್ಟಿಯವರು ಕವನಗಳನ್ನು ಬರೆದದ್ದು ಕಡಿಮೆ. ಅದರಲ್ಲೂ ಪುಸ್ತಕ ರೂಪದಲ್ಲಿ ಪ್ರಕಟಗೊಂಡಿದ್ದು ಇನ್ನೂ ಕಡಿಮೆ. ಅವರ ಕಾದಂಬರಿಗಳಂತೆ ಕವನದಲ್ಲಿ ವ್ಯವಸ್ಥೆಯ ವಿರುದ್ಧ ಪ್ರತಿರೋಧಗಳು ಕಂಡುಬರುತ್ತವೆಯಾದರೂ ಇತರ ಬರಹಗಳಿಗಿಂತ ಕಡಿಮೆ ಎನ್ನಬಹುದು.

***********

## ಅಧ್ಯಾಯ–೪: ಕೆ.ಟಿ.ಗಟ್ಟಿಯವರ ಕಾದಂಬರಿಗಳು

# ಅಧ್ಯಾಯ–೪

# ಕೆ.ಟಿ.ಗಟ್ಟಿಯವರ ಕಾದಂಬರಿಗಳು

ಕಾದಂಬರಿ ಎಂಬ ಸಾಹಿತ್ಯ ಪ್ರಕಾರಕ್ಕೆ ಇಂಗ್ಲಿಷ್‌ನಲ್ಲಿ ನಾವೆಲ್ ಎಂದು ಹೆಸರು. "ಇಂಗ್ಲಿಷ್‌ನಲ್ಲಿ 'Novel' ಎಂಬ ಪದವು ಇಟಾಲಿಯನ್ 'Novella" ಎಂಬ ಪದದಿಂದ ಬಂದುದು. ಇದು ಹೊಸತು ಎಂಬ ಅರ್ಥವನ್ನು ಕೊಡುತ್ತದೆ".

**(ಹರಿಕೃಷ್ಣ ಭರಣ್ಯ, 1990. ಪುಟ 5).**

"ದುರ್ಗೇಶ ನಂದಿನಿ(1885)ಗೆ ಬರೆದ ಇಂಗ್ಲಿಷ್ ಪೀಠಿಕೆಯಲ್ಲಿ ವೆಂಕಟಾಚಾರ್ಯರು 'ನಾವೆಲ್' ಪದವನ್ನು ಬಳಸಿದರು. ಕಾದಂಬರಿ ಸಮಾಜದ ಹಾಗೂ ಸಮಾಜದ ಅಂಗಭೂತನಾದ ಮನುಷ್ಯನ ಚರಿತ್ರೆ ನಡವಳಿಕೆಗಳಲ್ಲಿ ಕಂಡುಬರುವ ದುರ್ನಡತೆ ಮುಂತಾದುವುಗಳನ್ನು ಉದಾಹರಣೆಗಳೊಡನೆ ಚಿತ್ರಿಸಿ ಪ್ರತಿ ಒಬ್ಬನೂ ಸದ್ಭಾವದಿಂದ ನಡೆದುಕೊಳ್ಳುವುದನ್ನು ತೋರ್ಪಡಿಸತಕ್ಕದ್ದಾಗಿದೆ ಎಂದರು."

**(ಶೇಷಗಿರಿ ರಾವ್ ಎಲ್.ಎಸ್. 1975, ಪುಟ 162).**

19ನೇ ಶತಮಾನದಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರಭಾವದಿಂದ 'ನಾವೆಲ್' ಎಂಬ ಪ್ರಕಾರವು ಕಾದಂಬರಿ ಎಂಬ ಹೆಸರಿನಿಂದ ಪ್ರಚುರವಾಯಿತು ಎಂಬ ಹೆಗ್ಗಳಿಕೆ ಇದೆ. ಕಾದಂಬರಿಯನ್ನು ತೆಲುಗುಭಾಷೆಯಲ್ಲಿ ನವಲಾ ಎಂಬ ಹೆಸರಿನಿಂದ ಹೇಳುತ್ತಾರೆ. ತಮಿಳಿನಲ್ಲಿ ಹೆಚ್ಚು ಬಳಕೆಯಲ್ಲಿರುವ ಪದ 'ನಾವೆಲ್' ಎಂದೇ ಆಗಿದೆ. 'ಕಾದಂಬರಿ' ಕಾವ್ಯದ ಸೊಗಸು ನಾಗವರ್ಮನ ಕೃತಿಯ ಮೂಲಕ ವಿದ್ವಾಂಸರಿಗಂತೂ ಹಿಂದಿನಿಂದಲೂ ಗೊತ್ತಿತ್ತು. ಕಥೆ, ಶೈಲಿ, ನಿರೂಪಣೆ, ವರ್ಣನೆಯ ಚಮತ್ಕೃತಿ, ರಸ ಮೊದಲಾದ ದೃಷ್ಟಿಗಳಿಂದ ಕಾದಂಬರಿ ಕಾವ್ಯ ಜನಮನವನ್ನು ಸೂರೆಗೊಂಡಿತ್ತು. ಆದುದರಿಂದ ಸಂಸ್ಕೃತ ಕಾದಂಬರಿ ಗ್ರಂಥದಂತೆ ರಮ್ಯವಾದ ಎಲ್ಲ ಕೃತಿಗಳನ್ನು ಕಾದಂಬರಿ ಎಂಬ ಹೆಸರಿನಿಂದಲೂ ಕರೆಯುವ ವಾಡಿಕೆ ಏರ್ಪಟ್ಟಿತು. ಹೀಗಾಗಿ ನಾವೆಲು ಜಾತಿಗೆ ಕಾದಂಬರಿ ಎಂದು ಕನ್ನಡಿಗರು ಕೊಟ್ಟ ಹೆಸರು ಸಾರ್ಥಕವಾಗಿ ಸ್ಥಿರವಾಗಿ ಉಳಿಯಿತು. ಕಾದಂಬರಿ ಪ್ರಧಾನವಾಗಿ ಕಥೆಯಾದರೂ ಅದು ಗದ್ಯಕಥೆ. ಕಾದಂಬರಿ ಕೇವಲ ಸಣ್ಣ ಕಥೆಯೂ ಅಲ್ಲ, ಕಾವ್ಯವೂ ಅಲ್ಲ. ಸ್ಥೂಲವಾಗಿ ಹೇಳಬೇಕಾದರೆ ಅದೊಂದು ದೊಡ್ಡಕಥೆ." **(ಕನ್ನಡ ವಿಶ್ವಕೋಶ, ಸಂ3, 1971, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಪುಟ 712).**

ಕಾದಂಬರಿ ಎಂಬ ಪದಕ್ಕೆ ಪರ್ಯಾಯವಾಗಿ 'ನಲ್ಗತೆ', 'ನೀಳ್ಗತೆ' ಎಂಬ ಪದಗಳು ಬಳಕೆಯಾಗಿವೆ. ಕೆರೂರು ವಾಸುದೇವಾಚಾರ್ಯರು ಅವರ 'ಇಂದಿರೆ' ಕಾದಂಬರಿಯಲ್ಲಿ 'ನಲ್ಗತೆ' ಎಂಬ ಪದವನ್ನೂ ಬಳಸಿದ್ದಾರೆ. 1869ರಲ್ಲಿ ಪ್ರಕಟವಾದ ಮರಾಠಿಯ 'ವಿಚಿತ್ರ ಪುರೀ' ಎಂಬ ಕೃತಿಯಲ್ಲಿ ಕಾದಂಬರಿ ಎಂಬ ಹೆಸರು ಕಂಡು ಬರುತ್ತದೆ. "ಕನ್ನಡ ಸಾಹಿತ್ಯಕ್ಕೆ ಪಾಶ್ಚಾತ್ಯ ಪ್ರಭಾವವು ತಟ್ಟುವ ಮೊದಲೇ ಮೂರು ಕಾದಂಬರಿಯಂಥಾ ರಚನೆಗಳು ಬಂದಿವೆ. ಇವುಗಳಲ್ಲಿ 1815ರಲ್ಲಿ ರಚಿಸಲಾದ ಯಾದವನ 'ಕಲಾವತಿ ಪರಿಣಯ'ವು ಮೊದಲನೆಯದು. ಇದು ವಚನ ಪ್ರಬಂಧವೆಂಬುದಾಗಿ ನಮೂದಿತವಾಗಿದೆ. ಗೋವಿಂದ ಪೈಗಳು ಇದನ್ನು ಕನ್ನಡದ ಆರಂಭದ ಕಾದಂಬರಿ ಎಂದು ಕರೆದಿದ್ದಾರೆ".

**(ಹರಿಕೃಷ್ಣ ಭರಣ್ಯ, 1990. ಪುಟ 45).**

"ಆ ಮೊದಲೇ ಮುಮ್ಮಡಿ ಕೃಷ್ಣರಾಜ ಒಡೆಯರ ಆಸ್ಥಾನಿಕ ಕೆಂಪುನಾರಾಯಣ ವಿಶಾಖದತ್ತನ 'ಮುದ್ರಾರಾಕ್ಷಸ' ನಾಟಕದ ಆಧಾರದ ಮೇಲೆ 1823 ರಲ್ಲಿ 'ಮುದ್ರಾಮಂಜೂಷವೂ' ಎಂಬ ಗದ್ಯ ಕೃತಿ ರಚಿಸಿದ. ಅದರಲ್ಲಿ ಕನ್ನಡ ಕಾದಂಬರಿಯ ರೂಪುರೇಷೆಗಳನ್ನು ಗುರುತಿಸಬಹುದಾಗಿದೆ. ಮುದ್ದಣ(ನಂದಳಿಕೆ ಲಕ್ಷ್ಮೀನಾರಾಯಣಯ್ಯ) (1870–1901) 'ರಾಮಾಶ್ವಮೇಧ' ಕೃತಿಯನ್ನು ಹೊಸಗನ್ನಡ ಸಾಹಿತ್ಯಕ್ಕೆ ಕೊಡುಗೆಯಾಗಿ ನೀಡುವುದರೊಂದಿಗೆ 'ಗೋದಾವರಿ' ಎಂಬ ಕಾದಂಬರಿಯನ್ನು ಬರೆದು ಮುಗಿಸುವಷ್ಟರಲ್ಲೇ ಕಾಲವಾದ. ಬಿ. ವೆಂಕಟಾಚಾರ್ಯರು ಬಂಕಿಮಚಂದ್ರರ ಬಂಗಾಳಿ ಕಾದಂಬರಿಯನ್ನು ಭಾಷಾಂತರಿಸಲು ತೊಡಗಿ, ಹಾಗೆ ಭಾಷಾಂತರಿಸಿದ ಮೊದಲ ಕಾದಂಬರಿ 'ದುರ್ಗೇಶ ನಂದಿನಿಯನ್ನು 1865ರಲ್ಲಿ ಹೊರತಂದರು. ಗಳಗನಾಥರ ಪ್ರಥಮ ಕಾಲ್ಪನಿಕ ಕಾದಂಬರಿ 'ಪದ್ಮನಯನೆ' 1898ರಲ್ಲಿ ಪ್ರಕಟವಾಯಿತು. ಮಂಗಳೂರಿನ ಬೋಳಾರ ಬಾಬುರಾಯರ ಸ್ವತಂತ್ರ ಕಾದಂಬರಿ 'ವಾಗ್ದೇವಿ' 1905ರಲ್ಲಿ ರಚಿಸಲ್ಪಟ್ಟಿತು. ಕಾದಂಬರಿ ಕ್ಷೇತ್ರದಲ್ಲಿ ಪುಟ್ಟಣ್ಣನವರದು ಮರೆಯಲಾಗದ ಹೆಸರು. ಕನ್ನಡದಲ್ಲಿ ಮೊದಲನೆಯ ಸಾಮಾಜಿಕ ಕಾದಂಬರಿ ಯಾವುದೆಂಬ ಬಗ್ಗೆ ವಿವಾದವಿದೆ. ಲಕ್ಷ್ಮಣ ಭೀಮರಾವ ಗದಗಕರರ 'ಸೂರ್ಯಕಾಂತ'(1892) ಕನ್ನಡದ ಮೊದಲ ಕಾದಂಬರಿ ಎಂಬುದು ಡಾ. ಹಾವನೂರ ಅವರ ಅಭಿಪ್ರಾಯ. ವಸ್ತು, ವಾತಾವರಣ, ಪಾತ್ರಚಿತ್ರಣ ಹಾಗೂ ಶೈಲಿ ಈ ಎಲ್ಲಾ ದೃಷ್ಟಿಗಳಿಂದ, ಗುಲ್ವಾಡಿ ವೆಂಕಟರಾಯರ 'ಇಂದಿರಾಬಾಯಿ' ಅಥವಾ 'ಸದ್ಧರ್ಮ ವಿಜಯ' ವೇ ಪ್ರಪ್ರಥಮ ಕಾದಂಬರಿಯೆಂದು ಪಂಜೆ ಮಂಗೇಶರಾಯರು, ಗೋವಿಂದ ಪೈ, ಆರ್. ಎಸ್. ಮುಗಳಿ, ಶಿವರಾಮ ಕಾರಂತ ಒಪ್ಪುತ್ತಾರೆ. ಹೊಸಗನ್ನಡ ಉದಯ ಕಾಲದಲ್ಲಿ ಇವರೆಲ್ಲಾ ಮಾಡಿದ

ಪ್ರಯತ್ನಗಳು ಪ್ರಾಯೋಗಿಕವೆನಿಸಿದರೂ ಅವು ಮುಂದಿನ ಪೀಳಿಗೆಯ ಕಾದಂಬರಿಕಾರರಿಗೆ ಮಾರ್ಗದರ್ಶನವಾಗಿ ಪರಿಣಮಿಸಿವೆ."

**(ನಗುವನಹಳ್ಳಿ ಪಿ ರತ್ನ, 1995. ಪುಟ 25).**

ಕುರ್ತ ಕೋಟಿಯವರು ತಿಳಿಸುವಂತೆ "ಸಾಮಾಜಿಕ ಕಾದಂಬರಿಗಳನ್ನು ಬರೆಯುವ ಪ್ರಯತ್ನಗಳಲ್ಲಿ ಬೋಳಾರ ಬಾಬುರಾಯರ 'ವಾಗ್ದೇವಿ' ಎಂ. ಎಸ್. ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಹರಾಯ' ಹಾಗೂ ಕೆರೂರ ವಾಸುದೇವಾಚಾರ್ಯರ 'ಇಂದಿರಾ' ಈ ಕಾದಂಬರಿಗಳು ಮುಖ್ಯವಾಗಿವೆ."

**(ಕುರ್ತಕೋಟಿ ಡಿ.ಕೆ. 1962. ಪುಟ 187).**

"ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದ ಹೊತ್ತಿಗೆ 1857ರಲ್ಲಿ ಕಲ್ಕತ್ತ, ಮುಂಬಯಿ ಹಾಗೂ ಮದರಾಸು ಅಧಿಪತ್ಯಗಳಲ್ಲಿ ವಿಶ್ವವಿದ್ಯಾನಿಲಯಗಳು ಸ್ಥಾಪಿತವಾಗಿ 1858ರಲ್ಲಿ ಮೈಸೂರು ಸಂಸ್ಥಾನದಲ್ಲಿ ಸಹ ಕಾಲೇಜು ವ್ಯಾಸಂಗಕ್ಕೆ ಅವಕಾಶ ಕಲ್ಪಿತವಾದ ಮೇಲೆ, ಇಂಗ್ಲಿಷ್ ವ್ಯಾಸಂಗದ ಪ್ರಭಾವ ಭಾರತದ ಇತರ ಭಾಷೆಗಳ ಮೇಲೆ ಬಿದ್ದಂತೆ ಕನ್ನಡ ಸಾಹಿತ್ಯದ ಮೇಲೂ ಬಿದ್ದಿತು. ಇಂಗ್ಲಿಷ್ ಸಾಹಿತ್ಯದ ಪ್ರೇರಣೆಯಿಂದ ಹೊಸಗನ್ನಡದಲ್ಲಿ ಕಾದಂಬರಿ, ಸಣ್ಣಕತೆ, ಪ್ರಬಂಧ, ಭಾವಗೀತೆ, ಜೀವನ ಚರಿತ್ರೆ ಮೊದಲಾದ ಪ್ರಕಾರಗಳು ಹುಟ್ಟಿದವು"

**(ನಗುವನಹಳ್ಳಿ ಪಿ. ರತ್ನ, 1995. ಪುಟ 24).**

"ಆಂಗ್ಲ ಕಾದಂಬರಿಕಾರರ ಪ್ರಭಾವಕ್ಕೆ ನಮ್ಮ ದೇಶದ ಬರಹಗಾರರು ಕಳೆದ ಶತಮಾನದ ಕೊನೆಯಲ್ಲಿ ಒಳಗಾದರು. ಇದರ ಪರಿಣಾಮ ಮೊದಲು ಕಂಡುಬಂದುದು ಬಂಗಾಳದಲ್ಲಿ ಮತ್ತು ಮಹಾರಾಷ್ಟ್ರದಲ್ಲಿ ಬಂಕಿಮಚಂದ್ರರೂ, ಆಪ್ತೆಯವರೂ ಕಾದಂಬರಿ ಯುಗದ ಶಕಪುರುಷರಾದರು. ರಾಷ್ಟ್ರಭಕ್ತಿ ಭಾಷಾಭಿಮಾನಗಳು ಈ ದೆಸೆಯಲ್ಲಿ ನವ ಚೈತನ್ಯವನ್ನುಂಟುಮಾಡಿದವು. ಕರ್ನಾಟಕದಲ್ಲೂ ಗಳಗನಾಥರೂ ವೆಂಕಟಾಚಾರ್ಯರೂ ಕಾದಂಬರಿ ಧ್ವಜವನ್ನು ಹಾರಿಸಿದರು. ಗಳಗನಾಥ ಆಪ್ತೆಯವರ ಮರಾಠಿ ಕಾದಂಬರಿಗಳನ್ನು ಚೆಂದವಾಗಿ ಕನ್ನಡಿಸಿದುದಲ್ಲದೆ ಸ್ವತಂತ್ರ ಐತಿಹಾಸಿಕ ಕಾದಂಬರಿಗಳನ್ನು ರಚಿಸಿದರು. ವೆಂಕಟಾಚಾರ್ಯರು ಗದ್ಯದಲ್ಲಿ ಪ್ರನಾದವನ್ನು ಗಳಗನಾಥರು ಓಜಸ್ಸನ್ನು ತುಂಬಿ ಮುಂದಿನ ಕಾದಂಬರಿಕಾರರಿಗೂ ಹೊಸಗನ್ನಡ ಗದ್ಯ ಲೇಖಕರಿಗೂ ಮಾರ್ಗದರ್ಶಕರಾದರು. ಅಂದು ಕನ್ನಡದಲ್ಲಿ ಓದುವ ಹುಚ್ಚು ಹಿಡಿಸುವುದಕ್ಕೆ ಇವರೀರ್ವರ ಕೃತಿಗಳು ಎಷ್ಟು ಸಹಾಯಕವಾದುವೆಂಬುದನ್ನು ಬಣ್ಣಿಸುವುದು ಅಗತ್ಯ. ಈ

ಸಂದರ್ಭದಲ್ಲಿ ಗುಲ್ವಾಡಿ ವೆಂಕಟರಾಯರು 1899 ರಲ್ಲಿ ಬರೆದ 'ಇಂದಿರಾ ಬಾಯಿ' ಎಂಬ ಕನ್ನಡದ ಪ್ರಥಮ ಸ್ವತಂತ್ರ ಸಾಮಾಜಿಕ ಕಾದಂಬರಿಯನ್ನು(1899) ನೆನೆಯಬೇಕು. ಹಾಗೆಯೇ ಎಂ.ಎಸ್. ಪುಟ್ಟಣ್ಣನವರ 'ಮಾಡಿದ್ದುಣ್ಣೋ ಮಾರಾಯ' ಎಂಬ ಸ್ವತಂತ್ರ ಕಾದಂಬರಿಯು ಗಮನಾರ್ಹ. ಬರ ಬರುತ್ತಾ ಕಾದಂಬರಿ ಕೃಷಿ ವೈವಿಧ್ಯಪೂರ್ಣವಾಗಿ ಸಾಗಿತು. 1930ರಿಂದ ಇತ್ತ ಅನೇಕ ಅತ್ಯುತ್ತಮ ಸ್ವತಂತ್ರ ಕಾದಂಬರಿಗಳು ಕನ್ನಡದಲ್ಲಿ ರಚಿತವಾಗಿವೆ. ಕುವೆಂಪು ಅವರ 'ಕಾನೂರು ಸುಬ್ಬಮ್ಮ ಹೆಗ್ಗಡತಿ', ಕಾರಂತರ 'ಮರಳಿ ಮಣ್ಣಿಗೆ', ಅ.ನ. ಕೃಷ್ಣರಾಯರ 'ನಟ ಸಾರ್ವಭೌಮ', ತ.ರಾ.ಸು. ಅವರ 'ಹಂಸಗೀತೆ', ಕೆ. ವಿ. ಅಯ್ಯರ 'ಶಾಂತಲಾ' ಇವು ಒಂದೊಂದು ವಿಶಿಷ್ಟ ಗುಣದಿಂದ ಕನ್ನಡ ಜನಜೀವನ, ಇತಿಹಾಸ, ಸಂಸ್ಕೃತಿ ಇತ್ಯಾದಿ ಅಂಶಗಳನ್ನು ಅಮರವಾಗಿಸಿವೆ. ಬೆಟಗೇರಿ, ಗೋಕಾಕ್, ಶ್ರೀರಂಗ, ಮಾಸ್ತಿ, ಮುಗಳಿ, ದೇವುಡು, ಬಸವರಾಜ ಕಟ್ಟಿಮನಿ, ವ್ಯಾಸರಾಯ ಬಲ್ಲಾಳ, ಕಸ್ತೂರಿ ಮೊದಲಾದ ಪ್ರಸಿದ್ಧ ಲೇಖಕರೂ ಕಾದಂಬರಿ ಕ್ಷೇತ್ರದಲ್ಲಿ ಉತ್ತಮ ಸೇವೆ ಸಲ್ಲಿಸಿರುವರು. ಆಧುನಿಕ ಕನ್ನಡ ಲೇಖಕರಲ್ಲಿ ಪ್ರಸಿದ್ಧರಾದವರ ಅನೇಕ ಕೃತಿಗಳು ಭಾರತದ ಇತರ ಭಾಷೆಗಳಿಗೂ ಆಂಗ್ಲ ಭಾಷೆಗೂ ಪರಿವರ್ತನೆಯಾಗಿರುವುದು ಹೆಮ್ಮೆಯ ವಿಷಯ".

**(ಮರಿಯಪ್ಪ ಭಟ್ಟ ಎಂ, 1960, ಪುಟ 260).**

ಚಲನಚಿತ್ರ, ಅಂತರ್ಜಾಲ, ಟಿ.ವಿ. ಮಾಧ್ಯಮದ ಪ್ರಭಾವ ಜನರ ಮೇಲೆ ಹೆಚ್ಚುತ್ತಿರುವ ಈ ದಿನಗಳಲ್ಲಿಯೂ ಕೆ.ಟಿ.ಗಟ್ಟಿಯವರ ಕಾದಂಬರಿಗಳನ್ನು ಓದುವ ಉತ್ಸಾಹ ಜನರಲ್ಲಿ ಕಡಿಮೆಯಾಗಿಲ್ಲ. ಪ್ರಕಟಗೊಂಡ ಅವರ ಕಾದಂಬರಿಗಳನ್ನು ಜನ ಆಸಕ್ತಿಯಿಂದ ತೆಗೆದುಕೊಂಡು ಓದುತ್ತಿದ್ದಾರೆ. ಹೀಗಾಗಿ ಕೆ.ಟಿಗಟ್ಟಿಯವರು ತಮ್ಮ ಬರವಣಿಗೆಯನ್ನು ಇನ್ನಷ್ಟು ಆಸಕ್ತಿಯಿಂದ ಮುಂದುವರಿಸಿಕೊಂಡು ಬರುತ್ತಿದ್ದಾರೆ. ಅಗಾಧವಾದ ಜೀವನಶ್ರದ್ಧೆ ಅವರದು. ಇವರ ನಿರರ್ಗಳವಾದ, ದಿಟ್ಟತನದಿಂದ ವಿಚಾರವೊಂದನ್ನು ಹೇಳುವ ಶೈಲಿ, ಘೋಷಣೆಗಳು ಸಾವಿರಾರು ಮಂದಿ ಓದುಗರನ್ನು ತಂದುಕೊಟ್ಟು ಕಾದಂಬರಿ ನೂರಾರು ಮನೆಗಳಲ್ಲಿ ಕಾಲಿಡುವಂತೆ ಮಾಡಿದವು. ಯಾವುದೇ ಸಂಕೋಚವಿಲ್ಲದೆ ವಸ್ತುವಿನ ಆಯ್ಕೆ ಮಾಡುವುದು, ವ್ಯಕ್ತಿ–ವ್ಯಕ್ತಿ ಸಂಬಂಧವನ್ನ ಆಂತರ್ಯದಿಂದ ಚಿತ್ರಿಸುತ್ತಿರುವುದು ಕಾದಂಬರಿಗೆ ಸಾವಿರಾರು ಓದುಗರು ಆಕರ್ಷಿತರಾಗುವಂತೆ ಮಾಡಿದೆ. ಡಾ.ಎಲ್.ಎಸ್.ಶೇಷಗಿರಿ ರಾವ್‌ರವರು ಹೇಳುವಂತೆ "ಎಲ್ಲ ಕಾದಂಬರಿಕಾರರು ಒಂದು ಪಂಥಕ್ಕೆ ಅಥವಾ ಪರಂಪರೆಗೆ ಸೇರಿದವರು ಎಂದು ಹೇಳುವಂತಿಲ್ಲ. ಹಾಗೆ ಹೇಳುವಷ್ಟರಮಟ್ಟಿಗೆ ಒಂದೇ ಲಕ್ಷಣಗಳು ಅವರ ಕಾದಂಬರಿಗಳಲ್ಲಿಲ್ಲ. ಆದರೆ ಅವರ ಕೃತಿಗಳಿಂದ ತಕ್ಕಷ್ಟು ದೂರ ನಿಂತು ನೋಡುವಾಗ

ಕೆಲವು ಸಾಮಾನ್ಯ ಲಕ್ಷಣಗಳು ಕಾಣುತ್ತವೆ. ಇವರೆಲ್ಲ ಮನುಷ್ಯರಲ್ಲಿ ಘನತೆಯನ್ನು ಕಾಣಲು ಹೊರಟವರು. ಪ್ರಾಮಾಣಿಕವಾಗಿ ಅಂತಹ ಘನತೆಯುಂಟು ಎಂದು ನಂಬಿದವರು". ಕೆ.ಟಿ.ಗಟ್ಟಿಯವರ ಬರಹಗಳಲ್ಲಿ ಈ ಲಕ್ಷಣಗಳನ್ನು ಗುರುತಿಸಬಹುದು.

**(ಶೇಷಗಿರಿರಾವ್ ಎಲ್.ಎಸ್, 1975.)**

"ಸಾಹಿತ್ಯದ ಉಳಿದ ಪ್ರಕಾರಗಳಿಗಿಂತ ಹೆಚ್ಚು ವಿಕಸನ ಶೀಲವಾದ ಪ್ರಕಾರ ಕಾದಂಬರಿ. ವೈಯಕ್ತಿಕ ವೈಚಾರಿಕತೆಯ ಆವಿಷ್ಕಾರಕ್ಕೆ ಇದು ಸುವರ್ಣ ಮಾಧ್ಯಮ. ಅನೇಕ ಕಾದಂಬರಿಕಾರರು ಕಾದಂಬರಿ ರಚನೆಗಳಿಗಿರುವ ಅನುಕೂಲತೆಗಳನ್ನು ಉಪಯೋಗಿಸಿಕೊಂಡಿಲ್ಲ. ವಾಸ್ತವವಾಗಿ ವೈಚಾರಿಕತೆಯ ಅಭಿವ್ಯಕ್ತಿಗೆ ಇದು ಎಂಥ ಸಮರ್ಥ ಮಾಧ್ಯಮ ಎಂಬ ಕಲ್ಪನೆಯಿಂದ ರಚಿತವಾದ ಕೃತಿಗಳು ಕಡಿಮೆ. ಗಟ್ಟಿ ನೆಲಗಟ್ಟಿನ ಮೇಲೆ ಬರಹ ಕಟ್ಟದ ಕಾರಣ ಕಾದಂಬರಿ ಕಟ್ಟಡ ಬಿರುಕು ಬಿಟ್ಟು ಜೀರ್ಣಾವಸ್ಥೆ ಮುಟ್ಟುತ್ತದೆ. ಓದುಗರ ಮನ ಮುಟ್ಟುವುದಿಲ್ಲ. ಕಾದಂಬರಿ ಬರೆಯುವುದು ನೀರು ಕುಡಿದಷ್ಟು ಸರಾಗವಾಗಿ ಕಾದಂಬರಿ ಬರೆಯುವುದನ್ನೇ ಕಸುಬು ಮಾಡಿಕೊಂಡಿರುವವರೂ ಇದ್ದಾರೆ. ಕಥೆ ಕಾದಂಬರಿ ಪ್ರಕಾರ ಸುಲಭ ಎಂಬ ಭ್ರಾಂತಿಜನ್ಯ ಗ್ರಹಿಕೆ ಈ ವಿಪುಲ ರಚನೆಗೆ ಕಾರಣವಾಗಿರಬಹುದು. ಇದರಿಂದ ಬರವಣಿಗೆಗೆ ಅಗತ್ಯವಾದ ಗುಣಮಟ್ಟವನ್ನು ಕಾಯ್ದುಕೊಳ್ಳುವುದು ಕಷ್ಟವಾಗಿದೆ. ವರ್ಷದಿಂದ ವರ್ಷಕ್ಕೆ ಕಾದಂಬರಿಗಳ ಪ್ರಮಾಣ ಗಾತ್ರ ಬೆಳೆಯುತ್ತಲೇ ಇದೆ. ಗುಣ ಪ್ರಮಾಣ ಇಳಿಯುತ್ತಲೇ ಇದೆ" ಎಂದು ಪ್ರೊ.ಹಂಪ ನಾಗರಜಯ್ಯರವರು

**(ಹಂಪ ನಾಗರಾಜಯ್ಯ, 2007. ಪುಟ 34)**

ಕುರಿತು ತಮ್ಮ ನಿಲುವನ್ನು ವ್ಯಕ್ತಪಡಿಸುತ್ತಾರೆ. "ಐರೋಪ್ಯ ಕಾದಂಬರಿ ಔದ್ಯೋಗಿಕ ಕ್ರಾಂತಿ ಮತ್ತು ಬಂಡವಾಳಶಾಹಿ ಆರ್ಥಿಕ ವ್ಯವಸ್ಥೆಗಳ ಮುಖಾಮುಖಿಯಲ್ಲಿ ರೂಪುಗೊಂಡರೆ ಭಾರತೀಯ ಕಾದಂಬರಿಯು ವಸಾಹತುಶಾಹಿ ಮತ್ತು ಹೊಸ ರಾಷ್ಟ್ರೀಯತೆಯ ಅನುಭವದ ಹಿನ್ನೆಲೆಯಲ್ಲಿ ಮೈದೋರಿತು".

**(ವೀರಣ್ಣ ರಾಜೂರ, ಹಿರೇಮಠ ಬಿ.ಆರ್ (ಸಂ) 1996 ಪುಟ 60)**

ಕೆ.ಟಿ.ಗಟ್ಟಿಯವರು ತಮ್ಮ ಕಾದಂಬರಿಗಳ ಮೂಲಕ ವೈಚಾರಿಕ ಪ್ರಪಂಚವನ್ನು ತೆರೆದಿಟ್ಟಿದ್ದಾರೆ. ಇವರ ಕಾದಂಬರಿಗಳಲ್ಲಿ ಪ್ರಮಾಣ ಗಾತ್ರವೂ ಇದೆ. ಗುಣ ಪ್ರಮಾಣವೂ ತುಂಬಿಕೊಂಡಿದೆ. ಕೆ.ಟಿಗಟ್ಟಿಯವರು ತಮ್ಮನ್ನು ತಾವು ಯಾವ ಪಂಥಗಳಲ್ಲೂ ಗುರುತಿಸಿಕೊಳ್ಳುವುದಿಲ್ಲ. ಇವರು ಪಾತ್ರಗಳನ್ನು ಚೆನ್ನಾಗಿ ಸೃಷ್ಟಿಸಬಲ್ಲರು. ಮಾನವೀಯ ದೃಷ್ಟಿಯಿಂದ ಸಮಸ್ಯೆಗಳನ್ನು, ವ್ಯಕ್ತಿಗಳನ್ನು ಕಾಣಬಲ್ಲರು. ಇವರ ಕಾದಂಬರಿಗಳಲ್ಲಿ

ಆದರ್ಶತ್ವ ಎದ್ದು ಕಾಣುತ್ತದೆ. ಕಾದಂಬರಿಯು ಕೇವಲ ನೀತಿ ಉಪದೇಶಕ್ಕೆ ಸೀಮಿತವಾಗಿರದೆ ಒಳ್ಳೆಯದನ್ನು ಚಿತ್ರಿಸಿ ಅದರ ಕಡೆಗೆ ಓದುಗರ ಮನಸ್ಸು ಹರಿಯುವಂತೆ ಮಾಡಬೇಕು. ಈ ಕೆಲಸವನ್ನು ಕೆ.ಟಿ.ಗಟ್ಟಿಯವರ ಕೃತಿಗಳು ಮಾಡುತ್ತವೆ. ಜನಸಾಮಾನ್ಯರಿಗೆ ಕನ್ನಡ ಸಾಹಿತ್ಯದ ಅನೇಕ ಪ್ರಕಾರಗಳಲ್ಲಿ ಕಾದಂಬರಿಯು ಅತೀವ ಸುಲಭಗ್ರಾಹ್ಯ ಹಾಗೂ ತೃಪ್ತಿಕರ. ಈ ದೃಷ್ಟಿಯಿಂದ ಕೆ.ಟಿ.ಗಟ್ಟಿಯವರ ಕೊಡುಗೆ ಸಾಮಾನ್ಯ ಓದುಗನಿಗೆ ಒಂದು ಮಹತ್ವದ ಸೇವೆ ಎನ್ನಬಹುದು. ಇವರು ತಮ್ಮ ಕಾದಂಬರಿಗಳಲ್ಲಿ ಜನ ಸಾಮಾನ್ಯನ ಮಾನಸಿಕ ಸಂವೇದನೆ, ಸಮಾಜದ ರೀತಿ-ನೀತಿಗಳ ನ್ಯಾಯಾನ್ಯಾಯದ ವಿಶ್ಲೇಷಣೆಯನ್ನು ಸಹಜವಾಗಿ ಮಾಡಿದ್ದಾರೆ. ಅವರ ಕೃತಿಗಳು ಚಿಂತನ ಯೋಗ್ಯವಾದುವು. ಅವರ ಕ್ರಿಯಾಶೀಲ ಪ್ರತಿಭೆ ಸದಾ ಕೆಲಸ ಮಾಡುತ್ತಲೇ ಇರುತ್ತದೆ. ಕಾದಂಬರಿಯ ಪಾತ್ರಗಳ ಸಂಭಾಷಣೆಯಲ್ಲಿ ನಿಷ್ಠುರ ಸತ್ಯಲೋಕ ತೆರೆದುಕೊಳ್ಳುತ್ತದೆ. ತುಂಬಾ ಶ್ರೇಷ್ಠವಾದ ಕೃತಿಗಳು ಜನಪ್ರಿಯ ಕಾದಂಬರಿಗಳು ಎಂಬುದಾಗಿ ಹೇಳುವ ಹಾಗೆ ಇವರ ಕಾದಂಬರಿಗಳನ್ನು ಸಾಹಿತ್ಯೇತರ ಕಾರಣಗಳಿಂದಾಗಿ ಟೀಕೆ ಮಾಡುವವರೂ ಇದ್ದಾರೆ. ಇವರ ಕಾದಂಬರಿ ಚಲನ ಚಿತ್ರವಾಗಿಯೂ ತೆರೆ ಕಂಡಿದೆ. ಆದರೆ ಹೆಚ್ಚಿನ ಯಶಸ್ಸನ್ನು ಕಾಣುವುದು ಸಾಧ್ಯವಾಗಲಿಲ್ಲ. ಏಕೆಂದರೆ "ಕಾದಂಬರಿಯೊಂದನ್ನು ಚಲನಚಿತ್ರವನ್ನಾಗಿ ನೋಡಿದಾಗ ಬಹು ಸಂದರ್ಭಗಳಲ್ಲಿ ಅನಿವಾರ್ಯ ನಿರಾಶೆ ಕಾದಿರುತ್ತದೆ. ಕಾದಂಬರಿಯನ್ನು ಓದಿ ಮೆಚ್ಚಿಕೊಂಡವರಿಗೆ ಚಲನಚಿತ್ರ ಅದೇ ಬಗೆಯ ಸಂತೋಷವನ್ನು ತರುವುದು ಕಷ್ಟ. ಇದಕ್ಕೆ ಕಾರಣ ಕಾದಂಬರಿಯ ಓದುಗನೇ ತನ್ನ ಮನಸ್ಸಿನ ಬೆಳ್ಳಿತೆರೆಯ ಮೇಲೆ ಚಿತ್ರವನ್ನು ನಿರ್ಮಿಸಿಕೊಂಡಿರುವುದು. ತನ್ನ ನಿರ್ಮಾಣದಲ್ಲಿ ಅವನು ಪೂರ್ಣ ಸ್ವತಂತ್ರ. ಅವನೇ ನಿರ್ಮಾಪಕ, ಅವನೇ ನಿರ್ದೇಶಕ, ಅವನೇ ಎಲ್ಲವೂ. ಇದಕ್ಕೆ ತಯಾರಿಸಿದ ಚಿತ್ರ ಕಣ್ಣು ಮುಂದೆ ಬಂದಾಗ 'ಇಷ್ಟೆಯೇ' ಅನ್ನಿಸುವುದು ಸ್ವಾಭಾವಿಕ. ಅಲ್ಲದೆ ಚಲನಚಿತ್ರ ಸಾಮೂಹಿಕ ಯಶಸ್ಸನ್ನು ಅವಲಂಭಿಸಿರುವ ಮಾಧ್ಯಮ. ಪ್ರತಿಯೊಬ್ಬರ ನಟನೆ ದೊಡ್ಡದಿರಲಿ, ಚಿಕ್ಕದಿರಲಿ ಚಿತ್ರದ ಯಶಸ್ಸಿಗೆ ಮುಖ್ಯ. ಜೊತೆಗೆ ಕಾದಂಬರಿಯಲ್ಲಿರುವುದೆಲ್ಲವನ್ನೂ ತೆರೆಯ ಮೇಲೆ ತೋರಿಸುವುದೂ ಅಸಾಧ್ಯ. ಕಾದಂಬರಿಯ ಪಾತ್ರವೊಂದರ ಬೆಳವಣಿಗೆಗೆ ಪೋಷಕವಾಗಿ ಅನೇಕ ಸಂಗತಿಗಳಿರಬಹುದು. ಅವೆಲ್ಲವನ್ನು ಚಿತ್ರದಲ್ಲಿ ತೋರುವುದು ಉಚಿತವಾಗದಿರಬಹುದು; ಕಾರ್ಯಸಾಧ್ಯವಲ್ಲದಿರಬಹುದು. ಫಲವಾಗಿ ಕಾದಂಬರಿ ಯಥಾವತ್ತಾಗಿ ಚಲನಚಿತ್ರ ವಾಗಲೊಲ್ಲದು. ಕಾದಂಬರಿಯ ಸೂಚಿತ ಅಂಶಗಳೆಷ್ಟೋ ಕೈ ಬಿಟ್ಟು ಹೋಗುತ್ತವೆ"

**(ಹಾಮಾ.ನಾಯಕ, 1970, ಪುಟ 31).**

ಕಾದಂಬರಿಕಾರರಾಗಿ ಗುರುತಿಸಲ್ಪಡುವ ಸಾಹಿತಿ ಕೆ.ಟಿ. ಗಟ್ಟಿಯವರು ಇಲ್ಲಿಯವರೆಗೆ 46 ಕನ್ನಡ ಕಾದಂಬರಿಗಳನ್ನು ಹಾಗೂ ಒಂದು ತುಳು ಭಾಷೆಯ

ಕಾದಂಬರಿಯನ್ನು ಬರೆದಿದ್ದಾರೆ. ಇವರ ಕೆಲವು ಕಾದಂಬರಿಗಳು ಕನ್ನಡದ ಜನಪ್ರಿಯ ವಾರಪತ್ರಿಕೆಗಳಲ್ಲಿ ಧಾರಾವಾಹಿಗಳಾಗಿ ಪ್ರಕಟಗೊಂಡಿವೆ.

## ೪.೧: ಶಬ್ದಗಳು

ಕೆ.ಟಿ.ಗಟ್ಟಿಯವರು 'ಶಬ್ದಗಳು' ಕೃತಿಯಿಂದ ಆರಂಭಿಸಿ ಕಾದಂಬರಿಗಳನ್ನು ಬರೆಯತೊಡಗಿದರು. 1976ರಲ್ಲಿ ಇತಿಯೋಪಿಯಾದಲ್ಲಿದ್ದ ಕಾಲದಲ್ಲಿ ಕಾದಂಬರಿ ಬರೆಯಲು ಆರಂಭಿಸಿದರು. 'ಶಬ್ದಗಳು' ಕಾದಂಬರಿಯು ನೈಸರ್ಗಿಕ ಸ್ವಾಮ್ಯ ಮತ್ತು ವ್ಯವಸ್ಥಾಪಿತ ನಂಬಿಕೆಗಳ ಮಧ್ಯೆ ಹೋರಾಟವನ್ನು ಹೇಳುತ್ತಾ ಹೋಗುತ್ತದೆ. ಕಾದಂಬರಿಯಲ್ಲಿ ಬರುವ ಸಾವಿತ್ರಿ, ರಮಾ, ಕುಸುಮ ಮೊದಲಾದ ಪಾತ್ರಗಳು ಇವು ಹೀಗೆಯೇ ಇರಬೇಕೆಂದು ಹೇಳುವ ನಮ್ಮ ವ್ಯವಸ್ಥೆಯ ಮಾದರಿಗಳನ್ನು ನಿರಾಕರಿಸುತ್ತವೆ. ಇವರು ತಮ್ಮ ಆರಂಭದ ಕಾದಂಬರಿಯಲ್ಲಿಯೇ ಬದುಕಿನ ಗಂಭೀರ ವಿಷಯಗಳನ್ನು ಚರ್ಚಿಸುತ್ತಾರೆ. ಈ ಕಾದಂಬರಿಯ ಪಾತ್ರಗಳು ತಮ್ಮ ಕಿವಿಗೆ ಕೇಳುವ ಶಬ್ದಗಳ ಬಗ್ಗೆ ಆರಂಭದಲ್ಲಿ ನಂಬಿಕೆ ಇರಿಸಿದರೂ ಕೊನೆಗೆ ಕಿವಿಗೆ ಕೇಳಿಸದ ಶಬ್ದಗಳ ವಿಚಾರಗಳ ಶೋಧನೆಯಲ್ಲಿ ತೊಡಗುತ್ತವೆ.

ಅನುಭವಕ್ಕೆ ಬರುವ ಶಬ್ದಗಳ ಸಂಶೋಧನೆ ನಡೆಸುತ್ತಿದ್ದ ಉಪನ್ಯಾಸಕ ಕಿರಣ ಶಂಕರ ಅಪಘಾತವೊಂದರಲ್ಲಿ ಸರಿಪಡಿಸಲಾಗದ ಮೂಳೆ ಮುರಿತಕ್ಕೊಳಗಾದಾಗ ತಾನಿನ್ನು ಬದುಕಬೇಕೇ? ಎನ್ನುವ ಪ್ರಶ್ನೆ ಆತನನ್ನು ಕಾಡುತ್ತದೆ. ಪತ್ನಿ ರಮಾ ಗಂಡನ ಆರೈಕೆಯಲ್ಲಿ ಸಂತೋಷ ಅನುಭವಿಸುತ್ತಿದ್ದರೂ ಭವಿಷ್ಯದ ಪ್ರಶ್ನೆ ಅವಳನ್ನು ಕಾಡುತ್ತಿತ್ತು. ಕಿರಣಶಂಕರ ರಮಾಳ ಮನಸ್ಸಿನಲ್ಲಿ ಮೌನವಾಗಿರುವ ಶಬ್ದಗಳಿಗೆ ಅರ್ಥ ಹುಡುಕುವ ಪ್ರಯತ್ನವನ್ನು ಮಾಡುತ್ತಾನೆ. ಸ್ವಾರ್ಥವನ್ನು ಮೀರಲು ಪ್ರಯತ್ನಿಸುತ್ತಾನೆ. ಆತನಿಗೆ ಏಕಾಂಗಿತನ ಕಾಡುತ್ತದೆ. ಕಿವಿಗೆ ಕೇಳದ ವಿಭಿನ್ನ ಆಲೋಚನೆಗಳು ಆತನನ್ನು ಕಾಡುತ್ತವೆ. ಎಂ.ಬಿ.ಬಿ.ಎಸ್. ಓದಲು ಪತಿಯಿಂದ ದೂರವಾದ ಕಮಲಳಲ್ಲಿ ಯವ್ವನದ ಆಸೆಗಳು ಚಿಗುರುತ್ತವೆ. ಪರಿಣಾಮವಾಗಿ ಕಮಲ ಗರ್ಭಿಣಿಯಾಗುತ್ತಾಳೆ. ಈ ಸುದ್ದಿ ತಿಳಿದ ಕಿರಣಶಂಕರನಿಗೆ ಆಘಾತವಾಗುತ್ತದೆ. ತನ್ನ ಸಂಶೋಧನೆಯ ಆಸೆ ಹಾಗೇ ಉಳಿಯುತ್ತದೆ. ಕಿವಿಗೆ ಕೇಳುವ ಶಬ್ದಗಳೇ ಅಂತಿಮವಲ್ಲ ಎಂಬ ಅರಿವಾಗಿ ತನ್ನ ಭಾವನಾತ್ಮಕ ಸಂಬಂಧಕ್ಕೆ ಭಂಗ ಉಂಟಾದಾಗ ಕಿರಣ ಸಾವನ್ನಪ್ಪುತ್ತಾನೆ. ಗಂಡ ಸರಿಯಾಗಿದ್ದಾಗ ಆತನೊಂದಿಗೆ ಚೆನ್ನಾಗಿ ಸಂಸಾರ ನಡೆಸಿದ ರಮಾ ಬೆಂಗಳೂರಿಗೆ ವಿದ್ಯಾಭ್ಯಾಸಕ್ಕೆಂದು ಬಂದಾಗ ಅಲ್ಲಿನ ಆಕರ್ಷಣೆಗಳಿಂದಾಗಿ, ಸಂತಾನದ ಸಹಜ

ಬಯಕೆಯಿಂದಾಗಿ ಆಕೆ ಕಣ್ಣಿಗೆ ಕಾಣುವ ಶಬ್ದಗಳನ್ನು ಧಿಕ್ಕರಿಸಿ ಮನಸ್ಸಿನ ಶಬ್ದಗಳಿಗೆ ಅರ್ಥ ಕೊಡುತ್ತಾಳೆ.

ಕುರುಡಿಯಾಗಿದ್ದ ರಾಜಣ್ಣನ ತಂಗಿ ಸಾವಿತ್ರಿ ಹುಚ್ಚಿಯಂತೆ ವರ್ತಿಸುತ್ತಿದ್ದವಳು ಶೈಲೇಶ ನಾಯ್ಡುವಿನ ದೈಹಿಕ ಸಂಪರ್ಕದಿಂದ ಸರಿಯಾದಾಗ, ಗರ್ಭಿಣಿಯಾದಾಗ ಅವಳ ಮನದಲ್ಲಿ ತಿಳಿಸಲಾಗದ ಶಬ್ದಗಳು ಇದ್ದುದೇ ಇದಕ್ಕೆ ಕಾರಣ ಎಂದು ಕಿವಿಗೆ ಕೇಳುವ ಶಬ್ದಗಳ ಸಂಶೋಧಕನಿಗೂ ಗೊತ್ತಾಗಿರಲಿಲ್ಲ. ಶೈಲೇಶ ನಾಯ್ಡು ಕಿರಣ ಶಂಕರನಿಗೆ ಅಪರಾಧಿಯಾಗಿ ಕಾಣುತ್ತಾನೆ. ರಮಾ ತಾನು ಗರ್ಭಿಣಿಯಾದಾಗ ನಾಯ್ಡು ಅವಳಿಗೆ ಹಿಂದೆ ಕಾಣಿಸುವುದಿಲ್ಲ. ಕಣ್ಣಿಗೆ ಕಾಣಿಸದ ಶಬ್ದಗಳ ಅರ್ಥ ಆಕೆಗೆ ಆಗ ಕಾಣಿಸುತ್ತದೆ.

ದೇವರ ಅಸ್ತಿತ್ವವನ್ನು ಒಪ್ಪದ ಕಿರಣಶಂಕರನ ತಂಗಿ ಮನೆಯಿಂದ ದೂರವಿರಿಸಲ್ಪಟ್ಟ ಸಾವಿತ್ರಿಯನ್ನು ತನ್ನ ಮನೆಯಲ್ಲಿ ಇರಿಸಿಕೊಳ್ಳುತ್ತಾಳೆ. ನಾಯ್ಡುವಿನ ಇಷ್ಟದಂತೆ ಕುಸುಮ ಆತನನ್ನು ಮದುವೆಯಾಗಲು ಒಪ್ಪುತ್ತಾಳೆ. ಇದರಿಂದ ಕಿರಣಶಂಕರ ಮಾನಸಿಕವಾಗಿ ನೊಂದುಕೊಳ್ಳುತ್ತಾನೆ. ಆಗ ಅತನಿಗೆ ತನ್ನ ಅನುಭವಕ್ಕೆ ಬಾರದ ಶಬ್ದಗಳಿಗೆ ಅರ್ಥವಿದೆಯೆಂದು ತಿಳಿದಿರಲಿಲ್ಲ. ತಿಳಿದಾಗ ಮಾನಸಿಕ ಆಘಾತಕ್ಕೊಳಗಾಗಿ ಸಾವನ್ನಪ್ಪುತ್ತಾಳೆ. ಕಿರಣಶಂಕರ, ರಮಾ, ಕುಸುಮ, ನಾಯ್ಡು ಇವರೆಲ್ಲರೂ ಹೊರಗೆ ಸಂತೃಪ್ತರಾಗಿ ತೋರುತ್ತಿದ್ದರೂ ಅಂತರಂಗದಲ್ಲಿ ಕೇಳುವ ಅನೇಕ ಶಬ್ದಗಳಿಗೆ ಅರ್ಥ ಹುಡುಕುವ ಮನೋರೋಗಿಗಳಂತೆ ಬದುಕುತ್ತಾರೆ. ಸಮಾಜ ಬಯಸುವ ಶಬ್ದಗಳಿಗೆ ಅರ್ಥವಿಲ್ಲವೆಂದು ತಿಳಿದಾಗ ತನ್ನ ಅಂತರಂಗದ ಧ್ವನಿಗೆ ಓಗೊಡುತ್ತಾರೆ. ಕಾದಂಬರಿಯು ಕಣ್ಣಿಗೆ ಕಾಣುವ ಮತ್ತು ಕಾಣದ ಪ್ರಪಂಚಗಳ ವೈರುಧ್ಯಗಳನ್ನು ತೆರೆದಿಡುತ್ತಾ ಹೋಗುತ್ತದೆ.

ಬದುಕು ಬಹಳ ಸಂಕೀರ್ಣವಾದುದು. ಇದರಲ್ಲಿ ಅನಿರೀಕ್ಷಿತ ಘಟನೆಗಳನ್ನು ಮನುಷ್ಯ ಎದುರಿಸಬೇಕಾಗುತ್ತದೆ. ಬದುಕಿನಿಂದ ವಂಚಿತನಾಗಬೇಕಾದ ಸಂದರ್ಭವೂ ಒದಗಬಹುದು. ಇಂತಹ ಸಂದರ್ಭದಲ್ಲಿ ಆತನ ಅಂತರಂಗದ ಧ್ವನಿಗಳು ಮೂಕವಾಗುತ್ತವೆ. ಕಿರಣಶಂಕರ ಬಯಸುವ ಬದುಕಿನಲ್ಲಿ ಬಾಳುತ್ತಾ ತನ್ನ ಕಣ್ಣೆದುರಿಗೇ ತನ್ನ ಭಾವನೆಗಳಿಗೆ ವಿರುದ್ಧವಾದ ಘಟನೆಗಳು ಘಟಿಸುತ್ತಿದ್ದರೂ ಪ್ರತಿಭಟಿಸಲಾರದೆ ಮೂಕನಾಗುತ್ತಾನೆ. ಆತನ ಪ್ರತಿರೋಧ ಅರ್ಥ ಕಳೆದುಕೊಳ್ಳುತ್ತದೆ. ಪರಂಪರಾಗತವಾಗಿ ನಂಬಿಕೊಂಡು ಬಂದಿರುವ ಆದರ್ಶಗಳು ಆಧುನಿಕತೆಯ ಸಂದರ್ಭದಲ್ಲಿ ಮನುಷ್ಯನ

ಆಂತರ್ಯದ ತುಡಿತದಿಂದಾಗಿ ತಲೆಕೆಳಗಾಗುವ ಸಂದರ್ಭಗಳನ್ನು ರಮಾ ಹಾಗೂ ಕುಸುಮ ಬದುಕಿನಲ್ಲಿ ತೆಗೆದುಕೊಂಡ ನಿರ್ಧಾರಗಳು ಸೂಚಿಸುತ್ತವೆ. ಅದು ಪರಂಪರಾಗತ ವ್ಯವಸ್ಥೆಗೆ ಅವರು ತೋರಿದ ಪ್ರತಿಭಟನೆಯೂ ಹೌದು. ಹಾಗಾಗಿ ಕಾದಂಬರಿಯಲ್ಲಿ ಪ್ರತಿಧ್ವನಿಸುವ ಶಬ್ದಗಳು ಮಾನವನ ಅಂತರಂಗದ ಪ್ರತಿರೋಧಗಳಾಗಿ ಕಂಡುಬರುತ್ತವೆ.

ಸಾವಿತ್ರಿ ಯವ್ವನದ ಹುರುಪಿನಲ್ಲಿರುವ ತರುಣಿ. ನೈಸರ್ಗಿಕವಾಗಿ ಅವಳಿಗೆ ಯವ್ವನದ ಬಯಕೆಗಳೂ ಇವೆ. ಅದನ್ನು ಪೂರೈಸಿಕೊಳ್ಳಬೇಕಾದರೆ ಮದುವೆ ಎನ್ನುವ ಸಾಮಾಜಿಕ ವ್ಯವಸ್ಥೆಗೆ ಒಳಪಡಬೇಕು. ಆದರೆ ಅಂಗವೈಕಲ್ಯ ತನ್ನ ಬಯಕೆಗೆ ಅಡ್ಡಿಯಾಗುತ್ತದೆ. ಹಾಗಾಗಿ ಆಕೆಯ ಅತ್ಯಲ್ಪ ಬಯಕೆಗಳು ಯವ್ವನದ ರೋಗವಾಗಿ ಕಾಣಿಸಿಕೊಳ್ಳುತ್ತವೆ. ಆಕೆಯ ಸಮಸ್ಯೆಗೆ ಸಮಾಜದಲ್ಲಿ ಪರಿಹಾರವಿಲ್ಲ. ಅದಕ್ಕಾಗಿ ಆಕೆ ತನ್ನದೇ ಆದ ಮಾರ್ಗವನ್ನು ಕಂಡುಕೊಳ್ಳುತ್ತಾಳೆ. ಗರ್ಭಪಾತದಂತಹ ಶಿಕ್ಷೆಗಳಿಗೆ ಒಳಗಾಗಬೇಕಾಗಿ ಬರುತ್ತದೆ. ಶೈಲೇಶ ನಾಯ್ಡು ಅವಳ ಅಸಹಾಯಕತೆಯನ್ನು ಬಳಸಿಕೊಳ್ಳುತ್ತಾನೆ. ಕಿರಣಶಂಕರ ಅವಳ ಬಗ್ಗೆ ಕನಿಕರ ತೋರುತ್ತಾನೆ. ಅವಳ ಗರ್ಭಪಾತದ ಬಗ್ಗೆ ಅವನ ವಿರೋಧವಿದೆ. ರಮಾಳ ವಿವಾಹ ಬಾಹಿರ ಸಂಬಂಧವನ್ನೂ ಅವನು ಒಪ್ಪಲು ಸಿದ್ಧನಿಲ್ಲ. ರಮಾ ಮತ್ತು ಸಾವಿತ್ರಿ ವ್ಯವಸ್ಥೆಯ ಆಚೆಗೆ ತಮ್ಮ ಅಪ್ರಾಪ್ತ ಬಯಕೆಗಳಿಗೆ ಒಳದಾರಿಗಳನ್ನು ಹುಡುಕಲು ಪ್ರಯತ್ನಿಸಿದವರು.

"ರಮಾ ಇಲ್ಲಿ ನೈಸರ್ಗಿಕತೆಯ ಪ್ರತೀಕವಾಗಿದ್ದರೆ, ಕಿರಣಶಂಕರ ಸ್ಪಂದನರಹಿತ ಸ್ಥಿತಿಯ ವ್ಯವಸ್ಥೆಯ ಪ್ರತೀಕವಾಗಿದ್ದಾನೆ. ನಿಸರ್ಗ ಎನ್ನುವುದು ಸದಾ ಸೃಜನಶೀಲವಾದುದು. ಅದು ಅನ್ಯಕ್ಕೆ ಹಾತೊರೆಯುವ ಒತ್ತಡವನ್ನು ಯಾವಾಗಲೂ ನಮ್ಮ ಮೇಲೆ ಹೇರಲು ಪ್ರಯತ್ನಿಸುತ್ತಿರುತ್ತದೆ. ಹೀಗಾಗಿ ನಿಸರ್ಗದ ಭಾಗವಾದ ರಮಾ ಅದರ ಕರೆಗೆ ಮಣಿಯಬೇಕಾಗುತ್ತದೆ. ಹೀಗೆ ಮಣಿಯುವುದರ ವಿರುದ್ಧ ನಮ್ಮ ಸಮಾಜ ಸಮರ ಸಾರಿದರೆ, ಪ್ರಕೃತಿ ತನ್ನ ಅದಮ್ಯ ಚೈತನ್ಯದ ಬಲದಿಂದ ಸಮಾಜದ ಭದ್ರ ಕೋಟೆಗಳನ್ನು ಭೇದಿಸಿಕೊಂಡು ಹೊರಬರುತ್ತದೆ. ಸಿಮೆಂಟಿನ ಬಿರುಕುಗಳಲ್ಲಿ ಒಡೆದು ಬರುವ ಆಲದ ಮರದಂತೆ. ಆಗ ವ್ಯವಸ್ಥೆಯ ಹುಸಿಯಾಗದ ಉದಾರವಾದಿ ನೆಲೆಗೆ ಆತ್ಮಘಾತಕ ಉಂಟಾಗುತ್ತದೆ. ಅದಕ್ಕೆ ಇರುವ ಪರ್ಯಾಯವೆಂದರೆ ತನ್ನನ್ನು ನಾಶ ಪಡಿಸಿಕೊಳ್ಳುವುದೊಂದೇ. ವ್ಯವಸ್ಥೆ ಹೀಗೆ ಛಿದ್ರಗೊಂಡ ಯಾತನೆಯನ್ನು ಸದಾ ನಮ್ಮ ಒಡಲಲ್ಲಿ ಧರಿಸಿಕೊಂಡು ನರಳುವುದು ಅನಿವಾರ್ಯವಾಗಿರುತ್ತದೆ. ರವಿಶಂಕರನ ಪಾತ್ರ

ಇಂತಹ ಯಾತನೆಯನ್ನು ಬಹಳ ಯಶಸ್ವಿಯಾಗಿ ಈ ಕಾದಂಬರಿಯ ಮೂಲಕ ದಾಟಿಸುತ್ತದೆ." ಅವಾಸ್ತವದ ಮೇಲೆ ಕಟ್ಟಿಕೊಳ್ಳುವ ಎಲ್ಲಾ ಮಾನವೀಯ ಹುಸಿ
**(ಶ್ರೀಧರ್ ಹೆಚ್.ಜಿ.(ಸಂ) 2009. ಪುಟ 151)**
ಕಟ್ಟಡಗಳು ಹೀಗೆ ಕುಸಿಯಲೇಬೇಕಾದ ಅನಿವಾರ್ಯತೆಯನ್ನು ಒತ್ತಿ ಹೇಳುತ್ತದೆ.

1973ರ ಸುಮಾರಿನಲ್ಲಿ ಬರೆದ ಈ ಕಾದಂಬರಿಯ ಬಗ್ಗೆ ಲೇಖಕರು ಹೇಳುವಂತೆ "ಕೌಟುಂಬಿಕ ವೃತ್ತದ ಕೇಂದ್ರದಲ್ಲಿರುವ ವ್ಯಕ್ತಿ ಕಾಲಕ್ರಮೇಣ ವೃತ್ತದ ಅಂಚಿಗೆ ಸರಿಯುವುದು ಕುಟುಂಬ ವ್ಯವಸ್ಥೆಯಲ್ಲಿ ಬಹುಶಃ ಯಾರಿಂದಲೂ ತಪ್ಪಿಸಲಾಗದ್ದು. ಅದಕ್ಕೆ ಮುಪ್ಪು ಕಾರಣವಾಗಿರಬಹುದು, ಅಪಘಾತದಿಂದಾದ ಊನ ಕಾರಣವಾಗಿರಬಹುದು. ತಾನು ಬದಿಗೆ ಸರಿಯುತ್ತಿದ್ದೇನೆ ಎಂಬುದು ವ್ಯಕ್ತಿಗೆ ತಿಳಿಯದಿರುವುದು ಒಂದು ದುರಂತ, ತಮಗರಿವಿಲ್ಲದೇ ಇತರರು ಆತನನ್ನು ಬದಿಗೆ ಸರಿಸುವುದು ಇನ್ನೊಂದು ದುರಂತ. ಸಾವು ಪೂರ್ವನಿರ್ಧರಿತವಾಗಿದ್ದರೂ ಯಾರೂ ಸಾವನ್ನು ಆಹ್ವಾನಿಸಲು ಇಷ್ಟಪಡುವುದಿಲ್ಲ. ಬದುಕನ್ನು ಅರ್ಥಮಾಡಿಕೊಳ್ಳುವ ಪ್ರಯತ್ನ ನಿರಂತರವಾಗಿ ನಡೆಯುತ್ತಲೇ ಇರುತ್ತದೆ. ಬದುಕಿಗಾಗಿ ಕೊನೆ ತನಕವೂ ಹೋರಾಟ ನಡೆದೇ ಇರುತ್ತದೆ. ಬದುಕಿನ ಶಬ್ದಗಳ ನಡುವೆ ಸಾವಿನ ಹೆಜ್ಜೆಯ ಸದ್ದು ಯಾರಿಗೂ ಕೇಳಿಸುವುದಿಲ್ಲ. ಮೌನದಲ್ಲಿಯೇ ನಡೆಯುವ ಸಂಘರ್ಷಗಳ, ಮೌನದಲ್ಲಿಯೇ ನಡೆಯುವ ಹೋರಾಟದ, ಅಂತರಂಗದ ಮೌನದಲ್ಲಿಯೇ ನಡೆಯುವ ಚಿಂತನೆಗಳ, ಸಂವಾದಗಳ ಮಿಡಿತ– ಶಬ್ದಗಳು."

## ೪.೨: ಕರ್ಮಣ್ಯೇವಾಧಿಕಾರಸ್ತೇ

ಕೆ.ಟಿ.ಗಟ್ಟಿಯವರ 'ಕರ್ಮಣ್ಯೇವಾಧಿಕಾರಸ್ತೇ' ಕಾದಂಬರಿಯು ಅವರ ವಿಶಿಷ್ಟ ಕೃತಿಗಳಲ್ಲೊಂದು. ಕಾದಂಬರಿಯಲ್ಲಿ ಬರುವ ಬೇರೆ ಬೇರೆ ವ್ಯಕ್ತಿತ್ವಗಳು ತಮ್ಮ ಸ್ವಂತ ವ್ಯಕ್ತಿತ್ವವನ್ನು ತಮ್ಮ ಬದುಕಿನಲ್ಲಿ ಘಟಿಸುವ ಘಟನೆಗಳ ಮೂಲಕ ಮತ್ತೆ ರೂಪಿಸಿಕೊಳ್ಳುವ ಪ್ರಯತ್ನದಲ್ಲಿ ತೊಡಗಿವೆ. ಕೆಲವೊಮ್ಮೆ ಒಬ್ಬ ಮನುಷ್ಯನಲ್ಲಿ ಬೇರೆ ಬೇರೆ ವ್ಯಕ್ತಿತ್ವಗಳು ಕಾಣಿಸಿಕೊಳ್ಳುತ್ತವೆ. ಕಾದಂಬರಿಯಲ್ಲಿ ಬರುವ ಅನಂತಭಟ್ಟನು ಸ್ವಾಮೀ ಅಭಯಾನಂದನಾಗಿ ಕಾಣುತ್ತಾನೆ.

ಕಾದಂಬರಿ ಆರಂಭವಾಗುವುದು ರೈಲ್ವೇ ನಿಲ್ದಾಣದ ಹನ್ನೊಂದು ಗಂಟೆ ರಾತ್ರಿಯ ವಾತಾವರಣದಲ್ಲಿ. ರೈಲಿಗಾಗಿ ನಿಲ್ದಾಣದ ವೈಟಿಂಗ್ ರೂಂನಲ್ಲಿ ಕಾಯುತ್ತಿದ್ದ ಸ್ವಾಮೀ

ಅಭಯಾನಂದ 45ರ ಹರೆಯದ ಸಾವಿತ್ರಿಯನ್ನು ನೋಡಿದ. ಆಕೆಯೊಂದಿಗೆ ಮಾಧವಿಯೂ ಇದ್ದಳು. ಮೂವತ್ತೈದು ವರ್ಷ ದಾಟಿದ್ದ ಮಾಧವಿಗೆ ಮದುವೆಯಾಗಿ ಹದಿನೈದು ವರ್ಷ ದಾಟಿದರೂ ಮಕ್ಕಳಾಗಿರಲಿಲ್ಲ. ಗಂಡ ರಾಮಪ್ಪ ಅಂಬಲಪಾಡಿ ದೇವಾಲಯದಲ್ಲಿ ಕಾವಲುಗಾರನ ಕೆಲಸ ಮಾಡುತ್ತಿದ್ದ. ಆದರೂ ಭಗವಂತ ಕಣ್ಣು ತೆರೆದಿರಲಿಲ್ಲ. ಕೆಲವೊಮ್ಮೆ ಮಾಧವಿಗೆ ತನ್ನ ಗಂಡ ತೋಟ, ದೇವಾಲಯ ಕಾಯಲು ಲಾಯಕ್ಕು ಎಂಬ ಯೋಚನೆ ಬಂದದ್ದೂ ಇದೆ. ತನ್ನ ಅಳಲನ್ನು ಸಾವಿತ್ರಿಯೊಂದಿಗೆ ಹಂಚಿಕೊಳ್ಳುತ್ತಿದ್ದಳು.

ಅಂಬಲಪಾಡಿ ಪದ್ಮನಾಭಾಚಾರ್ಯನ ಮಗ ಶ್ರೀಧರನಿಗೆ ಓದಿನಲ್ಲಿ ನಿರಾಸಕ್ತಿ. ನಿದ್ರೆ, ಸಿನಿಮಾ, ಕುಡಿತ, ಕಾದಂಬರಿ, ಹೆಣ್ಣುಗಳ ಸಹವಾಸದಲ್ಲಿಯೇ ಕಾಲ ಕಳೆಯುತ್ತಿದ್ದ. ಲೇಖಕರು ಶ್ರೀಧರನ ಸ್ವಭಾವದ ಕುರಿತು ವಿವರಿಸುತ್ತಾ "ಮಾನವ ಕುಲದ ಮಿದುಳು ಬ್ರಾಹ್ಮಣನಲ್ಲೇ ಇರುವುದು ಎಂಬ ಅಪ್ಪನ ನಂಬುಗೆಯನ್ನು ಮಗ ಸುಳ್ಳಾಗಿಸಿದ್ದ" ಎನ್ನುತ್ತಾರೆ. ಬಹಳ ಹಿಂದಿನಿಂದಲೂ ವಿದ್ಯೆ ಬ್ರಾಹ್ಮಣನಿಗೆ ಮಾತ್ರ ಸೀಮಿತವಾದುದು ಎಂಬ ಪರಂಪರಾಗತ ವಿಚಾರವನ್ನು ಇಲ್ಲಿ ಕಾದಂಬರಿಕಾರರು ತಾರ್ಕಿಕ ಚಿಂತನೆಗೆ ಹಚ್ಚುತ್ತಾರೆ ಅಥವಾ ವಿರೋಧಿಸುತ್ತಿದ್ದಾರೆ ಅನ್ನಿಸುತ್ತದೆ.

ಇಂತಹ ಶ್ರೀಧರನಿಗೆ ಸಾವಿತ್ರಿಯೊಂದಿಗೆ ಮದುವೆ ಮಾಡಿಸಿದ್ದರು. ಆದರೆ ತಾನು ಪ್ರೀತಿಸಿದ ಅನಂತಭಟ್ಟನಲ್ಲಿ ಕಂಡಿದ್ದ ಬುದ್ಧಿಮತ್ತೆ, ಯೋಗ್ಯತೆಗಳನ್ನು ತನ್ನ ಗಂಡನಲ್ಲಿ ಸಾವಿತ್ರಿ ಕಂಡಿರಲಿಲ್ಲ. ಮದುವೆಯಾದ ಮರು ವರ್ಷವೇ ಶ್ರೀಪತಿಗೆ ಸಾವಿತ್ರಿ ಜನ್ಮ ನೀಡಿದ್ದಳು. ಇನ್ನೊಂದು ಕಡೆ ಶ್ರೀಧರನ ಚಂದ್ರಮ್ಮಳೊಂದಿಗಿನ ಅಕ್ರಮ ಸಂಬಂಧದ ಫಲವಾಗಿ ಆಕೆ ಕೃಷ್ಣಯ್ಯನಿಗೆ ಜನ್ಮ ನೀಡಿದಳು. ಹೆರಿಗೆಯ ನಂತರ ಸಾವಿತ್ರಿಗೆ ಒಂದು ಬಗೆಯ ಹೊಟ್ಟೆನೋವು ಕಾಡುತ್ತಿತ್ತು. ಆಕೆ ಶ್ರೀಪತಿಗೆ ಜನ್ಮ ನೀಡಿದ ಐದು ವರ್ಷದಲ್ಲೇ ಗಂಡ ಖಾಯಿಲೆಗೆ ತುತ್ತಾಗಿ ತೀರಿಕೊಂಡ. ಆಕೆಗೆ ತನ್ನ ಮಗ ಶ್ರೀಪತಿಗಿಂತ ಕೃಷ್ಣಯ್ಯನ ಮೇಲೆಯೇ ಹೆಚ್ಚಿನ ಆಕ್ಕರೆ, ಆತನಿಗೂ ಆಕೆಯ ಮೇಲೆ ಅಷ್ಟೇ ಅಕ್ಕರೆ. ಹಾಗಾಗಿ ಕೃಷ್ಣಯ್ಯನನ್ನು ಕರೆದುಕೊಂಡು ಆಕೆ ತೀರ್ಥಯಾತ್ರೆಗೆ ಹೊರಟಿದ್ದಳು. ತನ್ನ ಸೊಸೆ ಶ್ರೀಧರನ ಪತ್ನಿ ಲೀಲಾವತಿಗೆ ಮನೆಯ ಜವಾಬ್ದಾರಿ ಬರಲಿ ಎಂಬ ಉದ್ದೇಶವೂ ಇದರ ಹಿಂದೆ ಇತ್ತು. ಸಾವಿತ್ರಿ ದ್ವಾರಕೆಯಲ್ಲಿ ರೈಲ್ವೇ ನಿಲ್ದಾಣದಲ್ಲಿ ಕಂಡಿದ್ದ ಸ್ವಾಮಿ ಅಭಯಾನಂದನನ್ನು ಕಂಡಳು. ಸ್ವಾಮೀಜಿಯೊಂದಿಗೆ ತನ್ನ ಸೊಸೆ ಲೀಲಾವತಿಗೆ ಮಕ್ಕಳಾಗುವಂತೆ ಕೇಳಿಕೊಂಡಿದ್ದಳು. ಔಷಧಿಯೊಂದಿಗೆ ಊರಿಗೆ ಬರುವುದಾಗಿ ಸ್ವಾಮೀಜಿ ತಿಳಿಸಿದ್ದರು. ಆದರೆ ಕುಟುಂಬದ ಡಾಕ್ಟರ್ ರಘುನಾಥ್ ಹೇಳುವಂತೆ

ತೊಂದರೆಯಿದ್ದುದು ಶ್ರೀಧರನಲ್ಲಿಯೇ ಆಗಿತ್ತು. ಈ ವಿಚಾರವನ್ನು ರಹಸ್ಯವಾಗಿಡುವಂತೆ ಸಾವಿತ್ರಿ ಡಾಕ್ಟರ್‌ರೊಂದಿಗೆ ಬೇಡಿಕೊಂಡಿದ್ದಳು.

ಪುರುಷ ಪ್ರಧಾನ ಸಮಾಜದಲ್ಲಿ ಎಷ್ಟೋ ಸಲ ಪುರುಷನ ದೋಷಗಳು ಗೌಣವಾಗಿ ಬಿಡುತ್ತವೆ. ಸಮಾಜದ ದೂಷಣೆಗೆ ಗುರಿಯಾಗುವವಳು ಹೆಣ್ಣೇ ಆಗಿದ್ದಾಳೆ. ಸಮಾಜದ ಇಂತಹ ವ್ಯವಸ್ಥೆಯ ವಿರುದ್ಧ ಪ್ರತಿರೋಧದ ಧೋರಣೆ ಕಾದಂಬರಿಯಲ್ಲಿ ಬಂದಿರುವುದನ್ನು ಗಮನಿಸಬಹುದು.

ಲೀಲಾವತಿ ಕೃಷ್ಣಯ್ಯನಿಗೆ ಮದುವೆ ಮಾಡಿಸಲು ಅತ್ತೆಯೊಂದಿಗೆ ಒತ್ತಾಯ ಪಡಿಸುತ್ತಿರುತ್ತಾಳೆ. ಊರವರು ಟೀಕೆ ಮಾಡುವ ವಿಚಾರವನ್ನು ತಿಳಿಸುತ್ತಾಳೆ. "ಮುಂಡೆಯರಿಗೆಲ್ಲಾ ಇಂಥ ಒಂದು ಏರ್ಪಾಡು ಇದ್ದರೆ ದಾರಿಯಲ್ಲಿ ಹೋಗುವವರನ್ನು ಕರೆಯಬೇಕಾಗಿ ಬರುವುದಿಲ್ಲ" ಎಂದು ಜನರು ಆಡಿಕೊಳ್ಳುತ್ತಿರುವುದು ಸಾವಿತ್ರಿಗೆ ಮಾಧವಿಯಿಂದ ತಿಳಿದು ಕಣ್ಣಲ್ಲಿ ನೀರೂರುತ್ತದೆ. "ಯಾವ ಪಾಪ ಭಾವನೆಯೂ ಇಲ್ಲದೆ ಒಬ್ಬ ಗಂಡಸು ಒಬ್ಬಳು ರೋಗಗ್ರಸ್ತೆಯಾದ ಹೆಂಗಸಿನ ದೇಹಕ್ಕೆ ಆರೈಕೆ ನಡೆಸಿದರೆ ಅದು ಅನೀತಿಯಾದೀತೆ? ಆಸ್ಪತ್ರೆಯಲ್ಲಿ ಮಾಡಬೇಕಾದುದನ್ನು ಮನೆಯಲ್ಲಿ ಮಾಡಿದರೆ ಅಧರ್ಮವಾದೀತೆ?" ಎಂಬ ಪ್ರಶ್ನೆಗಳು ಸಾವಿತ್ರಿಯಲ್ಲಿ ಮೂಡುತ್ತಿದ್ದುದು ಸಮಾಜದ

**(ಗಟ್ಟಿ ಕೆ.ಟಿ. ಕರ್ಮಣ್ಯೇವಾಧಿಕಾರಸ್ತೇ, 1978 ಪುಟ 51)**

ಜನರ ಅಮಾನವೀಯತೆಯ ವಿರುದ್ಧ ಆಕೆ ತೋರುವ ಪ್ರತಿರೋಧವಾಗಿ ಕಂಡುಬರುತ್ತದೆ.

ಸಾವಿತ್ರಿಯ ತಂಗಿ ಸುಗುಣ ಮುಂಬಯಿಯಲ್ಲಿ ವಾಸವಾಗಿದ್ದಳು. ಆಕೆ ಸಾವಿತ್ರಿಯ ಹೊಟ್ಟೆನೋವಿನ ಆಪರೇಷನ್‌ಗಾಗಿ ಏರ್ಪಾಡು ಮಾಡುವುದಾಗಿ ತಿಳಿಸಿದ್ದಳು. ಸಾವಿತ್ರಿಯ ಗಂಡ ಸುಬ್ರಹ್ಮಣ್ಯ ಭಟ್ಟನ ಮೊದಲ ಮಗ ಗಂಗಾಧರನಿಗೂ ಅವನ ಕ್ಲಾಸಿನಲ್ಲಿ ಓದುತ್ತಿದ್ದ ಕ್ರಿಶ್ಚಿಯನ್ ಹುಡುಗಿ ಮೋನಿಕಳಿಗೂ ಪ್ರೇಮ ಬೆಳೆದಿತ್ತು. ತಂದೆ ಅದನ್ನು ವಿರೋಧಿಸುತ್ತಿದ್ದರೂ ಮಗ ಒಪ್ಪದಿದ್ದುದು ಸುಬ್ರಹ್ಮಣ್ಯ ಭಟ್ಟನಿಗೆ ತಲೆನೋವಾಗಿತ್ತು. ಈ ಕುರಿತು ತಂದೆ ಮಗನಿಗೆ ಸಾಕಷ್ಟು ಮಾತುಕತೆಯೂ ನಡೆದಿತ್ತು. ಇದು ಅಂತರ್ಜಾತೀಯ ವಿವಾಹದ ಬಗ್ಗೆ ಆತ ತೋರುವ ಪ್ರತಿರೋಧ. ಮುಂಬಯಿಯಂತಹ ಆಧುನಿಕತೆಯನ್ನು ಬೆಳೆಸಿಕೊಂಡು ಮುಂದುವರಿಯುತ್ತಿರುವ ನಗರದಲ್ಲಿ ವಾಸಿಸುತ್ತಿದ್ದರೂ ಸಂಪ್ರದಾಯಸ್ಥ ಬ್ರಾಹ್ಮಣ ಮನೆತನದಲ್ಲಿ ಹುಟ್ಟಿದ ಸುಬ್ರಹ್ಮಣ್ಯ ಭಟ್ಟ ತಾನು ಮಾತ್ರ ಬದಲಾಗಲಿಲ್ಲ. ಮಗಳು ರಜನಿಯ ಮದುವೆಯ ವಿಚಾರದಲ್ಲಿ ತೊಂದರೆಯಾಗುತ್ತದೆ ಯೆಂಬ ಆತಂಕ ಆತನಿಗೆ. ಸಾವಿತ್ರಿಗೆ ಆಪರೇಷನ್ ಆಗಿ ಆಸ್ಪತ್ರೆಯಲ್ಲಿದ್ದ ಸಂದರ್ಭದಲ್ಲಿ

ಗಂಗಾಧರನು ಮೋನಿಕಳನ್ನು ಒಮ್ಮೆ ಕರೆತಂದಿದ್ದ. ಅವಳನ್ನು ಕಂಡು ಸಾವಿತ್ರಿಗೆ ಮೆಚ್ಚುಗೆಯಾದರೂ "ಎಂಥವಳಾದರೇನು? ಅವಳನ್ನು ಗಂಗಾಧರ ಖಂಡಿತವಾಗಿಯೂ ಮದುವೆಯಾಗಬಾರದು. ಬ್ರಾಹ್ಮಣರೆಲ್ಲಿ, ಕಿರಿಸ್ತಾನರೆಲ್ಲಿ" ಎಂದುಕೊಳ್ಳುತ್ತಾಳೆ. ಆಕೆಯ

**(ಅದೇ, ಪುಟ 63)**

ಮನಸ್ಸು ಪರಂಪರಾಗತ ವ್ಯವಸ್ಥೆಯನ್ನು ಮುರಿಯಲು ಬಯಸುತ್ತಿಲ್ಲ. ಆಧುನಿಕ ಬದಲಾವಣೆಗಳನ್ನು, ಅಂತರ್ ಧರ್ಮೀಯ, ಅಂತರ್ ಜಾತೀಯ ವಿವಾಹವನ್ನು ಆಕೆಯೂ ವಿರೋಧಿಸುತ್ತಿದ್ದಾಳೆ.

ಅಭಯಾನಂದ ಲೀಲಾವತಿಗೆ ಮಕ್ಕಳಾಗುವ ಔಷಧಿಯನ್ನು ಕೊಡುವುದಕ್ಕಾಗಿ ಊರಿಗೆ ಬಂದಿದ್ದ. ಅಲ್ಲಿ ಶ್ರೀಪತಿಯ ಮನೆಯಲ್ಲಿ ಕೃಷ್ಣಯ್ಯನ ಮೇಲ್ವಿಚಾರಣೆಯಲ್ಲಿ ಎಲ್ಲಾ ವ್ಯವಸ್ಥೆಗಳೂ ಆಗಿದ್ದವು. ಅಭಯಾನಂದ ಕೆಲವು ನಿಯಮಗಳನ್ನು ಹೇಳಿ ಲೀಲಾವತಿ ಹಾಗೂ ಅವಳ ಗಂಡನಿಗೆ ಔಷಧಿ ನೀಡಿದ್ದ. ಮಾಧವಿ ಮತ್ತು ಅವಳ ಗಂಡನಿಗೂ ಹಾಗೆಯೇ ಹೇಳಿ ಔಷಧಿಯನ್ನು ಕೊಟ್ಟಿದ್ದ.

ಸಾವಿತ್ರಿಗೆ ಡಾಕ್ಟರ್ ಚಂದ್ರಶೇಖರ್ ಮುಂಬಯಿಯಲ್ಲಿ ಹೊಟ್ಟೆನೋವಿಗಾಗಿ ಆಪರೇಷನ್ ನಡೆಸಿದರು. ಹಾಗಾಗಿ ಆಕೆ ಹಲವು ತಿಂಗಳುಗಳ ಕಾಲ ಮುಂಬಯಿಯ ತನ್ನ ತಂಗಿಯ ಮನೆಯಲ್ಲಿಯೇ ಉಳಿದುಕೊಳ್ಳಬೇಕಾಗಿ ಬಂತು. ಮಗಳಿಗೆ ಗಂಡು ಹುಡುಕಲು ಊರಿಗೆ ಹೋಗಿದ್ದ ಸುಬ್ರಹ್ಮಣ್ಯ ಭಟ್ಟ ಲೀಲಾವತಿ ಗರ್ಭಿಣಿಯಾಗಿರುವ ವಿಚಾರ ತಿಳಿಸುತ್ತಾನೆ. ವಿಷಯ ತಿಳಿದು ಸಾವಿತ್ರಿ ಆಶ್ಚರ್ಯಗೊಳ್ಳುತ್ತಾಳೆ.

ಕೆಲಸದ ನಿಮಿತ್ತ ಮದರಾಸಿಗೆ ಹೋಗಿದ್ದ ಶ್ರೀಪತಿಗೆ ಅಲ್ಲಿನ ವೈದ್ಯರಿಂದ ತನ್ನಲ್ಲೇ ದೋಷ ಇರುವುದರಿಂದ ತನಗೆ ಮಕ್ಕಳಾಗುವುದಿಲ್ಲ ಎಂಬ ವಿಚಾರ ತಿಳಿಯಿತು. ಹೆಂಡತಿ ಗರ್ಭಿಣಿಯಾದಾಗ ಆತ ತಬ್ಬಿಬ್ಬಾಗಿದ್ದ. ತನ್ನ ಪತ್ನಿಯೊಂದಿಗೆ ಅದಕ್ಕೆ ಕಾರಣ ಕೇಳಿದಾಗ ಆಕೆ ತನಗೆ ಏನೂ ಅರಿಯದೆಂದು ಉತ್ತರಿಸಿದಳು. ಶ್ರೀಪತಿ ಅವಳನ್ನು ದ್ವೇಷಿಸುತ್ತಾನೆ. ಶ್ರೀಪತಿ ಜನರು ಮತ್ತು ತನಗೆ ಸಲಹೆಯನ್ನು ನೀಡಿರುವ ಸ್ನೇಹಿತ ಮತ್ತು ವೈದ್ಯರ ದೃಷ್ಟಿಯಲ್ಲಿ ತಾನು ಅವಮಾನಕ್ಕೆ ಗುರಿಯಾಗುವುದನ್ನು ಅವನು ಸಹಿಸಿಕೊಳ್ಳುವುದಿಲ್ಲ. ಚಿಂತಿತ ಮನಸ್ಸಿನಿಂದಾಗಿ ಆತ ಒಮ್ಮೆ ತನ್ನ ಕಾರಿನ ಅಪಘಾತಕ್ಕೂ ಒಳಗಾಗಿದ್ದ. ಒಮ್ಮೆ ಬೆಳಗ್ಗೆ ಸ್ನಾನಕ್ಕೆಂದು ಬಾವಿಯಿಂದ ನೀರೆತ್ತುವ ಸಂದರ್ಭದಲ್ಲಿ ಆಯ ತಪ್ಪಿ ಬಾವಿಗೆ ಬಿದ್ದು ಪ್ರಾಣವನ್ನೇ ಕಳಕೊಂಡ. ಆದರೆ ಪೋಲೀಸರಿಗೆ ಕೃಷ್ಣಯ್ಯ ಕೊಂದಿರಬಹುದೆಂಬ ಸಂಶಯ ಬಂದಿತ್ತು. ಕೃಷ್ಣಯ್ಯನನ್ನು ಜೈಲಿಗೆ ಹಾಕುತ್ತಾರೆ.

ಸಾವಿನ ಸುದ್ದಿ ತಿಳಿದು ಮುಂಬಯಿಯಿಂದ ಊರಿಗೆ ಬಂದ ಸಾವಿತ್ರಿ ಕೃಷ್ಣಯ್ಯನನ್ನು ಜೈಲಿನಿಂದ ಬಿಡಿಸುತ್ತಾಳೆ. ಗಂಡನನ್ನು ಶ್ರೀಪತಿಯು ಬಾವಿಗೆ ತಳ್ಳಲಿಲ್ಲವೆಂದೂ, ಬಾವಿಗೆ ಬಿದ್ದ ಶಬ್ದ ಕೇಳಿ ಕೃಷ್ಣಯ್ಯ ನಿದ್ರೆಯಿಂದ ಎಚ್ಚರಗೊಂಡು ಕೋಣೆಯಿಂದ ಓಡಿ ಬಂದದ್ದನ್ನು ತಾನು ನೋಡಿರುವುದಾಗಿ ಅತ್ತೆಯೊಂದಿಗೆ ಲೀಲಾವತಿಯು ಹೇಳುತ್ತಾಳೆ. ಶ್ರೀಪತಿಯ ಡೈರಿ ಸಾವಿತ್ರಿಯ ಕೈಗೆ ಸಿಕ್ಕಿ ಅದರಲ್ಲಿ ಆತ ಬರೆದ ವಿಚಾರಗಳನ್ನು ಓದಿದ ನಂತರ ಕೃಷ್ಣಯ್ಯನೊಂದಿಗೆ ಲೀಲಾವತಿಗೂ ನಿನಗೂ ಅನೈತಿಕ ಸಂಬಂಧವಿತ್ತೇ ಎಂದು ವಿಚಾರಿಸಿದಳು. ಲೀಲಾವತಿ ಗರ್ಭಿಣಿಯಾಗುವುದಕ್ಕೆ ತಾನೇ ಕಾರಣ ಎಂದು ಕೃಷ್ಣಯ್ಯ ತಿಳಿಸಿದ. ಒಂದು ದಿನ ಬೆಳಿಗ್ಗೆ ಕೃಷ್ಣಯ್ಯ ಇದ್ದಕ್ಕಿದ್ದಂತೆ ಯಾರಿಗೂ ಹೇಳದೆ ಊರು ಬಿಟ್ಟು ಹೋಗಿದ್ದ.

ಕೃಷ್ಣಯ್ಯನು ಲೀಲಾವತಿಗೆ ಯಾವುದೋ ಒಂದು ಕ್ಷಣದಲ್ಲಿ ತನ್ನ ಮನಸ್ಸಿನ ಹಂಬಲವನ್ನು ಈಡೇರಿಸಬಲ್ಲ ವ್ಯಕ್ತಿಯಾಗಿ ತೋರುತ್ತಾನೆ. ತನ್ನ ಗಂಡನೊಂದಿಗೆ ಹಲವು ವರ್ಷ ಸಂಸಾರ ನಡೆಸಿದ್ದರೂ ತಾಯಿಯಾಗುವ ಬಯಕೆ ಈಡೇರದಿದ್ದಾಗ ಅನಿವಾರ್ಯವಾಗಿ ಆಕೆ ಧೈರ್ಯವನ್ನು ಪ್ರದರ್ಶಿಸುತ್ತಾಳೆ. ಕಾದಂಬರಿಕಾರರು ಒಂದು ಕಡೆ ಹೇಳುವಂತೆ "ಗಂಡು ತನ್ನ ಹೆಂಡತಿ ಬಂಜೆ ಎಂದು ತೀರ್ಮಾನಿಸಿ ಅವಳ ಅನುಮತಿ ಪ್ರಕಾರ ಇನ್ನೊಬ್ಬಳು ಹೆಣ್ಣನ್ನು ಮದುವೆಯಾಗುತ್ತಾನೆ. ಹೆಣ್ಣು ತನ್ನ ಗಂಡ ಬಂಜೆ ಎಂದು ತೀರ್ಮಾನಿಸಿ ಅವನ ಅನುಮತಿ ಪ್ರಕಾರ ಬೇರೊಬ್ಬ ಗಂಡನನ್ನು ಯಾಕೆ ಮದುವೆಯಾಗಲಾರಳು? ಕಾನೂನುಗಳೆಲ್ಲ ಯಾಕೆ ಪುರುಷ ಪಕ್ಷಪಾತಿಯಾಗಿವೆ ಎಂದು ತಿಳಿದೂ ಸ್ತ್ರೀ ಯಾಕೆ ಆ ಕಾನೂನಿನ ಮೊಗಕ್ಕೆ ಹೆಗಲೊಡ್ಡುತ್ತಾಳೆ" ಎಂದು ಪ್ರಶ್ನಿಸುತ್ತಾರೆ. ಕಾದಂಬರಿಕಾರರ ಈ ಪ್ರಶ್ನೆಯ ಹಿಂದೆ ಹಲವು ವರ್ಷಗಳಿಂದಲೂ ಗಂಡು ಹೆಣ್ಣಿನ ಮೇಲೆ ನಡೆಸುತ್ತಾ ಬಂದಿರುವ ಪಕ್ಷಪಾತ ಬುದ್ಧಿಯ ಬಗ್ಗೆ ಪ್ರತಿರೋಧ ತೋರುತ್ತಿದ್ದಾರೆ ಅನ್ನಿಸುತ್ತದೆ.

ಮುಂಬಯಿಯಲ್ಲಿ ಆಪರೇಷನ್ ಆದ ನಂತರವೂ ಹೊಟ್ಟೆನೋವು ಕಾಣಿಸಿಕೊಂಡಾಗ ಅಭಯಾನಂದನಿಂದ ತನ್ನ ಕಾಯಿಲೆಗೆ ಸಾವಿತ್ರಿ ಔಷಧಿ ಪಡೆದು ಸೇವಿಸುತ್ತಾಳೆ. ಮತ್ತೆ ಆಕೆಗೆ ಕಾಯಿಲೆ ಮರಳಿ ಕಾಣಿಸಿಕೊಳ್ಳಲಿಲ್ಲ. ಹಾಗಾಗಿ ಆತನ ಮೇಲೆ ನಂಬಿಕೆ ಹುಟ್ಟಿ ಗಂಗಾಧರ ಕ್ರಿಶ್ಚಿಯನ್ ಹುಡುಗಿಯನ್ನು ಮದುವೆಯಾಗುವುದನ್ನು ತಪ್ಪಿಸುವಂತೆ ಕೇಳಿಕೊಳ್ಳುತ್ತಾಳೆ. ಆದರೆ ಅಭಯಾನಂದ ಜಾತಿ ಎಲ್ಲಾ ಒಂದೇ ಎನ್ನುತ್ತಾನೆ. ಸಾವಿತ್ರಿ ಹಾಗೂ ಸುಗುಣ ಇವರ ವಿಚಾರಕ್ಕೆ ವಿರುದ್ಧವಾದ ಮಾತುಗಳು

ಸ್ವಾಮೀಜಿಯಿಂದ ಕೇಳಿಬರುತ್ತವೆ. "ಮನುಷ್ಯನಿಗಿರುವುದು ಒಂದೇ ಮತ, ಒಂದೇ ಜಾತಿ–ಎಂಬ ನಂಬಿಕೆ ನನ್ನದು. ಬ್ರಾಹ್ಮಣನೆಂಬ ಲೇಬಲ್ಲನ್ನು ಹಚ್ಚಿಕೊಂಡು ಯಾವಾತನಿಗೆ ಜೀವಿಸಬೇಕಾಗಿದೆಯೋ ಆತನಿಗೆ ಆ ಜಾತಿ ಮತ್ತು ಅದರಿಂದುಂಟಾದ ಭೇದ. ಈ ಲೇಬಲ್ ಒಬ್ಬನಿಗೆ ಅನಗತ್ಯವೆಂದು ಕಾಣಬಹುದು, ಮತ್ತು ಲೇಬಲ್ ಅವನ ಸ್ವಂತ ಧೋರಣೆಗಳಿಗೆ ಅಡ್ಡಿ ಬರಬಹುದು. ಆಗ ಅವನಿಗೆ ಈ ಲೇಬಲ್ಲನ್ನು ಕಿತ್ತು ಹಾಕುವ ಸ್ವಾತಂತ್ರ್ಯವಿದೆ. ಈಗ ನಿಮ್ಮ ಮಗ ಕ್ರಿಶ್ಚಿಯನ್ ಹುಡುಗಿಯನ್ನು ಮದುವೆಯಾದರೆ ಅವನ ಜಾತಿ ಕೆಟ್ಟು ಹೋಗುತ್ತದೆ ಎನ್ನುತ್ತೀರಿ. ಆ ಕ್ರಿಶ್ಚಿಯನ್ ಹುಡುಗಿ ನಿಮ್ಮ ಹುಡುಗನನ್ನು ಮದುವೆಯಾದಾಗ ಅವಳ ಜಾತಿಯೂ ಕೆಟ್ಟು ಹೋಯಿತಲ್ಲ! ಇಲ್ಲಿ ಜಾತಿ ಕೆಡುವುದೆಂಬುದು ಬರಿಯ ಭ್ರಮೆ. ಯಾರ ಜಾತಿಯೂ ಕೆಡುವುದಿಲ್ಲ. ಯಾಕೆಂದರೆ ಯಾರಿಗೂ ಯಾವ ಜಾತಿಯೂ ಇರುವುದಿಲ್ಲ" ಎನ್ನುತ್ತಾನೆ.

**(ಅದೇ, ಪುಟ 100)**

ಲೌಕಿಕ ಸುಖವನ್ನು ತ್ಯಜಿಸಿ ಅಧ್ಯಾತ್ಮದೆಡೆಗೆ ತನ್ನ ಮನಸ್ಸನ್ನು ನೆಟ್ಟ ಒಬ್ಬ ಸನ್ಯಾಸಿ ಮಾನವೀಯ ಧರ್ಮದ ಬಗ್ಗೆ ಮಾತನಾಡುತ್ತಾನೆ. ಲೇಖಕರು ಅಭಯಾನಂದನ ಪಾತ್ರದ ಮೂಲಕ ಜಾತಿ ಪದ್ಧತಿಯನ್ನು ತೀಕ್ಷ್ಣವಾಗಿ ವಿರೋಧಿಸುವುದರೊಂದಿಗೆ ಮಾನವ ಧರ್ಮದ ಪ್ರತಿಪಾದನೆ ಮಾಡಿದ್ದಾರೆ.

ಮಗನ ಅಂತರ್ ಜಾತೀಯ ವಿವಾಹವನ್ನು ಒಪ್ಪದ ಸುಬ್ರಹ್ಮಣ್ಯ ಭಟ್ಟ ಆತನ ವಿಷಯ ತಮ್ಮ ಜಾತಿಯವರಿಗೆ ತಿಳಿದರೆ ಹೆಣ್ಣು ಮಕ್ಕಳ ಮದುವೆ ಮಾಡುವುದು ಕಷ್ಟವೆಂದು ಯೋಚಿಸಿ ತನ್ನ ಹದಿನೈದು ವರ್ಷದ ಮಗಳಿಗೆ ಬಾಲ್ಯ ವಿವಾಹ ಮಾಡಲು ಮುಂದಾಗುತ್ತಾನೆ. ಅದಕ್ಕಾಗಿ ಪಡುಬಿದ್ರೆಗೆ ಹೋಗುತ್ತಾನೆ. ಅಲ್ಲಿ ಮಹಾಬಲನ ಇಂಜಿನಿಯರಿಂಗ್ ಓದಿದ ಮಗನೊಂದಿಗೆ ಮಗಳ ಮದುವೆಯೂ ನಡೆದು ಹೋಗುತ್ತದೆ. ಅಲ್ಲದೆ ಹದಿನೈದು ವರ್ಷದ ತನ್ನ ಇನ್ನೊಬ್ಬಳು ಮಗಳು ರಜನಿಗೆ ಗಂಡು ಹುಡುಕಲಾರಂಭಿಸುತ್ತಾನೆ. ಗುಪ್ತವಾಗಿ ಮನಸ್ಸಿನಲ್ಲಿ ರಜನಿಯನ್ನು ಪ್ರೀತಿಸುತ್ತಿದ್ದ ಸುಬ್ರಹ್ಮಣ್ಯ ಭಟ್ಟನ ಹೋಟೇಲ್ ಮ್ಯಾನೇಜರ್ ನಾರಾಯಣ ಭಟ್ಟ ವಿಷಯ ತಿಳಿದು ಅಸಹಾಯಕತೆಯಿಂದ ಕೊರಗುತ್ತಾನೆ. ಅಲ್ಲದೆ ತಾನು ಊರಿಗೆ ಹೋಗಿದ್ದಾಗ ಗಂಗಾಧರನ ವಿಷಯ ತಿಳಿಸಿ ಮದುವೆಗೆ ನಿಶ್ಚಯವಾಗಿದ್ದ ಹುಡುಗನನ್ನು ತಪ್ಪಿಸುವ ಕೆಲಸ ನಡೆಸಿ ಆ ಕೆಲಸದಲ್ಲಿ ಯಶಸ್ವಿಯಾಗುತ್ತಾನೆ. ವಿಷಯ ಅರಿತ ಸುಬ್ರಹ್ಮಣ್ಯ ಭಟ್ಟ ನಾರಾಯಣನನ್ನು ತನ್ನ ವ್ಯವಹಾರದಿಂದ ಹೊರಗೆ ಹಾಕಿದ. ಮತ್ತೊಂದೆಡೆ ಗಂಗಾಧರ

ಮೋನಿಕಳನ್ನು ಮದುವೆಯಾಗಿ ತನ್ನ ಮನಸ್ಸು ಹೇಳಿದಂತೆ ನಡೆದುಕೊಂಡಿದ್ದ. ತನ್ನ ಸಮಾಜದ ಕಟ್ಟುಪಾಡುಗಳನ್ನು ವಿರೋಧಿಸಿ ಬದುಕುವ ಧೈರ್ಯ ತೋರಿದ.

ಅಭಯಾನಂದ ಲೀಲಾವತಿಗೆ ಔಷಧಿ ಕೊಟ್ಟು ಹಿಂದಿರುಗುವ ಸಂದರ್ಭದಲ್ಲಿ ಕೃಷ್ಣಯ್ಯನ ಬಳಿ ಸಾವಿತ್ರಿಗೆ ಕೊಡುವಂತೆ ಹೇಳಿ ಉಂಗುರವೊಂದನ್ನು ಕೊಟ್ಟಿದ್ದ. ತನಗೆ ಸಾವಿತ್ರಿ ಮುಂಬಯಿಯಲ್ಲಿ ಇಲ್ಲಿಗೆ ಬರುವಾಗ ಗುರುತಿಗಾಗಿ ಕೊಟ್ಟ ಉಂಗುರ ಎಂಬುದಾಗಿ ಕೃಷ್ಣಯ್ಯನೊಂದಿಗೆ ತಿಳಿಸಿದ್ದ. ಅದನ್ನು ನೋಡಿದ ಅವಳ ಬಾಯಿಯಿಂದ ಅನಂತ ಎಂಬ ಉದ್ಗಾರವು ಹೊರಬಂತು. ಮೂವತ್ತು ವರ್ಷಗಳ ಹಿಂದೆ ತಾನು ಅವನಿಗೆ ನೀಡಿದ್ದ ಉಂಗುರದ ನೆನಪಾಯಿತು. ಅನಂತ ಭಟ್ಟನ ತಂದೆ ಸಾವಿತ್ರಿಯ ತಂದೆಯೊಡನೆ ಹೆಣ್ಣು ಕೇಳಲು ಬಂದಾಗ ಪೌರೋಹಿತ್ಯ ಮಾಡಿ ಜೀವಿಸುತ್ತಿದ್ದ ಅನಂತ ಭಟ್ಟನ ತಂದೆ ಹಾಗೂ ಪೋಸ್ಟ್ ಮಾಸ್ತರಿಕೆ ಉದ್ಯೋಗದಿಂದ ಅರುವತ್ತೋ ಎಪ್ಪತ್ತೋ ಸಂಪಾದಿಸುತ್ತಿದ್ದ ಅನಂತ ಭಟ್ಟ ಇವರೆಲ್ಲ ಶ್ರೀಮಂತನಾದ ಕೇಶವ ಭಟ್ಟನಿಗೆ ಬಡವರಾಗಿ ಕಂಡು ಬಂದರು. ನಂತರ ಸಾವಿತ್ರಿ ಮತ್ತು ಅನಂತ ಭಟ್ಟರ ಪತ್ರ ವ್ಯವಹಾರವೂ ಕೊನೆಗೊಂಡಿತ್ತು. ಈಗ ಅನಂತನ ನೆನಪಾಗಿ ಅನಂತನಿಗೆ ನಾನು ಅನ್ಯಾಯ ಮಾಡಿದೆ. ನಾನವನಿಗೆ ಅನ್ಯಾಯ ಮಾಡಿದರೂ ನನಗೆ ಮಾತ್ರ ಆತ ಒಳ್ಳೆಯದನ್ನೇ ಮಾಡಿದ ಎಂಬ ಯೋಚನೆ ಬಂತು. ಅಭಯಾನಂದನಾಗಿರುವ ಅನಂತನನ್ನು ಹುಡುಕುತ್ತಾ ಮುಂಬಯಿಗೆ ಹೋದ ಸಾವಿತ್ರಿಗೆ ಆತ ಮತ್ತೆ ಮುಂಬಯಿಗೆ ಬರುವುದೇ ಇಲ್ಲ ಎಂಬ ವಿಚಾರ ತಿಳಿಯಿತು. "ಇವನು ಅನಂತನಲ್ಲ. ಆ ಜನ್ಮವನ್ನು ದಾಟಿ ಹೊರ ಬಂದವನು. ಇವನನ್ನು ಅನಂತನ ರೂಪದಲ್ಲಿ ಕಾಣಲು ಸಾಧ್ಯವಿಲ್ಲ. ಅವನು ಪುನರ್ಜನ್ಮ ಪಡೆದಿದ್ದಾನೆ. ನಾನಿನ್ನು ಅದೇ ಭವರೋಗದಲ್ಲಿ ನರಳುತ್ತಿದ್ದೇನೆ" ಎಂದು ಆಕೆಗೆ ಅನ್ನಿಸುತ್ತದೆ. ಮರಳಿ ಊರಿಗೆ ಬಂದ ಸಾವಿತ್ರಿಗೆ ಲೀಲಾವತಿಯ ಗಂಡು ಮಗುವಿನ ಅಳುವಿನ ದನಿ ಕೇಳಿಸಿತು. ಹೀಗೆ ಕಾದಂಬರಿ ಕೊನೆಗೊಳ್ಳುತ್ತದೆ.

ಲೇಖಕರು ತಮ್ಮ ಬರಹಗಳಲ್ಲಿ ಮಾನವೀಯತೆಯ ಹುಡುಕಾಟದಲ್ಲಿ ತೊಡಗುತ್ತಾ ಅಮಾನವೀಯ ಪದ್ಧತಿಗಳನ್ನು ವಿರೋಧಿಸುತ್ತಾ ತಮ್ಮ ಲೇಖನಿಯನ್ನು ಮುಂದಕ್ಕೆ ಹರಿಸುತ್ತಾರೆ. ಕಾದಂಬರಿಯಲ್ಲಿ ಬರುವ ಸಾವಿತ್ರಿ, ಅಭಯಾನಂದ, ಕೃಷ್ಣಯ್ಯ ಮೊದಲಾದ ಪಾತ್ರಗಳು ಕೆಲವೊಮ್ಮೆ ಆ ಹೆಸರಿಗೆ ವಿರುದ್ಧವಾಗಿ ವರ್ತಿಸುತ್ತವೆ. ಮಾನವೀಯ ಮೌಲ್ಯಗಳ ಪ್ರತಿಪಾದನೆ ಮಾಡುತ್ತಾ ಲೇಖಕರು ಸಮಾಜದ ಕೆಲವು ಪರಂಪರಾಗತ ವ್ಯವಸ್ಥೆಗೆ ಕಾದಂಬರಿಯ ಪಾತ್ರಗಳ ಮೂಲಕ ಪ್ರತಿರೋಧವನ್ನು ತೋರುತ್ತಿರುವುದು ಈ ಕಾದಂಬರಿಯಲ್ಲಿ ಕಂಡುಬರುತ್ತದೆ.

ಕೆ.ಟಿ.ಗಟ್ಟಿಯವರ ನಿಲುವು, ಧೋರಣೆಗಳು ಅವರು ಕಾದಂಬರಿಯಲ್ಲಿ ಬರೆದ ಮುನ್ನುಡಿಗಳಿಂದಲೂ ಸ್ಪಷ್ಟವಾಗುತ್ತವೆ. 'ಕಾಮಯಜ್ಞ' ಕಾದಂಬರಿಯ ಮುನ್ನುಡಿಯು ಅವರ ತಾತ್ವಿಕ ನಿಲುವನ್ನು ಇನ್ನಷ್ಟು ಸ್ಪಷ್ಟಪಡಿಸುತ್ತದೆ. ಹೆಣ್ಣೊಬ್ಬಳ ಕುರಿತಾದ ವಿಚಾರಗಳನ್ನು ಹೇಳುತ್ತಾ "ಭಾರತೀಯ ನಾರಿ ಎಂಬ ಆದರ್ಶದ ಬಣ್ಣದ ಕನ್ನಡಕವನ್ನು ಹಾಕಿಕೊಂಡು ಹೆಣ್ಣನ್ನು ನೋಡದೆ ಅವಳು ಒಂದು ವ್ಯಕ್ತಿ, ಒಂದು ಜೀವ ಎಂಬ ನೇರ ನೋಟದಿಂದ ನೋಡಬೇಕು. ಮನುಷ್ಯನನ್ನು ಮನುಷ್ಯ ಎಂದು ಮೊದಲು ಗುರುತಿಸಬೇಕು" ಎನ್ನುತ್ತಾರೆ. "ಭಯ, ನಿರ್ಬಂಧವೇ ಸಂಸ್ಕಾರ, ಧರ್ಮ ಎಂಬಿತ್ಯಾದಿಯಾಗಿ ರೂಢವಾಗಿದೆ. ಆದರೆ ಬಹಳ ಸಂದರ್ಭಗಳಲ್ಲಿ ಈ ಧರ್ಮವೆಂಬುದು ಬರೀ ಒಂದು ಮೊಗಕಾಪು ಮಾತ್ರ ಆಗಿರುತ್ತದೆ. ಆದರ್ಶ ಭಾರತೀಯ ನಾರಿ ಎಂಬ ಪಟ್ಟದಡಿ ಎಷ್ಟು ಕಡೆ ಅಗ್ನಿ ಕುಂಡಗಳಿಲ್ಲ? ಆದ್ದರಿಂದಲೇ ಆದರ್ಶ ಭಾರತೀಯ ಪುರುಷ, ಪತಿವ್ರತಾ ಶಿರೋಮಣಿ ಎಂಬ 'ಪದಗಳಿರುವುದು.' ರಾಮ ಏಕ ಪತ್ನೀವ್ರತಸ್ಥನಿರಬಹುದು. ಅಂಥವರು ಈ ಭೂಮಿಯ ಮೇಲೆ ಕೋಟಿಗಟ್ಟಲೆ ಇದ್ದಾರೆ. ಅವನಿಗಿಂತ ಉತ್ತಮರಾದ ಪತಿವ್ರತಾ ಶಿರೋಮಣಿಗಳಾದ ಪುರುಷರು, ಹೆಂಡತಿಯನ್ನು ರಾಮ ಹಿಂಸಿಸಿದಂತೆ ಹಿಂಸಿಸದ ಪುರುಷರು ಎಷ್ಟೋ ಇದ್ದಾರೆ. ರಾಮ ಅಂಥ ಶ್ರೇಷ್ಠನೇನೂ ಅಲ್ಲ" ಎನ್ನುತ್ತಾ ನಾವು ನಂಬಿಕೊಂಡು ಬಂದಿರುವ ಎಷ್ಟೋ ವಿಚಾರಗಳನ್ನು ವಿಮರ್ಶೆಗೆ ಗುರಿಪಡಿಸುತ್ತಾರೆ.

ತಾವು ಕಾದಂಬರಿಯಲ್ಲಿ ವಿಷಯಗಳನ್ನು ಪ್ರತಿಪಾದಿಸುತ್ತಾ "ಒಂದು ಕತೆ ಅಥವಾ ಕಾದಂಬರಿಯೆಂದರೆ ಕಾನೂನು ಪುಸ್ತಕವಲ್ಲ. ಮನುವಿನ ಧರ್ಮಸಂಹಿತೆಯ ಬಗೆಯ ಶಾಸ್ತ್ರವೇನಲ್ಲ. ಆತ್ಮ ಚರಿತ್ರೆಯೂ ಅಲ್ಲ. ಸಮಾಜ ಚಿತ್ರಣ, ವ್ಯಕ್ತಿಚಿತ್ರಣ, ಮನೋ ವ್ಯಾಪಾರದ ಅಧ್ಯಯನ ಮಾತ್ರವೇ ಇಲ್ಲಿ ನಡೆಯುವುದು. ಒಂದು ವಿಚಾರದಲ್ಲಿ ಹೊಸ ಬಗೆಯಲ್ಲಿ ಚಿಂತಿಸುವಂತೆ ಮಾಡಲು ಲೇಖಕ ಪ್ರಯತ್ನಿಸಬಹುದು. ಹೀಗಾದರೆ ಸರಿಯಲ್ಲ, ಹೀಗಾದರೆ ತಪ್ಪಲ್ಲ ಅಥವಾ ಹೀಗಾದರೆ ಒಳ್ಳೆಯದು ಎಂಬ ಅಭಿಪ್ರಾಯಗಳನ್ನು ಅವನು ಮಂಡಿಸಲೂಬಹುದು" ಎನ್ನುತ್ತಾರೆ.

### ೪.೩: ಅಬ್ರಾಹ್ಮಣ

1978ರ ಕಾಲದಲ್ಲಿ ಹೆಚ್ಚಿನ ಚರ್ಚೆ, ವಿಶ್ಲೇಷಣೆಗೆ ಒಳಗಾದ ಕೆ.ಟಿ.ಗಟ್ಟಿಯವರ ಕಾದಂಬರಿ ಅಬ್ರಾಹ್ಮಣ. ಕಾದಂಬರಿಯಲ್ಲಿ ಕೃತಿಕಾರ ತಿಳಿಸಿರುವಂತೆ ಇದು ನಿರಾಡಂಬರ ಶೈಲಿಯಲ್ಲಿ ಒಂದು ಸತ್ಯವನ್ನು ಎರಡು ದೃಷ್ಟಿಕೋನಗಳಿಂದ ವಸ್ತುನಿಷ್ಠವಾಗಿ ಬಿಂಬಿಸುವ

ಕಾದಂಬರಿ. ಅಬ್ರಾಹ್ಮಣ ಕಾದಂಬರಿಯ ಮೂಲಕ ಕೃತಿಕಾರನ ವೈಚಾರಿಕತೆಯು ತಾತ್ವಿಕ ರೂಪ ಪಡೆದುಕೊಳ್ಳುವುದನ್ನು ಕಾಣಬಹುದು. ಮನುಷ್ಯನನ್ನು ಜಾತಿಯ ನೆಲೆಯಲ್ಲಿ ಗುರುತಿಸುವ ಪ್ರವೃತ್ತಿಯ ವಿರೋಧವನ್ನು ಕಾದಂಬರಿಯ ಒಟ್ಟು ಸಂವಿಧಾನದಲ್ಲಿ ಗುರುತಿಸಬಹುದು. ಅಸ್ಪೃಶ್ಯತೆ ಮತ್ತು ಬ್ರಾಹ್ಮಣ್ಯದ ನಡುವೆ ನಡೆಯುವ ಸಂಘರ್ಷವೇ ಕಾದಂಬರಿಯಲ್ಲಿ ಮುಖ್ಯವಾಗಿದೆ. ಸಾಮಾಜಿಕ, ಶೈಕ್ಷಣಿಕ ಹೀಗೆ ಎಲ್ಲಾ ಕ್ಷೇತ್ರಗಳಲ್ಲೂ ಮೇಲು-ಕೀಳು, ಶ್ರೇಷ್ಠ-ನಿಕೃಷ್ಟ, ಎಂಬ ಭೇದ ಭಾವವನ್ನು ಸಮಾಜದಲ್ಲಿ ಪ್ರಚುರಪಡಿಸುವ ಬ್ರಾಹ್ಮಣ್ಯದ ಪ್ರತಿರೋಧ ಈ ಕಾದಂಬರಿಯಲ್ಲಿದೆ. ಸಮಾಜದಲ್ಲಿ ಸುಂದರವಾದ ಬದುಕಿನ ನಿರ್ಮಾಣಕ್ಕೆ ಜಾತಿ ಶ್ರೇಣೀಕರಣ ವ್ಯವಸ್ಥೆ ಎಂಬುದು ಪ್ರಮುಖವಾದ ತಡೆ. ಸಾಮಾಜಿಕ ಬದುಕಿನಲ್ಲಿ ಭೇದ ಭಾವಕ್ಕೆ ಕಾರಣವಾಗುವ ಬ್ರಾಹ್ಮಣ್ಯ ನಾಶವಾದರೆ ಸಮಾಜದಲ್ಲಿ ಸುಂದರವಾದ ಬದುಕನ್ನು ಕಾಣಬಹುದು ಎಂಬ ನಿಲುವು ಕಾದಂಬರಿಯಲ್ಲಿ ವ್ಯಕ್ತವಾಗಿರುವುದನ್ನು ಗಮನಿಸಬಹುದು.

ಮೀನಾಕ್ಷಿ ಮತ್ತು ಮಾಧವ ಭಟ್ಟರ ಮಗ ಜಗದೀಶ ಭಟ್ಟ ತತ್ವಶಾಸ್ತ್ರದ ಉಪನ್ಯಾಸಕ. ದೆಹಲಿ ವಿಶ್ವವಿದ್ಯಾಲಯದಲ್ಲಿ ತತ್ವಶಾಸ್ತ್ರದಲ್ಲಿ ಸ್ನಾತಕೋತ್ತರ ಪದವಿಯವರೆಗೆ ಓದಿ ಮರಳಿ ಊರಿಗೆ ಬಂದಾಗ ತನ್ನ ಜುಟ್ಟು ಮತ್ತು ಜನಿವಾರವನ್ನು ಕಳಚಿಕೊಂಡಿದ್ದನಲ್ಲದೆ ತನ್ನ ಹೆಸರಿನೊಂದಿಗಿದ್ದ ಬ್ರಾಹ್ಮಣೀಯ ಉಪನಾಮವನ್ನು ಬಿಟ್ಟಿದ್ದ. ಆದರೆ ಅಮ್ಮನ ಸತ್ಯಾಗ್ರಹಕ್ಕೆ ಹೆದರಿ ನಿರ್ವಾಹವಿಲ್ಲದೆ ಜನಿವಾರ ತೊಟ್ಟಿದ್ದ.

ಮಾಧವ ಭಟ್ಟನ ಹಿರಿಯ ಮಗ ಶಂಭು ಭಟ್ಟ ಹೆಚ್ಚು ಓದದೆ ಮದುವೆಯಾಗಿ ಆರು ವರ್ಷದಲ್ಲಿ ನಾಲ್ಕು ಮಕ್ಕಳ ತಂದೆಯಾಗಿದ್ದ. ತನ್ನ ಹಿರಿಯ ತಲೆಮಾರಿನವರಾರೋ ಕಟ್ಟಿಸಿದ ದೇವಸ್ಥಾನದ ಉಸ್ತುವಾರಿಕೆಯನ್ನು ತಂದೆ ನೋಡಿಕೊಳ್ಳುತ್ತಿದ್ದುದರಿಂದ ಆತನಿಗೂ ಮರ್ಯಾದೆ ಸಲ್ಲುತ್ತಿತ್ತು. ಮಾಧವ ಭಟ್ಟನ ಕೊನೆಯ ಮಗ ವಿಶ್ವನಾಥ ಬೆಂಗಳೂರಿನಲ್ಲಿ ಪಿಹೆಚ್.ಡಿ. ಕಲಿಯುತ್ತಿದ್ದ, ಅನಾರೋಗ್ಯದಿಂದ ನರಳುತ್ತಿದ್ದ.

ಜಗದೀಶ ಭಟ್ಟ ಉಪನ್ಯಾಸಕನಾಗಿದ್ದ ಕನಕದಾಸ ಕಾಲೇಜು ಬ್ರಾಹ್ಮಣರ ಪ್ರಸಿದ್ಧ ಕಾಲೇಜು. ಅಲ್ಲಿರುವ ಗೋವಿಂದರಾಜನೆಂಬೊಬ್ಬನನ್ನು ಬಿಟ್ಟು ಉಳಿದವರೆಲ್ಲಾ ಬ್ರಾಹ್ಮಣರಾಗಿದ್ದರು. ಕಾಲೇಜಿನ ಕ್ವಾರ್ಟರ್ಸಿನಲ್ಲಿ ಅಡಿಗೆ ಹುಡುಗನೊಂದಿಗೆ ಜಗದೀಶ ಉಡುಪಿಯಲ್ಲಿಯೇ ವಾಸಿಸುತ್ತಿದ್ದ. ಶೂದ್ರನಾದ ಅಧ್ಯಾಪಕ ಗೋವಿಂದರಾಜುವಿಗೂ ಇತರ ಅಧ್ಯಾಪಕರಿಗೂ ವಿಶೇಷ ಸಂಪರ್ಕವಿರಲಿಲ್ಲ. ಮನೆಗೆ ಬಂದರೂ ಅವರ ಹೆಂಡಂದಿರು ಕಾಫಿ, ತಿಂಡಿ ಮುಟ್ಟುತ್ತಿರಲಿಲ್ಲ. ಆದರೆ ಜಗದೀಶ ಗೋವಿಂದರಾಜುವಿನ

ಕುಟುಂಬಕ್ಕೆ ಮನೆಯವನಂತಾಗಿಬಿಟ್ಟಿದ್ದ. ಗೋವಿಂದರಾಜುವಿನ ಮನೆಯಲ್ಲಿ ಕಾಫಿ, ತಿಂಡಿ ತೆಗೆದುಕೊಳ್ಳಬಾರದು, ಅವನು ಕಾಫಿ ಕುಡಿದ ಲೋಟವನ್ನು ಅವನೇ ತೊಳೆದಿರಿಸಿ ಹೋಗಬೇಕೆಂಬ ತಾಯಿಯ ಮಾತನ್ನು ಜಗದೀಶ ಕಡೆಗಣಿಸಿದ್ದ. "ಪುರಾತನ ಕಾಲದಲ್ಲಿ ಯಾವುದೋ ಸಾಮಾಜಿಕ ಚೌಕಟ್ಟಿನಲ್ಲಿ ನಿಯಮಿತವಾದ ವರ್ಣಭೇದವು ಈಗಲೂ ಮಾನ್ಯವಾಗಬಲ್ಲುದೆ, ಈ ವರ್ಣಗಳೆಲ್ಲ ಸಮ್ಮಿಳಿತಗೊಂಡು ಅಥವಾ ಈ ವರ್ಣಗಳನ್ನೆಲ್ಲಾ ವಿಸರ್ಜಿಸಿಕೊಂಡು ಮನುಷ್ಯ ಮನುಷ್ಯನಾಗಿ ಜೀವಿಸಲು ಯಾಕೆ ಇಷ್ಟೊಂದು ಆತಂಕಗಳು" ಎಂದು ಜಗದೀಶ ಚಿಂತಿಸುತ್ತಿದ್ದ. ಇಂತಹ ವಿಚಾರಪರ ಚಿಂತನೆಗಳಿಂದ

**(ಅಬ್ರಾಹ್ಮಣ, 1980, ಪುಟ 9)**

ಕಾಲೇಜಿನಲ್ಲೂ ವಿದ್ಯಾರ್ಥಿಗಳ ಮೆಚ್ಚುಗೆ ಪಡೆದುಕೊಳ್ಳುತ್ತಾನೆ. ಆತನಲ್ಲಿ ವೈಚಾರಿಕ ಜಾಗೃತಿಯ ವ್ಯಕ್ತಿತ್ವ ರೂಪುಗೊಳ್ಳುತ್ತದೆ. ಕಾಲೇಜಿನ ಟ್ರಸ್ಟಿಗಳಲ್ಲಿ ಒಬ್ಬರಾಗಿದ್ದ ಕಾಂಟ್ರಾಕ್ಟರ್ ಕೃಷ್ಣಾಚಾರ್ಯರು ಮನೆಗೆ ಬಂದು ಮಗಳು ಶಾಲಿನಿಯನ್ನು ಮದುವೆಯಾಗಲು ತಿಳಿಸಿದಾಗ ಸ್ಪಷ್ಟವಾಗಿ ನಿರಾಕರಿಸುತ್ತಾನೆ. ಈ ಬಗ್ಗೆ ತಂದೆ, ತಾಯಿ ಒತ್ತಾಯ ಪಡಿಸಿದಾಗಲೂ ಅವರ ಒತ್ತಾಯವನ್ನು ತಿರಸ್ಕರಿಸುತ್ತಾನೆ. ಕೃಷ್ಣಾಚಾರ್ಯರ ವಿರೋಧಕ್ಕೆ ಕಾರಣನಾಗುತ್ತಾನೆ.

ಕ್ಯಾನ್ಸರ್‌ನಿಂದ ಆಗಾಗ ಹಾಸಿಗೆ ಹಿಡಿಯುತ್ತಿದ್ದ ವಿಶ್ವನಾಥನನ್ನು ನರ್ಸ್ ಕಿಶೋರಿ ಎಲ್ಲಿದ್ದರೂ ಬಂದು ಆರೈಕೆ ಮಾಡುತ್ತಿರುತ್ತಾಳೆ. "ಜಗದೀಶನ ದೃಷ್ಟಿಯಲ್ಲಿ ಪ್ರೀತಿಯೆಂಬುದೊಂದು ನೈಸರ್ಗಿಕವಾದ, ಜೀವಿ ಮತ್ತು ಜೀವಕ್ಕಂಟಿಕೊಂಡಿರುವ ಸಂಬಂಧ. ಅಂತಸ್ತು, ಐಶ್ವರ್ಯ, ಜಾತಿ, ಮತ ಅಥವಾ ಲಿಂಗಭೇದ ಈ ಪ್ರೀತಿಯ ಸ್ವರೂಪವನ್ನು ವಿಕೃತಗೊಳಿಸಿ ತೋರಿಸುವುದನ್ನು ಕಂಡು ಅವನು ಆಶ್ಚರ್ಯಪಡುತ್ತಿದ್ದ."

**(ಅದೇ, ಪುಟ 27)**

ವಿಶ್ವನಾಥ ಕಿಶೋರಿಯರ ಸ್ನೇಹಕ್ಕೆ ಒಂದು ಅರ್ಥವಿರುವುದಾಗಿ ವಿಶ್ವನಾಥನಿಗನ್ನಿಸುತ್ತದೆ.

ಹೆಚ್ಚು ಓದದೆ ಶಂಭು ತನ್ನ ಮನೆಗೆ ಬಂದ ನೆಂಟರಿಷ್ಟರಲ್ಲಿ ವಿದ್ಯಾವಂತರೆಂಬವರನ್ನು ಕಂಡರೆ ಒಂದೋ ದೂರ ದೂರವೇ ಇರುತ್ತಾನೆ ಅಥವಾ ಅವರೊಂದಿಗೆ ವ್ಯಂಗ್ಯದ ಮಾತುಗಳನ್ನಾಡುತ್ತಿರುತ್ತಾನೆ. ಇದು ವಿದ್ಯಾವಂತರ ಕುರಿತಾಗಿ ಅವಿದ್ಯಾವಂತನೊಬ್ಬನ ಪ್ರತಿರೋಧ. ಈ ಪ್ರತಿರೋಧದ ಹಿನ್ನೆಲೆಯಲ್ಲಿ ಶಂಭುವಿನ ಸಂಕುಚಿತ ಮನೋಭಾವವನ್ನು ಗಮನಿಸಬಹುದು.

ಸಹ ಅಧ್ಯಾಪಕ ಗೋವಿಂದರಾಜು ಹಾಗೂ ಆತನ ಪತ್ನಿ ಜಾತ್ರೆಯ ಸಂದರ್ಭದಲ್ಲಿ ಜಗದೀಶನ ಮನೆಗೆ ಬಂದಿದ್ದಾಗ ತಾಯಿ ಮೀನಾಕ್ಷಿ ಮಿತ್ರನೊಂದಿಗೆ ಕುಳಿತುಕೊಂಡಿದ್ದ ಮಗನನ್ನು ಮಾತ್ರಾ ಒಳಗೆ ಕರೆದು ಕಾಫಿ ಕುಡಿಯುವಂತೆ, ಊಟ ಮಾಡುವಂತೆ ಹೇಳುತ್ತಾಳೆ. ಆ ಮೂಲಕ ಆಕೆ ಗೋವಿಂದನ ಜಾತಿಯ ಬಗ್ಗೆ ಅಸಮಾಧಾನ ವ್ಯಕ್ತಪಡಿಸುತ್ತಾಳೆ. ತಂದೆ ಮಾಧವ ಭಟ್ಟ ಗೋವಿಂದರಾಜನ ಜಾತಿಯ ಬಗ್ಗೆ ವಿಚಾರಿಸುತ್ತಾನೆ.

ಜಾತ್ರೆಯ ಸಂದರ್ಭದಲ್ಲಿ ದೇವಾಲಯದ ಮೇಲ್ವಿಚಾರಣೆಯನ್ನು ನೋಡಿಕೊಂಡಿರಬೇಕಾಗಿದ್ದ ಶಂಭು ಭಟ್ಟ ತೋಟದಲ್ಲಿ ಹೆಣ್ಣಾಳೊಬ್ಬಳೊಂದಿಗೆ ಮಾತನಾಡುತ್ತಾ ಕುಳಿತಿರುತ್ತಾನೆ. ದೇವರ ಉತ್ಸವ ನೋಡುತ್ತಾ ಕುಳಿತಿದ್ದ ಗೋವಿಂದರಾಜುವಿನ ಹೆಂಡತಿ ರಾಜಲಕ್ಷ್ಮಿಯ ಬಳಿ ತರುಣಿಯೊಬ್ಬಳು ಬಂದು "ನೀವು ಬ್ರಾಂಬ್ರಾದರೆ ಆ ಕಡೆ ಗೋಪುರದಲ್ಲಿ ಹೋಗಿ ಕುಳಿತುಕೊಳ್ಳಬಹುದು" ಎಂದಾಗ ಆಕೆ ಸಮಾಧಾನದಿಂದಲೇ ಉತ್ತರ ನೀಡಿದ್ದಳು. ಜಾತ್ರೆಯಲ್ಲಿ ಜನರೆಲ್ಲಾ ಪೂಜಾರಿಯ ತಲೆಯ ಮೇಲಿದ್ದ ಗೋಪಾಲಕೃಷ್ಣನ ಮೂರ್ತಿಯನ್ನು ನೋಡುತ್ತಿದ್ದರು. ನೋಡದೆ ಇರುವುದು ಅಪಚಾರ ಎಂದು ಎಳೆಹರೆಯದ ಹುಡುಗ ಹುಡುಗಿಯರೂ, ಚಿಕ್ಕಮಕ್ಕಳೂ ನೋಡುತ್ತಿದ್ದರು. ಅವರು ಬೇರೆ ಬೇರೆ ಕಡೆ ಎಲ್ಲಾದರೂ ನೋಡಿದರೆ ಹಿರಿಯರು ಅವರ ಕಿವಿ ಹಿಂಡಿ ಅವರ ಕತ್ತನ್ನು ದೇವರ ಕಡೆ ತಿರುಗಿಸುತ್ತಿದ್ದರು. ಆದ್ದರಿಂದ ಮಕ್ಕಳು ದೇವರಿಗಿಂತ ಹೆಚ್ಚಾಗಿ ದೇವರನ್ನು ಹೊತ್ತ ಬ್ರಾಹ್ಮಣನನ್ನೇ ನೋಡುತ್ತಿದ್ದರು.

ರಾಜಲಕ್ಷ್ಮಿ ಜಗದೀಶನೊಂದಿಗೆ ನಾನು ಮುಂದಿನ ಜನ್ಮದಲ್ಲಿ ಬ್ರಾಹ್ಮಣನಾಗಿ ಹುಟ್ಟುವ ತೀರ್ಮಾನ ಮಾಡಿದ್ದೇನೆ ಎಂದಾಗ ಜಗದೀಶ ಏಳೇಳು ಜನ್ಮಕ್ಕೂ ಬ್ರಾಹ್ಮಣನಾಗಿ ಹುಟ್ಟಲು ಬಯಸುವುದಿಲ್ಲ ಎನ್ನುತ್ತಾನೆ.

ಆರು ವರ್ಷದಿಂದ ಡಾಕ್ಟರೇಟು ಮಾಡುತ್ತಿದ್ದ ಜೋಶಿ, ಅವನ ವ್ಯಕ್ತಿತ್ವದಿಂದಾಗಿ ಮಾನವೀಯ ಪ್ರಪಂಚದಲ್ಲಿ ಆವಾಗಲೇ ಡಾಕ್ಟರೇಟ್ ಪಡೆದುಕೊಂಡಿದ್ದಾನೆ ಎಂದು ಜಗದೀಶನಿಗೆ ಅನ್ನಿಸುತ್ತದೆ. ತಮ್ಮ ಸತ್ತ ದುಃಖದಲ್ಲಿಯೇ ಬೆಳ್ಮಣ್ಣಿನ ತನ್ನ ಮನೆಗೆ ಹೋಗಿದ್ದ ಜಗದೀಶನಿಗೆ ಬೆಳಿಗ್ಗೆ ಅಂಗಳದಲ್ಲಿ ನಿಂತಿದ್ದ ಹೊಲೇರ ಅಂಗಾರ ಮತ್ತು ಅವನ ಮಗಳು ಬೆಳ್ಳಿ ತಮ್ಮ ಪಂಗಡದವರೊಂದಿಗೆ ಒಟ್ಟಾಗಿ ಬಂದಿರುವುದು ಕಾಣುತ್ತದೆ. ಅಣ್ಣ ಶಂಭಟ್ಟ ಬೆಳ್ಳಿಯನ್ನು ದೇವಸ್ಥಾನದ ಉಗ್ರಾಣಕ್ಕೆ ಕರೆದುಕೊಂಡು ಹೋಗಿ ಹಾಳು

ಮಾಡಿದ್ದ. ಅದಕ್ಕಾಗಿ ಅವರು ಮಾಧವ ಭಟ್ಟನಿಂದ ಐದು ಸಾವಿರ ರೂಪಾಯಿಗಳನ್ನು ಕಕ್ಕಿಸಿದ್ದರು.

ಸೆಮಿನಾರ್ ಒಂದರಲ್ಲಿ ಭಾಗವಹಿಸಲು ಬೆಂಗಳೂರಿಗೆ ಬಂದಿದ್ದ ಜಗದೀಶನು ವಿಶ್ವನಾಥನ ಗೆಳೆಯನಾದ ಜೋಶಿಯೊಂದಿಗೆ ಕಿಶೋರಿಯ ಬಗ್ಗೆ ವಿಚಾರಿಸಿ ಅವಳನ್ನು ಕಾಣಲು ವಿಕ್ಟೋರಿಯಾ ಹಾಸ್ಪಿಟಲ್‌ಗೆ ಹೋದಾಗ ಕಿಶೋರಿ ಅಸೌಖ್ಯದಿಂದ ಆಸ್ಪತ್ರೆಯಲ್ಲಿ ಮಲಗಿದ್ದಳು. ತಂದೆ ತಾಯಿಗಳಿಲ್ಲದ ತಬ್ಬಲಿ ಆಕೆಯೆಂದು ಜಗದೀಶನಿಗೆ ತಿಳಿಯಿತು. ತನ್ನ ಚಿಕ್ಕಪ್ಪನ ಸಂಸಾರವನ್ನು ನೋಡಿಕೊಳ್ಳುವ ಜವಾಬ್ದಾರಿಯೂ ಆಕೆಯ ಮೇಲಿತ್ತು. ವಿಶ್ವನಾಥನ ಮೇಲೆ ಆಕೆ ತೋರುತ್ತಿದ್ದ ಪರಿಶುದ್ಧವಾದ ಪ್ರೀತಿಯ ಬಗ್ಗೆ ತಿಳಿದು ಆಕೆಯ ಬಗ್ಗೆ ಗೌರವ ಮೂಡಿತು. ಜಗದೀಶ ಕಿಶೋರಿಯೊಂದಿಗೆ ನೀನೊಪ್ಪುವುದಾದರೆ ನಾನು ನಿನ್ನನ್ನು ಮದುವೆಯಾಗುತ್ತೇನೆ ಎಂದಾಗ ಆಕೆ ದಿಗ್ಭ್ರಾಂತಳಾಗಿದ್ದಳು. ತಾನೊಬ್ಬಳು ಹರಿಜನ ಜಾತಿಯ ಹುಡುಗಿಯೆಂದು ತಿಳಿಸಿದಳು. ಜಾತಿಯ ಅಸ್ತಿತ್ವದ ಮೇಲೆ ತನಗೆ ನಂಬಿಕೆಯಿಲ್ಲದಿರುವುದನ್ನು ಆತ ಆಕೆಗೆ ಸ್ಪಷ್ಟವಾಗಿಯೇ ತಿಳಿಸಿದ. "ಜಾತಿಯೆಂಬುದರ ಅರ್ಥ ನನಗೆ ತಿಳಿಯುವುದಿಲ್ಲ. ಜಾತಿ ಎಂಬುದಕ್ಕೆ ಅದರದ್ದೇ ಆದ ಒಂದು ನಿರ್ದಿಷ್ಟ ರೂಪ, ಅಸ್ತಿತ್ವ ಇದೆಯಾದರೆ, ಅದು ಮನುಷ್ಯನ ವ್ಯಕ್ತಿತ್ವದಲ್ಲಿ ತಾನಾಗಿಯೇ ಎದ್ದು ತೋರುವಂಥ ಒಂದು ಅಂಶವಾಗಬೇಕು. ಅದು ಹೇಳಿ ತಿಳಿಸುವಂಥ ಒಂದು ವಿಚಾರವಾದರೆ ಅದರ ಅಸ್ತಿತ್ವದಲ್ಲಿ ನನಗೆ ವಿಶ್ವಾಸವಿಲ್ಲ. ಯೋಚಿಸಬೇಕಾದ ಅಗತ್ಯ ಕೂಡಾ ಇಲ್ಲ. ಯಾಕೆಂದರೆ ಜಾತಿ, ಬಹಿಷ್ಕಾರ ಇತ್ಯಾದಿಗಳಿಗೆ ಏನಾದರೂ ಅರ್ಥವಿದೆಯೆಂದು ನನಗನ್ನಿಸುವುದಿಲ್ಲ. ಒಬ್ಬ ಮನುಷ್ಯ ಒಂದು ಸ್ವತಂತ್ರ ಘಟಕ. ಆ ಘಟಕದ ಮಿತಿ ಅದರದೇ ಆಗಿದೆ. ಉಳಿದವರು ಏನು ತಲೆ ಚಚ್ಚಿಕೊಂಡರೂ ಫಲವಿಲ್ಲ." ಎಂಬ ನಂಬಿಕೆ ಆತನದು. ಜಾತಿ ಪದ್ಧತಿಯನ್ನು ಆತ ಇಲ್ಲಿ ವಿರೋಧಿಸುತ್ತಾನೆ. ಜಗದೀಶನದು ಯಾರಿಗೂ ಭಯಪಡದ ವ್ಯಕ್ತಿತ್ವ. ಇಂತಹ ನಿರ್ಧಾರಕ್ಕೆ ಕೈ ಹಾಕಿದರೆ ತಾನು ಉದ್ಯೋಗದಲ್ಲಿ ಮುಂದುವರಿಯಲು ಸಾಧ್ಯವಾಗಲಾರದು ಎಂಬುದರ ಬಗ್ಗೆಯೂ ಆತನಿಗೆ ಯೋಚನೆಯಿಲ್ಲ. ಜಾತಿ ಎಂಬುದು ನೈಸರ್ಗಿಕವಲ್ಲ ಅದು ಮನುಷ್ಯ ಸೃಷ್ಟಿಸಿಕೊಂಡ ಮೋಸದ ವ್ಯವಸ್ಥೆ ಎಂದು ಆತ ಯೋಚಿಸುತ್ತಾನೆ. ತಾನು ನಂಬಿಕೊಂಡು ಬಂದ ತತ್ವಕ್ಕೆ ಬದ್ಧವಾಗಿ ನಡೆಯುವುದೇ ಆತನಿಗೆ ಮುಖ್ಯ. ಹಾಗಾಗಿ ಮನೆಯ, ಕಾಲೇಜಿನ, ಸಮಾಜದ ಯಾವುದೇ ರೀತಿಯ ವಿರೋಧವನ್ನು ಎದುರಿಸಲು ಆತ ಸಿದ್ಧನಾಗುತ್ತಾನೆ. ಜೋಷಿ– "ದೇವರಿಗೆ ಜಾತಿಯಿಲ್ಲ. ಅವನು ಹಂದಿಯಾಗಿಯೂ ಹುಟ್ಟಿ ತೋರಿಸಿದ್ದಾನೆ. ತನ್ನ ಅತ್ಯಂತ ಶ್ರೇಷ್ಠವಾದ ಅವತಾರವನ್ನು ಶೂದ್ರನಾಗಿ ಹುಟ್ಟಿ ತೋರಿಸಿದ್ದಾನೆ. ಜಾತಿ ಮತಗಳ ಭೇದವಿಲ್ಲದೆ

ದೈವಾಂಶಸಂಭೂತರು ಹುಟ್ಟಿದ್ದಾರೆ. ಇಂಥವರಿಗೆ ಜಾತಿಯಿಲ್ಲ. ಆದರೆ ಮದುವೆಯಾಗಿ, ಸಂಸಾರಿಯಾಗಿ ಸಮಾಜದಲ್ಲಿ ಜೀವಿಸಬೇಕೆಂದಿರುವವನಿಗೆ ಎಂಥಾದ್ದರೊಂದು ಜಾತಿ ಇದ್ದೇ ಇರುತ್ತದೆ."

**(ಅದೇ. ಪುಟ 120)**

ಎನ್ನುತ್ತಾ ಜಾತಿ ಪದ್ಧತಿಯ ಕುರಿತಾಗಿ ವಿಮರ್ಶಿಸುತ್ತಾ ಸಾಮಾಜಿಕ ಜೀವನದ ಅನಿವಾರ್ಯತೆಗಳ ಬಗ್ಗೆ ಚರ್ಚಿಸುತ್ತಾನೆ.

ಕೃಷ್ಣಾಚಾರ್ಯರು ತಮ್ಮ ಮಕ್ಕಳನ್ನು ಜಗದೀಶನಿಗೆ ಮದುವೆ ಮಾಡಲು ಪ್ರಯತ್ನಿಸುತ್ತಿದ್ದರೂ ಜಗದೀಶ ತಿರಸ್ಕರಿಸುತ್ತಾನೆ. ತನ್ನನ್ನು ಅರ್ಥಮಾಡಿಕೊಂಡಿದ್ದ ವಿಶ್ವನಾಥನನ್ನು ನರ್ಸ್ ಕಿಶೋರಿಯೂ ಅರ್ಥಮಾಡಿಕೊಂಡಿದ್ದರಿಂದ ತನ್ನನ್ನು ಅರ್ಥಮಾಡಿಕೊಳ್ಳುತ್ತಾಳೆಯೆಂಬ ನಂಬಿಕೆ ಜಗದೀಶನಿಗೆ. ಜಗದೀಶನಿಗೆ ಹರಿಜನ ಜಾತಿಯ ಕಿಶೋರಿಯ ಜಾತಿ ಮುಖ್ಯವಾಗಲಿಲ್ಲ. ಅವಳ ಪ್ರಾಮಾಣಿಕತೆ, ನಿಷ್ಠೆ, ಬೌದ್ಧಿಕತೆ ಜಗದೀಶನಿಗೆ ಇಷ್ಟವಾಗಿತ್ತು. ತನ್ನನ್ನು ಮದುವೆಯಾಗುವುದಾದರೆ ಆಗ ಎದುರಿಸಬೇಕಾದ ಸಮಸ್ಯೆಗಳನ್ನು ಆಕೆ ಚರ್ಚಿಸುತ್ತಾಳೆ. ತಾನು ಬೇರೆ ಜಾತಿಯ ಹೆಣ್ಣನ್ನು ಮದುವೆಯಾಗುವುದಾಗಿ ತಿಳಿಸಿದಾಗ ತಂದೆ ಮಾಧವ ಭಟ್ಟ ಖಡಾ ಖಂಡಿತವಾಗಿ ವಿರೋಧಿಸುತ್ತಾನೆ. ನೀನೇನಾದರೂ ತಪ್ಪು ಕೆಲಸ ಮಾಡಿ ಸಿಕ್ಕಿಬಿದ್ದರೆ ನಾಲ್ಕು ಕಾಸು ಎಸೆದು ಅವಳನ್ನು ಬಿಟ್ಟುಬಿಡು ಎನ್ನುತ್ತಾನೆ. ಶಂಭು ಭಟ್ಟ ಜಗದೀಶನೊಂದಿಗೆ "ಯಾವುದೋ ದರಿದ್ರ ಶೂದ್ರ ಹುಡುಗಿಯನ್ನು ಮದುವೆಯಾಗಲು ಹೊರಟಿದ್ದೀಯಲ್ಲಾ" ಎನ್ನುವುದರ ಮೂಲಕ ಅಣ್ಣನ ನಿರ್ಧಾರವನ್ನು ವಿರೋಧಿಸುತ್ತಾನೆ.

ಜಗದೀಶ ತಾನು ಯೋಚಿಸಿದಂತೆ ಕಿಶೋರಿಯನ್ನು ಮದುವೆಯಾಗಲು ನಿರ್ಧರಿಸುತ್ತಾನೆ. ಅದಕ್ಕೆ ವಿಶ್ವನಾಥನ ಗೆಳೆಯರು ಸಹಕರಿಸುತ್ತಾರೆ. ಜಗದೀಶ ಮದುವೆಯಾದ ವಿಚಾರ ತಿಳಿದ ಆತನ ತಂದೆ "ಬಾಯ್ಮುಚ್ಚು ನೀಚ ! ಭ್ರಷ್ಟ ! ನಿನ್ನಿಂದ ನನ್ನ ಕುಲ ಕೆಟ್ಟಿತು. ನೀನು ಹುಟ್ಟಿದಾಗಲೇ ನಿನ್ನನ್ನು ತೋಡಿಗೆಸೆಯಬೇಕಾಗಿತ್ತು. ಎಲ್ಲೂ ಹೆಣ್ಣು ಸಿಗಲಿಲ್ಲವೆ ನಿನಗೆ ? ಆ ಹೊಲತಿ ರಂಡೆ, ಸೂಳೆಯೇ ಬೇಕಾಯ್ತೆ ನಿನಗೆ? ನಿನಗೆ ಅಪ್ಪ ಬೇಡ, ಅಮ್ಮ ಬೇಡ, ದೇವರು ಬೇಡ, ದೇವಸ್ಥಾನ ಬೇಡ. ಊರ ಹೊರಗಿನ ತಿಪ್ಪೆ ಬೇಕಾಯ್ತು ನಿನಗೆ? ನೀನು ಹೇಗೆ ನನ್ನ ಮಗನಾಗಿ ಹುಟ್ಟಿದಿ ! ನೀನು ಚಂಡಾಲ, ನಾನು ನಿನಗೆ ಹೇಳ್ಲಿಕ್ಕೆ ಇರೋದು ಇಷ್ಟು. ನನ್ನ ಆಸ್ತಿಯಲ್ಲಿ ನಿನಗೆ ಚಿಕ್ಕಾಸೂ ಸಿಗೊಲ್ಲ. ನನಗೂ ನಿನಗೂ ಇನ್ನು ಯಾವ ಸಂಬಂಧವೂ ಇಲ್ಲ. ನನ್ನ ಹೆಣವನ್ನು ಕೂಡಾ ನೀನು ಮುಟ್ಟಕೂಡದು. ಇನ್ನು ಮುಂದೆ ನನ್ನ ಮನೆಯ ಮೆಟ್ಟಿಲನ್ನು ತುಳಿಯುವ ಹಕ್ಕು

ನಿನಗಿಲ್ಲ. ಎಲ್ಲಾದರೂ ತಲೆ ಕೆಟ್ಟು ಈ ಕಡೆ ಬಂದರೆ ಗುಂಡಿಟ್ಟು ಕೊಂದೇನು." ಎನ್ನುತ್ತಾನೆ.

ಕಾಲೇಜಿನಲ್ಲಿ ಕೆಲವು ವಿದ್ಯಾರ್ಥಿಗಳು ಜಗದೀಶನ ಬಗ್ಗೆ ಕೋಲಾಹಲ ಎಬ್ಬಿಸಿದರು. ಕಾಲೇಜಿನ ಟ್ರಸ್ಟಿಗಳು ಈತ ಕಿಶೋರಿಯನ್ನು ಮದುವೆಯಾದುದನ್ನು ಕಂಡು ಜಾತಿ ವಿರೋಧಿ ಎಂದು ವಿರೋಧಿಸುತ್ತಾರೆ. ಜಗದೀಶನ ಬಗ್ಗೆ ತರಗತಿಯಲ್ಲಿ ಗಲಭೆ ಎಬ್ಬಿಸುವ ಹಿನ್ನೆಲೆಯಲ್ಲಿ ಟ್ರಸ್ಟಿಗಳ ಕೈವಾಡ ಇರುತ್ತದೆ. ಇವೆಲ್ಲದರ ಹಿನ್ನೆಲೆಯಲ್ಲಿ ಕೃಷ್ಣಾಚಾರ್ಯನ ಕೈವಾಡವೂ ಹೆಚ್ಚಾಗಿರುತ್ತದೆ. ಆದರೆ ತನ್ನ ವಿದ್ವತ್ತಿನಿಂದ ಜಗದೀಶ ವಿದ್ಯಾರ್ಥಿಗಳ ಮೆಚ್ಚುಗೆಯನ್ನೂ ಗಳಿಸಿರುತ್ತಾನೆ. ಜಗದೀಶ ನೀಡಿದ ರಾಜೀನಾಮೆ ಪತ್ರವನ್ನು ವಿದ್ಯಾರ್ಥಿಗಳು ಸುಟ್ಟು ಹಾಕುತ್ತಾರೆ. ಟ್ರಸ್ಟಿಗಳ ವಿರುದ್ಧ ಘೋಷಣೆ ಕೂಗುತ್ತಾರೆ. ಜಗದೀಶ ರಾಜೀನಾಮೆಯನ್ನು ಹಿಂದಕ್ಕೆ ಪಡೆಯುವಂತೆ ಮಾಡುತ್ತಾರೆ. ಜಗದೀಶನ ವಿರುದ್ಧ ಟ್ರಸ್ಟಿಗಳು ನಡೆಸಿದ ಪ್ರತಿರೋಧದಲ್ಲಿ ಅವರು ಸೋಲುತ್ತಾರೆ.

ಸರಕಾರಿ ಭೂಮಿಯನ್ನು ಮಾಧವ ಭಟ್ಟ ತನ್ನ ವಶದಲ್ಲಿರಿಸಿಕೊಂಡಿದ್ದಾನೆ ಎಂಬುದಾಗಿ ಆತನ ಒಕ್ಕಲಿನವರು ಸರಕಾರಕ್ಕೆ ನೀಡಿದ ದೂರನ್ನು ಪರಿಶೀಲಿಸಿದ ತಹಶೀಲ್ದಾರರು ಆತನ ಹೆಚ್ಚಿನ ಜಮೀನು ದೇವಸ್ಥಾನದ ಆಸ್ತಿ ಎಂದು ತಿಳಿಸಿದರು. ಮಾಧವ ಭಟ್ಟನ ವಶದಲ್ಲಿದ್ದ ಸುಮಾರು ಐವತ್ತು ಅರವತ್ತು ಎಕರೆ ಕಾಡು ಮತ್ತು ಗುಡ್ಡ ದಾಖಲೆರಹಿತವಾಗಿ, ಕಂದಾಯ ರಹಿತವಾಗಿ ಅವನ ವಶವಿದ್ದುದು ಬೆಳಕಿಗೆ ಬಂದು ಸರಕಾರ ಅದನ್ನೆಲ್ಲ ವಶಪಡಿಸಿಕೊಂಡಿತು. ಆತನ ಒಕ್ಕಲಾಗಿದ್ದ ಬಹುಮಂದಿ ಹರಿಜನರಿಗೆ ಅವರವರು ವಾಸಿಸುತ್ತಿದ್ದ ಭೂಮಿಯನ್ನು ಸರಕಾರ ಅವರ ಹೆಸರಿಗೆ ದಾಖಲೆ ಮಾಡಿಕೊಟ್ಟಿತು. ಈ ದುಃಖದಲ್ಲಿಯೇ ಹಾಸಿಗೆ ಹಿಡಿದ ಮಾಧವ ಭಟ್ಟ ತೀರಿಕೊಂಡ. ಸರಕಾರದ ಆದೇಶದ ಮುಂದೆ ಅವನ ಪ್ರತಿರೋಧವು ದೊಡ್ಡ ಸೋಲನ್ನೇ ಕಂಡಿತು.

ಕಿಶೋರಿ ತನ್ನ ಅದ್ಭುತವಾದ ಹಾಡುಗಾರಿಕೆಯಿಂದಾಗಿ ಎಲ್ಲರ ಮೆಚ್ಚುಗೆಗೆ ಪಾತ್ರಳಾಗಿದ್ದಳು. ಮುಂದೆ ಆಕೆ ಸಿನಿಮಾ ಹಿನ್ನೆಲೆ ಗಾಯಕಿಯರಲ್ಲಿಯೂ ಒಬ್ಬಳಾಗಿಬಿಟ್ಟಳು. ಊರಿಗೆ ಬಂದ ಜಗದೀಶನಿಗೆ ಇದ್ದಕ್ಕಿದ್ದಂತೆ ಅನಾರೋಗ್ಯ ಕಾಡಿತು. ತಾಯಿ ಏನೋ ಸಂಚು ಮಾಡಿ ಊರಿಗೆ ಕರೆಸಿರಬೇಕು, ಅಲ್ಲಿ ಏನೋ ಮಾಡಿದ್ದಾರೆ ಎಂದು ಕಿಶೋರಿ ಹೇಳಿದಾಗ ಜಗದೀಶ ಅದನ್ನು ನಂಬಲಿಲ್ಲ. ಆದರೆ ತಾನು ಹೋಗಿದ್ದ ಸಂದರ್ಭದಲ್ಲಿ ಬಂದಿದ್ದ ಮಂತ್ರವಾದಿಯ ಯೋಚನೆಯಾಗಿ ಕಿಶೋರಿಯ ಮಾತು ನಿಜವಿರಬೇಕು ಅನ್ನಿಸಿತು. ಬೆಳ್ಮಣ್ಣಿನ ತನ್ನ ಮನೆಯಲ್ಲಿ ತನಗೆ ಮಾಡಿಸಿದ ಮಂತ್ರ ಮತ್ತು

ಹೊಟ್ಟೆಗೆ ಹಾಕಿದ ವಿಷದ ಪರಿಣಾಮವಾಗಿ ಜಗದೀಶನ ಆರೋಗ್ಯ ತೀರ ಹದಗೆಟ್ಟು ಆಸ್ಪತ್ರೆ ಸೇರುವಂತಾಯಿತು. ತನಗೆ ವಿಷ ಕೊಟ್ಟಿದ್ದರೂ ತಾಯಿಯ ಮುಖವನ್ನು ನೋಡಬೇಕೆಂಬ ತನ್ನ ಬಯಕೆಯನ್ನು ಕಿಶೋರಿಯೊಂದಿಗೆ ತಿಳಿಸುತ್ತಾನೆ. ತನ್ನ ಗರ್ಭಿಣಿಯಾದ ಹೆಂಡತಿಯನ್ನು ಬಿಟ್ಟು ಇಹಲೋಕವನ್ನು ತ್ಯಜಿಸುವ ಜಗದೀಶನ ಕರುಣಾಜನಕ ಕಥೆಯೊಂದಿಗೆ ಕಾದಂಬರಿ ಕೊನೆಗೊಳ್ಳುತ್ತದೆ.

ಪ್ರಾಮಾಣಿಕ, ಕಳಂಕರಹಿತವಾದ ಜಗದೀಶನ ಮನಸ್ಸೇ ಅವನ ಸಾವಿಗೆ ಕಾರಣವಾಗಿ ಕಂಡುಬರುತ್ತದೆ. ಹರಿಜನ ಹೆಣ್ಣಿನೊಂದಿಗೆ ಬದುಕುತ್ತಿರುವ ತನ್ನ ಮಗ ಇಷ್ಟವಾಗದ ತಾಯಿಗೆ ತನ್ನ ಜಾತಿನಿಷ್ಠೆಯೇ ಮೇಲಾಗಿ ಕಾಣುತ್ತದೆ. ಅದು ಆಕೆ ತನ್ನ ಮಗನ ಮೇಲೆ ತೋರುವ ಪ್ರತಿರೋಧ ಮಾತ್ರವಾಗಿರದೆ ಅನ್ಯ ಜಾತಿಯ ಹೆಣ್ಣೊಬ್ಬಳ ಮೇಲೆ ತೋರುವ ಪ್ರತಿರೋಧವಾಗಿಯೂ ಕಂಡು ಬರುತ್ತದೆ. ಹೆಣ್ಣಿನ ಸುಂದರವಾದ ಬದುಕನ್ನು ಕಸಿದುಕೊಂಡು ಆಕೆ ದುಃಖ ತುಂಬಿದ ಬದುಕನ್ನು ಬದುಕುವಂತೆ ಮಾಡುವ ಹೆಣ್ಣೊಬ್ಬಳ ಪ್ರತಿಕಾರದ ಚಿತ್ರಣವನ್ನೂ ಈ ಕಾದಂಬರಿ ನೀಡುತ್ತದೆ.

ಬ್ರಾಹ್ಮಣ್ಯವನ್ನು ವಿರೋಧಿಸುವ ಜಗದೀಶನ ಮನಸ್ಸನ್ನು ಪರಿವರ್ತಿಸುವ ಪ್ರಯತ್ನ ಆತನ ಕಾಲೇಜಿನಲ್ಲಿ ಹಾಗೂ ಮನೆಯಲ್ಲಿ ನಡೆದರೂ ಅದ್ಯಾವುದನ್ನು ಪುರಸ್ಕರಿಸದ ಜಗದೀಶನನ್ನು ನಾಶಪಡಿಸಿದರೆ ತಪ್ಪೇನಿಲ್ಲ ಎಂಬ ಭಾವನೆ ಆತನ ಆತ್ಮೀಯರಲ್ಲೂ ಮೂಡುತ್ತದೆ. ತಮ್ಮ ಜಾತಿ, ಕುಲ, ಸಂಪ್ರದಾಯವನ್ನು ಉಳಿಸಿಕೊಳ್ಳಲು ತಮ್ಮ ಮಾನವೀಯತೆಯನ್ನು ಕಳೆದುಕೊಳ್ಳಲೂ ಅವರು ಹಿಂಜರಿಯುವುದಿಲ್ಲ. ಜಗದೀಶನನ್ನು, ಅವನ ತತ್ವಗಳನ್ನು ನೇರಮಾರ್ಗದಲ್ಲಿ ವಿರೋಧಿಸಲು ಸಾಧ್ಯವಾಗದಿದ್ದಾಗ ಕುತಂತ್ರದ ಮೂಲಕ ಪ್ರತಿರೋಧ ಒಡ್ಡುತ್ತಾರೆ, ನಾಶಪಡಿಸುತ್ತಾರೆ. ಜಗದೀಶ ಸಾಯುವ ಸಂದರ್ಭದಲ್ಲಿ ಕಿಶೋರಿ ಗರ್ಭಿಣಿಯಾಗಿರುವುದು ಜಗದೀಶನ ತತ್ವ, ವಿಚಾರ ಮುಂದೆಯೂ ಬೆಳೆಯುತ್ತದೆ ಎಂಬ ಸಾಂಕೇತಿಕ ಅರ್ಥವನ್ನು ನೀಡುತ್ತದೆ. ಸಮಾಜದ ಕಟ್ಟುಪಾಡು, ಜಾತಿವ್ಯವಸ್ಥೆಯನ್ನು ಮೀರಿ ಬದುಕುವ ಮಾನವೀಯತೆಯ ಪ್ರತಿನಿಧಿಯಾದ ಜಗದೀಶನನ್ನು ಸಮಾಜ ವಿರೋಧಿಸುತ್ತದೆ.

ಕೆ.ಟಿ.ಗಟ್ಟಿಯವರ ಆರಂಭದ ಕಾದಂಬರಿಗಳಲ್ಲಿ ಕಂಡುಬರುವ ಪ್ರತಿರೋಧದ ವಿವಿಧ ನೆಲೆಗಳು ನಂತರದ ಕಾದಂಬರಿಗಳಲ್ಲಿ ಬದಲಾಗಿರುವುದನ್ನು ಕಾಣಬಹುದು. ಸಮಾಜದಲ್ಲಿ ಕಾಲಕಾಲಕ್ಕೆ ನಡೆಯುವ ಬದಲಾವಣೆಗಳು ಇದಕ್ಕೆ ಕಾರಣವಾಗಿರಬಹುದು. ಕಳೆದ ಶತಮಾನದ ಆರಂಭದಲ್ಲಿದ್ದಷ್ಟು ಜಾತಿಪದ್ಧತಿ, ಗೊಡ್ಡು ಸಂಪ್ರದಾಯಗಳು, ಮೂಢ

ನಂಬಿಕೆಗಳು ಇತ್ತೀಚಿನ ದಿನಗಳಲ್ಲಿ ಇಲ್ಲದಿರುವುದು ಕಂಡುಬರುತ್ತದೆ. ಕೇವಲ ಕೆಲವರ ಸ್ವತ್ತಾಗಿದ್ದ ವಿದ್ಯೆ ಈಗ ಎಲ್ಲರ ಆಸ್ತಿಯಾಗಿದೆ. ಜಾಗತೀಕರಣದ ಈ ದಿನಗಳಲ್ಲಿ ಮನುಷ್ಯ ಜಗತ್ತನ್ನು ಹತ್ತಿರದಿಂದ ತಿಳಿಯುತ್ತಿದ್ದಾನೆ. ಕೆ.ಟಿ.ಗಟ್ಟಿಯವರು ಕೃತಿಯ ಮುನ್ನುಡಿಯಲ್ಲಿ ತಿಳಿಸಿರುವಂತೆ "ಎಲ್ಲಿ ಜನ ಸಾಮಾಜಿಕವಾಗಿ, ಆರ್ಥಿಕವಾಗಿ ಮುಂದುವರಿದಿದ್ದಾರೋ ಅಲ್ಲಿ ಈ ಧಾರ್ಮಿಕ ಅಥವಾ ಮತೀಯ ಜಿಗುಟುತನ ಇರುವುದಿಲ್ಲ. ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಮುಂದುವರಿದ ದೇಶಗಳಲ್ಲಿ ಧರ್ಮದ ಕುರಿತಾದ ಚರ್ಚೆ, ಕಲಹ, ತೀರಾ ಅಪರೂಪ. ಭಾರತದಲ್ಲೂ ಧರ್ಮ, ದೇವರು ದಿಂಡರು, ಮಸೀದಿ, ದೇವಾಲಯ ಇತ್ಯಾದಿಗಳ ಬಗ್ಗೆ ಇಷ್ಟೊಂದು ಬಡಕೊಳ್ಳಲು ಕಾರಣ ಆರ್ಥಿಕ ಮತ್ತು ಸಾಮಾಜಿಕ ಹಿಂದುಳಿತ."

(ಅದೇ, ಮುನ್ನುಡಿ)

## ೪.೪: ಅಮುಕ್ತ

ತಾಯಿಯನ್ನು ಕಳೆದುಕೊಂಡಂದಿನಿಂದ ಮಾವನ ಮನೆಯಲ್ಲಿದ್ದ ಉತ್ತಮ ಅಲ್ಲಿಂದಲೂ ಓಡಿಹೋಗುತ್ತಾನೆ. ತಾಯಿ ಸತ್ತ ಸಂದರ್ಭದಲ್ಲಿ ಉತ್ತಮನನ್ನು ಶಾಲೆಗೆ ಕಳುಹಿಸಿ ಚೆನ್ನಾಗಿ ನೋಡಿಕೊಳ್ಳುತ್ತೇನೆ ಎಂದಿದ್ದ ಮಾವ ಅವನನ್ನು ಕೆಲಸದ ಆಳಿನಂತೆ ದುಡಿಸಿಕೊಳ್ಳುತ್ತಾನೆ. ತಾನೂ ಶಾಲೆಗೆ ಹೋಗಿ ವಿದ್ಯೆ ಕಲಿಯಬೇಕೆಂದು ಬಯಸುತ್ತಾನೆ. ತನ್ನ ಮಾವನ ಮಕ್ಕಳು ಶಾಲೆಗೆ ಹೋಗಿ ವಿದ್ಯೆ ಕಲಿಯುವುದನ್ನು ಆತ ಸಹಿಸುತ್ತಿರಲಿಲ್ಲ. ಸ್ವಾರ್ಥ, ಕ್ರೂರ ಮನಸ್ಸಿನೊಂದಿಗೆ ಆತ ಮನೆ ಬಿಟ್ಟು ಓಡಿ ಹೋಗುತ್ತಾನೆ. ಆತನಿಗೆ ಒಂದು ನಿರ್ದಿಷ್ಟವಾದ ಗೊತ್ತು ಗುರಿ ಇರಲಿಲ್ಲ. ತನಗೆ ಎದುರಾಗಬಹುದಾದ ಸಮಸ್ಯೆಗಳ ಕಲ್ಪನೆ ಇರಲಿಲ್ಲ. ಆದರೆ ಯಾರೂ ಇಲ್ಲದ ಅನಾಥ ಪ್ರಜ್ಞೆ ಆತನನ್ನು ಕಾಡಿತು. ತನ್ನ ಮಾವನ ಅಟ್ಟಹಾಸಕ್ಕೆ ಓಡಿ ಹೋಗುವುದರ ಮೂಲಕ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾನೆ. ತಾಯಿಯ ನೆನಪು ಆತನನ್ನು ಕಾಡುತ್ತಿತ್ತು. ಓಡಿಹೋದ ಉತ್ತಮ ರಾತ್ರಿ ಬೆಸ್ತರ ಗುಡಿಸಲಿನಲ್ಲಿ ಸಿಕ್ಕಿಕೊಳ್ಳುತ್ತಾನೆ. ಗುಡಿಸಲಿನ ಹೆಂಗಸು ಆತನನ್ನು ದೈಹಿಕವಾಗಿ ಬಳಸಿಕೊಳ್ಳುತ್ತಾಳೆ. ಆ ಜನರ ಹೊಲಸು ಬದುಕು ಉತ್ತಮನಿಗೆ ಹಿಡಿಸುವುದಿಲ್ಲ. ತನ್ನನ್ನು ಆ ಜನ ತಮ್ಮ ಸ್ವಾರ್ಥಕ್ಕಾಗಿ ಬಳಸಿಕೊಳ್ಳುತ್ತಿರುವುದನ್ನು ಗಮನಿಸಿ ಅಲ್ಲಿಂದಲೂ ಪಲಾಯನಗೈಯುತ್ತಾನೆ. ಅಲ್ಲಿಂದ ಓಡಿದ ಆತ ಇನ್ನೊಂದು ಬೆಸ್ತ ಡೊಣಪರ ಕೈಗೆ ಸಿಕ್ಕುತ್ತಾನೆ. ಅವರು ಮೀನು ತಿನ್ನಲು ಒತ್ತಾಯಿಸಿದಾಗ ತಿರಸ್ಕರಿಸುತ್ತಾನೆ. ಆದರೆ ಅವರು ಉತ್ತಮನ ಜನಿವಾರವನ್ನು ಕಡಿದು, ಮೀನು ತಿನ್ನಿಸಿ ಶರಾಬು ಕುಡಿಸುತ್ತಾರೆ. ಅವನ ದೇಹವನ್ನು ಬಳಸಿಕೊಳ್ಳುತ್ತಾರೆ. ಇದು ಒಂದು

ರೀತಿಯಲ್ಲಿ ಪುರೋಹಿತಶಾಹಿಯ ವಿರುದ್ಧ ಕೆಳ ವರ್ಗದವರ ಪ್ರತಿಭಟನೆಯಾಗಿ ತೋರುತ್ತದೆ. ಉತ್ತಮನಿಗೆ ಈ ಜನರೊಂದಿಗಿನ ಬದುಕು ಭಯವನ್ನುಂಟುಮಾಡುತ್ತದೆ. ಮಾವನ ಮನೆ ಬಿಟ್ಟಾಗ ತಾನು ಶ್ರೀಮಂತನಾಗಿ ಶ್ರೀಮಂತರ ಮಗಳನ್ನು ಮದುವೆಯಾಗಿ ಸುಂದರವಾದ ಬದುಕನ್ನು ಕಟ್ಟಿಕೊಳ್ಳಬೇಕೆಂಬ ಕನಸು ಕಂಡಿದ್ದ.

ನಂತರ ಉತ್ತಮ ತನಗೆ ಪರಿಚಯವೇ ಇಲ್ಲದ ಊರಿಗೆ ಹೋಗುತ್ತಾನೆ. ಹಸಿವು ನಿದ್ರೆಯಿಂದ ಬಳಲುತ್ತಾ ಆ ಊರಿನ ದೇವಸ್ಥಾನವೊಂದಕ್ಕೆ ಹೋಗಿ ಅಲ್ಲಿ ಮಲಗುತ್ತಾನೆ. ಆ ಸಂದರ್ಭದಲ್ಲಿ ಅಲ್ಲಿಗೆ ಆಗಮಿಸಿದ ಬ್ರಾಹ್ಮಣನೊಬ್ಬ ಆತನನ್ನು ಎಬ್ಬಿಸಿ ಅನ್ನ ನೀಡುತ್ತಾನೆ. ತನ್ನ ಜೀವನ ನಿರ್ವಹಣೆಗಾಗಿ ಉದ್ಯೋಗವೊಂದನ್ನು ನೀಡುವಂತೆ ಕೇಳಿಕೊಂಡಾಗ ಆ ಬ್ರಾಹ್ಮಣನು ಆತನನ್ನು ಅಕ್ಕಮ್ಮನ ಮನೆಯಲ್ಲಿ ಉದ್ಯೋಗಕ್ಕೆ ಸೇರಿಸುತ್ತಾನೆ. ಸ್ವತಂತ್ರವಾದ ಬದುಕನ್ನು ಕಟ್ಟಿಕೊಳ್ಳಬೇಕೆಂಬ ಮಹದಾಸೆಯಿಂದ ಓಡಿ ಬಂದಿದ್ದ ಉತ್ತಮ ಅಕ್ಕಮ್ಮನ ಅನುಮತಿಯಂತೆ ರಾತ್ರಿ ಶಾಲೆಗೆ ಸೇರಿಕೊಳ್ಳುತ್ತಾನೆ. ಅಕಸ್ಮಾತ್ತಾಗಿ ಜನಿವಾರವನ್ನು ಕಳೆದುಕೊಂಡು ಮೀನು ತಿನ್ನಲು ಕಲಿತದ್ದು ಈಗ ಅನುಕೂಲಕರವಾಗಿ ಕಂಡುಬರುತ್ತದೆ. ಅನ್ನ, ಬಟ್ಟೆ, ಶಾಲೆಗೆ ಹೋಗುವ ಅನುಕೂಲಗಳು ಒದಗಿದಾಗ ಅಕ್ಕಮ್ಮನ ಮನೆ ತನ್ನ ಮಾವನ ಮನೆಗಿಂತಲೂ ಮೇಲು ಎಂಬ ಭಾವನೆ ಬರುತ್ತದೆ. ಬೇರೆಯಾದಂತಹ ಒಂದು ಬದುಕಿನ ಪದ್ಧತಿಯೊಂದಿಗೆ ಆತ ಒಗ್ಗಿಕೊಂಡು ಬಿಡುತ್ತಾನೆ. ದಿನ ಕಳೆದಂತೆ ಉತ್ತಮ ಅಕ್ಕಮ್ಮನ ಕುಟುಂಬದಲ್ಲಿ ಒಬ್ಬನಾಗಿ ಸೇರಿಬಿಡುತ್ತಾನೆ. ಅವನಿಗೆ ಅಕ್ಕಮ್ಮನ ಮಗಳಾದ ಚಂಚಲಳ ಮೇಲೆ ಪ್ರೀತಿ ಉಂಟಾಗುತ್ತದೆ. ಒಮ್ಮೆ ಚಂಚಲಳ ಜೊತೆಗಿದ್ದ ಉತ್ತಮನನ್ನು ಕಂಡ ಅಕ್ಕಮ್ಮ ಉತ್ತಮನನ್ನು ದೂರ ಕಳುಹಿಸುವ ಚಿಂತನೆ ನಡೆಸುತ್ತಾಳೆ. ಎಸ್ಸೆಸ್ಸೆಲ್ಸಿಯಲ್ಲಿ ಉತ್ತಮ ಅಂಕಗಳನ್ನು ಪಡೆದುಕೊಂಡ ಉತ್ತಮ ಮುಂದೆಯೂ ಓದು ಮುಂದುವರಿಸಲು ಪ್ರಯತ್ನಿಸುತ್ತಾನೆ. ಚಂಚಲಳೊಂದಿಗಿನ ಪ್ರೀತಿ ಆತನ ಓದಿಗೆ ಅಡ್ಡಿಯಾಗುತ್ತದೆ. ತನ್ನ ಕಾರ್ಯದಿಂದಾಗಿ ಅಕ್ಕಮ್ಮನ ಮನೆಯಿಂದ ಹೊರಹಾಕಲ್ಪಡುತ್ತಾನೆ. ಸ್ಮೃತಿಹೀನ ಸ್ಥಿತಿಯಲ್ಲಿದ್ದ ಉತ್ತಮನನ್ನು ರಬ್ಬರ್ ಎಸ್ಟೇಟಿನ ಮಾಲಕನಾದ ರಘುಪತಿ ತನ್ನ ಮನೆಗೆ ಕರೆದುಕೊಂಡು ಹೋಗುತ್ತಾನೆ. ಈ ಹಿಂದೆ ತಾನಿದ್ದ ಸ್ಥಳದಲ್ಲಿ ತನ್ನಿಂದಾದ ಪ್ರಮಾದದ ಸತ್ಯವನ್ನು ತಿಳಿಸಿದ್ದರೂ ಈಗ ರಘುಪತಿಯೊಂದಿಗೆ ತನ್ನ ವಿಚಾರಗಳನ್ನೆಲ್ಲಾ ತಿಳಿಸಿದರೆ ರಘುಪತಿಯ ಅಶ್ರಯದಿಂದ ವಂಚಿತನಾಗಬೇಕಾಗಬಹುದೆಂಬ ಆತಂಕ ಆತನನ್ನು ಕಾಡುತ್ತದೆ. ಆದರೆ ಕ್ರಮೇಣ ರಘುಪತಿಯ ಎಸ್ಟೇಟಿನಲ್ಲಿ ಉತ್ತಮ ಸ್ಥಾನವನ್ನು ಗಳಿಸುವಲ್ಲಿ ಸಫಲನಾಗುತ್ತಾನೆ. ತನ್ನ ವಿದ್ಯಾಭ್ಯಾಸವನ್ನು ನಿಲ್ಲಿಸಿದ್ದ ಆತನಿಗೆ ಈಗ ರಘುಪತಿಯ ಬಿ.ಎ. ಸರ್ಟಿಫಿಕೇಟನ್ನು ನೋಡಿ ತಾನು ಅಂತಹ ಪದವಿಯನ್ನು

ಪಡೆಯಬೇಕೆಂಬ ಹಂಬಲವುಂಟಾಗುತ್ತದೆ. ರಘುಪತಿಯ ಹೆಂಡತಿ ವಿಮಲಳಲ್ಲಿ ಉತ್ತಮ ಆಕರ್ಷಿತನಾಗಿದ್ದ. ಒಮ್ಮೆ ರಘುಪತಿಯ ದೂರದ ಸಂಬಂಧಿ ಸೇತುಮಾಧವನೊಂದಿಗೆ ವಿಮಲ ಇಟ್ಟುಕೊಂಡಿದ್ದ ಅನೈತಿಕ ಸಂಬಂಧವನ್ನು ಕಣ್ಣಾರೆ ನೋಡಿದ. ಈ ವಿಚಾರ ಸೇತುಮಾಧವ ಹಾಗೂ ವಿಮಲಳಿಗೆ ತಿಳಿಯಿತು. ಹಾಗಾಗಿ ಅವರ ಮಧ್ಯೆ ಹಿಂದೆ ಇದ್ದಂತಹ ಅನ್ಯೋನ್ಯತೆ ಹೊರಟು ಹೋಗಿ ದ್ವೇಷ ನೆಲೆಸಿತು. ಉತ್ತಮ ಸೇತುಮಾಧವನನ್ನು ದ್ವೇಷಿಸಲಾರಂಭಿಸಿದ. ಮನೆಯ ಅವ್ಯವಸ್ಥೆಗೆ ಉತ್ತಮನೇ ಕಾರಣ ಎಂದು ಊಹಿಸಿದ ರಘುಪತಿ ಉತ್ತಮನನ್ನು ಕೊಲೆಗೈಯಲು ತಂತ್ರ ರೂಪಿಸುತ್ತಾನೆ. ಆದರೆ ತನ್ನ ಪ್ರಾಣವನ್ನು ಉಳಿಸುವುದಕ್ಕೋಸ್ಕರ ಉತ್ತಮನೇ ರಘುಪತಿಯ ಕೊಲೆ ಮಾಡುತ್ತಾನೆ. ರಘುಪತಿಯ ಬಿ.ಎ. ಸರ್ಟಿಫಿಕೇಟು ಹಿಡಿದುಕೊಂಡು ಉತ್ತಮ ಪಲಾಯನಗೈಯುತ್ತಾನೆ. ಇಲ್ಲಿಯೂ ಹೆಣ್ಣಿನ ಕಾರಣದಿಂದಾಗಿಯೇ ಉತ್ತಮ ಸಮಸ್ಯೆಯನ್ನು ಅನುಭವಿಸುತ್ತಾನೆ. ತನ್ನನ್ನು ಕೊಲ್ಲಲು ಬಂದ ರಘುಪತಿಯಿಂದ ತನ್ನ ಪ್ರಾಣ ಕಾಪಾಡಿಕೊಳ್ಳುವುದಕ್ಕೋಸ್ಕರ ಆತನ ಕೊಲೆ ಮಾಡುತ್ತಾನೆಯೇ ಹೊರತು ಉದ್ದೇಶಪೂರ್ವಕವಾಗಿ ಈ ಕೊಲೆ ನಡೆಯುವುದಿಲ್ಲ. ಆದರೆ ಈ ಸಾವು ಉತ್ತಮನ ಮನಸ್ಸನ್ನು ತೀವ್ರವಾಗಿ ಕಾಡುತ್ತದೆ. ತನ್ನ ವ್ಯಕ್ತಿತ್ವದ ಪ್ರಶ್ನೆ ಆತನನ್ನು ಕಾಡುತ್ತದೆ. ಆತ ಹೊಸ ವ್ಯಕ್ತಿತ್ವವೊಂದರ ಹುಡುಕಾಟದಲ್ಲಿ ತೊಡಗುತ್ತಾನೆ.

ಮುಂಬಾಪುರಕ್ಕೆ ಹೊರಟ ಉತ್ತಮ ತನ್ನೊಂದಿಗೆ ರಘುಪತಿಯ ಸರ್ಟಿಫಿಕೇಟನ್ನೂ ತೆಗೆದುಕೊಂಡು ಹೋಗುತ್ತಾನೆ. ತನ್ನಲ್ಲಿದ್ದ ಹಣವನ್ನು ಬ್ಯಾಂಕೊಂದರಲ್ಲಿಟ್ಟು ರಘುಪತಿಯ ಸರ್ಟಿಫಿಕೇಟನ್ನು ಹಿಡಿದುಕೊಂಡು ಕೆಲಸದ ಹುಡುಕಾಟ ಆರಂಭಿಸುತ್ತಾನೆ. ತಾನು ಎರಡು ಹೆಸರಿನಲ್ಲಿ ವ್ಯವಹರಿಸುವುದು ಯಾರಿಗಾದರೂ ತಿಳಿದರೆ ತನ್ನ ಸ್ಥಿತಿಯೇನಾಗಬಹುದೆಂಬ ಅಂಜಿಕೆ ಆತನಲ್ಲಿ ಇರುತ್ತದೆ. ತನ್ನೊಂದಿಗೆ ವಿಶ್ವಾಸದಿಂದ ವ್ಯವಹರಿಸುತ್ತಿದ್ದ ಪವಿತ್ರನ್ ಒಂದು ಫ್ಯಾಕ್ಟರಿಯಲ್ಲಿ ಕೆಲಸವನ್ನು ಕೊಡಿಸುತ್ತಾನೆ. ಆದರೆ ಪವಿತ್ರನ್ ಕೊನೆಗೆ ಅಪಾಯಕಾರಿಯಾಗಿ ಪರಿಣಮಿಸುತ್ತಾನೆ. ಆ ಹೊತ್ತಿಗಾಗಲೇ ತನ್ನ ಸಂಗತಿಯನ್ನೆಲ್ಲಾ ಪವಿತ್ರನ್‌ಗೆ ಉತ್ತಮ ತಿಳಿಸಿಯಾಗಿರುತ್ತದೆ. ಅವರಿಬ್ಬರಿಗೆ ಜಗಳವಾಗುತ್ತದೆ. ಪವಿತ್ರನ್ ಕಂಪೆನಿಗೆ ಉತ್ತಮನ ಮೋಸವನ್ನು ತಿಳಿಸಿಬಿಡುತ್ತಾನೆ. ಇದರಿಂದ ಹೆದರಿದ ಉತ್ತಮ ತಾನು ಪ್ರೀತಿಸುತ್ತಿದ್ದ ಚಂಚಲಳಿಗೂ ತಿಳಿಸದೆ ಮುಕ್ತಾಪುರಕ್ಕೆ ಓಡಿ ಹೋಗುತ್ತಾನೆ. ತನಗಾಗಿ ಕಾದು ಕುಳಿತಿದ್ದ ಚಂಚಲ ಬ್ಯಾಂಕೊಂದರಲ್ಲಿ ಸಿಕ್ಕಿದಾಗ ಆಕೆಯೊಂದಿಗೆ ಬದುಕು ಸಾಗಿಸಬಹುದು, ಮುಂದೆ ತನ್ನ ಬದುಕು ಚೆನ್ನಾಗಿ ನಡೆಯಬಹುದೆಂದು ಯೋಚಿಸಿದ್ದೆಲ್ಲಾ ತಳೆಕೆಳಗಾಗುತ್ತದೆ. ಮುಕ್ತಾಪುರದಲ್ಲಿ ಹೋಟೆಲಿನ ಯಜಮಾನ ಕೊಟ್ಟಾರದ ಮಧು ಎಂಬವನ ಪರಿಚಯವಾಗುತ್ತದೆ. ಮುಂದೆ ಆತನ

ಸಹಾಯದಿಂದ ತಾನೂ ಹೋಟೆಲೊಂದನ್ನು ಖರೀದಿಸುತ್ತಾನೆ. ದಿನ ಕಳೆದಂತೆ ವ್ಯಾಪಾರದ ವಿಷಯದಲ್ಲಿ ಮಧುವಿನೊಂದಿಗೆ ವೈಮನಸ್ಯ ಆರಂಭವಾಗುತ್ತದೆ. ಹೆಣ್ಣುಗಳನ್ನು ಬೇರೆಡೆಗೆ ಮಾರುವ ವ್ಯಾಪಾರ ನಡೆಸುತ್ತಿದ್ದ ಮಧು ತಾನು ಪ್ರೀತಿಸುತ್ತಿದ್ದ ಮಾಲಾಳನ್ನೇ ಮಾರಾಟ ಮಾಡುವ ಪ್ರಯತ್ನ ನಡೆಸುತ್ತಾನೆ. ಈ ವಿಚಾರ ಉತ್ತಮನಿಗೆ ತಿಳಿದು ಮಧು-ಉತ್ತಮರ ಮಧ್ಯೆ ಜಗಳವಾಗುತ್ತದೆ. ಮರುದಿನ ಉತ್ತಮನ ಹೋಟೆಲಿನ ಹಿಂಬದಿಯಲ್ಲಿ ಮಾಲಾ ಸತ್ತು ಬಿದ್ದಿರುತ್ತಾಳೆ. ತನ್ನ ಬಳಿಗೆ ವಿಚಾರಣೆಗಾಗಿ ಬಂದ ಪೋಲೀಸಿನವರೊಂದಿಗೆ ಉತ್ತಮ ತನಗೆ ಮಾಲಾಳೊಂದಿಗಿದ್ದ ಸಂಬಂಧವನ್ನು ತಿಳಿಸುತ್ತಾನೆ. ತನ್ನ ಸಂಗತಿಯನ್ನೆಲ್ಲಾ ತಿಳಿಸುತ್ತಾನೆ. ಇದರಿಂದ ಅಪರಾಧಿಯಾಗಿ ಉತ್ತಮನಿಗೆ ಜೈಲು ಶಿಕ್ಷೆಯಾಗುತ್ತದೆ. ಇಲ್ಲಿಯೂ ಉತ್ತಮ ಹೆಣ್ಣಿನ ಕಾರಣದಿಂದ ಸಮಸ್ಯೆಯ ಸುಳಿಗೆ ಸಿಕ್ಕಿಕೊಳ್ಳುತ್ತಾನೆ.

ಉತ್ತಮ ಬದುಕಿನಲ್ಲಿ ಶಿಸ್ತು ಇಲ್ಲದ ವ್ಯಕ್ತಿ. ಅವನಲ್ಲಿ ಸಾಮರ್ಥ್ಯ, ಪತಿಭೆ ಇದ್ದರೂ ಅವನಲ್ಲಿದ್ದ ಅತೃಪ್ತಿ ಬದುಕಿನುದ್ದಕ್ಕೂ ಅವನನ್ನು ಕಾಡುತ್ತದೆ. ಸಮಸ್ಯೆಯ ಸುಳಿಯಲ್ಲಿ ಒದ್ದಾಡುವ ಉತ್ತಮ ಅದರಿಂದ ಮುಕ್ತನಾಗುವುದೇ ಇಲ್ಲ.

## ೪.೫: ಮೃತ್ಯೋರ್ಮಾ ಅಮೃತಂಗಮಯ

ಕೆ.ಟಿ.ಗಟ್ಟಿಯವರ 'ಮೃತ್ಯೋರ್ಮಾ ಅಮೃತಂಗಮಯ' ಕಾದಂಬರಿಯು ಮುನ್ನೂರ ಎಂಬತ್ತೈದು ಪುಟಗಳ ದೀರ್ಘ ವ್ಯಾಪ್ತಿಯನ್ನು ಹೊಂದಿದೆ. ಈ ಕಾದಂಬರಿಯು ಸುಧಾ ವಾರಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿದೆ. ಕಾದಂಬರಿಯು ಮುಖ್ಯವಾಗಿ ಜಾತಿ ವ್ಯವಸ್ಥೆಯನ್ನು ವಿರೋಧಿಸುತ್ತದೆ.

ರಾಮಕೃಷ್ಣರಾಯರು ದುರ್ಗಾಪುರದ ಎಂ.ಎಲ್.ಎ., ಸಮಾಜ ಕಲ್ಯಾಣ ಖಾತೆಯ ಸಚಿವರು. ಪಕ್ಷದಲ್ಲಿನ ರಾಜಕೀಯ ಬದಲಾವಣೆಯಿಂದಾಗಿ ಸರಕಾರ ಪತನಗೊಂಡಿತ್ತು. ಅವರಿಗೆ ಆರತಿ, ಅರುಣಾ, ಸುರೇಂದ್ರ ಎಂಬ ಮೂವರು ಮಕ್ಕಳು. ಗಂಡ ರಾಜಕೀಯವಾಗಿ ಬೆಂಗಳೂರಿನಲ್ಲಿ ನೆಲೆಸಬೇಕಾಗಿ ಬಂದರೂ ಪತ್ನಿ ರೇಣುಕಮ್ಮ ದುರ್ಗಾಪುರದ ತಮ್ಮ ಮನೆಯಲ್ಲಿಯೇ ವಾಸಿಸುತ್ತಿದ್ದರು. ರಾಮಕೃಷ್ಣರಾಯರ ತಂದೆ ಗಣಪತಿರಾಯರು ತಮ್ಮ ಇಬ್ಬರು ಮಕ್ಕಳಿಗೆ ಹತ್ತು ತಲೆಮಾರು ಕುಳಿತು ಉಣ್ಣಲು ಬೇಕಾದಷ್ಟು ಆಸ್ತಿ ಮಾಡಿ ಹಾಕಿದ್ದರು. ತಮ್ಮ ಗಂಗಾಧರರಾಯ ಅತ್ತೂರಿನಲ್ಲಿ ತನ್ನ ತಂದೆಯಿಂದ ತನಗೆ ಬಂದ ಆಸ್ತಿಯನ್ನು ನೋಡಿಕೊಂಡಿದ್ದರು. ಗಂಗಾಧರರಾಯರಿಗೆ

ಏಳು ಮಕ್ಕಳು. ರಾಮಕೃಷ್ಣರಾಯರ ಮಗ ಸುರೇಂದ್ರನಿಗೆ ಐ.ಎ.ಎಸ್. ಅಧಿಕಾರಿಯಾಗಬೇಕೆಂಬ ಆಸೆ. ತಂದೆಯ ಮಂತ್ರಿ ಪದವಿ, ರಾಜಕೀಯದ ಬಗ್ಗೆ ಅವನಿಗೆ ವಿಶೇಷ ಆಸಕ್ತಿಯಿಲ್ಲ. ಮನೋಹರ ಸುರೇಂದ್ರನ ಮಿತ್ರ. ತಂದೆಯನ್ನು ಕಳೆದುಕೊಂಡು ಕಷ್ಟಪಟ್ಟು ಬಿ.ಎಸ್ಸಿ. ಮಾಡುತ್ತಿದ್ದ. ಕಾಲೇಜು ಡೇ ಕಾರ್ಯಕ್ರಮದ ಅಧ್ಯಕ್ಷರಾಗಿ ಬರುವ ವಿಚಾರದ ಬಗ್ಗೆ ಮಾತನಾಡಲು ರಾಮಕೃಷ್ಣರಾಯರಲ್ಲಿಗೆ ಬಂದಿದ್ದ ಮನೋಹರನಿಗೆ ರೇಣುಕಮ್ಮ ಒತ್ತಾಯ ಮಾಡಿ ಕಾಫಿ ನೀಡಿದಳು. ಚಿಕ್ಕಂದಿನಿಂದಲೇ ಮನೋಹರ ಅಲ್ಲಿಗೆ ಬಂದಾಗಲೆಲ್ಲಾ ತಾನು ತಿಂದ ತಿಂಡಿ ತೀರ್ಥದ ತಟ್ಟೆ ಲೋಟಗಳನ್ನು ತೊಳೆದಿರಿಸಬೇಕಾಗಿತ್ತು. ಸುರೇಂದ್ರ ಮನೋಹರನ ಮನೆಯಲ್ಲಿ ಏನನ್ನೂ ತಿನ್ನುತ್ತಿರಲಿಲ್ಲ. ಮನೋಹರ ಅಲ್ಲಿ ಊಟ ಮಾಡಿದಾಗ ಉಂಡ ಎಲೆ ತೆಗೆದು ಉಂಡ ಸ್ಥಳಕ್ಕೆ ಸೆಗಣಿ ಸಾರಿಸಬೇಕಾಗಿತ್ತು. ಕಾಫಿ ಕುಡಿದ ಲೋಟವನ್ನು ಕವಚಿ ಇಡಬೇಕಾಗಿತ್ತು. ಕೆಲವೊಮ್ಮೆ ಮನೋಹರನಿಗೆ ಈ ವಿಷಯ 'ನೀನು ಶೂದ್ರ' ಎಂದು ಬೊಟ್ಟಿಟ್ಟು ತೋರಿಸುವ ಕ್ರಮವಾಗಿ ತೋರಿ ಬಂತು. ಈ ಕ್ರಮಕ್ಕೆ ಸಿಟ್ಟೂ ಬರುತ್ತಿತ್ತು. ಹಾಗಾಗಿ ಮನೋಹರ ಸುರೇಂದ್ರನ ಮನೆಯಲ್ಲಿ ನೀರನ್ನು ಕೂಡಾ ಮುಟ್ಟುವುದಿಲ್ಲವೆಂದು ತೀರ್ಮಾನಿಸಿದ್ದ. ಸುರೇಂದ್ರ ಒಂದು ದಿನ ಮನೋಹರನ ಮನೆಯಲ್ಲಿ ನೀಡಿದ ಕಾಫಿ ಕುಡಿಯುವಂತೆ ಹೇಳಿದರೂ ಸುರೇಂದ್ರ ಬೇಡವೆಂದು ಹಠ ಹಿಡಿದಿದ್ದ. ಇದರಿಂದಾಗಿ ಸಿಟ್ಟುಗೊಂಡ ಮನೋಹರ "ಹೋಟೇಲಲ್ಲಿ ಯಾರ್‍ಯಾರು ಮಾಡಿದ್ದು ಆಗುತ್ತೆ. ನೂರಾರು ಜನ ಕಚ್ಚಿ ಕುಡಿದ ಗ್ಲಾಸು, ತಿಂದ ತಟ್ಟೆ ಆಗುತ್ತೆ. ಬ್ರಾಹ್ಮಣರ ಹೋಟೇಲು ಎಂದು ಬೋರ್ಡು ಇದ್ದರೆ ಸಾಕು. ಆದರೆ ನಮ್ಮ ಮನೆಯಲ್ಲಿ ಒಂದು ಲೋಟ ಹಾಲು ಕೂಡಾ ಕುಡಿಯೋಕಾಗೊಲ್ಲ! ನಾವು ಶೂದ್ರರು ನೀವು ಬ್ರಾಹ್ಮಣರು ಅಂತ ತೋರಿಸಿಕೊಳ್ಳೋದಕ್ಕೆ ತಾನೇ ಹೀಗೆ ? ಹಿಂದಿನ ಕಾಲದವರ ಮಾತು ಬೇರೆ, ಈಗಿನವರಾದರೂ ಸ್ವಲ್ಪ ಬುದ್ಧಿ ಉಪಯೋಗಿಸದಿದ್ದರೆ ನಮ್ಮ ಕೊಳಕು ಸಾಮಾಜಿಕ ಪದ್ಧತಿ ಎಂದೂ ಬದಲಾಗುವುದಿಲ್ಲ"

**(ಮೃತ್ಯೋರ್ಮಾ ಅಮೃತಂಗಮಯ, 1981. ಪುಟ 19)**

ಎಂದಿದ್ದ. ಸುರೇಂದ್ರ ಆತ ನೀಡಿದ ಕಾಫಿ ಕುಡಿಯುತ್ತಾ ಕಾಲೇಜಿಗೆ ಸೇರಿದ್ದೇ ದೊಡ್ಡ ಕ್ರಾಂತಿಕಾರಿಯಾಗಿಬಿಟ್ಟೆ ಎಂದಾಗ ಆತನ ಪ್ರತಿರೋಧ ಭುಗಿಲೇಳುತ್ತದೆ. "ನಾನು ನಿಮ್ಮ ಮನೆಯಲ್ಲಿ ಕೊಟ್ಟಿದ್ದೆಲ್ಲಾ ತಿನ್ನೋದಿಲ್ವೆ ? ತಿಂದ ಪಾತ್ರೆಯನ್ನು ತೊಳೆದು ಇರಿಸೋದಿಲ್ವೆ? ಇದೆಲ್ಲಾ ಯಾವತ್ತು ಯಾರು ಆರಂಭಿಸಿದ ಕ್ರಮ ? ಏತಕ್ಕಾಗಿ ? ಶೂದ್ರರು ಅಷ್ಟೊಂದು ಕೊಳಕು ಅಂತಲೇ ? ಬ್ರಾಹ್ಮಣರು ದೇವಲೋಕದಿಂದ ಬಂದವರು ಅಂತಲೆ ? ಆ ವೆಂಕಟರಮಣ ದೇವಸ್ಥಾನದ ಪೂಜೆ ಭಟ್ರು ಕೆರೆಯಲ್ಲಿ ಸ್ನಾನ ಮಾಡಿಕೊಂಡು ಒದ್ದೆ ಪಂಚೆ ಉಟ್ಕೊಂಡು ದೇವಾಲಯದೊಳಕ್ಕೆ ಹೋಗುವುದನ್ನು ನೋಡಿದ್ದೀಯ ? ಅರ್ಧ ಕಿಲೋ ಸೋಪು ಹಾಕಿದರೂ ತೊಲಗದಷ್ಟು ಕೊಳೆ ಆ ಪಂಚೆಯಲ್ಲಿದೆ. ಇದನ್ನು ಕಂಡು

ಆ ದೇವರು ಹೇಗೆ ಸುಮ್ಮನಿರುತ್ತಾನೋ ಅವನಿಗೇ ಗೊತ್ತು ಎನ್ನುತ್ತಾನೆ. ಆತ ತನ್ನಲ್ಲೇ ಯೋಚಿಸುತ್ತಾ– "ಶ್ರೀಮಂತರಾದ ಶೂದ್ರರು ತಮ್ಮ ಬ್ರಾಹ್ಮಣ ಸ್ನೇಹಿತರ ಮನೆಯಲ್ಲಿ ಊಟ ಮಾಡುವುದನ್ನು ಆದಷ್ಟು ತಪ್ಪಿಸಿಕೊಳ್ಳುತ್ತಿದ್ದರು. ಹಾಗೆಲ್ಲಾದರೂ ಊಟ ಮಾಡಬೇಕಾಗಿ ಬಂದರೆ ಬ್ರಾಹ್ಮಣರ ಮನೆಗೆಲಸದ ಶೂದ್ರ ಹೆಂಗಸರನ್ನು ಅವರ ಮುಸುರೆಯೆತ್ತಲು ಅಣಿಯಾಗಿಡಲಾಗುತ್ತಿತ್ತು. ಹೀಗೆಲ್ಲಾ ಮಾಡಿ ಬ್ರಾಹ್ಮಣರು ತಮ್ಮ ಬ್ರಾಹ್ಮಣತ್ವವನ್ನು ಉಳಿಸಿಕೊಳ್ಳುತ್ತಿದ್ದರು. ಶೂದ್ರ ಅಧಿಕಾರಿಯೋ ಬ್ರಾಹ್ಮಣನೋ ಬಂದರೆ ಅವನು ಹೊರಟು ಹೋದ ಮೇಲೆ ಅವನ ತಟ್ಟೆಯನ್ನು ಕೆಲಸದಾಳಿನ ಮೂಲಕ ತೆಗೆಸಿ, ಸೆಗಣಿ ಹಾಕಿಸಿ ಶುದ್ಧಗೊಳಿಸುತ್ತಿದ್ದರು. ಹೀಗೆಲ್ಲಾ ಮಾಡಿ ತಾವು ಸಾಧಿಸುವುದಾದರೂ ಏನು ಎಂದು ಅವರು ಯೋಚಿಸುತ್ತಿರಲಿಲ್ಲ. ಶೂದ್ರರಿಗೆ ಅಂಟಿರುವ ಅಮಾನುಷ ಕೊಳಕು ಏನು, ಬ್ರಾಹ್ಮಣರೊಳಗೆ ಅಡಗಿರುವ ಶುಚಿತ್ವವು ಏನು ಎಂದು ಮನೋಹರ ಆಶ್ಚರ್ಯ ಪಡುತ್ತಿದ್ದ". ಆತನಿಗೆ ಕ್ರಿಶ್ಚಿಯನ್ನರಂತೆ, ಅರಬರಂತೆ ಭಾರತ ದೇಶದವರೆಲ್ಲಾ

**(ಅದೇ, ಪುಟ 21)**

ಒಂದೇ ಜನಾಂಗದವರಾಗಿ ಜೀವಿಸಬೇಕು ಎಂಬ ಆಸೆ.

ಚಿಕ್ಕಂದಿನಿಂದಲೇ ಮನೋಹರ, ಮನೋಹರನ ತಾಯಿ, ತಂದೆ ಎಲ್ಲರೂ ಸುರೇಂದ್ರ, ಆರತಿ, ಅರುಣ ಸಣ್ಣ ಸಣ್ಣ ಮಕ್ಕಳಾಗಿದ್ದಾಗಿನಿಂದಲೂ ಅವರನ್ನು ನೀವು ಎಂದೇ ಸಂಬೋಧಿಸಿಕೊಂಡು ಬಂದಿದ್ದರು. ಆದರೆ ಅವರೆಲ್ಲರೂ ಮನೋಹರ ಹಾಗೂ ಅವನ ಮನೆಯವರೆಲ್ಲರನ್ನು 'ನೀನು' ಎಂದೇ ಸಂಬೋಧಿಸುತ್ತಿದ್ದರು. ಮನೋಹರ ತಾನು ಒಂದು ದಿನ ಈ ಬ್ರಾಹ್ಮಣ ಹುಡುಗಿಯರ ವಿಶಿಷ್ಟವಾದ ಅಂತಸ್ತನ್ನು ಕೆಳಗಿಳಿಸಬೇಕು ಎಂದು ಯೋಚಿಸುತ್ತಿದ್ದ. ತನ್ನನ್ನು ನೀನು ಎಂದಾಗ ಅವರನ್ನು ನೀನು ಎಂದು ಕರೆಯಬೇಕೆಂದು ಹಲವಾರು ಸಲ ತೀರ್ಮಾನಿಸಿದ್ದ. ಸಂಪ್ರದಾಯವನ್ನು ಮುರಿಯಬೇಕು ಅಂದುಕೊಂಡಿದ್ದ. ಆದರೆ ಅದು ಸಾಧ್ಯವಾಗುತ್ತಿರಲಿಲ್ಲ.

ದುರ್ಗಾ ಆರ್ಟ್ಸ್ ಆಂಡ್ ಸೈನ್ಸ್ ಕಾಲೇಜಿನ ವಾರ್ಷಿಕೋತ್ಸವಕ್ಕೆ ರಾಮಕೃಷ್ಣರಾಯರು ಅಧ್ಯಕ್ಷತೆ ವಹಿಸಿದ್ದರು. ಅಲ್ಲಿ ಅವರ ರಾಜಕೀಯ ಭಾಷಣ ನಡೆದಿತ್ತು. ತಾನು ಇನ್ನು ಯಾವ ರಾಜಕೀಯ ಪಕ್ಷಕ್ಕೂ ಸೇರುವುದಿಲ್ಲ. ದೇಶದ ಅಭ್ಯುದಯಕ್ಕಾಗಿ, ಅಸಮಾನತೆಯನ್ನು ನಿರ್ಮೂಲನ ಮಾಡುವುದಕ್ಕಾಗಿ, ಹಳೆಯ ಗೊಡ್ಡು ನೀತಿ ಪಂಥಗಳನ್ನು ತೊಡೆದು ಹಾಕುವುದಕ್ಕಾಗಿ ಒಂದು ಜಾತ್ಯತೀತ ಜನಾಂಗದ ನಿರ್ಮಾಣಕ್ಕಾಗಿ ಕಾರ್ಯ ಪ್ರವೃತ್ತರಾಗಿರುವ ತರುಣರ ಹೆಗಲಿಗೆ ತನ್ನ ಶಕ್ತಿ ಸೇರಿಸುತ್ತೇನೆ ಎನ್ನುತ್ತಾರೆ. ಮನೋಹರನ ಕೋರಿಕೆಯಂತೆ ಆರತಿ ಕಾರ್ಯಕ್ರಮದಲ್ಲಿ ಹಾಡುತ್ತಾಳೆ. ಪರೀಕ್ಷೆ ಹತ್ತಿರ

ಬಂದ ಸಂದರ್ಭದಲ್ಲಿ ಆರತಿಯ ಮನೆಗೆ ಮನೊಹರ ಬಂದಾಗ ಗಣಿತದ ಸಮಸ್ಯೆಯನ್ನು ಬಿಡಿಸಲು ಆತನೊಂದಿಗೆ ಕೇಳಿಕೊಳ್ಳುತ್ತಾಳೆ. ಆಕೆಯೊಂದಿಗೆ ಮಾತನಾಡುತ್ತಾ ಅವನು ಆಕೆಯನ್ನು ನೀನು ಎಂದು ಸಂಬೋಧಿಸಿದ್ದ. ಅವರು ಪ್ರಾಯದ ತನ್ನ ತಾಯಿಯನ್ನು ನೀನು ಎಂದು ಸಂಬೋಧಿಸುವುದನ್ನು ನಿಲ್ಲಿಸಬೇಕು ಎಂದು ನಿರ್ಧರಿಸಿದ್ದ. ಸುರೇಂದ್ರ, ಆರತಿ ಮತ್ತು ಅರುಣಾಳೊಡನೆ ಸ್ನೇಹ, ಸಲುಗೆ, ಅನ್ಯೋನ್ಯತೆ ಇದ್ದರೂ ತನ್ನ ಮತ್ತು ಅವರ ನಡುವೆ ದೊಡ್ಡ ಕಂದರವೊಂದಿರುವಂತೆ ಅವನಿಗನ್ನಿಸುತ್ತಿತ್ತು. "ಅವರು ಬ್ರಾಹ್ಮಣರು, ತನ್ನನ್ನು ತನ್ನ ತಾಯಿಯನ್ನು 'ಶೂದ್ರರು' ಎಂಬ ದೃಷ್ಟಿಯಿಂದ ನೋಡುತ್ತಾರೆ. ಎದುರೆದುರು ಮಾತಾಡುವಾಗ 'ನೀನು' ಅನ್ನೋದು ಮಾತ್ರವಲ್ಲ, ಹಿಂದಿನಿಂದ 'ಅವು' ಎಂಬುದು ಅವರು ತಮಗೆ ಉಪಯೋಗಿಸುವ ಸಂಬೋಧನಾ ಶಬ್ದ ಎಂಬ ಸಂಗತಿ ಅವನನ್ನು ರೇಗಿಸುತ್ತಿತ್ತು".

**(ಅದೇ, ಪುಟ 44)**

ಶೂದ್ರ ವಿದ್ಯಾರ್ಥಿಗಳಿಗೆ ಕಡಿಮೆ ಅಂಕಗಳನ್ನೂ, ಬ್ರಾಹ್ಮಣ ವಿದ್ಯಾರ್ಥಿಗಳಿಗೆ ಹೆಚ್ಚು ಅಂಕಗಳನ್ನೂ ಕೊಡುವ ಬ್ರಾಹ್ಮಣ ಅಧ್ಯಾಪಕರೂ ಕಾಲೇಜಿನಲ್ಲಿದ್ದರು.

ಮನೋಹರನ ಚಿಕ್ಕಮ್ಮ ಗಂಗಾಧರರಾಯರ ಇಡು ಹೆಣ್ಣಾಗಿದ್ದಳು. "ಸ್ವಲ್ಪ ಯವ್ವನವಿದ್ದರೆ ಸರಿ, ಗಂಡ ಸತ್ತೊಡನೆ ನಾನು ನಿನ್ನನ್ನು ಇಟ್ಟುಕೊಳ್ಳುತ್ತೇನೆ ಅಂತ ಬ್ರಾಹ್ಮಣರು ಎಲ್ಲಾ ಶೂದ್ರರ ಮನೆಗೂ ಬರುತ್ತಾರೆ ಎಂದು ತಾಯಿ ಹೇಳಿದ್ದ ಮಾತನ್ನು ಮನೋಹರ ಕೇಳಿದ್ದನು. ಬ್ರಾಹ್ಮಣರಿಗೆ ಮೈ ಕೊಟ್ಟ ಹೆಣ್ಣುಗಳಿಗೆ ಮತ್ತು ಅವರಿಗೆ ಹುಟ್ಟಿದ ಮಕ್ಕಳಿಗೆ ಬೊಜ್ಜದ ಊಟಕ್ಕಿಂತ ಹೆಚ್ಚು ಏನೂ ಸಿಗುತ್ತಿರಲಿಲ್ಲ. ಕೆಲವು ಬ್ರಾಹ್ಮಣರಿಗೆ ಮೀನು ಮಾಂಸ ತಿನ್ನಬೇಕೆಂಬ ಇಚ್ಛೆಯನ್ನು ಪೂರೈಸಿಕೊಳ್ಳಲು ಈ ಇಡು ಹೆಣ್ಣಿನ ಮನೆ ಅನುಕೂಲವಾಗುತ್ತಿತ್ತು. ಆದರೆ ತಮ್ಮ ಸ್ವಂತ ಮನೆಯಲ್ಲಿ ತಮ್ಮ ಸ್ವಂತ ಹೆಂಡಂದಿರು ತಣ್ಣೀರಿನಲ್ಲಿ ಮಿಂದು, ಒದ್ದೆ ಬಟ್ಟೆಯಲ್ಲಿ ಅಡಿಗೆ ಮಾಡದೇ ಇದ್ದರೆ ಅವರಿಗೆ ಹಬ್ಬದ ಊಟ ರುಚಿಸುತ್ತಿರಲಿಲ್ಲ". ಶೂದ್ರರ ವಿಧವಾ ವಿವಾಹಕ್ಕೂ ಬ್ರಾಹ್ಮಣರು

**(ಅದೇ, ಪುಟ 45)**

ತಡೆಯಾಗುತ್ತಿದ್ದರು.

ಮ್ಯಾತಮ್ಯಾಟಿಕ್ಸ್ ಪ್ರಾಬ್ಲಮ್ ಬಗ್ಗೆ ಮಾತನಾಡಲು ಬಂದ ಆರತಿ ಮನೋಹರನ ತಾಯಿಯನ್ನು ಮೊದಲ ಬಾರಿಗೆ ಬಹುವಚನದಿಂದ ಸಂಬೋಧಿಸುತ್ತಾಳೆ. ಅವಳು ಕೊಟ್ಟ ಕಾಫಿ ಕುಡಿಯುತ್ತಾಳೆ. ಮನೋಹರನಿಗೆ ಬಿ.ಎಸ್‌ಸಿ. ಯಲ್ಲಿ ದ್ವಿತೀಯ ರ್‍ಯಾಂಕ್ ಬಂದಾಗ ರಾಮಕೃಷ್ಣರಾಯರು, ಸುರೇಂದ್ರ, ಆರತಿ, ಅರುಣ ಇವರೆಲ್ಲ ಎಂ.ಎಸ್‌ಸಿ.

ಮಾಡುವಂತೆ ಸಲಹೆ ನೀಡಿದರು. ತಾಯಿಯ ಒಪ್ಪಿಗೆಯೂ ಸಿಕ್ಕಿತು. ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಸುರೇಂದ್ರನಿಗೆ ಎಂ.ಎ. ಇಂಗ್ಲಿಷ್, ಮನೋಹರನಿಗೆ ಎಂ.ಎಸ್‌ಸಿ. ಫಿಸಿಕ್ಸ್‌ಗೂ ಸೀಟು ಸಿಕ್ಕಿತು. ಮನೋಹರನ ತಂದೆ ದೊಡ್ಡಣ್ಣ ಶೆಟ್ಟರು ರಾಮಕೃಷ್ಣರಾಯರನ್ನು ಬಹಳ ಗೌರವದಿಂದ ಕಾಣುತ್ತಿದ್ದರು. ತಂದೆ ಸತ್ತ ಮೇಲೆ ತಾಯಿ ಅವರ ಮನೆಗೆ ಹೋಗುವುದನ್ನೇ ನಿಲ್ಲಿಸಿದ್ದಳು. ರಾಮಕೃಷ್ಣರಾಯರು ಆಕೆಯನ್ನೂ ಇಡು ಹೆಣ್ಣಾಗಿ ಇರಿಸಿಕೊಳ್ಳಲು ಪ್ರಯತ್ನಿಸಿದ್ದರು. "ಸುಟ್ಟು ಹಾಕಬೇಕು ಈ ಸಂಪ್ರದಾಯವನ್ನು! ಮಾನವೀಯತೆಯನ್ನು ತಂದುಕೊಳ್ಳದ ಅನಾಗರಿಕ ಸಂಪ್ರದಾಯ ಇದು. ನಿಮ್ಮ ಎಂಜಲು ಪವಿತ್ರ. ನಮ್ಮ ಎಂಜಲು ಹೊಲಸು ಆಗೋದು ಹೇಗೆ ? ಎಂಜಲು ಎಲ್ಲಾ ಒಂದೇ" ಸುರೇಂದ್ರನೊಂದಿಗೆ ಮನೋಹರನು ಆಡಿದ ಮಾತುಗಳಲ್ಲಿ

**(ಅದೇ, ಪುಟ 72)**

ಸಂಪ್ರದಾಯದ ವಿರುದ್ಧ ಪ್ರತಿರೋಧವಿತ್ತು.



ರೇಣುಕಮ್ಮ ಮನೋಹರನನ್ನು ಮಗ ಸುರೇಂದ್ರನೊಂದಿಗೆ ಹೋಲಿಸತೊಡಗಿದಳು. ಆತನಲ್ಲಿ ಬ್ರಾಹ್ಮಣ ಗುಣಗಳು ಆಕೆಗೆ ಕಾಣಿಸಿದವು. ಬ್ರಾಹ್ಮಣತ್ವ ಜನ್ಮದಿಂದಲ್ಲ ಧರ್ಮದಿಂದ ಎಂಬ ಅರಿವು ಆಕೆಗಾಯಿತು. ಆದರೆ ಶೂದ್ರ ಸಮಾಜದ ಬಗ್ಗೆ ಆಕೆಯ ದೃಷ್ಟಿ ಬದಲಾಗಲಿಲ್ಲ. ರೇಣುಕಮ್ಮನ ದೃಷ್ಟಿಯಲ್ಲಿ ಮನೋಹರ ಒಬ್ಬ ಅರೆಬ್ರಾಹ್ಮಣನಾಗಿದ್ದ. ಕಾಲೇಜಿನಲ್ಲಿ ಹಿಸ್ಟರಿ ಲೆಕ್ಚರರ್ ಸುಧಾಕರ ಭಟ್ಟನಿಂದಾಗಿ ಆರತಿಗೆ ತಲೆನೋವಾಗತೊಡಗಿತು. ಸುಧಾಕರ ತನ್ನ ತಂದೆಯ ಮೂಲಕ ರಾಮಕೃಷ್ಣರಾಯರೊಂದಿಗೆ ಆರತಿಯನ್ನು ಮದುವೆಯಾಗಲು ಹೆಣ್ಣು ಕೇಳಿಸಿದ್ದ. ಆಕೆ ಮನೋಹರನಿಗೆ ಬರೆದ ಪತ್ರದಲ್ಲಿ ಸುಧಾಕರನ ಕಾಟವನ್ನು ತಿಳಿಸಿದ್ದಳು. ತಂದೆ ರಾಮಕೃಷ್ಣರಾಯರು ಆರತಿಯನ್ನು ಕರೆದು ಸುಧಾಕರ ಭಟ್ಟನಿಗೆ ಆಕೆಯನ್ನು ನೀಡಿ ಮದುವೆ ಮಾಡಿಸುವ ಪ್ರಸ್ತಾಪ ಎತ್ತುತ್ತಾರೆ. ಆರತಿ ಆತ ನನಗೆ ಇಷ್ಟವಿಲ್ಲವೆಂದು ತಿಳಿಸುತ್ತಾಳೆ. ರಾಮಕೃಷ್ಣರಾಯರು ಆಕೆಯನ್ನು ಮದುವೆಯಾಗುವಂತೆ ಒತ್ತಾಯಿಸುತ್ತಾರೆ. ಅಕ್ಕನ ವಿಚಾರ ತಿಳಿದು ಅರುಣಾಳಿಗೆ ತಂದೆಯ ಮೇಲೆ ಸಿಟ್ಟು ಬರುತ್ತದೆ. ತಂದೆ ಅರುಣಾಳೊಂದಿಗೆ ಸುಧಾಕರನನ್ನು ಮದುವೆಯಾಗಬೇಕೆಂದು ತಿಳಿಸಿದರು. ಆದರೆ ಅರುಣಾ ತಂದೆಯ ಮಾತನ್ನು ತಿರಸ್ಕರಿಸುತ್ತಾಳೆ. ಆರತಿಯನ್ನು ಪುನಃ ರಾಮಕೃಷ್ಣರಾಯರು ಮದುವೆಗೆ ಒತ್ತಾಯಿಸಿದರು. ಆಗದಿದ್ದರೆ ತಾನು ಸಾಯುವುದಾಗಿ ತಿಳಿಸಿದರು. ಆರತಿ ಅಣ್ಣನಿಗೆ ಫೋನ್ ಮಾಡಿ ವಿಷಯ ತಿಳಿಸಿದಳು. ಮನೋಹರನಿಗೆ ಈ ಬಗ್ಗೆ ಪತ್ರ ಬರೆದಳು. ಸುಧಾಕರ ಆರತಿಯನ್ನು ಕಾಲೇಜಿನ ತನ್ನ ವಿಭಾಗಕ್ಕೆ ಕರೆಸಿಕೊಂಡು ತನ್ನ ಊರಿನಲ್ಲಿ ನಡೆಯುವ ಕಾಲೇಜಿನ ಕಾರ್ಯಕ್ರಮಕ್ಕೆ ಬಂದು

ಹಾಡುವಂತೆ ತಿಳಿಸಿದ. ಸಿನಿಮಾಕ್ಕೆ ತನ್ನೊಂದಿಗೆ ಬರಲು ಆಹ್ವಾನಿಸಿದ. ಪರಿಣಾಮ ಅರುಣಾಳಿಂದ ಬೈಗುಳ ತಿನ್ನಬೇಕಾಯಿತು. ರೇಣುಕಮ್ಮನಿಗೆ ಅನಾರೋಗ್ಯ ಕಾಣಿಸಿಕೊಂಡಾಗ ಆಕೆಯನ್ನು ನೋಡುವ ನೆಪದಿಂದ ಬಂದ ಸುಧಾಕರಭಟ್ಟನಿಗೆ ರೇಣುಕಮ್ಮನನ್ನು ಆರೈಕೆ ಮಾಡುತ್ತಿದ್ದ ಜೆಸ್ಸಿಕ ಕಾಣಿಸಿದಳು. ಆಕೆಯ ಬಗ್ಗೆ ರೇಣುಕಮ್ಮನಿಂದ ತಿಳಿದುಕೊಂಡ. ನಂತರ ಐಸ್‌ಕ್ರೀಂ ಪಾರ್ಲರ್ ಒಂದರಲ್ಲಿ ಜೆಸ್ಸಿಕಾಳನ್ನು ಸುಧಾಕರ ಭೇಟಿಯಾದ. ಬೇಕು ಬೇಕೆಂದೇ ಆಕೆಯೊಂದಿಗೆ ಅತಿಯಾಗಿ ಮಾತನಾಡಿದ. ತಾನು ರಜೆಯಲ್ಲಿ ಬೆಂಗಳೂರಿಗೆ ಬರುವುದಾಗಿ ತಿಳಿಸಿದ.

ಪರೀಕ್ಷೆ ಮುಗಿದು ರಜೆ ಸಿಕ್ಕಿದೊಡನೆ ಸುರೇಂದ್ರ ಮನೋಹರರಿಬ್ಬರು ಊರಿಗೆ ಬಂದರು. ಲವಲವಿಕೆಯನ್ನೇ ಕಳೆದುಕೊಂಡಿದ್ದ ಅರುಣಾ, ಆರತಿಯರಲ್ಲಿ ಮತ್ತೆ ಹೊಸ ಹುರುಪು ಬಂತು. ತಂದೆ ಹೇಳಿದ ಮದುವೆಯ ವಿಚಾರವನ್ನು ಆರತಿ ಸುರೇಂದ್ರನೊಡನೆ ತಿಳಿಸುತ್ತಾಳೆ. ಸುರೇಂದ್ರ ಆರತಿಗೆ ಧೈರ್ಯ ತುಂಬುತ್ತಾನೆ. ಅಪ್ಪ ಮದುವೆಗೆ ಒಪ್ಪದಿದ್ದರೆ ಸಾಯುತ್ತೇನೆ ಎಂದು ಅಪ್ಪ ಹೇಳಿದರೆ ನಿಮಗೆ ಮನಸ್ಸಿಗೆ ಬಂದಂತೆ ಮಾಡಿಕೊಳ್ಳಿ ಎಂದು ಹೇಳುವಂತೆ ಮನೋಹರ ಸೂಚಿಸಿದ. ಇದಕ್ಕೆ ಆಕೆ ಒಪ್ಪದಿದ್ದಾಗ "ಹಾಗಾದರೆ ನೀನು ಸುಧಾಕರನನ್ನೇ ಮದುವೆಯಾಗು! ಕೊರವರ ಹೆಣ್ಣನ್ನು ಮಡಗಿಕೊಂಡ ಗಂಡನನ್ನೆ ಶ್ರೀರಾಮನಂತೆ ನೋಡಿಕೊಳ್ಳೋ ಬ್ರಾಹ್ಮಣಿತಿಯರಿದ್ದಾರೆ".

**(ಅದೇ, ಪುಟ 133)**

ಎನ್ನುತ್ತಾನೆ. ಅಕೆಯ ಮಾತುಗಳನ್ನು ಕೇಳಿ ಇವಳು ರಾಮಕೃಷ್ಣರಾಯರ ಮಗಳಲ್ಲದಿರುತ್ತಿದ್ದರೆ ಇವಳನ್ನೇ ಖಂಡಿತವಾಗಿ ಮದುವೆಯಾಗುತ್ತೇನೆಂಬ ಭಾವನೆ ಉಂಟಾಯಿತು. ಬೆಂಗಳೂರಿನ ಬ್ಯಾಂಕ್ ಒಂದರಲ್ಲಿ ಕೆಲಸ ಮಾಡುತ್ತಿದ್ದ ಸುರೇಂದ್ರನ ಮಿತ್ರ ರಾಧಾಕೃಷ್ಣ ಪೈ ಮನೆಗೆ ಬಂದು ಸುಧಾಕರ್ ಆರತಿಯನ್ನು ಮದುವೆಯಾಗುವ ಬಗ್ಗೆ ವಿಚಾರಿಸಿದ್ದ. ಬೆಂಗಳೂರಿನಲ್ಲಿ ಸುಧಾಕರ ಮತ್ತು ಜೆಸ್ಸಿಕರ ಭಾರಿ ರೋಮಾನ್ಸ್ ನಡೆದಿದೆ ಎಂದು ತಿಳಿಸಿದ. ಸುರೇಂದ್ರ ಈ ವಿಚಾರವನ್ನು ಆರತಿಗೆ ತಿಳಿಸಿದ. ಸುರೇಂದ್ರ, ಮನೊಹರ, ಆರತಿ, ಅರುಣ ಕಡಲ ಕಿನಾರೆಗೆ ಹೋಗುತ್ತಾರೆ. ನಡೆಯುತ್ತಾ ನಡೆಯುತ್ತಾ ಆರತಿ ಮತ್ತು ಮನೋಹರ ಹಿಂದಕ್ಕೆ ಉಳಿಯುತ್ತಾರೆ. ಆಯಾಸವಾಗಿದೆಯೆಂದು ಅಲ್ಲೇ ಕುಳಿತ ಆರತಿಯ ಕಣ್ಣಲ್ಲಿ ನೀರು ತುಂಬಿತ್ತು. ಆಕೆ ಬಿಕ್ಕಿ ಬಿಕ್ಕಿ ಅಳುತ್ತಿದ್ದಳು. ಸುಧಾಕರ ಭಟ್ಟನಿಗೆ ನಿನ್ನನ್ನು ಕೊಡುವ ನಿರ್ಧಾರ ಮಾಡಿದರೆ ಏನು ಮಾಡುವೆ ಎಂದು ಮನೋಹರ ಕೇಳಿದಾಗ ಆತ್ಮಹತ್ಯೆ ಮಾಡಿಕೊಳ್ಳುತ್ತೇನೆ ಎನ್ನುತ್ತಾಳೆ. ಆಗ ಮನೋಹರ ಹಾಗೆ ಮಾಡಬೇಡ ಅಂಥ ಪರಿಸ್ಥಿತಿ ಬಂದರೆ ಆತ್ಮಹತ್ಯೆ ಮಾಡಿಕೊಳ್ಳಬೇಡ ನನ್ನನ್ನು ಮದುವೆಯಾಗು ಎಂದು ತಿಳಿಸಿದಾಗ ಆರತಿ ತನ್ನ ಒಪ್ಪಿಗೆ ತಿಳಿಸುತ್ತಾಳೆ. ತಾನು ನಿನ್ನನ್ನು

ಮದುವೆಯಾಗುತ್ತೇನೆ ಎಂಬುದಾಗಿ ಆರತಿ ಬರೆದ ಪತ್ರವನ್ನು ಮನೋಹರ ಸುರೇಂದ್ರನಿಗೆ ತೋರಿಸಿದಾಗ ಆತನಿಂದಲೂ ಒಪ್ಪಿಗೆ ಸಿಗುತ್ತದೆ. "ನನ್ನ ಜೀವನದ ಮಿತಿಯೊಳಗೆ ಈ ಜಾತಿ ಮತಗಳನ್ನು ಅವಗಣಿಸಿ, ನನಗೆ ಇಚ್ಛೆ ಕಂಡಂತೆ ಜೀವಿಸಲು ನಿರ್ಧರಿಸಿರುವ ಮನುಷ್ಯ ನಾನು ಕೂಡಾ" ಎಂಬುದು ಸುರೇಂದ್ರನ ಅಭಿಪ್ರಾಯವಾಗಿತ್ತು.

**(ಅದೇ, ಪುಟ 156)**

ಲೂಸಿ ಆರತಿಯೊಂದಿಗೆ ಮಗಳಿಗೆ ಪತ್ರ ಬರೆಯುವಂತೆ ಹೇಳಿ ತನಗೆ ಮಗಳಿಂದ ಬಂದ ಹಳೆಯ ಪತ್ರಗಳನ್ನೆಲ್ಲಾ ಆಕೆಯ ಕೈಗಿತ್ತಾಗ ಅದರಲ್ಲಿ ಜೆಸ್ಸಿಕ ಮನೋಹರನಿಗೆ ಬರೆದ ಪತ್ರ ಹಾಗೂ ಅದರ ಹಿಂಬದಿಯಲ್ಲಿ ಮನೋಹರ ಬರೆದ ಉತ್ತರ ಇರುವ ಪತ್ರ ಆರತಿಗೆ ಸಿಕ್ಕಿತು. ಅದನ್ನಾಕೆ ತೆಗೆದಿರಿಸಿಕೊಂಡಳು. ಮನೋಹರನ ಸೌಶೀಲ್ಯವನ್ನು ನೆನೆದು ಸುಧಾಕರ ಭಟ್ಟನಿಗೂ ಅವನಿಗೂ ಎಷ್ಟೊಂದು ವ್ಯತ್ಯಾಸ ಅಂದುಕೊಂಡಳು. ದಸರಾ ರಜೆಯಲ್ಲಿ ಊರಿಗೆ ಬಂದಿದ್ದ ಮನೋಹರನ ಮನೆಗೆ ಆರತಿ ಬಂದಿದ್ದಳು. ಎಪ್ರಿಲ್ ತಿಂಗಳ ಮೊದಲ ವಾರದಲ್ಲಿ ರಾಮಕೃಷ್ಣರಾಯರು ಮಗನಿಗೆ ಫೋನ್ ಮಾಡಿ ಪರೀಕ್ಷೆ ಮುಗಿದ ಕೂಡಲೇ ಮನೆಗೆ ಬರಲು ಹೇಳಿದರು. ಮೇ ತಿಂಗಳ ಮೊದಲ ವಾರದಲ್ಲಿ ಆರತಿಯ ಮದುವೆ ಎಂದೂ ತಿಳಿಸಿದ್ದರು. ಊರಿಗೆ ಮರಳಿದ ಸುರೇಂದ್ರ ತಂದೆಯೊಂದಿಗೆ ಆರತಿಗೆ ಇಷ್ಟವಿಲ್ಲದ ಮದುವೆ ಬೇಡ ಎಂದು ತಿಳಿಸಿದ. ಸುಧಾಕರನೊಬ್ಬ ಲಫಂಗ, ನೀತಿಗೆಟ್ಟ ವ್ಯಭಿಚಾರಿ ಎಂದು ತಿಳಿಸುತ್ತಾನೆ. ಆದರೆ ರಾಮಕೃಷ್ಣರಾಯರು ಸುಧಾಕರನ ಪರವಾಗಿಯೇ ಮಾತನಾಡುತ್ತಾರೆ. ಸುರೇಂದ್ರ ನಾನು ಮದುವೆ ನಡೆಸಲು ಬಿಡಲಾರೆ, ಮದುವೆ ಮಂಟಪದಿಂದ ಅವನನ್ನು ಒದ್ದು ಓಡಿಸುತ್ತೇನೆ ಎನ್ನುತ್ತಾನೆ. ರಾಮಕೃಷ್ಣರಾಯರು ಸುಧಾಕರ ಮತ್ತು ಆರತಿಯ ಮದುವೆಯ ಕರೆಯೋಲೆಯನ್ನು ಆರತಿಗೆ ನೀಡಿದಾಗ ಆರತಿ ದಿಗ್ಭ್ರಾಂತಳಾದಳು. ಸುಧಾಕರನೊಂದಿಗೆ ತನಗೆ ಮದುವೆ ಇಷ್ಟವಿಲ್ಲ ಎಂದೂ ತಾನು ಮನೋಹರನನ್ನು ಮದುವೆ ಯಾಗುತ್ತೇನೆಯೆಂದೂ ತಿಳಿಸಿದಳು. ಆಗ ಅವರು "ನನ್ನ ಮಗಳಾದವಳು ಆ ಶೂದ್ರನನ್ನು ಮದುವೆಯಾಗುವುದಂತಿರಲಿ, ಅಂಥ ಮಾತನ್ನು ನನ್ನ ಮುಂದೆ ಆಡುವುದು ಕೂಡಾ ಸಾಧ್ಯವಿಲ್ಲ" ನಾನು ಸಾಯುತ್ತೇನೆ ಎಂದು ವಿಷದ ಬಾಟಲಿ ತೋರಿಸುತ್ತಾರೆ. ತನ್ನಿಂದಾಗಿ

**(ಅದೇ, ಪುಟ 179)**

ತಂದೆ ಸಾಯುವುದನ್ನು ಬಯಸದ ಆರತಿ ಮಹಡಿಯೇರಿ ಅಲ್ಲಿನ ಬಾಲ್ಕನಿಯಿಂದ ಕೆಳಗೆ ಹಾರಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಆಘಾತಕ್ಕೆ ಒಳಗಾದ ತಾಯಿ ರೇಣುಕಮ್ಮ ಮಾತನಾಡುವ ಶಕಿಯನ್ನೂ, ಸ್ವತಂತ್ರವಾಗಿ ಓಡಾಡುವ ಶಕ್ತಿಯನ್ನೂ ಕಳೆದುಕೊಳ್ಳುತ್ತಾಳೆ.

ಪರೀಕ್ಷೆ ಮುಗಿಸಿ ಮನೆಗೆ ಬಂದ ಮನೋಹರನಿಗೆ ಸುರೇಂದ್ರ ನಡೆದ ವಿಷಯವನ್ನು ತಿಳಿಸಿದಾಗ ಮನೋಹರನಿಗೆ ರಾಮಕೃಷ್ಣರಾಯರ ಬಗ್ಗೆ ಕ್ರೋಧ ಉಂಟಾಯಿತು. ಸುರೇಂದ್ರನೇ ಆತನನ್ನು ಸಮಾಧಾನಪಪಡಿಸುತ್ತಾನೆ. ಮನೋಹರ ತಾನು ಮತ್ತು ಆರತಿ ಮದುವೆಯಾಗುವುದಾಗಿ ನಿರ್ಧರಿಸಿರುವ ಬಗ್ಗೆ ತಾಯಿ ಕಾವೇರಕ್ಕನಿಗೆ ತಿಳಿಸುತ್ತಾನೆ. ಕಾವೇರಕ್ಕ ಮಗನೊಂದಿಗೆ ತನ್ನ ಕಾಲದ ಸಾಮಾಜಿಕ ಸನ್ನಿವೇಶವನ್ನು ತಿಳಿಸುತ್ತಾಳೆ. "ಊರಿನಲ್ಲಿ ಒಬ್ಬ ಬಡ ಶೂದ್ರ ಗೃಹಸ್ಥ ಮೃತನಾದರೆ ಬ್ರಾಹ್ಮಣನೊಬ್ಬ ಬಂದು ಅವನ ವಿಧವೆಯೊಡನೆ 'ನಾನು ನಿನ್ನನ್ನು ಇಟ್ಟುಕೊಳ್ಳುತ್ತೇನೆ' ಅನ್ನುತ್ತಾನೆ. ದಾರಿಯಲ್ಲಿ ನಡೆಯುವಾಗಲೇ ಮಡಿ! ಮಡಿ! ಎಂದು ಬೊಬ್ಬೆ ಹಾಕಿಕೊಂಡು ಹೋಗುವ ಅವನ ಹೆಂಡತಿಯೂ ಇದನ್ನು ವಿರೋಧಿಸುವುದಿಲ್ಲ. ಅದು ಆ ಕಾಲಕ್ಕೆ ಸರಿಯಾದರೆ ನೀನು ಯಾಕೆ ನ್ಯಾಯವಾದ ರೀತಿಯಲ್ಲಿ ಆರತಿಯನ್ನು ಮದುವೆಯಾಗಬಾರದು? ಇದು ಈ ಕಾಲಕ್ಕೆ ಸರಿ. ಆ ಧರ್ಮವನ್ನು ಬಹುಶಃ ಈ ಧಾರ್ಮಿಕ ವಿಧಿಯಿಂದ ಮಾತ್ರವೇ ಪ್ರತಿಭಟಿಸಲು ಸಾಧ್ಯ" ಹೀಗೆ ಸಮಾಜದ ವ್ಯವಸ್ಥೆಯ ಬಗ್ಗೆ ಪ್ರತಿರೋಧ ವ್ಯಕ್ತಪಡಿಸುತ್ತಾಳೆ.

ಎಂ.ಎ. ಫಸ್ಟ್ ಕ್ಲಾಸಿನಲ್ಲಿ ಪಾಸಾದ ಸುರೇಂದ್ರನಿಗೂ ಎಂ.ಎಸ್‌ಸಿ. ದ್ವಿತೀಯ ರ್‍ಯಾಂಕ್‌ನೊಂದಿಗೆ ಪಾಸಾದ ಮನೋಹರನಿಗೂ ಬೆಂಗಳೂರಿನ ಖಾಸಗಿ ಕಾಲೇಜುಗಳಲ್ಲಿ ಉದ್ಯೋಗ ಸಿಕ್ಕಿತು. ಇಬ್ಬರೂ ಒಂದು ಮನೆಯನ್ನು ಬಾಡಿಗೆಗೆ ಪಡೆದು ಒಟ್ಟಿಗಿದ್ದರು. ಮನೋಹರನಿಗೆ ಲಂಡನ್ ಯುನಿವರ್ಸಿಟಿ ಪಿಹೆಚ್.ಡಿ. ಅಧ್ಯಯನಕ್ಕೆ ಸ್ಕಾಲರ್‌ಶಿಪ್ ಸಹಿತ ಪ್ರವೇಶ ನೀಡಿತು. ತಾನು ಇಂಗ್ಲೆಂಡಿಗೆ ಹೋಗುವ ವಿಷಯವನ್ನು ರಾಮಕೃಷ್ಣರಾಯರಿಗೆ ತಿಳಿಸಿದಾಗ ನೀನು ಓದು ಮುಗಿಸಿ ಭಾರತಕ್ಕೆ ಬರಬೇಕು ಎನ್ನುತ್ತಾರೆ. ಆಗ ಮನೋಹರ "ಖಂಡಿತವಾಗಿ ಮರಳಿ ಬರುತ್ತೇನೆ ನಮ್ಮಂಥವರು ಮರಳಿ ಬರದಿದ್ದರೆ ಇನ್ನೂ ಒಂದು ಶತಮಾನ ನಿಮ್ಮದೇ ರಾಜ್ಯಭಾರ ನಡೆಯುತ್ತದೆ. ಈ ದೇಶ ನಿಮ್ಮದು ಮಾತ್ರವಲ್ಲ ನಮ್ಮದು ಕೂಡಾ ಅಂತ ನಿಮಗೆ ಅನಿಸುವುದಾದರೂ ಹೇಗೆ ? ಖಂಡಿತ ಬರುತ್ತೇನೆ" ಎಂದು ನುಡಿಯುತ್ತಾನೆ. ಸುರೇಂದ್ರನಿಗೆ ಐ.ಎ.ಎಸ್.ಗೆ ಆಯ್ಕೆ ದೊರೆತು ಪ್ರೊಬೇಶನರಿ ಡಿ.ಸಿ.ಆಗಿ ನೇಮಕ ಆಗುತ್ತದೆ. ಅರುಣಳ ಮದುವೆ ಜಯರಾಮ ಎಂಬ ಇಂಜಿನಿಯರ್ ಜೊತೆ ಅದ್ದೂರಿಯಿಂದ ನಡೆಯಿತು. ಮದುವೆಯ ದಿನವೇ ನಡೆದ ರಸ್ತೆ ಅಪಘಾತದಲ್ಲಿ ಜಯರಾಮ ಕೊನೆಯುಸಿರೆಳೆದ. ಗಂಡ ಸತ್ತಾಗ ಅರುಣಾ ತಲೆ ಬೋಳಿಸಬೇಕೆಂಬ ಸಲಹೆ ಯಾರೋ ಹಳ್ಳಿಯ ಬ್ರಾಹ್ಮಣನೊಬ್ಬನಿಂದ ಬಂದಿತ್ತು. ಅದನ್ನು ಕೇಳಿದ ಸುರೇಂದ್ರ ಸಿಟ್ಟುಗೊಂಡು ಇನ್ನೊಮ್ಮೆ ಅವನು ಈ ಮನೆಯೊಳಗೆ ಬಂದರೆ ಅವನ ಚರ್ಮ ಸುಲಿಯುತ್ತೇನೆ ಎಂದಿದ್ದ. ತನಗೆ ಅನಾರೋಗ್ಯ

ಕಾಡಿದಾಗ ಚಿಕಿತ್ಸೆ ನೀಡಿದ ವೈದ್ಯ ಡಾಕ್ಟರ್ ನಾಗೇಂದ್ರ ಸುರೇಂದ್ರನನ್ನು ಊಟಕ್ಕೆ ಕರೆಯುತ್ತಾರೆ. ಆ ಸಂದರ್ಭದಲ್ಲಿ ಅಲ್ಲಿದ್ದ ನಾಗೇಂದ್ರರ ಮಗಳು ಚಿತ್ರಳಿಗೂ ಸುರೇಂದ್ರನಿಗೂ ಆತ್ಮೀಯತೆ ಬೆಳಯುತ್ತದೆ. ದಿನ ಕಳೆದಂತೆ ತಾನು ಚಿತ್ರಳನ್ನು ಮದುವೆಯಾಗಬೇಕು ಅನ್ನಿಸುತ್ತದೆ. ನೇರವಾಗಿ ಕ್ಲಿನಿಕ್ಕಿಗೆ ಬಂದು "ನೀವು ಒಪ್ಪೋದಾದ್ರೆ ನಾನು ನಿಮ್ಮನ್ನು ಮದುವೆಯಾಗಲು ಬಯಸುತ್ತೇನೆ ಎನ್ನುತ್ತಾನೆ. ಆಕೆಯೂ ತನ್ನ ಒಪ್ಪಿಗೆ ಸೂಚಿಸುತ್ತಾಳೆ. ನಾಗೇಂದ್ರ ರಾವ್ ತನ್ನ ಕುಟುಂಬದ ವಿಷಯ ತಿಳಿಸುತ್ತಾ ನಾನು ಬ್ರಾಹ್ಮಣನಾಗಿದ್ದರೂ ನನ್ನ ಪತ್ನಿ ಮಾರ್ಗರೇಟ್ ಕ್ರಿಶ್ಚಿಯನ್ ಧರ್ಮದವಳು. ಮಗಳು ಯಾವ ದೇವರನ್ನು ನಂಬುತ್ತಾಳೋ ಗೊತ್ತಿಲ್ಲ. ಚಿತ್ರ ಒಬ್ಬಳು ಕ್ರಿಶ್ಚಿಯನ್ ಹೆಂಗಸಿನ ಮಗಳು ಎಂಬ ಸತ್ಯವನ್ನು ತಿಳಿಸುತ್ತಾರೆ. ಸುರೇಂದ್ರ ತನಗೇನೂ ಅಭ್ಯಂತರವಿಲ್ಲ ಎಂದು ತನ್ನ ಒಪ್ಪಿಗೆ ಸೂಚಿಸುತ್ತಾನೆ. ತನ್ನ ಗೆಳೆಯ ಇಂಗ್ಲೆಂಡಿನಿಂದ ಬಂದೊಡನೆ ಮದುವೆಯಾಗುವುದಾಗಿ ಚಿತ್ರಳಿಗೆ ತಿಳಿಸುತ್ತಾನೆ. ತಾನು ಮದುವೆಯಾಗಲಿರುವ ವಿಷಯವನ್ನು ತಂದೆ ರಾಮಕೃಷ್ಣರಾಯರೊಡನೆ ತಿಳಿಸಿದೊಡನೆ ಆಕೆ ಕ್ರಿಶ್ಚಿಯನ್ ತಾಯಿಯ ಮಗಳೆಂದು ತಿಳಿದು ರಾಯರಿಗೆ ಸಿಟ್ಟು ಬರುತ್ತದೆ. ಇವತ್ತಿಗೆ ನಿನಗೆ ಮತ್ತು ನನಗೆ ಇರುವ ಸಂಬಂಧ ಮುಗಿಯಿತು ಎನ್ನುತ್ತಾರೆ.

ಓದು ಮುಗಿಸಿ ಊರಿಗೆ ಮರಳಿದ ಮನೋಹರನೊಂದಿಗೆಯೂ ರಾಮಕೃಷ್ಣರಾಯರು ಪ್ರೀತಿಯಿಂದ ಮಾತನಾಡಿಸಲಿಲ್ಲ. ದುರ್ಗಾಪುರದ ಕಾಲೇಜಿನ ಪ್ರಾಂಶುಪಾಲರು ಮನೆಗೆ ಬಂದು ಅಸಿಸ್ಟೆಂಟ್ ಪ್ರೊಫೇಸರಾಗಿ ಕಾಲೇಜಿಗೆ ಸೇರುವಂತೆ ತಿಳಿಸಿ ಹೋದರು. ಈ ವಿಷಯವನ್ನು ಸುರೇಂದ್ರನಿಗೆ ತಿಳಿಸಿದಾಗ ಆತ "ದೇಹದ ಕಶ್ಮಲಗಳನ್ನು ಹೊರದೂಡುವ ಶ್ವಾಸಕೋಶಗಳನ್ನೇ ಕಶ್ಮಲಗೊಳಿಸುವ ಅವನ ಉದ್ಯೋಗದ ಶ್ರಮವನ್ನು ಯಾರೂ ಅರ್ಥಮಾಡಿಕೊಂಡಿಲ್ಲ. ಇನ್ನು ಕೂಡಾ ಯಾರೂ ಅರ್ಥ ಮಾಡುವುದಿಲ್ಲ. ಅದೊಂದು ಶಾಪಗ್ರಸ್ತ ಉದ್ಯೋಗ. ಉಪಾಧ್ಯಾಯನಾಗಿದ್ದುಕೊಂಡು ಕ್ರಾಂತಿಕಾರಿಯಾಗಲು ಸಾಧ್ಯವಿಲ್ಲ. ಮಾಸ್ತರಿಕೆಯೆಂಬುದು ಮನುಷ್ಯನನ್ನು ನಿರ್ವೀರ್ಯಗೊಳಿಸುವ ಉದ್ಯೋಗ. ಅದರ ಗಳಿಕೆಯಿಂದ ಮದುವೆ ಆಗಲೂ ಸಾಧ್ಯವಿಲ್ಲ, ಮನೆ ಕಟ್ಟಲೂ ಸಾಧ್ಯವಿಲ್ಲ" ಎನ್ನುತ್ತಾನೆ.

**(ಅದೇ, ಪುಟ 299)**

ಬ್ರಾಹ್ಮಣ ಪ್ರಿನ್ಸಿಪಾಲ್ ಹರಿಕೃಷ್ಣ ಭಟ್ಟರದು ಶೂದ್ರನ ಪ್ರತಿಭೆಯನ್ನು ಕೊಳೆ ಹಾಕುವ ಒಳಸಂಚು ಅಷ್ಟೆ ಎಂದ.

ಗುಂಟೂರಿನ ಕಲ್ಯಾಣ ಮಂಟಪವೊಂದರಲ್ಲಿ ಸುರೇಂದ್ರ ಮತ್ತು ಚಿತ್ರಳ ಮದುವೆ ನಡೆಯಿತು. ಮನೋಹರ ತಾನು ಕಲಿತ ಕಾಲೇಜಿನಲ್ಲಿಯೇ ಉದ್ಯೋಗಕ್ಕೆ ಸೇರಿದ. ಆಗಾಗ ಅರುಣಳೊಡನೆ ಮಾತನಾಡಿ ಬರುತ್ತಿದ್ದ. ಅರುಣಾಳಲ್ಲಿ ಹೊಸ ಜೀವನೋತ್ಸಾಹವನ್ನು ತುಂಬಿಸುತ್ತಿದ್ದ. ಮನೋಹರ ಕೆಲವೊಮ್ಮೆ ಕುಳಿತು ತನ್ನೊಳಗೇ ಯೋಚಿಸುತ್ತಿದ್ದ–ತನ್ನಿಂದ ಆರತಿಯನ್ನು ಉಳಿಸಲಾಗಲಿಲ್ಲ. ನಾನು ಮನಸ್ಸು ಮಾಡಿದರೆ ಬಹುಶಃ ಅರುಣಳನ್ನು ಉಳಿಸಬಹುದು. ಅವಳಿಗೆ ಬಾಳನ್ನು ನೀಡಬಹುದು. ಯಾಕೆ ಸಾಧ್ಯವಿಲ್ಲ ಎಂದುಕೊಳ್ಳುತ್ತಿದ್ದ. ಮನೋಹರ ಒಮ್ಮೆ ಅರುಣಾಳೊಂದಿಗೆ ಮಾತನಾಡುತ್ತಾ "ಯಾರೋ ಒಬ್ಬ ಶೂದ್ರ ಹರಿಜನ ಹುಡುಗಿಯನ್ನು ಮದುವೆಯಾದ ಕಥೆಯನ್ನು ಹೇಳಿ ಜಾತಿಯ ಐಕ್ಯವನ್ನು ಕೊಂಡಾಡುವ ನಿನ್ನ ಅಪ್ಪ ಅದೇ ನಾನು ನಿನ್ನ ಮಗಳನ್ನು ಮದುವೆಯಾಗುತ್ತೇನೆ ಅಂದರೆ ಭೂಕಂಪವಾದಂತೆ ಹರಿಬೀಳುತ್ತಾರೆ. ಆದರೂ ನಾನು ನಿನ್ನನ್ನು ಮದುವೆಯಾಗುತ್ತೇನೆ ಎನ್ನುತ್ತಾನೆ. ವಿಧವೆಯಾಗಿ ಬ್ರಾಹ್ಮಣತ್ವವನ್ನು ಉಳಿಸಿಕೊಳ್ಳುವ ಬದಲು ಈ ಶೂದ್ರನನ್ನು ಮದುವೆಯಾಗಿ ಮನುಷ್ಯತ್ವವನ್ನು ಉಳಿಸಿಕೋ ಎಂದು ಮನೋಹರ ಹೇಳುತ್ತಾನೆ. ಅರುಣಾ ಮೌನವಹಿಸುತ್ತಾಳೆ. ಮನೋಹರ ಮನೆಗೆ ಬರುವುದನ್ನು ರಾಯರು ಇಷ್ಟಪಡುತ್ತಿರಲಿಲ್ಲ. ಹಾಗಾಗಿ ಆತ ಮನೆಗೆ ಬಾರದಿರುವಂತೆ ತಿಳಿಸಲು ಅರುಣಾಳಿಗೆ ಹೇಳುತ್ತಾರೆ. ಮರುದಿನ ಆಕೆಯೇ ಮನೋಹರನನ್ನು ಕರೆದು ನಾನು ನಿನ್ನನ್ನು ಮದುವೆಯಾಗುತ್ತೇನೆ ಎಂದು ಹೇಳುತ್ತಾಳೆ. ಈ ವಿಷಯವನ್ನು ಸುರೇಂದ್ರನಿಗೆ ತಿಳಿಸಿದಾಗ ನಿನ್ನಂಥ ಓದಿದ ವ್ಯಕ್ತಿ ವಿಧವೆಯನ್ನು ಮದುವೆಯಾಗುವುದು ಸರಿಯೇ ? ಆಕೆ ನಿನಗೆ ಅರ್ಹಳಲ್ಲ ಎಂದು ಹೇಳುತ್ತಾನೆ. ಮನೋಹರನಿಗೆ ಮುಂಬಯಿಯ ಭಾಭಾ ಅಟೋಮಿಕ್ ರಿಸರ್ಚ್ ಸೆಂಟರಿನಲ್ಲಿ ಸೀನಿಯರ್ ಸೈಂಟಿಸ್ಟ್ ಆಗಿ ಉದ್ಯೋಗ ಸಿಗುತ್ತದೆ. ಆತ ತಾಯಿಯೊಂದಿಗೆ ತಾನು ಅರುಣಾಳೊಂದಿಗೆ ಮದುವೆಯಾಗುವುದಾಗಿ ತಿಳಿಸಿದಾಗ ಆಕೆ ಅಸಮಾಧಾನ ವ್ಯಕ್ತಪಡಿಸುತ್ತಾಳೆ. ಮಗ ಬ್ರಾಹ್ಮಣ ವಿಧವೆಯನ್ನು ಮದುವೆಯಾಗಿ ಅಪಕೀರ್ತಿ ತಂದುಕೊಳ್ಳುವುದು ಆಕೆಗೆ ಇಷ್ಟವಿರಲಿಲ್ಲ. ಮಗ ಅಪಹಾಸ್ಯಕ್ಕೆ ಗುರಿಯಾಗುವುದು ಆಕೆಗೆ ಬೇಕಿಲ್ಲ. ಆದರೆ ಮಗನ ಒತ್ತಾಯಕ್ಕೆ ತಾಯಿ ಮಣಿಯಲೇಬೇಕಾಯಿತು. ಮನೋಹರ ತಾನು ರಾಮಕೃಷ್ಣರಾಯರ ಬಳಿಗೆ ಹೋಗಿ ನೇರವಾಗಿ ತಾನು ಮತ್ತು ಅರುಣಾ ಮದುವೆಯಾಗಲು ತೀರ್ಮಾನಿಸಿರುವ ವಿಷಯ ತಿಳಿಸಿದ. ರಾಯರಿಗೆ ಸಿಟ್ಟು ಬಂತು. "ನಿನ್ನನ್ನು ಮುಗಿಸಿಬಿಡಲು ನನ್ನಿಂದ ಸಾಧ್ಯವಿದೆ. ಅರುಣಾ ನಿನ್ನ ತೊತ್ತಲ್ಲ ಶೂದ್ರನಾಯಿ!" ಎಂದು ಅವನ ಅಂಗಿಯನ್ನು ಹಿಡಿದು ಎಳೆಯುತ್ತಾರೆ. ಆದರೆ ಇದ್ಯಾವುದನ್ನೂ ಲೆಕ್ಕಿಸದ ಮನೋಹರ ಮದುವೆಗಾಗಿ ಸ್ಥಳ, ಪುರೋಹಿತರು, ಸಿಹಿತಿಂಡಿ ಇತ್ಯಾದಿ ವ್ಯವಸ್ಥೆಯನ್ನು ಮಾಡುತ್ತಾನೆ. ಕೆಲವು ಸ್ನೇಹಿತರಿಗೆ ಮದುವೆಯ ಆಮಂತ್ರಣವನ್ನು ನೀಡಿದ.

ಸುರೇಂದ್ರನಿಗೆ ಫೋನ್ ಮಾಡಲೆಂದು ಪೋಸ್ಟಾಫೀಸಿಗೆ ನಡೆದ. ಆದರೆ ಆತ ಸಿಗಲಿಲ್ಲ. ಅಲ್ಲಿಂದ ಬಳ್ಳಾರಿಗೆ ಮತ್ತು ಗುಂಟೂರಿಗೆ ಟೆಲಿಗ್ರಾಂ ಮಾಡಿದ.

ಮಗಳನ್ನು ಕರೆಸಿದ ರಾಯರು ನೀನು ಶೂದ್ರನನ್ನು ಮದುವೆಯಾಗುತ್ತೀಯಾ ಎಂದರು. ಅರುಣ ಹೌದೆಂದು ಉತ್ತರಿಸಿದಾಗ ನಾನು ಈ ಅನಾಚಾರವನ್ನು ನಡೆಯಲು ಬಿಡುವುದಿಲ್ಲ ಎನ್ನುತ್ತಾರೆ. "ವಿಧವೆಗೆ ಪುನರ್ವಿವಾಹವನ್ನು ನಿಷೇಧಿಸಿದ ಸಮಾಜದ ನೀತಿಗೆ ಬಹಳ ಆಳವಾದ ಅರ್ಥವಿದೆ ಅದು ಬರೀ ಗೊಡ್ಡು ಸಂಪ್ರದಾಯವಲ್ಲ" ಎನ್ನುತ್ತಾರೆ. ಈ ಮಾತು ಕೇಳಿ ಅರುಣಾಳಿಗೆ ಒಬ್ಬಳು ವಿಧವೆಯನ್ನು ಖುಶಿಯಾಗಿಸಲು ಈ ಸಮಾಜದಿಂದ ಎಂದು ಸಾಧ್ಯವಾಗಿದೆ ಎಂಬ ಯೋಚನೆ ಬರುತ್ತದೆ. ರಾಯರು ನೀನು ಕೂಡಾ ಆರತಿಯಂತೆ ಸತ್ತು ಹೋದರೆ ನಾನು ದುಃಖಿಸುವುದಿಲ್ಲ, ನಮ್ಮಿಬ್ಬರಲ್ಲಿ ಯಾರಾದರೊಬ್ಬರು ಸಾಯಲೇಬೇಕು ಎನ್ನುತ್ತಾ ಮೇಜಿನ ಡ್ರಾವರಿನಿಂದ ಚಿಕ್ಕ ವಿಷದ ಬಾಟಲಿಯನ್ನು ಹೊರತೆಗೆಯುತ್ತಾರೆ. ಈ ಹಿಂದೆ ಆರತಿಯ ಮುಂದೆಯೂ ತಂದೆ ಹೀಗೇ ಮಾಡಿರುವ ವಿಷಯ ಅರುಣಾಳಿಗೆ ತಿಳಿದಿತ್ತು. ಅದನ್ನು ತಾನೇ ಕುಡಿಯುತ್ತೇನೆ ಅಂದಿದ್ದರು. ಅರುಣಾ ಬಾಟಲಿಯನ್ನು ತೆಗೆದುಕೊಂಡು ಹೋಗಿ ಯೋಚಿಸುತ್ತಾಳೆ. ತಂದೆಯ ನಿರ್ಧಾರ ಹಾಸ್ಯಾಸ್ಪದವಾಗಿ ಕಂಡಿತು. ಅವಳು ಸಾಯಲು ಸಿದ್ಧಳಿರಲಿಲ್ಲ. ಅಲ್ಲಿಗೆ ಬಂದ ಮನೋಹರನಿಗೆ ನಡೆದ ವಿಷಯ ಅರುಣಾಳಿಂದ ತಿಳಿಯುತ್ತದೆ. ಆತ ನೇರವಾಗಿ ರಾಯರ ಬಳಿಗೆ ಹೋಗಿ ಅವರೇ ವಿಷವನ್ನು ಕುಡಿಯುವಂತೆ ತಿಳಿಸುತ್ತಾನೆ, ಒತ್ತಾಯಿಸುತ್ತಾನೆ, ಬಯ್ಯುತ್ತಾನೆ, ಬೆದರಿಸುತ್ತಾನೆ. "ನೀಚ! ಭ್ರಷ್ಟ! ಮಕ್ಕಳನ್ನು ಕೊಲ್ಲುವ ಕೊಲೆಪಾತಕ. ಊರಿನ ಹೆಣ್ಣುಗಳಿಗೆಲ್ಲಾ ಗಂಡನಾಗಬಯಸುವ ಬ್ರಹ್ಮರಾಕ್ಷಸ! ನಿನ್ನನ್ನು ನಾನು ಖಂಡಿತ ಬಿಡಲಾರೆ. ಅರುಣಳನ್ನು ಮದುವೆಯಾಗುವುದು ನನಗೆ ಮುಖ್ಯವಲ್ಲ. ನಾನು ಇಡೀ ಜೀವಮಾನ ಸೆರೆಯಲ್ಲಿದ್ದರೂ ತೊಂದರೆ ಇಲ್ಲ. ನಿನ್ನ ರಾಕ್ಷಸ ಜನ್ಮ ಇಲ್ಲಿಗೆ ಮುಗಿಯಬೇಕು. ಇಕೋ ತೆಗೆದುಕೊ ಕುಡಿದು ಮರ್ಯಾದೆಯಾಗಿ ಸಾಯುವುದು ಒಳ್ಳೆಯದು ಅಲ್ಲದಿದ್ದರೆ ಒಂದೇ ಹೊಡೆತದಲ್ಲಿ ತಲೆ ಒಡೆದು ಬಿಡುತ್ತೇನೆ" ಎನ್ನುತ್ತಾನೆ. ರಾಯರಿಗೆ ಸತ್ತ ತನ್ನ ಮಗಳು, ಹೆಂಡತಿ ನೆನಪಿಗೆ ಬರುತ್ತಾರೆ. ತಾನು ಮಾಡಿದ ಅಪರಾಧಗಳ ನೆನಪು ಮಿಂಚಿ ಮಾಯವಾಗುತ್ತದೆ. ರಾಯರು ವಿಧಿಯಿಲ್ಲದೆ ಬಾಟಲಿಯನ್ನು ತುಟಿಗೆ ಇರಿಸುವಷ್ಟರಲ್ಲಿ ಮನೋಹರ ಅವರ ಕೈಗೆ ಹೊಡೆದು ಬಾಟಲಿಯನ್ನು ಬೀಳಿಸುತ್ತಾನೆ. ಅಲ್ಲಿಂದ ಬಂದು ಅರುಣಾಳ ಹಣೆಗೆ ಕುಂಕುಮವಿಟ್ಟು ಆಕೆಯನ್ನು ಕರೆದುಕೊಂಡು ತನ್ನ ಮನೆಗೆ ಬರುತ್ತಾನೆ. ತಾಯಿ ಪ್ರೀತಿಯಿಂದಲೇ ಬರಮಾಡಿಕೊಳ್ಳುತ್ತಾಳೆ. ಅವಳ ಮುಖದಲ್ಲಿ ಸಂತೋಷವಿತ್ತು. ಸುರೇಂದ್ರ ಮತ್ತು ಚಿತ್ರಾ

ಇವರಿಬ್ಬರೂ ಬಂದು ಈ ಆನಂದದಲ್ಲಿ ಭಾಗಿಯಾಗುತ್ತಾರೆ. ಹೀಗೆ ಕಾದಂಬರಿಯ ಮಧ್ಯದಲ್ಲಿ ದುಃಖವಿದ್ದರೂ ಕೊನೆಗೆ ಸುಖಾಂತ್ಯವನ್ನು ಕಾಣುತ್ತದೆ.

ಕಾದಂಬರಿಯ ಇನ್ನೊಂದು ಮಗ್ಗುಲನ್ನು ಗಮನಿಸಿದರೆ ರಾಮಕೃಷ್ಣರಾಯರ ಮನೆಯ ಎಡಗಡೆಗಿರುವ ಸಣ್ಣ ಹಿತ್ತಲಿನಲ್ಲಿ ಜೆಸ್ಸಿಕಳ ಮನೆ. ತಾಯಿ ಲೂಸಿ ರಾಯರ ಮನೆಯ ಹೊರಗಿನ ಕೆಲಸ ಮಾಡುತ್ತಿದ್ದಳು. ಜೆಸ್ಸಿಕ ಬಡತನದಲ್ಲಿಯೇ ನರ್ಸಿಂಗ್ ಟ್ರೈನಿಂಗ್ ಮುಗಿಸಿದ್ದಳು. ಲೂಸಿ ಹಾಗೂ ಅವಳ ತಂದೆ ತಾಯಿಗಳು ಹಳ್ಳಿಯಲ್ಲಿ ಕೂಲಿ ಮಾಡಿ ಜೀವಿಸುತ್ತಿದ್ದರು. ಆಗ ಲೂಸಿ ಯಾರಿಂದಲೋ ಗರ್ಭ ಧರಿಸಿದ್ದಳು. ಮರ್ಸಾಲ ಲೂಸಿಯನ್ನು ಒಪ್ಪಿ ಮದುವೆಯಾಗಿದ್ದ. ಜೆಸ್ಸಿಕ ಮನೋಹರನ ಮನೆಗೆ ಆಗಾಗ ಬಂದು ಹೋಗುತ್ತಿದ್ದಳು. ಮನೋಹರನೊಡನೆ ಕೇಳಿ ಓದಲು ಪುಸ್ತಕ ತೆಗೆದುಕೊಂಡು ಹೋಗುತ್ತಿದ್ದಳು. ಇದನ್ನು ಗಮನಿಸಿದ ಮನೋಹರನಿಗೆ ಆಕೆ ಆಗಾಗ ಬರುವುದರ ಹಿಂದೆ ಏನೋ ಉದ್ದೇಶ ಇರಬೇಕು ಅನಿಸುತ್ತಿತ್ತು. ಅವಳ ನೋಟ ಮಾತಿನಲ್ಲಿ ಅವಳ ಒಳಮನಸ್ಸು ವ್ಯಕ್ತವಾಗತೊಡಗಿತ್ತು. ಮನೋಹರ ಈ ಪರಿಸ್ಥಿತಿಯಿಂದ ಪಾರಾಗುವ ಬಗ್ಗೆ ಯೋಚಿಸುತ್ತಿದ್ದ. ಆಕೆ ಪತ್ರದ ಮೂಲಕ ತನ್ನ ಪ್ರೀತಿಯನ್ನು ವ್ಯಕ್ತಪಡಿಸಿದ್ದಳು. ಅದೇ ಪತ್ರದ ಹಿಂಬದಿಯಲ್ಲಿ ಪ್ರೀತಿಸುವ ಯೋಚನೆ ಬಿಟ್ಟುಬಿಡು ಎಂದು ಬರೆದು ಆಕೆಗೆ ಪುಸ್ತಕದೊಳಗಿರಿಸಿ ನೀಡಿದ. ನಂತರ ಆಕೆ ಅವನ ಮನೆಯ ಕಡೆ ಸುಳಿಯುವುದಿಲ್ಲ. ಜೆಸ್ಸಿಕಳಿಗೆ ಬೆಂಗಳೂರಿನ ಸರಕಾರಿ ಆಸ್ಪತ್ರೆಯೊಂದರಲ್ಲಿ ಕೆಲಸ ಸಿಗುತ್ತದೆ. ಜೆಸ್ಸಿಕ ಸಾಕಷ್ಟು ಸಂಪಾದಿಸುತ್ತಿದ್ದರೂ ಜೀವನದ ಕಹಿ, ದುಗುಡ, ತನ್ನ ಮನಸ್ಸಿನಿಂದ ಕಡಿಮೆಯಾಗಿರಲಿಲ್ಲ. ತನ್ನ ಅಪ್ಪ ಯಾರು ಎಂದು ತಿಳಿಯದಿರುವ ಸಂದರ್ಭದಲ್ಲಿ ಊರಿನವರಿಂದ ಮಾತು ಕೇಳಬೇಕಾಗಿ ಬಂದಿತ್ತು. ಅಂತಹ ಮಾತುಗಳನ್ನು ಕೇಳಿ ಹೃದಯ ಕಲ್ಲಾಗಿತ್ತು. ನರ್ಸಿಂಗ್ ತರಬೇತಿ ಮುಗಿಸಿ ಬಂದಂದಿನಿಂದ ಅಣಕಿಸುತ್ತಿದ್ದ ಜನ ಸುಮ್ಮನಾಗಿಬಿಟ್ಟಿದ್ದರು. ಆಕೆ ತನ್ನ ತಾಯಿಯನ್ನು ಬೆಂಗಳೂರಿಗೆ ಕರೆದುಕೊಂಡು ಹೋಗುತ್ತಾಳೆ. ಸುಧಾಕರ ಭಟ್ಟ ಬೆಂಗಳೂರಿಗೆ ಬಂದು ಜೆಸ್ಸಿಕಳೊಂದಿಗೆ ಸುತ್ತಾಡುತ್ತಿರುತ್ತಾನೆ. ಆಕೆ ಆತನಿಂದ ಸಾಧ್ಯವಾದಷ್ಟು ಹಣ ಕಿತ್ತುಕೊಳ್ಳುತ್ತಾಳೆ. ತನ್ನನ್ನು ಕೀಳಾಗಿ ಕಾಣುತ್ತಿದ್ದ ಮೇಲುಜಾತಿಯವರ ಕೀಳು ಮನೋಭಾವಕ್ಕೆ ಈ ಮೂಲಕ ಆಕೆ ಪ್ರತಿರೋಧವನ್ನು ವ್ಯಕ್ತಪಡಿಸುತ್ತಾಳೆ. ಸುಧಾಕರ ಭಟ್ಟ ಬರುವುದನ್ನು ಕಂಡ ತಾಯಿ ಲೂಸಿ ಅವ್ರು ಯಾಕೆ ಇಲ್ಲಿಗೆ ಬರೋದು ಎಂದು ಪ್ರಶ್ನಿಸುತ್ತಾಳೆ. ಜೆಸ್ಸಿಕ ಹಾರಿಕೆಯ ಉತ್ತರ ನೀಡುತ್ತಾಳೆ. ತಾಯಿಯನ್ನು ಮತ್ತೆ ಊರಿಗೆ ಕಳುಹಿಸಿದ ಜೆಸ್ಸಿಕ ಕುವೈಟಿಗೆ ಉದ್ಯೋಗಕ್ಕಾಗಿ ಹೋಗುತ್ತಾಳೆ. ಅಲ್ಲಿ ಡಾಕ್ಟರೊಬ್ಬನ ಕೈ ಹಿಡಿದು ಅವನ ಹೆಂಡತಿಯಾಗಿ ಊರಿಗೆ ಬಂದಾಗ ಜನರೆಲ್ಲಾ ಆಶ್ಚರ್ಯ ಪಡುತ್ತಾರೆ. ಎರಡು ತಿಂಗಳ ಹಿಂದೆಯಷ್ಟೇ

ಮದುವೆಯಾಗಿದ್ದ ಸುಧಾಕರ ಭಟ್ಟ ಜೆಸ್ಸಿಕ ಊರಿಗೆ ಬಂದಿರುವ ವಿಷಯ ತಿಳಿದು ಮಾತನಾಡಲು ಬರುತ್ತಾನೆ. ಜೆಸ್ಸಿಕ ದೊಡ್ಡದಾದ ಮನೆ ಕಟ್ಟಿಸಲಾರಂಭಿಸಿದಾಗ ಜನ ಅಸೂಯೆಪಟ್ಟುಕೊಳ್ಳುತ್ತಾರೆ. ಎರಡು ಮಕ್ಕಳನ್ನು ಹೆಡೆದ ಈಕೆ ಗಂಡನಿಗೆ ವಿಚ್ಛೇದನ ನೀಡಿ ಡಾಕ್ಟರ್ ಫೆರ್ನಾಂಡೀಸ್‌ರನ್ನು ಮದುವೆಯಾಗುತ್ತಾಳೆ. ಊರಲ್ಲೇ ನೆಲೆಸುವ ತೀರ್ಮಾನ ಮಾಡುತ್ತಾಳೆ. ಆಕೆ ಮುನ್ಸಿಪಲ್ ಚುನಾವಣೆಗೆ ಅಭ್ಯರ್ಥಿಯಾಗಿ ನಿಂತ ಸಂದರ್ಭದಲ್ಲಿ ಆಕೆಯ ವಿರುದ್ಧ ಅಭ್ಯರ್ಥಿಯ ಕಡೆಯಿಂದ "ಅನಾಮಧೇಯನಿಗೆ ಹುಟ್ಟಿದವಳು, ಹಾದರಕ್ಕೆ ಹುಟ್ಟಿದವಳು" ಎಂಬ ಮಾತುಗಳು ಕೇಳಿ ಬರುತ್ತವೆ. ಈ ಮಾತುಗಳನ್ನು ಕೇಳಿ ಕೆರಳಿದ ಜೆಸ್ಸಿಕ ಒಬ್ಬಿಬ್ಬರೊಡನೆ "ನನ್ನ ತಂದೆ ಯಾರು ಅಂತ ರಾಮಕೃಷ್ಣರಾಯರನ್ನು ಕೇಳಿ" ಎಂದಿದ್ದಳು. ಜೆಸ್ಸಿಕಾ ಮುನ್ಸಿಪಲ್ ಕೌನ್ಸಿಲರ್ ಆಗಿ ಚುನಾಯಿತಳಾದಳು. ಸಮಾಜ ತನ್ನನ್ನು ತುಚ್ಛವಾಗಿ ಕಂಡರೂ ಧೃತಿಗೆಡದ ಜೆಸ್ಸಿಕಾ ತನ್ನದೇ ಆದ ಯೋಚನೆಯ ಬದುಕನ್ನು ಕಟ್ಟಿಕೊಳ್ಳುವಲ್ಲಿ ಯಶಸ್ವಿಯಾಗುತ್ತಾಳೆ.

'ಅಬ್ರಾಹ್ಮಣ' ಕಾದಂಬರಿಯಲ್ಲಿ ಬಂದಿರುವ ಜಾತಿಯ ಕುರಿತಾದ ವಿಶ್ಲೇಷಣೆ ಈ ಕಾದಂಬರಿಯಲ್ಲಿಯೂ ಕಂಡುಬರುತ್ತದೆ. ಕಾದಂಬರಿಯ ಪ್ರಕಾಶಕರು ಹೇಳುವಂತೆ "ಜಾತೀಯವಾಗಿ, ರಾಜಕೀಯವಾಗಿ ಪ್ರಬಲರೆನ್ನಿಸಿಕೊಂಡ ವ್ಯಕ್ತಿಗಳ ಸಿಡಿದೇಳುವ ಶೂದ್ರತನದ ಕಿಚ್ಚು ಕಾದಂಬರಿಯುದ್ದಕ್ಕೂ ಕಾಣಿಸುತ್ತದೆ. ವರ್ತಮಾನಕ್ಕೆ ಸ್ಪಂದಿಸದ, ಹೊಂದಿಕೊಳ್ಳದ, ಹೃದಯವಂತಿಕೆಯಿಲ್ಲದ ವ್ಯಕ್ತಿಯ ಅಂತರ್ಯವನ್ನು ಓದುಗರಿಗೆ ಕೋಪ ಬರುವಷ್ಟು ಚಿತ್ರಿಸಲಾಗಿದೆ". ಜಾತಿ ವರ್ಗಭೇದವಿಲ್ಲದೆ ಪ್ರೀತಿಯೇ ಗೆಲ್ಲುವುದನ್ನು ನೋಡಿದರೆ ಇಲ್ಲಿ ಪ್ರಗತಿಪರತೆಯ ಆಯಾಮಗಳನ್ನು ಗುರುತಿಸಬಹುದು. ಆಧುನಿಕ ವಿದ್ಯಾಭ್ಯಾಸದಿಂದ ಭಾರತದಲ್ಲಿ ಆಳವಾಗಿ ಬೇರುಬಿಟ್ಟಿರುವ ಜಾತಿವ್ಯವಸ್ಥೆಯನ್ನು ನಾಶಮಾಡಿ ಜಾತ್ಯತೀತ ರಾಷ್ಟ್ರ ನಿರ್ಮಾಣ ಮಾಡಬಹುದು ಎಂಬ ಆಶಯ ಕಾದಂಬರಿಯಲ್ಲಿದೆ. ಸಮಾಜದಲ್ಲಿ ಜಾತಿ ವ್ಯಾಮೋಹವಿರುವ ವ್ಯಕ್ತಿಗಳು ಹೇಗೆ ಹರಡಿಕೊಂಡಿದ್ದಾರೆ ಮತ್ತು ಅವರಿಂದ ಎಂತಹ ವಿನಾಶ ಸಂಭವಿಸುತ್ತಿದೆ ಎಂದು ಕಾದಂಬರಿ ತಿಳಿಸುತ್ತದೆ.

ನಿತ್ಯಾನಂದ ಶೆಟ್ಟಿಯವರು ನೆಲದ ಬದುಕು ಪುಸ್ತಕದಲ್ಲಿ ಈ ಕಾದಂಬರಿಯ ಬಗ್ಗೆ ತಿಳಿಸುತ್ತಾ "ಕೆ.ಟಿ.ಗಟ್ಟಿಯವರ ಈ ಕಾದಂಬರಿ ಮಡಿ–ಮೈಲಿಗೆ ಕುರಿತ ಬಹಳ ಮೂಲ ಜಿಜ್ಞಾಸಿತವಾದ ಯಾವ ಪ್ರಶ್ನೆಯನ್ನೂ ಎತ್ತುವುದಿಲ್ಲ. ಅಂಥ ಸಮಾಜವೊಂದಕ್ಕೆ ಸೂಕ್ತವಾದ ಅವಕಾಶವೊಂದನ್ನು ಒದಗಿಸುವುದಿಲ್ಲ. ಕಾದಂಬರಿಯ ಕೇಂದ್ರ ಸಮಸ್ಯೆ ಯಾವುದು ಎಂಬುದರ ಬಗೆಗೆ ಸ್ವತಃ ಕಾದಂಬರಿಕಾರರಿಗೆ ಅನುಮಾನ

ಇರುವುದರಿಂದಲೋ ಏನೋ ಇಲ್ಲಿ ಸಮಾಜದ ಜಾತಿ ವ್ಯವಸ್ಥೆಯೂ ಒಂದು ಪ್ರಧಾನ ಸಮಸ್ಯೆಯಾಗಿ ಅದರ ಎಲ್ಲ ಸಂಕೀರ್ಣತೆಗಳೊಂದಿಗೆ, ಅದರ ಎಲ್ಲ ದ್ವಂದ್ವಗಳೊಂದಿಗೆ ಬೆಳೆಯುವುದಿಲ್ಲ. ಭಾರತೀಯ ಸಮಾಜ ಅನುಭವಿಸುತ್ತಿರುವ ಒಂದು ವಿರಾಟ್ ವಿಘಟನೆಯ ಭಾಗವಾಗಿ ಈ ಕಾದಂಬರಿ ಹುಟ್ಟಿಕೊಂಡಿದ್ದರೂ ಈ ವಿಘಟನೆಯನ್ನು ಅದು ನಿರ್ವಹಿಸುವುದು ಕೇವಲ ಕೆಲವು ಭಾಷಣಗಳಂತಹ ಮಾತುಗಳಲ್ಲಿ. ಇಡೀ ಕಾದಂಬರಿಯಲ್ಲಿ ಜೈವಿಕ ಸಂಬಂಧಗಳು ಶಿಥಿಲವಾಗಿ ಸೈದ್ಧಾಂತಿಕ ಸಂಬಂಧಗಳು ಮಾತ್ರ ಘನವಾಗಿ ಉಳಿಯುತ್ತವೆ". ಎನ್ನುತ್ತಾರೆ.

**(ಶ್ರೀಧರ್ ಹೆಚ್.ಜಿ.(ಸಂ) 2009. ಪುಟ 176)**

ಕಾದಂಬರಿಯು ಇನ್ನೇನನ್ನೋ ಹೇಳಬೇಕಿತ್ತು. ಸಂಪ್ರದಾಯ, ಮಡಿ, ಮೈಲಿಗೆಯ ಬಗ್ಗೆ ಇನ್ನೂ ಹೇಳಬಹುದಿತ್ತು ಎಂದು ಕಾದಂಬರಿ ಓದಿದಾಗ ಅನಿಸುತ್ತದೆ. ಆದರೆ ಬ್ರಾಹ್ಮಣ ಸಮಾಜದೊಳಗಿನ ದ್ವಂದ್ವಗಳನ್ನು ಚಿತ್ರಿಸುವುದು ಕಾದಂಬರಿಯ ಮೂಲ ಉದ್ದೇಶವಲ್ಲ. ಭಾರತೀಯ ಸಮಾಜದ ಮೇಲು ಜಾತಿ ಹಾಗು ಕೆಳಜಾತಿಯ ಮಧ್ಯೆ ಇರುವ ಅಸಮಾನತೆಯನ್ನು ತಿಳಿಸುವುದೇ ಕಾದಂಬರಿಯ ಮೂಲ ಉದ್ದೇಶವಾಗಿದೆಯೆಂದು ಕಂಡುಬರುತ್ತದೆ. ಜಾತಿ ವ್ಯವಸ್ಥೆ ಸಮಾಜವನ್ನು ಒಡೆಯುತ್ತದೆ. ಒಂದೇ ಧರ್ಮದೊಳಗಿನ ಒಂದು ಜಾತಿಯ ನಂಬಿಕೆಗಳು ಇನ್ನೊಂದು ಜಾತಿಯ ಸ್ವಾಭಿಮಾನಕ್ಕೆ ಧಕ್ಕೆಯನ್ನುಟುಮಾಡಿದಾಗ ಪ್ರತಿರೋಧ ಸಹಜವಾಗಿಯೇ ವ್ಯಕ್ತವಾಗುತ್ತದೆ. ಜಾತಿಗಿಂತ ಪ್ರೀತಿ ಶ್ರೇಷ್ಠ. ಪ್ರೀತಿಗೆ ಯಾವ ಜಾತಿಯೂ ಇಲ್ಲ. ಮನೋಹರನಿಗೆ ಆರತಿಯ ಮೇಲಾಗಲಿ, ಅರುಣನ ಮೇಲಾಗಲಿ ಪ್ರೀತಿ ಹುಟ್ಟುವುದು ಅವರು ಬೇರೆ ಬೇರೆಯವರು ಎಂಬ ಕಾರಣಕ್ಕಾಗಿ. ಅದು ಆತನ ಜಾತಿ ವ್ಯವಸ್ಥೆಯ ಬಗೆಗಿನ ಪ್ರತಿರೋಧವಾಗಿ ಕಾದಂಬರಿಯುದ್ದಕ್ಕೂ ಕಾಣುತ್ತದೆ. ಸುರೇಂದ್ರ ಕ್ರಿಶ್ಚಿಯನ್ ತಾಯಿಯ ಮಗಳನ್ನು ಮದುವೆಯಾಗುವುದು ಆಕೆಯೊಂದಿಗಿನ ಪ್ರೀತಿಯಿಂದ ಮಾತ್ರವಾಗಿರದೆ ಆತ ತನ್ನ ತಂದೆಯ ವಿರುದ್ಧ ತೋರುವ ಪ್ರತಿರೋಧವಾಗಿಯೂ ಕಾಣುತ್ತದೆ.

ಕಿರಿಯ ತಲೆಮಾರಿನ ಪ್ರೀತಿ ಪ್ರೇಮಕ್ಕೆ ಸಂಬಂಧಿಸಿದಂತೆ ಹಿರಿಯ ತಲೆಮಾರಿನಿಂದ ಪ್ರತಿರೋಧ ವ್ಯಕ್ತವಾಗಿದೆ. ಆದರೆ ಈ ರೀತಿಯ ಪ್ರತಿರೋಧವನ್ನು ಕಿರಿಯ ತಲೆಮಾರು ದಾಟಿ ಮುಂದೆ ಹೋಗಿದೆ. ಸುರೇಂದ್ರ ಮತ್ತು ಚಿತ್ರ ಹಾಗೂ ಮನೋಹರ ಮತ್ತು ಅರುಣ ಇವರ ಪ್ರೀತಿಯು ಎಲ್ಲರ ವಿರೋಧಗಳನ್ನು ಎದುರಿಸಬೇಕಾಗುತ್ತದೆ. ಸಾಂಪ್ರದಾಯಿಕ ಕೌಟುಂಬಿಕ ರಚನೆಯಲ್ಲಿ ಉಂಟಾಗುತ್ತಿರುವ ಬದಲಾವಣೆಯನ್ನು ಕಾದಂಬರಿಯಲ್ಲಿ ಗುರುತಿಸಬಹುದು. ಸುರೇಂದ್ರ ಹಾಗೂ ಚಿತ್ರ

ಇವರ ಮಧ್ಯೆ ಬೆಳೆದ ಪ್ರೀತಿಯನ್ನು ಗಮನಿಸಿದಾಗ ಹಿರಿಯ ತಲೆಮಾರಿನ ಬ್ರಾಹ್ಮಣ ವರ್ಗವು ತಮ್ಮ ವೈಯಕ್ತಿಕ ಚಪಲದಿಂದ ಅವನತಿ ಹೊಂದಿದೆ. ಇನ್ನೊಂದೆಡೆಯಲ್ಲಿ ಶಿಕ್ಷಣವನ್ನು ಪಡೆದ ಕಿರಿಯ ತಲೆಮಾರು ತನಗಿಂತ ಕೆಳವರ್ಗದ ಉತ್ತಮ ಶಿಕ್ಷಣವನ್ನು ಪಡೆದ ತರುಣ ತರುಣಿಯರನ್ನು ವಿವಾಹವಾಗಿ ಜಾತಿಯ ಕಟ್ಟುಪಾಡುಗಳನ್ನು ಮೀರಿ ಬ್ರಾಹ್ಮಣ್ಯದ ಮೂಲ ತಳಹದಿಯನ್ನೇ ಅಲುಗಾಡಿಸುವುದು ಕಂಡುಬರುತ್ತದೆ.

ಕಾದಂಬರಿಯಲ್ಲಿ ಚರ್ಚಿತವಾದ ಜಾತಿ ವ್ಯವಸ್ಥೆಯ ಬಗ್ಗೆ ಡಾ.ಶ್ರೀಧರ ಹೆಚ್.ಜಿ.ಯವರು ತಿಳಿಸುವಂತೆ "ಭಾರತೀಯ ಜಾತಿವ್ಯವಸ್ಥೆಯ ವಿನ್ಯಾಸ ಅತ್ಯಂತ ಸಂಕೀರ್ಣವಾದುದು. ಅದನ್ನು ತೊಡೆದು ಹಾಕುವುದು ಹೇಳಿದಷ್ಟು ಸರಳವಲ್ಲ. ರಾಮಕೃಷ್ಣರಾಯರ ಮಕ್ಕಳಾದ ಆರತಿ ಮತ್ತು ಅರುಣ ತಮಗಿಂತ ಕೆಳಗಿನ ಮನೋಹರ ಶೆಟ್ಟರ ಮಗನೊಂದಿಗೆ ನಡೆಸುವ ಪ್ರಣಯ ಮತ್ತು ವಿವಾಹ, ಸುರೇಂದ್ರನು ಬ್ರಾಹ್ಮಣ ತಂದೆ ಹಾಗೂ ಕ್ರಿಶ್ಚಿಯನ್ ತಾಯಿಗೆ ಹುಟ್ಟಿದ ಚಿತ್ರಳನ್ನು ಪ್ರೀತಿಸಿ ಮದುವೆಯಾಗುವುದರ ಮೂಲಕ ಮುಂದೆ ನಿರ್ಮಾಣಗೊಳ್ಳಲಿರುವ ಜಾತಿರಹಿತ ಸಮಾಜದ ಕನಸಿನ ಬೀಜಗಳನ್ನು ಬಿತ್ತುವರು. ಜಾತ್ಯತೀತ ಸಮಾಜ ನಿರ್ಮಾಣದ ಕಡೆಗೆ ಆಧುನಿಕ ಶಿಕ್ಷಣ ಪಡೆದ ಹೊಸ ತಲೆಮಾರು ಚಲಿಸುತ್ತಿರುವುದನ್ನು ಇಲ್ಲಿ ಗುರುತಿಸಲು ಸಾಧ್ಯ. ವ್ಯವಸ್ಥೆಯ ವಿರುದ್ಧ ನಡೆವ ಸಂಘರ್ಷದ ಆರಂಭದ ಹಂತದಲ್ಲಿ ಜಗದೀಶ ಆರತಿಯವರು ಅನಿವಾರ್ಯವಾಗಿ ಬಲಿಪಶುವಾಗುವ ಸಾಧ್ಯತೆಯನ್ನು ಗಟ್ಟಿಯವರ ಕೃತಿಗಳು ಸೂಚಿಸುತ್ತವೆ" ಎನ್ನುತ್ತಾರೆ. ಕಾದಂಬರಿಯುದ್ದಕ್ಕೂ ಕಂಡು ಬರುವ ಈ ಎಲ್ಲಾ ಸಂಘರ್ಷಗಳು ಬೇರೆ ಬೇರೆ ರೀತಿಯ ಪ್ರತಿರೋಧದ ನೆಲೆಗಳೇ ಆಗಿವೆ.

## ೪.೬: ಪೂಜಾರಿ

ಕೆ.ಟಿ.ಗಟ್ಟಿಯವರ 'ಪೂಜಾರಿ' ಕಾದಂಬರಿಯು 1982ರಲ್ಲಿ ಬಿಡುಗಡೆಯಾದ ಕೃತಿ. ಈ ಕಾದಂಬರಿ ಆರಂಭವಾಗುವುದು ಬಾಗಲೋಡಿ ಎಂಬ ಹಳ್ಳಿಯಿಂದ. ಅಲ್ಲಿ ಮಹಾಲಿಂಗೇಶ್ವರ ದೇವಾಲಯವಿದೆ. ಎಲಿಮೆಂಟರಿ ಶಾಲೆಯಿದೆ. ಆದರೆ ಸೌಲಭ್ಯಗಳಿಲ್ಲ. ಜಾತ್ರೆಯ ಬಳಿಕ ನಡೆಯುವ ಕೋಳಿಕಟ್ಟವೂ ಶಾಲೆಯ ಅಂಗಳದಲ್ಲಿ ಮತ್ತು ಜಗುಲಿಯಲ್ಲಿ ನಡೆಯುತ್ತದೆ. ಆ ಊರಿನಲ್ಲಿರುವ ಮಹಡಿ ಮನೆಗಳೆಂದರೆ ಎರಡು ಮಾತ್ರ. ಒಂದು ಕೇಶವ ಭಟ್ಟರದು ಇನ್ನೊಂದು ಸುಬ್ರಾಯ ಭಟ್ಟರದು. ಊರಿನ ದೇವಾಲಯದ ಅರ್ಚಕ ಕೇಶವ ಭಟ್ಟನಿಗೆ ತನ್ನ ನಂತರ ಮಗ ಅರ್ಚಕನಾಗಿ

ಮುಂದುವರಿಯಬೇಕೆಂಬ ಆಸೆ. "ನೀನು ಬೀಎಯೋ ಮಣ್ಣೋ ಮಾಡಿಕೊಂಡು ಮಾಡುವ ಸಂಪಾದನೆ ಅಷ್ಟರಲ್ಲೇ ಇದೆ. ಅದರ ನಾಲ್ಕು ಪಾಲು ಈ ದೇವಾಲಯ ನಿನಗೆ ಕೊಡುತ್ತದೆ" ಎಂದು ಮಗನಿಗೆ ಬುದ್ಧಿ ಹೇಳುತ್ತಿದ್ದ. ಮಗ ನಾಗರಾಜನಿಗೆ ರಜೆ

**(ಶ್ರೀಧರ್ ಹೆಚ್.ಜಿ.(ಸಂ), 2009. ಪುಟ 19)**

ಸಿಗುತ್ತಿದ್ದ ಸಂದರ್ಭದಲ್ಲಿ ಅವನನ್ನು ದೇವಾಲಯದ ಅರ್ಚನೆ ಕೆಲಸಕ್ಕೆ ನೇಮಿಸುತ್ತಿದ್ದ. ಅರ್ಚಕನ ಮಗನಾಗಿದ್ದರೂ ನಾಗರಾಜನಿಗೆ ದೇವರ ಮೇಲೆ ಸ್ವಲ್ಪವೂ ಭಕ್ತಿಯಿರಲಿಲ್ಲ. ಅವನಿಗೆ ಅದು ಗುಂಡುಕಲ್ಲು. ಅದರ ಬಗ್ಗೆ ಅವನಿಗೆ ಎಂದೂ ಭಕ್ತಿ ಉಂಟಾಗಿರಲಿಲ್ಲ. ಆರತಿ ಎತ್ತುವಾಗ, ಗಂಟೆ ಅಲ್ಲಾಡಿಸುವಾಗ ಅವನಲ್ಲಿ ಯಾವ ಭಾವನೆಯೂ ಉಂಟಾಗುತ್ತಿರಲಿಲ್ಲ. ಶ್ಲೋಕಗಳನ್ನು ಯಾಂತ್ರಿಕವಾಗಿ ಉಚ್ಚರಿಸುತ್ತಿದ್ದ. ಮನಸ್ಸು ಎಲ್ಲೆಲ್ಲೋ ಇರುತ್ತಿತ್ತು. ಆ ಕೆಲಸ ಅದೊಂದು ಶಿಕ್ಷೆ ಎನಿಸುತ್ತಿತ್ತು.

ಬೆಳಿಗ್ಗೆ ಒದ್ದೆ ಕಚ್ಚೆಯುಟ್ಟುಕೊಂಡು ಪ್ರತಿನಿತ್ಯ ಬರಿಮೈಯಲ್ಲಿ ದೇವರನ್ನು ಹೊತ್ತುಕೊಂಡು ಸುತ್ತು ಬರುವುದು ಅವನಿಗೆ ಇಷ್ಟವಿರಲಿಲ್ಲ. ತಾನು ಅರೆ ಬೆತ್ತಲಾಗಿ ಪ್ರದಕ್ಷಿಣೆ ಹಾಕುವುದನ್ನು ಜನ ನೋಡುತ್ತಿದ್ದಾಗ ತಾನು ಪೂರಾ ಬೆತ್ತಲೆಯಿದ್ದಂತೆ ಆತನಿಗನ್ನಿಸುತ್ತಿತ್ತು.

ಕೇಶವ ಭಟ್ಟ ಪೂಜಾರಿ ವೃತ್ತಿಯ ಸಂಪಾದನೆಯಿಂದ ಹುಲ್ಲು ಛಾವಣಿಯ ತನ್ನ ಮನೆಯನ್ನು ಹಂಚಿನ ಮಹಡಿ ಮನೆಯನ್ನಾಗಿ ಪರಿವರ್ತಿಸಿದ್ದ. ಮನೆಯ ಮುಂದೆ ಕಂಗಿನ ಮತ್ತು ತೆಂಗಿನ ತೋಟ ಮಾಡಿಕೊಂಡು ಸುಖದಿಂದ ಜೀವನ ಸಾಗಿಸುತ್ತಿದ್ದ. ತಾನು ಚಿಕ್ಕವನಾಗಿದ್ದಾಗ ಅನೇಕ ಸಲ ಲಿಂಗದ ಬುಡದಿಂದ ಹೊರ ಹೋಗುತ್ತಿದ್ದ ಅಭಿಷೇಕ ಜಲದ ತೋಡಿಗೆ ಮೂತ್ರ ಮಾಡಿದ್ದ. ಇದಕ್ಕಾಗಿ ತಂದೆಯಿಂದ ಏಟೂ ತಿಂದಿದ್ದ.

ಬಾಗಲೋಡಿಯಲ್ಲಿ ಕೊಟ್ಟಾರಿ ಪರಮೇಶ್ವರಯ್ಯನ ಮನೆ ನಾಗರಾಜನಿಗೆ ಅತ್ಯಂತ ಪ್ರಿಯವಾದ ಸ್ಥಳವಾಗಿತ್ತು. ಹಿಂದಿನ ಪರಿಚಯ, ಸಲುಗೆಯಿಂದ ಪರಮೇಶ್ವರಯ್ಯನ ಮನೆಗೆ ಆಗಾಗ ಹೋಗುತ್ತಿದ್ದ. ನಾಗರಾಜನಿಗೆ ಸುಂದರಿಯಾದ ಹದಿನೆಂಟರ ಹರೆಯದ ಗಿರಿಜಳನ್ನು ಕಂಡಾಗ ಹೃದಯ ಅರಳುತ್ತಿತ್ತು. ಆದರೆ ಸ್ಥಾನಿಕರಾದ ಪರಮೇಶ್ವರಯ್ಯನ ಮಕ್ಕಳನ್ನು ಮದುವೆಯಾಗುವುದು ಅಸಾಧ್ಯವಾಗಿತ್ತು. ತನ್ನ ತಂದೆ ವಾಲಗದ ಪಕ್ಕೀರನ ಮಗಳು ಭವಾನಿಯನ್ನು ಇಟ್ಟುಕೊಂಡಿದ್ದು, ಅವಳಿಗೆ ತನ್ನ ತಂದೆಯಿಂದ ಮೂರು ಮಕ್ಕಳು ಹುಟ್ಟಿರುವ ವಿಚಾರ ನೆನಪಾಗುತ್ತಿತ್ತು. ಜಾತಿಯ ಕಾರಣದಿಂದ ಮದುವೆ

ಸಾಧ್ಯವಾಗದಿದ್ದಾಗ ತಾನೂ ತಂದೆಯಂತೆ ಗಿರಿಜಳನ್ನು ಇಡು ಹೆಣ್ಣಾಗಿ ಇರಿಸಿಕೊಂಡರೆ ಹೇಗೆ ಎಂದು ನಾಗರಾಜ ಯೋಚಿಸುತ್ತಿದ್ದ.

ತನ್ನ ತಂದೆ ಊಟ, ತಿಂಡಿಗೂ ಹಣ ನೀಡದಿದ್ದಾಗ ಶನಿವಾರ, ಭಾನುವಾರ ಪೂಜೆಯ ಅವಕಾಶ ತನಗೆ ಸಿಕ್ಕಿದಾಗ ಪ್ರಸಾದದ ತಟ್ಟೆಯಲ್ಲಿರುವ ನಾಲ್ಕೈದು ಒಳ್ಳೊಳ್ಳೆಯ ನಾಣ್ಯಗಳನ್ನು ಎತ್ತಿ ಲಂಗೋಟಿಯೊಳಗೆ ಸೇರಿಸಿದ. ಭಕ್ತಮಹಾಶಯನೊಬ್ಬ ಒಂದು ರೂಪಾಯಿ ನಾಣ್ಯ ಹಾಕಿದರೆ ಅವನ ಮುಖ ನೋಡಿ ದೊಡ್ಡದೊಂದು ಗಂಧದುಂಡೆಯನ್ನು ಅವನ ಕೈಗೆ ಹಾಕಿ ಹೂವು, ತುಳಸಿ ಕೈತುಂಬಾ ಕೊಡುತ್ತಿದ್ದ.

ಹದಿನೇಳು ವರ್ಷದ ನಾಗರಾಜ ಸುಮಾರು ಮೂವತ್ತು ವರ್ಷದ ಶಂಕರಿಯನ್ನು ಕಂಡು ಆಕರ್ಷಿತನಾಗುತ್ತಾನೆ. ಗಿರಿಜಳನ್ನು ಕಂಡಾಗ ಮುತ್ತಿಡಬೇಕೆನಿಸುತ್ತದೆ. ಆದರೆ ಆತನಿಗೆ ಭಯ. ಆ ಸಂದರ್ಭದಲ್ಲೆಲ್ಲಾ ತನ್ನ ತಂದೆ–ಭವಾನಿಯರ ಸಂಬಂಧ ನೆನಪಾಗುತ್ತದೆ.

ತನ್ನ ಅಕ್ಕ ನರ್ಮದಳ ಮನೆಯಲ್ಲಿದ್ದುಕೊಂಡು ನಗರದ ಕಾಲೇಜಿನಲ್ಲಿ ಓದುತ್ತಿದ್ದ ನಾಗರಾಜ ತನ್ನ ವಯಸ್ಸಿಗೆ ಸಹಜವಾದ ಆಕರ್ಷಣೆಗೆ ಒಳಗಾಗುತ್ತಾನೆ. ಬಾಗಲೋಡಿಯ ಸುಬ್ರಾಯ ಭಟ್ಟರ ಮಗ ರಮಾನಂದ ಹಾಗೂ ವಾಸುದೇವ ಶೆಟ್ಟಿಯೊಂದಿಗೆ ಸೇರಿಕೊಂಡು ಸಿನಿಮಾ ನೋಡುತ್ತಾನೆ, ಸಿಗರೇಟು ಸೇದುತ್ತಾನೆ. ಪಿ.ಯು.ಸಿ. ಮೊದಲ ವರ್ಷ ಮುಗಿಸಿ ಮನೆಗೆ ಮರಳಿದ ನಾಗರಾಜ ಮಹಾಲಿಂಗೇಶ್ವರ ದೇವಾಲಯದ ಪೂಜಾರಿ ಕೆಲಸ ಆರಂಭಿಸಿದ. ತನ್ನ ಆರೋಗ್ಯ ಸರಿಯಿಲ್ಲವೆಂದು ತಂದೆ ಮಗನನ್ನೇ ಪೂಜೆಗೆ ನೇಮಿಸಿದ. "ಪೂಜೆ ಮಾಡುವ ಕೆಲಸ ನಾಗರಾಜನಿಗೆ ಹಣ ಮಾಡುವ ಒಂದೇ ಕಾರಣದಿಂದ ಬೇಕಾದುದಾಗಿದ್ದು, ಮತ್ತೆಲ್ಲ ಕಾರಣಗಳಿಂದ ಒಂದು ಶಾಪವೆಂಬಂತೆ ತೋರುತ್ತಿತ್ತು."

**( ಪೂಜಾರಿ, 1983. ಪುಟ 44)**

"ಪೂಜೆಯ ಭಟ್ಟನೆಂದರೆ ಗಾಣಕ್ಕೆ ಕಟ್ಟಿದ ಎತ್ತಿನ ಹಾಗೆ. ಎಲ್ಲಕ್ಕಿಂತ ಕಳಪೆಯಾದ ಒಂದು ದಂಧೆ. ಅವನಿಗೆ ಸ್ವಾತಂತ್ರ್ಯವಿಲ್ಲ. ದಿನಕ್ಕೆ ಮೂರು ಬಾರಿ ಒದ್ದೆ ಬಟ್ಟೆಯಲ್ಲಿ ನರಳಬೇಕಾದುದೇ ಅವನ ಅಸ್ತಿತ್ವಕ್ಕಿರುವ ಅರ್ಥ. ಇತರರು ಕೂಡಾ ಅವನೊಬ್ಬ ಮನುಷ್ಯನೆಂಬ ದೃಷ್ಟಿಯಿಂದ ನೋಡುವುದಿಲ್ಲ. ಇತರ ಮನುಷ್ಯರಂತೆ ವರ್ತಿಸಿದರೆ ಅವನು ಅಪಹಾಸ್ಯಕ್ಕೀಡಾಗುತ್ತಾನೆ. ಅವನು ಎಡಗೈಯಿಂದ ಗಂಟೆಯನ್ನು

ಬಲಗೈಯಿಂದ ಆರತಿಯನ್ನು ಎತ್ತುವ ಒಂದು ಯಂತ್ರ. ಅವನಿಗೆ ಗಮನೀಯವಾದ ಗಾತ್ರದ ಮಿದುಳು ಕೂಡಾ ಬೇಕೆಂದಿಲ್ಲ. ಅವನಿಗೆ ಬುದ್ಧಿ, ಪ್ರೇಮ, ಕಾಮ ಎಲ್ಲಾ ಇದೆ, ಇರಬೇಕು ಎಂದು ಯಾರೂ ತಿಳಿಯುವುದಿಲ್ಲ." ಎಂಬುದು ನಾಗರಾಜನ ಅಭಿಪ್ರಾಯ.

**(ಅದೇ, ಪುಟ 57)**

ಕುರುಡ ರಾಜುವನ್ನು ಕಂಡಾಗ ಆತನ ಮದುವೆಯ ಬಗ್ಗೆ ಮಾತನಾಡುತ್ತಿದ್ದ. ಆತನ ಕೊಳಲ ದನಿ ಕೇಳುತ್ತಾ ಎಲ್ಲವನ್ನೂ ಮರೆಯುತ್ತಿದ್ದ. ಮನಸ್ಸು ಶಾಂತವಾಗುತ್ತಿತ್ತು. ರಾತ್ರಿ ಹನ್ನೊಂದು ಗಂಟೆಯ ಹೊತ್ತಿಗೆ ಶಂಕರಿಯ ಮನೆ ಕಡೆ ನಡೆದು ಆಕೆಯ ಬಗ್ಗೆ ತನ್ನ ಮನಸ್ಸಿನ ಇಂಗಿತವನ್ನು ತಿಳಿಸಲು ಧೈರ್ಯ ಸಾಲದೆ ಮರಳಿ ಮನೆಗೆ ಬಂದಿದ್ದ.

ಪಿ.ಯು.ಸಿ. ಮುಗಿಸಿ ಬಿ.ಎ. ಸೇರಿದ ನಾಗರಾಜನಿಗೆ ಅರ್ಥಶಾಸ್ತ್ರದ ಸುಂದರಿಯಾದ ಮೇಡಮ್ಮು ಕಾಂತಿಮತಿಯ ಪಾಠ ಇದೆ ಎಂಬುದರಿಂದ ಮಾತ್ರವೇ ಕ್ಲಾಸಿಗೆ ಹೋಗಬಹುದು ಎಂದನಿಸುತ್ತಿತ್ತು. ಹೆಣ್ಣುಗಳು ತನ್ನನ್ನು ಗಮನಿಸದಿರುವುದರ ಬಗ್ಗೆ ಆಗಾಗ ತನ್ನಲ್ಲೇ ಸಿಟ್ಟು ಬರುತ್ತಿತ್ತು. "ಈ ಹೆಣ್ಣುಗಳೆಲ್ಲಾ ಏನು ತಿಳಿದುಕೊಂಡಿದ್ದಾರೆ? ತಮಗಿಂತ ಅಮೂಲ್ಯವಾದ ಸಂಗತಿ ಬೇರೊಂದಿಲ್ಲ ಎಂದುಕೊಂಡಿರಬಹುದು" ಅನ್ನಿಸುತ್ತಿತ್ತು. ಕಾಲೇಜು ವಾರ್ಷಿಕೋತ್ಸವದ ಸಂದರ್ಭದಲ್ಲಿ ನಾಟಕದಲ್ಲಿ ಸ್ತ್ರೀ ಪಾತ್ರ ಮಾಡಬೇಕಾದ ಸಂದರ್ಭದಲ್ಲಿ ನಾಗರಾಜ ಅರ್ಥಶಾಸ್ತ್ರ ಮೇಡಮ್ಮಿನ ಸೀರೆ ರವಕೆ ತೊಟ್ಟಾಗ ತನ್ನ ಮನಸ್ಸಿನಲ್ಲೇ ಸುಖ ಪಟ್ಟಿದ್ದ.

ಬಸ್ಸಿನಲ್ಲಿ ಟಿಕೇಟು ತೆಗೆದುಕೊಳ್ಳಲು ಸುಕನ್ಯಾಳಿಗೆ ಸಹಾಯ ಮಾಡಿದ ನಾಗರಾಜ ಆ ಸಹಾಯದ ನೆಪದಿಂದ ಆಕೆಯ ಮನೆಯ ತನಕವೂ ಹೋಗುತ್ತಾನೆ. ಆಕೆಯನ್ನು ಆಲಿಂಗಿಸುತ್ತಾನೆ. ಆಕೆಯ ಮನೆಯಲ್ಲಿ ಯಾರೂ ಇಲ್ಲದ ಸಂದರ್ಭದಲ್ಲಿ ಎರಡು ಮೂರು ಸಲ ತನ್ನ ಈ ಕಾರ್ಯವನ್ನು ಮುಂದುವರಿಸುತ್ತಾನೆ. ಮುಂಬಯಿಯಿಂದ ಬಂದ ರಮಾನಂದ ಮುಂಬಯಿಯ ರಂಗು ರಂಗಿನ ಬದುಕಿನ ಬಗ್ಗೆ ತಿಳಿಸುತ್ತಾನೆ. ಮಿಲಿಟರಿ ಹೋಟೆಲೊಂದಕ್ಕೆ ಕರೆದೊಯ್ದು ನಾಗರಾಜ ಭಟ್ಟನಿಗೆ ಚಿಕನ್ ಬಿರಿಯಾನಿ ತಿನ್ನಿಸುತ್ತಾನೆ.

ಜ್ವರ ನೆಗಡಿಯಿಂದ ನರಳುತ್ತಿದ್ದ ಕೇಶವ ಭಟ್ಟನು ನಾಗರಾಜ ಮನೆಗೆ ಬಂದಾಗ ಆತನಿಗೆ ದೇವಾಲಯದ ಪೂಜೆಯ ಜವಾಬ್ದಾರಿ ಒಪ್ಪಿಸಿಬಿಟ್ಟ. ತಂದೆಯ ವರ್ತನೆ ಕಂಡು "ನಾಲ್ಕು ಕಾಸು ಸಿಗುವ ಆಸೆಯೊಂದಿಲ್ಲದಿದ್ದರೆ ಯಾವ ಅರ್ಚಕನು ತಾನೆ ಪೂಜೆಗೆ ಸಿದ್ಧವಿದ್ದಾನು? ಅವನು ಪುಣ್ಯ ಸಂಪಾದಿಸಲಿಕ್ಕಾಗಿ ದೇವರ ಮುಂದೆ ಗಂಟೆ ಬಾರಿಸಿ

ಆರತಿ ಬೆಳಗುತ್ತಾನೆಯೇ? ಅವನೊಂದು ಜೀತದಾಳು. ಅವನು ಮಾಡುತ್ತಿರುವ ಈ ಯಾಂತ್ರಿಕ ಕಾರ್ಯವು ದಿವ್ಯವೆಂದು ನೋಡುತ್ತಾ ಇರುವವರು ಹೆಡ್ಡರೆ" ಅನ್ನಿಸುತ್ತಿತ್ತು.

(ಅದೇ ಪುಟ 93)

ಸಂಪ್ರದಾಯ ಎನ್ನುವುದೊಂದು ಮೌಢ್ಯ ಅನ್ನಿಸುತ್ತಿತ್ತು. ತಂದೆಯನ್ನು ಕಂಡೊಡನೆ ಶೂದ್ರರು ದೂರದಲ್ಲಿ ನಿಲ್ಲುವುದು, ಹೊಲೆಯರು ದಾರಿಬಿಟ್ಟು ಮಾರುದ್ದ ಜಿಗಿಯುವುದು ಇದೆಲ್ಲ ಹಾಸ್ಯಾಸ್ಪದವಾಗಿ ಕಾಣಿಸುತ್ತಿತ್ತು. ತನ್ನನ್ನು ನೋಡಿದ ಕೂಡಲೇ ಜನರೆಲ್ಲ ದೂರ ಸರಿಯುವುದನ್ನು ಕಂಡು ತಾನೇ ಅಸ್ಪೃಶ್ಯನೇನೋ ಅನ್ನಿಸುತ್ತಿತ್ತು. ದೇವಾಲಯದ ಉತ್ಸವದ ಸಂದರ್ಭದ ಸಮಾರಾಧನೆಯಲ್ಲಿ ಬ್ರಾಹ್ಮಣರು ಊಟ ಮಾಡಿ ತೇಗಿದ ಮೇಲೆಯೇ ಶೂದ್ರರಿಗೆ ಅನ್ನ ನೀಡುವುದನ್ನು ಕಂಡಾಗ ಇದೆಲ್ಲಾ ಅನ್ಯಾಯ, ಅಧರ್ಮ ಅನ್ನಿಸುತ್ತಿತ್ತು. ಶೂದ್ರನೊಬ್ಬ ಶ್ರಾದ್ಧವನ್ನು ದೇವಾಲಯದಲ್ಲಿ ಮಾಡಿದಾಗ ಬ್ರಾಹ್ಮಣನು ಧರ್ಮಕ್ಕೆ ಊಟ ಮಾಡಿ ಕೈ ತೊಳೆದು ಬಂದ ಮೇಲೆಯೇ ಆ ಮೃತನ ಬಂಧು ಬಳಗದವರಿಗೆ ಊಟ ಬಳಿಸುವ ಪದ್ಧತಿಯನ್ನು ಕಂಡಾಗ ಆಶ್ಚರ್ಯವಾಗುತ್ತಿತ್ತು. ತಾನು ದೇವರ ಮೂರ್ತಿಯ ಎದುರು ನಡೆಸುವುದೆಲ್ಲಾ ಕೇವಲ ನಾಟಕ ಎಂದು ತಿಳಿದಿದ್ದರೂ ಅದನ್ನೇ ಸತ್ಯವೆಂದು ನಂಬಿಕೊಂಡಿರುವಂತೆ ವರ್ತಿಸಬೇಕಾದ ಅನಿವಾರ್ಯತೆಗಾಗಿ ಸಂಕಟಪಟ್ಟಿದ್ದ. ನಾಟಕದ ಗಣಪತಿ ಎಂಬವನೊಂದಿಗೆ ಸೂಳೆ ಮನೆಗೆ ಹೋಗುವ ಸಂದರ್ಭ ಲಭಿಸಿದಾಗ ಅಲ್ಲಿಗೂ ಕಾಲಿಟ್ಟ. ಹಲವು ಬಾರಿ ಅಲ್ಲಿಗೆ ಆತನೊಂದಿಗೆ ಹೋದ ನಾಗರಾಜ ಒಮ್ಮೆ ತಾನೊಬ್ಬನೇ ಧೈರ್ಯದಿಂದ ಅಲ್ಲಿಗೆ ಹೋಗಿ ಹೆಣ್ಣೊಬ್ಬಳ ಸಂಗವನ್ನು ಮಾಡಿದ. ಇದರಿಂದಾಗಿ ಲೈಗಿಕ ಕಾಯಿಲೆ ಅಂಟಿಕೊಂಡಿತು. ವಿಷಯ ತಿಳಿದ ಅಕ್ಕ ನರ್ಮದಳಿಂದ ತಕ್ಕ ಶಾಸ್ತಿಯೂ ಆಯಿತು.

ಊರಿಗೆ ಮರಳಿದ ನಾಗರಾಜನಿಗೆ ದೇವರನ್ನು ಹೊರುವ ಕೆಲಸ ಕಾಯುತ್ತಿತ್ತು. ಮಧ್ಯಾಹ್ನ ಸುಮಾರು ಮೂರು ಗಂಟೆಯ ಹೊತ್ತಿಗೆ ಎದ್ದು ಪರಮೇಶ್ವರಯ್ಯನ ಮನೆಗೆ ಹೋಗಿ ಅಲ್ಲಿದ್ದ ಗಿರಿಜಳೊಂದಿಗೆ ಸಂಬಂಧ ಹೊಂದುತ್ತಾನೆ. ಆಕೆಯನ್ನು ಮದುವೆಯಾಗುವ ಭರವಸೆಯನ್ನೂ ನೀಡುತ್ತಾನೆ. ರಾತ್ರಿ ದೇವರನ್ನು ಹೊತ್ತು ನಡೆಯುವಾಗ ಕೈ, ಕಾಲು ನಿತ್ರಾಣವಾಗಿ ದೇವರನ್ನು ಹೊತ್ತು ಹಾಕಿ ಎತ್ತಲಾದರೂ ಓಡಿ ಬಿಡೋಣ ಅನ್ನಿಸುತ್ತಿತ್ತು. ಪರಮೇಶ್ವರನ ಮನೆಯ ಮುಂದೆ ಕೊಳಲು ಬಾರಿಸುತ್ತಿದ್ದ ಕುರುಡ ರಾಜುವಿಗೆ ಶಾಂತಳ ಗಂಡ ಡಾಕ್ಟರ್ ಶಶಿಕಾಂತ ಚಿಕಿತ್ಸೆ ಕೊಡಿಸುವ ಭರವಸೆ ನೀಡುತ್ತಾನೆ. ಬಿ.ಎ. ಯ ಫಲಿತಾಂಶ ಬಂದಾಗ ನಾಗರಾಜ ಫೇಲಾಗಿದ್ದ. ಗಿರಿಜ ತಾನು ಎರಡು ತಿಂಗಳ ಬಸುರಿ ಎಂಬ ವಿಷಯ ತಿಳಿದ ನಾಗರಾಜ ಆಕೆಗೆ ಪುನಃ ಧೈರ್ಯ ತುಂಬಿದ. ತಂದೆಯೊಡನೆ ತಾನು ಗೌರಿಯನ್ನು ಮದುವೆ ಆಗುವುದಾಗಿಯು

ತನ್ನ ಪಾಲಿನ ಭೂಮಿ ನೀಡಬೇಕೆಂದೂ ತಿಳಿಸಿದ. ವಿಷಯ ತಿಳಿದ ಕೇಶವ ಭಟ್ಟ ಮಗನ ಕೆನ್ನೆಗೊಂದು ಬಾರಿಸಿದ. ನಾಗರಾಜನಿಂದ ಗರ್ಭಿಣಿಯಾದ ಗಿರಿಜಾಳನ್ನು ಕುರುಡನಾದ ರಾಜುವಿಗೆ ಬಲವಂತದಿಂದ ಮದುವೆ ಮಾಡಿಸುತ್ತಾರೆ. ಗಿರಿಜಾಳ ಅನೈತಿಕ ಸಂಬಂಧಕ್ಕೆ ರಾಜುವೇ ಕಾರಣ ಎಂಬ ಸುದ್ದಿ ಹಬ್ಬಿಸಲಾಗುತ್ತದೆ.

ದೇವಾಲಯದ ಬಾವಿಯ ನೀರಿನಲ್ಲಿ ಏನೋ ಶಕ್ತಿಯಿದೆ ಎಂದು ತಿಳಿದು ಜನ ಹೊಟ್ಟೆನೋವು, ತಲೆನೋವು, ವಾತ, ಪಿತ್ತ, ಹುಚ್ಚು, ಎಲ್ಲದಕ್ಕೂ ದೇವಾಲಯಕ್ಕೆ ಬಂದು ನೀರನ್ನು ಕೊಂಡೊಯ್ಯುತ್ತಿದ್ದರು. ತಾನು ಪೂಜೆ ಮಾಡುತ್ತಿದ್ದ ಮಹಾಲಿಂಗೇಶ್ವರ ಮೂರ್ತಿಯ ವಜ್ರದ ಕಣ್ಣನ್ನು ಅಪಹರಿಸುವ ಯೋಜನೆ ಹಾಕುತ್ತಾನೆ. ಇನ್ನೂರು ರೂಪಾಯಿಗೆ ನಕಲಿ ವಜ್ರದ ಕಣ್ಣನ್ನು ಖರೀದಿಸಿ ತಾನು ಮಹಾಲಿಂಗೇಶ್ವರನನ್ನು ಪೂಜಿಸುವ ಸಂದರ್ಭದಲ್ಲಿ ತಾನು ತಂದ ನಕಲಿ ವಜ್ರದ ಕಣ್ಣನ್ನು ಮೂರ್ತಿಗೆ ಇಟ್ಟು ಮೂರ್ತಿಯ ವಜ್ರದ ಕಣ್ಣನ್ನು ಅಪಹರಿಸುತ್ತಾನೆ. ಮುಂಬಯಿಯ ಆಭರಣದ ಅಂಗಡಿಯೊಂದರಲ್ಲಿ ಅದನ್ನು ಮಾರಲು ಹೋದಾಗ ಅದೊಂದು ಕೃತಕ ವಜ್ರವೆಂದು ತಿಳಿಯಿತು. ದೇವರ ವಜ್ರ ಕದ್ದವನು ತನ್ನ ತಂದೆಯೇ ಎಂದು ಆತನಿಗೆ ಮನದಟ್ಟಾಗಿತ್ತು. ಮುಂಬಯಿಯಲ್ಲಿ ಬದುಕು ಸಾಗಿಸಲು ಹೋಟೆಲೊಂದರಲ್ಲಿ ತಿಂಗಳಿಗೆ ಐವತ್ತು ರೂಪಾಯಿ ಸಂಬಳಕ್ಕೆ ಸಪ್ಲಯರ್ ಕೆಲಸಕ್ಕೆ ಸೇರಿದ. ಆ ಸಂದರ್ಭದಲ್ಲಿ ಆತ ಯೋಚಿಸುತ್ತಾನೆ "ಪ್ರಸಾದದ ತಟ್ಟೆಯಿಂದ ತಾನು ಜೇಬಿಗಿಳಿಸುತ್ತಿದ್ದ ಹಣವೇ ತಿಂಗಳಿಗೆ ಐವತ್ತು ರೂಪಾಯಿಗಿಂತ ಹೆಚ್ಚಾಗುತ್ತಿತ್ತು. ತಾನು ಖಾಯಂ ಅರ್ಚಕನಾದರೆ ಎಲ್ಲ ಹಣವೂ ನನಗೇ. ಕೆಲಸಕ್ಕೆ? ದಿನಕ್ಕೆ ಮೂರು ಬಾರಿ ಆರತಿಯೆತ್ತಿ ಗಂಟೆ ಬಾರಿಸಿದರೆ ತನ್ನ ಕೆಲಸವಾಯಿತು. ಇಲ್ಲಿ ದಿನಕ್ಕೆ ಹನ್ನೆರಡು ಗಂಟೆಗಳ ಕಾಲ ಕತ್ತೆಯಂತೆ ಕಾಲಮೇಲೆ ನಿಂತು ದುಡಿದರೆ ಕೊಳಕು ಆಹಾರ, ತಿಂಗಳಿಗೆ ಐವತ್ತು ರೂಪಾಯಿ, ಮನುಷ್ಯನೆಂಬ ಗೌರವ ಕೂಡಾ ಇಲ್ಲ". ಮುಂಬಯಿಯಿಂದ ಊರಿಗೆ ಮರಳಿದ ನಾಗರಾಜ ಶಸ್ತ್ರಚಿಕಿತ್ಸೆ

**(ಅದೇ, ಪುಟ 165)**

ಯಿಂದ ದೃಷ್ಟಿ ಪಡೆದುಕೊಂಡ. ರಾಜುವಿಗೆ ಗಿರಿಜಾಳ ಮಗು ತನ್ನದಲ್ಲವೆಂದು ತಿಳಿಯುತ್ತದೆ. ವಿಷಯ ತಿಳಿದ ಆತ ಊರು ಬಿಟ್ಟು ಹೋಗುತ್ತಾನೆ.

ದೇವರ ಹಣೆಯ ಮೇಲಿದ್ದ ವಜ್ರ ಕದ್ದಿರುವ ವಿಷಯ ಊರಿಗೆಲ್ಲಾ ತಿಳಿಸುತ್ತೇನೆಂದು ತಂದೆಗೆ ಹೇಳಿದಾಗ ಉಪಾಯವಿಲ್ಲದೆ ಆಸ್ತಿ ಪಾಲು ಮಾಡಿ ಮಗನಿಗೆ ಕೊಡುವ ನಿರ್ಧಾರ ಮಾಡುತ್ತಾನೆ. ತಾನು ಉತ್ಸವದ ದಿನದಂದು ದೇವರ ಮೂರ್ತಿಯನ್ನು ಹೊರಲು ಒತ್ತಾಯಿಸುತ್ತಿದ್ದ ತಂದೆಯೊಂದಿಗೆ ತಾನು ದೇವರ

ಮೂರ್ತಿಯನ್ನು ಹೊತ್ತು ಹಾಕುವುದಾಗಿ ಹೇಳಿದರೂ ಕೊನೆಗೆ ದೇವರನ್ನು ಹೊರುವ ನಿರ್ಧಾರ ಮಾಡುತ್ತಾನೆ. ನಾಗರಾಜ ದೇವರನ್ನು ಹೊತ್ತುಕೊಂಡಾಗ "ತಾನು ನೋಡಿದ್ದು, ಮಾಡಿದ್ದು ಅಲ್ಲವೆ ನಾನು ಎಂಬುದು? ಅದು ಬಿಟ್ಟು ಬೇರೇನಿದೆ ನನ್ನಲ್ಲಿ? ಅದೆಲ್ಲವೂ ದೇವರಾದರೆ ನಾನೂ ದೇವರೇ. ಪೂಜಾರಿಯ ತಲೆ ಮೇಲಿರುವುದು ದೇವರಾದರೆ, ಪೂಜಾರಿಯೂ ದೇವರೆ". ಎಂದು ಯೋಚಿಸಿದ. ತಂದೆಯಿಂದ ಆಸ್ತಿ ಪಡೆದು ದೇವಾಲಯದ ಪೂಜಾರಿಯಾಗಿ, ಗಿರಿಜಾಳನ್ನು ಮದುವೆಯಾಗುವ ನಿರ್ಧಾರ ಮಾಡುತ್ತಾನೆ. ಹೀಗೆ ಕಾದಂಬರಿ ಕೊನೆಗೊಳ್ಳುತ್ತದೆ.

ಕಾದಂಬರಿಯು ಸಮಾಜದಲ್ಲಿ ದೇವಾಲಯಗಳ ಅಗತ್ಯವಿದೆಯೇ ಎಂಬ ಪ್ರಶ್ನೆಯನ್ನು ಎತ್ತುತ್ತದೆ. ಕಾದಂಬರಿಯ ಆಂತರ್ಯದಲ್ಲಿ ಒಡಮೂಡುವ ವಿಚಾರಗಳು ಕಾದಂಬರಿಯ ಮುನ್ನುಡಿಯಲ್ಲಿಯೇ ತೆರೆದುಕೊಳ್ಳುತ್ತವೆ.

"ಪೂಜಾರಿ ಕಾದಂಬರಿಯ ಮುನ್ನುಡಿ ಕೆಲವು ಸಾರ್ವಕಾಲಿಕ ಪ್ರಶ್ನೆಗಳನ್ನು ಎತ್ತುವುದರಿಂದ ಅದು ಕಾದಂಬರಿಗಿಂತಲು ಮುಖ್ಯವೆಂದು ಅನ್ನಿಸುತ್ತದೆ".

**(ಶ್ರೀಧರ್ ಹೆಚ್.ಜಿ.(ಸಂ), 2009. ಪುಟ 182)**

"ದೇವರಿಲ್ಲದಲ್ಲಿ ದೇವರನ್ನು ಹುಡುಕಬೇಡಿ. ಧರ್ಮವನ್ನು ಉಳಿಸಲು ದೇವಾಲಯದಿಂದ, ಪೂಜೆಯಿಂದ ಸಾಧ್ಯವಿಲ್ಲ. ಅದಕ್ಕೆ ಬೇರೆ ದಾರಿಗಳನ್ನು ಕಂಡುಕೊಳ್ಳಬೇಕು. ಹೊಟ್ಟೆಗೆ ಅನ್ನವಿರುವುದರಿಂದಲೇ ನಿಮಗೆ ಮನಸ್ಸಿಗೆ ಶಾಂತಿ ಬೇಕಾಗಿರುವುದು. ಶಾಂತಿಯನ್ನರಿಯದ, ಹಸಿವೆಯಿಂದ ನರಳುವ ಜನಕ್ಕೆ ಕೂಡಾ ದೇವಾಲಯದ ದಾರಿಯನ್ನು ತೋರಿಸಿ, ಅಲ್ಲೇ ಇರುವುದು ಶಾಂತಿ ಎಂದು ಅವರಲ್ಲಿ ಮೂಢನಂಬಿಕೆಯನ್ನು ಹುಟ್ಟಿಸಲು ಯತ್ನಿಸುತ್ತೀರಿ. ಆದರೆ ಹೆಚ್ಚು ಹೆಚ್ಚು ಜನರು ತಿಳುವಳಿಕೆಯುಳ್ಳವರಾದಾಗ ನಿಮ್ಮ ಈ ಮೋಸವನ್ನು ಅರಿತುಕೊಳ್ಳುತ್ತಾರೆ. ನೀವು ದೇವರನ್ನು ಕೇಳಿ ಪಡೆಯುವ ಶಾಂತಿಯನ್ನು ಒಂದು ದಿನ ಧ್ವಂಸ ಮಾಡುತ್ತಾರೆ. ಜಾಗ್ರತೆ ಮಾಡಿ; ಮೊದಲು ಈ ಜನಕ್ಕೆ ಹೊಟ್ಟೆಗೆ ಶಾಂತಿ ನೀಡುವ, ತಲೆಯ ಮೇಲೊಂದು ಸೂರು ಏರಿಸಿ ನೆರಳು ನೀಡುವ ಕೆಲಸ ಮಾಡಿ, ದೇವಾಲಯದಲ್ಲಿ ಸಂಗ್ರಹವಾಗುವ ಲಕ್ಷೋಪಲಕ್ಷ ರೂಪಾಯಿಗಳನ್ನು, ದೇವಾಲಯದಲ್ಲಿ ಶೇಖರಿಸಿದ ಬಂಗಾರವನ್ನು ಇದಕ್ಕೆ ಉಪಯೋಗಿಸಿ. ನೆನಪಿಡಿ; ಮ್ಲೇಂಛರ ದಾಳಿಯನ್ನು ತಡೆಯಲಾರದ ನಮ್ಮ ದೇವಾಲಯ, ನಿಮ್ಮ ದೇವರು, ನಿಮ್ಮ ಭಕ್ತಿ ದೇಶದೊಳಗಿನದೇ ಆದ ದಾಳಿಯನ್ನು ಎಂದೂ ತಡೆಯಲಾರದು".

**(ಪೂಜಾರಿ, ಪುಟ 4)**

"ಜನರ ಹೊಟ್ಟೆ ತುಂಬಿಸುವ ಕೆಲಸ ದೇವಾಲಯಗಳಿಂದಾಗದು. ಅದಕ್ಕೆ ಜನರೇ ಕೆಲಸ ಮಾಡಬೇಕು". "ನೀವು ಮಹಲುಗಳನ್ನು, ಮಂದಿರಗಳನ್ನು ಕಟ್ಟಿಕೊಂಡು ಜನರಿಗಾಗಿ ಒಂದು ದೇವಾಲಯವನ್ನು ಕಟ್ಟಿಸಿದರೆ ಧರ್ಮವು ಉಳಿಯುತ್ತದೆ, ಜನರು ತಣ್ಣಗಿರುತ್ತಾರೆ ಎಂದು ನಂಬಿದ್ದೀರಿ. ದೇವಾಲಯ ಎಂದರೆ ಏನು? ದೇವಾಲಯ ಎಂಬುದು ಏಕೆ? ಹಲವು ಲಕ್ಷ ವೆಚ್ಚದ ಈ ಕಟ್ಟಡ ವರ್ಷದ ಮೂರು ದಿನದ ಜಾತ್ರೆಗಾಗಿ ಹಾಳು ಸುರಿಯುತ್ತಾ ಕಾಯುತ್ತಿರಬೇಕೆ? ಅದನ್ನು ಸದುಪಯೋಗಕ್ಕೆ ಹಚ್ಚಬಾರದೇ?". "ಒಂದು ದಿನ ಜಾತಿ ಪೂರಾ ಲಯವಾಗುತ್ತದೆ. ನೀವೇ ಸೃಷ್ಟಿಸಿದ ಈ ಜಾತಿಯನ್ನು ಮತ್ತು ನಿಮ್ಮ ಭಕ್ತಿಯನ್ನು ನೀವು ಲಂಗೋಟಿಯಲ್ಲಿರಿಸಿಕೊಂಡು ಓಡಬೇಕಾಗುತ್ತೆ. ಶಾಂತಿ ಮತ್ತು ಭಕ್ತಿಗಳಿಗೆ ನಿಮಗೆ ಇಷ್ಟವಿರುವ ಅರ್ಥ ಕೊಡುತ್ತಿದ್ದೀರಿ. ಮಿಲಿಯಾಂತರ ಮಂದಿಗೆ ಬೇಕಾಗಿರುವುದು ಇದಲ್ಲ". "ದೈವ ಭಕ್ತಿ ನಾಶವಾದರೆ ಅಧರ್ಮ ಅಶಾಂತಿ ಹರಡುತ್ತದೆ". "ನೀವು ಜೀರುಂಡೆಯಂತೆ ಒಂದೇ ಹಾಡು ಹಾಡುತ್ತೀರಿ". "ದೇವರು ಎಲ್ಲಿರುವನೆಂದುಕೊಂಡಿದ್ದೀರಿ? ಕಲ್ಲಿನಲ್ಲೇ? ಜನಿವಾರದಲ್ಲೇ? ಪ್ರಸಾದದ ತಟ್ಟೆಯಲ್ಲೇ? ಕೈ ಮುಗಿದು ನಿಂತು ಶಾಂತಿ ಬೇಡುವ ನಿಮ್ಮಂಥವರ ಜೋಡಿಸಿದ ಕೈಗಳಲ್ಲೇ? ತಿಂಗಳಿಗೆ ಪಗಾರದಷ್ಟೇ ಲಂಚ ತಿನ್ನುವ ಮಂದಿಯ ಕಿಸೆಯಲ್ಲೇ? ಎಲ್ಲಿದ್ದಾನೆ ನಿಮ್ಮ ದೇವರು? ಅಂಥ ದೇವರನ್ನು ಇರಿಸಿಕೊಂಡಿರುವ ನಿಮ್ಮ ದೇವಾಲಯ ಎಂಥದು? ನನ್ನ ಮಿತ್ರನೊಬ್ಬನಾದ ಮುಸ್ಲಿಮನೊಬ್ಬ ಜನಿವಾರ ಹಾಕಿಕೊಂಡು ಒಳಹೋಗಿ ದೇವರನ್ನು ಮುಟ್ಟಿ ಬಂದ. ಬ್ರಾಹ್ಮಣರೊಂದಿಗೆ ಕುಳಿತು ಭರ್ಜರಿ ಸಮಾರಾಧನೆ ಊಟ ಮಾಡಿದ. ಅವನು ತನ್ನ ಪಾಪದ ಫಲವನ್ನು ತಿನ್ನುತ್ತಾನೆ. ಹೇಗೆ? ಅವನ ಮಸೀದಿಯಲ್ಲಿ, ಕ್ರೈಸ್ತನ ಇಗರ್ಜಿಯಲ್ಲಿ ಜಾತಿಭೇದವಿಲ್ಲ. ಅಲ್ಲಿ ಎಲ್ಲರೂ ಒಂದೇ. ನಿಮ್ಮ ದೇವಾಲಯದಲ್ಲಿ ನಿಮ್ಮ ದೇವರಿಗೆ ಪ್ರತಿಯೊಬ್ಬನ ಜಾತಿಯೂ ತಿಳಿಯುತ್ತದೆ. ನಿಮ್ಮ ದೇವರು ಮೇಲುಜಾತಿಯವರನ್ನು ಪ್ರೇಮದಿಂದಲೂ, ಕೀಳುಜಾತಿಯವರನ್ನು ತಿರಸ್ಕಾರದಿಂದಲೂ ಕಾಣುತ್ತಾನೆ. ಕುಲವಿಲ್ಲದ ದೇವರು ಕುಲವನ್ನು ನಿರ್ಮಿಸಿದ್ದಾನೆ. ಶೂದ್ರನಾಗಿ ಹುಟ್ಟಿದ ದೇವರನ್ನು ಬ್ರಾಹ್ಮಣನನ್ನಾಗಿ ಮಾಡಿ ಶೂದ್ರನೆದುರು ಎತ್ತಿಕಟ್ಟುತ್ತೀರಿ. ಈ ದೇವರು ಎಷ್ಟು ಮಂದಿಗೆ ಶಾಂತಿಯನ್ನು ಕೊಡುತ್ತಾನೊ ಅಷ್ಟೇ ಮಂದಿಗೆ ಅಶಾಂತಿಯನ್ನೂ ಕೊಡುತ್ತಾನೆ. ಇದೇ ಕಾರಣದಿಂದಲೇ ಮ್ಲೇಂಛರು ಸುತ್ತಿಗೆಯಿಂದ ಒಡೆಯುವಾಗ ಈತನಿಗೆ ತನ್ನನ್ನೇ ರಕ್ಷಿಸಿಕೊಳ್ಳಲಾಗಲಿಲ್ಲ. ಈ ದೌರ್ಬಲ್ಯದಿಂದಲೇ ಇತರ ದೇವರುಗಳಂತೆ ಜಗತ್ತಿಡೀ ಹೋಗಲಾರದಾದ."

**(ಅದೇ, ಪುಟ 4, 5)**

ಕಾದಂಬರಿಕಾರರು ಸಮಾಜದಲ್ಲಿ ಬದಲಾವಣೆ ಸಾಧ್ಯವಾಗಬೇಕು ಎನ್ನುತ್ತಾ ಮೂಢನಂಬಿಕೆ, ಜಾತೀವಾದ, ಗೊಡ್ಡು ಸಂಪ್ರದಾಯಗಳ ಬಗ್ಗೆ ಪ್ರತಿರೋಧ ವ್ಯಕ್ತಪಡಿಸುತ್ತಾರೆ. " ನಾನು ಈ ದೇವಾಲಯಗಳು ಬದಲಾಗಬೇಕೆನ್ನುತ್ತೇನೆ. ಇವುಗಳು ಮೂಢ ನಂಬಿಕೆಯನ್ನು ಬಲಪಡಿಸುವ ಗುಡಿಗಳಾಗಬಾರದು, ಸಂಸ್ಕೃತಿಯ ಆಗರಗಳಾಗಬೇಕೆನ್ನುತ್ತೇನೆ. ಇವು ಕಲೆ, ಸಂಸ್ಕೃತಿಯನ್ನು ಉದ್ಧರಿಸುವ ತಾಣಗಳಾಗಬೇಕು. ಇಲ್ಲಿ ಜಾತಿಭೇದವಿಲ್ಲದೆ ಸಭೆಗಳು, ಚರ್ಚೆಗಳು, ಭಜನೆಗಳು ಮಾತ್ರವಲ್ಲ ಶಾಲೆಗಳು, ಗ್ರಂಥಾಲಯಗಳು ನಡೆಯಬೇಕು. ನಾಟ್ಯ ಶಾಲೆ, ಸಂಗೀತ ಶಾಲೆ, ಕಲಾ ಶಾಲೆ ನಡೆಯಬೇಕು. ಇಲ್ಲಿ ಪ್ರಸಾದದ ಮಾರಾಟ ನಿಲ್ಲಬೇಕು. ಭಯವನ್ನು ಹುಟ್ಟಿಸುವ ವ್ಯವಹಾರ ನಿಲ್ಲಬೇಕು. ಕಲ್ಲಿಗೆ ಆರತಿ ಮಾಡಿ ಜನರನ್ನು ಮಂಕು ಮಾಡುವ ಆಟ ಕೊನೆಗೊಳ್ಳಬೇಕು. ಸ್ವಲ್ಪ ಯೋಚಿಸಿ ನೋಡಿ; ಅದು ಮಕ್ಕಳಾಟವಲ್ಲದೆ ಅದರಲ್ಲಿ ಏನಿದೆ? ಈಗಿರುವ ದೇವಾಲಯ, ಮಸೀದಿ, ಇಗರ್ಜಿಗಳು ಸಾಕು, ಹೊಸದಾಗಿ ಬೇಕಾದ್ದು ಶಾಲೆಗಳು, ಮನೆಗಳು. ಜನರಿಗೆ, ದೇಶಕ್ಕೆ ಶಾಂತಿ, ಸಮಾಧಾನ." ಹೀಗೆ ಸಮಾಜದಲ್ಲಿ ಇರುವ ವ್ಯವಸ್ಥೆಯನ್ನು ವಿರೋಧಿಸುತ್ತಾ ಅದಕ್ಕೆ
**(ಅದೇ, ಪುಟ 5)**
ಪರ್ಯಾಯವಾದ ವ್ಯವಸ್ಥೆಯನ್ನು ಕಾದಂಬರಿಕಾರರು ಸೂಚಿಸುತ್ತಾರೆ. ಇದಕ್ಕೆ ಪೂರಕವಾದ ವಿಚಾರಗಳು, ಪ್ರತಿರೋಧಗಳು ಕಾದಂಬರಿಯಲ್ಲಿ ವ್ಯಕ್ತವಾಗಿವೆ.

## ೪.೭: ಹೇಕಾಪುರುಷ

ಕೆ.ಟಿ.ಗಟ್ಟಿಯವರ 'ಹೇಕಾಪುರುಷ' ಕಾದಂಬರಿಯ ಜಿಜ್ಞಾಸೆಯ ಕೇಂದ್ರ ಕಾವಿ–ಸನ್ಯಾಸ–ಪವಾಡ. ಧರ್ಮನಿರಪೇಕ್ಷ, ಜಾತ್ಯತೀತ ಎಂದು ಕಾಣಿಸಿಕೊಳ್ಳುವ ಪ್ರಜಾಪ್ರಭುತ್ವ ವ್ಯವಸ್ಥೆಯಲ್ಲಿ ಪವಾಡಪುರುಷರನ್ನು ಓಲೈಸುವ ರಾಜಕೀಯ ವ್ಯವಸ್ಥೆಯ ಕುತಂತ್ರಗಳನ್ನು ಕಾದಂಬರಿ ಪ್ರತಿಭಟಿಸುತ್ತದೆ.

ಜಾತಿ, ಧರ್ಮಗಳ ಆಧಾರದಲ್ಲಿ ಸೃಷ್ಟಿಯಾದ ದೇವತಾರಾಧನೆಯನ್ನು ಗಟ್ಟಿಯವರು ವಿರೋಧಿಸುತ್ತಾರೆ. ಧರ್ಮ, ದೇವರ ಹೆಸರಿನಲ್ಲಿ ನಡೆಯುವ ಕೆಟ್ಟ ವ್ಯವಹಾರಗಳನ್ನು ಟೀಕಿಸುತ್ತಾರೆ. ಮೂಢತೆಯಿಂದ ದೇವರನ್ನು ನಂಬುವ ಆರಾಧನೆಯಲ್ಲಿ ಅಪಾಯಗಳು ಹೆಚ್ಚು. ಇಲ್ಲಿ ಮುಗ್ಧ ಜನರು ವಂಚನೆಗೆ ಒಳಗಾಗುತ್ತಾರೆ. ಕಾದಂಬರಿ ಈ ವಿಚಾರವನ್ನು ವಿಶ್ಲೇಷಿಸುತ್ತದೆ.

ಆಧುನಿಕ ಪ್ರಪಂಚದಿಂದ ದೂರವಾಗಿ, ಪರ್ವತಗಳಿಂದ ಆವೃತವಾಗಿ, ಕೋಟೆಯಂತೆ ಕಾಣಿಸುವ ಹಳ್ಳಿ ಯಾದವಗಿರಿ. ಅಲ್ಲಿ ತಾನೇ ಸಾಕ್ಷಾತ್ ದೇವರೆಂದು ಹೇಳಿಕೊಳ್ಳುವ ಅವತಾರಪುರುಷನೊಬ್ಬ ಕಾಣಿಸಿಕೊಳ್ಳುತ್ತಾನೆ. ಆಧುನಿಕ ಇಂದ್ರಜಾಲದ ತಂತ್ರಗಳನ್ನು ಉಪಯೋಗಿಸಿ ತನ್ನ ಹತ್ತಿರ ಬಂದವರನ್ನು ಬ್ರೈನ್‌ವಾಶ್ ಮಾಡುತ್ತಾ ತನ್ನ ಕೆಲಸ ಸಾಧಿಸುತ್ತಿರುತ್ತಾನೆ. ತನ್ನ ಕಾರ್ಯಕ್ಷೇತ್ರವಾಗಿ ಆ ಹಳ್ಳಿಯನ್ನು ಆಯ್ಕೆ ಮಾಡಿಕೊಂಡು ತನಗೆ ಯಾವುದೇ ಅಪಾಯ ಒದಗದಂತೆ ಜಾಗ್ರತೆ ವಹಿಸಿರುತ್ತಾನೆ. ದೇವರಂತೆ ಒಮ್ಮಿಂದೊಮ್ಮೆಲೇ ವೇದಿಕೆಯ ಮೇಲೆ ಪ್ರತ್ಯಕ್ಷನಾಗಿ ವಿಭೂತಿ ಸೃಷ್ಟಿಸಿ, ಜನರ ರೋಗಗಳಿಗೆ ಪರಿಹಾರ ಸೂಚಿಸುತ್ತಾನೆ. ಆ ಹಳ್ಳಿಯ ಜನರಿಗೆ ಆತ ದೇವರೇ ಆಗಿಬಿಡುತ್ತಾನೆ. ಆದರೆ ಅವತಾರ ಪುರುಷನಾದ ಆತ ತನ್ನ ದೈವತ್ವವನ್ನು ಬಳಸಿಕೊಂಡು ಮುಗ್ಧ ಜನರಿಂದ ಹಣ ಸಂಗ್ರಹಿಸಿ ಅದರಿಂದ ಇನ್ನಷ್ಟು ಸಂಪಾದನೆ ಮಾಡಬಲ್ಲ ದೇವಾಲಯ ಕಟ್ಟಿಸುತ್ತಾನೆ. ಭೂಗತ ವ್ಯವಹಾರಗಳನ್ನು ಆರಂಭಿಸುತ್ತಾನೆ. ಯುವಕರ ಬ್ರೈನ್‌ವಾಶ್ ಮಾಡಿ ಅವರಿಂದ ತನ್ನ ಪವಾಡಗಳ ಬಗ್ಗೆ ಲೇಖನವನ್ನು ಬರೆಯಿಸಿ ಪತ್ರಿಕೆಗಳಲ್ಲಿ ಪ್ರಚಾರ ಮಾಡಿಸುತ್ತಾನೆ. 'ದೇವವಾಣಿ'ಯಂತಹ ಮಾಸಪತ್ರಿಕೆಗಳ ಮೂಲಕವೂ, ಅನೇಕ ಪ್ರಸಿದ್ಧ ಸಾಹಿತಿಗಳಿಂದ ತನ್ನ ಮಹಿಮೆ ಪವಾಡಗಳ ಬಗ್ಗೆ ಪುಸ್ತಕಗಳನ್ನು ಬರೆಯಿಸಿ ಲೋಕವಿಖ್ಯಾತನಾಗುತ್ತಾನೆ. ಶಾಲೆ, ಕಾಲೇಜು, ಆಸ್ಪತ್ರೆಗಳನ್ನು ತೆರೆಯುವುದರ ಮೂಲಕ ಜನಸೇವೆಯ ನಾಟಕವಾಡುತ್ತಾ ಧ್ಯಾನ, ಭಜನೆ ಮೊದಲಾದ ಆಧಾತ್ಮಿಕ ಚಟುವಟಿಕೆಗಳ ಬೂಟಾಟಿಕೆಯನ್ನು ನಡೆಸುತ್ತಾನೆ. ತನ್ನ ಕುತಂತ್ರಗಳು ಇನ್ನಷ್ಟು ಭದ್ರವಾಗುವಂತೆ ಕಾಲೇಜು ಅಧ್ಯಾಪಕರ, ರಾಜಕೀಯ ವ್ಯಕ್ತಿಗಳ ಸಂಪರ್ಕ ಬೆಳೆಸುತ್ತಾನೆ.

ಸಮಾಜಶಾಸ್ತ್ರದಲ್ಲಿ ಎಂ.ಎ. ಕಲಿತು ಸಂಶೋಧನೆ ಮಾಡಿದ ಕಾಲೇಜು ಉಪನ್ಯಾಸಕಿ ದೀಪ್ತಿ ಅವತಾರ ಪುರುಷನ ಪವಾಡಗಳಿಗೆ ಮಾರುಹೋಗಿ ಅವನ ಆಲಯಕ್ಕೆ ಹೋಗುವ ಅಭ್ಯಾಸ ಬೆಳೆಸಿಕೊಂಡಿರುತ್ತಾಳೆ. ಇದನ್ನು ಕಾಲೇಜು ಉಪನ್ಯಾಸಕನಾದ ಆಕೆಯ ಗಂಡ ಸುದರ್ಶನ ಸಹಿಸುವುದಿಲ್ಲ. ಆಲಯಕ್ಕೆ ಹೋಗುವುದನ್ನು ಸುದರ್ಶನ ತಡೆದುದರಿಂದಲೇ ದೀಪ್ತಿಯ ಗಂಡು ಮಗು ಹುಟ್ಟುವಾಗಲೇ ಸತ್ತದ್ದು ಎಂಬ ಮಾತನ್ನು ಸುದರ್ಶನ ಸಹಿಸಿಕೊಳ್ಳುವುದಿಲ್ಲ. ಅವತಾರ ಪುರುಷನ ಬಗ್ಗೆ ವಿರೊಧ ವ್ಯಕ್ತಪಡಿಸುವ ಸುದರ್ಶನನ ಜೊತೆಗೆ ದೀಪ್ತಿ ಆತ್ಮೀಯತೆಯನ್ನು ಕಳೆದುಕೊಂಡು ಮಾನಸಿಕವಾಗಿ ದೂರವಾಗುತ್ತಾಳೆ. ಸುದರ್ಶನ ಅವತಾರ ಪುರುಷನಿಂದ ಆಗಬಹುದಾದ ಅಪಾಯದ ಬಗ್ಗೆ ಹೇಳಿದಾಗಲೂ ಅದನ್ನು ಕೇಳಿಸಿಕೊಳ್ಳದ ದೀಪ್ತಿ ಕಾಲೇಜಿನಿಂದ ನೇರವಾಗಿ ಭಗವನಾಲಯಕ್ಕೆ ಹೊಗುವ ಅಭ್ಯಾಸ ಬೆಳೆಸಿಕೊಳ್ಳುತ್ತಾಳೆ. ಒಂದು ದಿನ ರಾತ್ರಿ ದೀಪ್ತಿ ಎದ್ದು ನೇರವಾಗಿ ಭಗವನಾಲಯಕ್ಕೆ ಹೋಗಿ ಮೈಮೇಲೆ ಪ್ರಜ್ಞೆ ಕಳೆದುಕೊಂಡು ಧ್ಯಾನದಲ್ಲಿ ಕುಳಿತಿರುವುದನ್ನು ಪತಿ ಸುದರ್ಶನ ನೋಡುತ್ತಾನೆ. ಅವತಾರ ಪುರುಷನ

ಬ್ರೈನ್‌ವಾಶ್‌ಗೆ ಒಳಗಾದ ಆಕೆ ತನ್ನ ಉದ್ಯೋಗದಲ್ಲಿ ಆಸಕ್ತಿ ಕಳೆದುಕೊಳ್ಳುತ್ತಾಳೆ. ಮನೆಯ ವ್ಯವಹಾರದಲ್ಲಿ ನಿರ್ಲಕ್ಷ್ಯ ತಾಳುತ್ತಾಳೆ. ತನ್ನ ಹೆಂಡತಿಯ ಈ ಸ್ಥಿತಿಗೆ ಕಾರಣವಾದ ಅವತಾರಪುರುಷನ ಮೇಲೆ ಸೇಡು ತೀರಿಸಿಕೊಳ್ಳುವ ತಂತ್ರವನ್ನು ಸುದರ್ಶನ ರೂಪಿಸುತ್ತಾನೆ. ಮೋಸವನ್ನು ಮೋಸದಿಂದಲೇ ಗೆಲ್ಲಬೇಕೆಂದು ಸುದರ್ಶನ ಯೋಚಿಸುತ್ತಾನೆ. ಭಗವಾನನ ಶಕ್ತಿಗಳನ್ನು ಒಪ್ಪಿಕೊಂಡು ಅತನನ್ನು ಆರಾಧಿಸುತ್ತಾನೆ. ಸುದರ್ಶನ ಭಗವಾನನಿಗೆ ಆಪ್ತನಾಗುತ್ತಾನೆ. ಇದರಿಂದ ಭಗವಾನನ ಭೂಗತ ವ್ಯವಹಾರಗಳನ್ನು ಸುದರ್ಶನ ಅರಿತುಕೊಳ್ಳುವುದು ಸಾಧ್ಯವಾಗುತ್ತದೆ. ಗಂಡನಲ್ಲಿ ಉಂಟಾದ ಬದಲಾವಣೆಯಿಂದ ದೀಪ್ತಿ ಸಂತೋಷಪಡುತ್ತಾಳೆ. ಸುದರ್ಶನ ಭಗವನಾಲಯದಲ್ಲಿರುವ ಭಗವಾನನ ಮೂರ್ತಿಯನ್ನು ಬಾಂಬ್ ಇಟ್ಟು ಸ್ಫೋಟಿಸುತ್ತಾನೆ. ಇಡೀ ವ್ಯವಸ್ಥೆ ಸ್ಫೋಟಗೊಂಡು ಛಿದ್ರಗೊಳ್ಳುತ್ತದೆ.

ರಾಜಕೀಯ, ಸಾಮಾಜಿಕ ಬೆಂಬಲವಿರುವ ಅವತಾರ ಪುರುಷನ ವ್ಯವಸ್ಥೆಯನ್ನು ವಿರೋಧಿಸುವುದು ಸುಲಭದ ಕೆಲಸವಲ್ಲ. ಈ ವ್ಯವಸ್ಥೆಯನ್ನು ತಾತ್ವಿಕವಾಗಿ ನಾಶಮಾಡಲು ಸಾಧ್ಯವಿಲ್ಲ ಎಂದು ಸುದರ್ಶನನಿಗೆ ತಿಳಿದಿದ್ದರೂ ದೀಪ್ತಿಯನ್ನು ಉಳಿಸಿಕೊಳ್ಳುವುದಕ್ಕಾಗಿ ಆ ವ್ಯವಸ್ಥೆಯ ನಾಶ ಆದಷ್ಟು ಬೇಗನೆ ಆಗಬೇಕಾಗಿತ್ತು. ಎಚ್ಚೆತ್ತುಕೊಳ್ಳದ ಜನರ ಮತ್ತು ವೈಯಕ್ತಿಕವಾದ ಅನಿವಾರ್ಯತೆಯಿಂದ ಇಡೀ ವ್ಯವಸ್ಥೆಯನ್ನು ಬಾಂಬ್ ಇಟ್ಟು ಸ್ಫೋಟಿಸುವುದು ಸರಿ ಎಂದು ಸುದರ್ಶನ ಯೋಚಿಸುತ್ತಾನೆ. ಆ ವ್ಯವಸ್ಥೆಯ ವಿರುದ್ಧ ಆತನ ಮನಸ್ಸು ತೋರಿದ ಪ್ರತಿಭಟನೆ ಅದು.

ಗಟ್ಟಿಯವರು 'ತೀರ' ಕಾದಂಬರಿಯಲ್ಲಿ ಹೇಳುವಂತೆ "ನಮ್ಮ ದೇವಾಲಯಗಳಲ್ಲಿ ಕುಳಿತ ದೇವರುಗಳನ್ನು 'ದೇವ ವ್ಯಕ್ತಿ'ಗಳಾಗಿ ಕಾಣಲು ನನ್ನಿಂದ ಯಾವತ್ತೂ ಸಾಧ್ಯವಿಲ್ಲ. ರಾಮನನ್ನು, ಕೃಷ್ಣನನ್ನು ನಾನು ಸಂಸ್ಕೃತಿ ವ್ಯಕ್ತಿಗಳಾಗಿ ಕಾಣಬಲ್ಲೆ. ಹಾಗೆ ಕಾಣುವಾಗ ಅವರ ದಿನ ದಿನದ ಬದುಕು, ಅವರ ಆಹಾರ ಕ್ರಮ, ಅವರ ಬದುಕಿನ ದಿನ ದಿನಗಳ ಕ್ರಿಯೆಯ ಕುರಿತು ಆಸಕ್ತಿಯುಂಟಾಗುತ್ತದೆ. ದೇವರಾಗಿ ಅವರು ಆಪ್ತರಾಗುವುದಿಲ್ಲ. ನಾವು ತಿನ್ನುವುದನ್ನೇ ತಿಂದ, ನಮ್ಮಂತೆಯೇ ಓಡಿಯಾಡಿದ ಮನುಷ್ಯರಾಗಿ ಅವರು ನಮ್ಮ ಮನಸ್ಸನ್ನು ಪ್ರವೇಶಿಸಿಬಿಡುತ್ತಾರೆ. ಅಂಥವರಿಗೆ ಪೂಜೆಯಾದರೂ ಯಾಕೆ ಬೇಕು? ಬೇಕಾದ್ದು ಒಳ್ಳೆಯ ಗುಣಗಳ ಅನುಸರಣೆ. ದೇವರು ಅಂದರೆ ಬಹುಶಃ ಒಳ್ಳೆಯ ಗುಣಗಳ ಒಂದು ಸಿಂಥೆಸಿಸ್."

**(ಗಟ್ಟಿ ಕೆ.ಟಿ. ತೀರ, 2003. ಪುಟ 248)**

## ೪.೮. ಯುಗಾಂತರ

ಕೆ.ಟಿ.ಗಟ್ಟಿಯವರು ವಿದೇಶಕ್ಕೆ ಹೋದ ನಂತರ 1981ರ ಸಮಯದಲ್ಲಿ ಅಲ್ಲೇ ಬರೆದ ಕಾದಂಬರಿ 'ಯುಗಾಂತರ'. ಕಾದಂಬರಿಯ ಆರಂಭದಲ್ಲಿ ಲೇಖಕರು ತಿಳಿಸಿರುವಂತೆ 'ಯುಗಾಂತರ' ಹಿಂದೆ ನಡೆದಿರಲಾರದು ಈಗ ನಡೆಯುತ್ತಿಲ್ಲ ಅಥವಾ ಮುಂದೆ ನಡೆಯಲಾರದೆನ್ನಲಾರದಂತಹ ಸಂಗತಿಗಳ ಮೇಲೆ ಆಧರಿಸುವ ಒಂದು ಕಲ್ಪನಾ ಕತೆ.

ಚಂದನಾವತಿ ರಾಜ್ಯದ ರಾಜಧಾನಿ ಹಸ್ತಿಪುರ. ಅಲ್ಲಿನ ನೀತಿಚೌಕದ ಬಳಿ ಒಬ್ಬ ಮುದುಕ ಗಾಯಗೊಂಡು ಬಿದ್ದಿದ್ದಾನೆ. ಅವನಿಗೆ ಸ್ಕೂಟರೊಂದು ಡಿಕ್ಕಿ ಹೊಡೆದು ಹೋಗಿತ್ತು. ಅಲ್ಲಿಗೆ ಬಂದ ಮುಖ್ಯಮಂತ್ರಿ ವಾದಿರಾಜರ ಮಗ ಜಯಂತ ಆತನನ್ನು ತನ್ನ ಕಾರಿನಲ್ಲೇ ಚಿಕಿತ್ಸೆಗಾಗಿ ಒಯ್ಯುತ್ತಾನೆ. ಜಯಂತ ಜನರ ಹೊಗಳಿಕೆಗೆ ಪಾತ್ರನಾಗುತ್ತಾನೆ. ಹಸ್ತಿಪುರದ ವೇದಮಾರ್ಗ, ಕರ್ಮಮಾರ್ಗ, ಪುಣ್ಯಮಾರ್ಗ, ಸತ್ಯಮಾರ್ಗ, ಪ್ರೇಮಮಾರ್ಗ, ವಿವೇಕಮಾರ್ಗ, ಜ್ಞಾನಮಾರ್ಗ ಮುಂತಾದ ನಾನಾ ಹೆಸರುಗಳಿದ್ದ ರಸ್ತೆಗಳಲ್ಲಿ ಜನಸಂಚಾರ ಕಡಿಮೆಯಿದ್ದಾಗ ರಾತ್ರಿಕಾಲದಲ್ಲಿ ನಿರ್ಭಯವಾಗಿ ಹೆಣ್ಣು ಮಕ್ಕಳು ನಡೆದಾಡುವುದು ಅಸಾಧ್ಯವಾಗಿತ್ತು. ಇದರ ಬಗ್ಗೆ ಹಲವರು ದೂರು ನೀಡಿದರೂ ಇದನ್ನು ನಿಲ್ಲಿಸುವುದರ ಬಗ್ಗೆ ತಲೆ ಕೆಡಿಸಿಕೊಂಡಿಲ್ಲ. "ಅದನ್ನು ನಿಲ್ಲಿಸಬಲ್ಲ ಪೋಲೀಸರಲ್ಲಿ ಬಹುಮಂದಿ ಇಂಥ ಅವಕಾಶಗಳಿಗಾಗಿ ಕಾದಿರುವುದು, ಸಿನಿಮಾ ತೆರೆಯ ಮೇಲೆ ಇಂಥ ದೃಶ್ಯಗಳನ್ನು ಕಂಡು ನೈಸರ್ಗಿಕ ಅನುಭವಕ್ಕಾಗಿ ಎಷ್ಟೋ ಜನ ಕಾತರಿಸುತ್ತಿರುವುದು, ಬಹಳ ಸಂಪ್ರದಾಯವಾದಿಗಳು ಕಾಮೋದ್ದೀಪನಕ್ಕಾಗಿ ಇಂಥ ಸುದ್ದಿಗಳಿಗಾಗಿ ಪೇಪರಿನಲ್ಲಿ ಹುಡುಕುವುದು ಸಿದ್ಧಾಂತವೇ ಆಗಿದೆ." ಗಾಯಗೊಂಡಿದ್ದ ನಿವೃತ್ತ ಶಿಕ್ಷಕ ಗೋಪಾಲಕೃಷ್ಣರಾಯರ ಮನೆಗೆ ತೆರಳಿದ ಜಯಂತ ಆತನ ಇಬ್ಬರು ಹೆಣ್ಣು ಮಕ್ಕಳಿಗೂ ವಿಷಯ ತಿಳಿಸಿ ಆಸ್ಪತ್ರೆಗೆ ಕರೆತಂದಿದ್ದ. ಕಾಂತಿಮತಿ ಮತ್ತು ಮಾಲತಿ ತನ್ನ ತಂದೆಗೆ ಮಾಡಿದ ಉಪಕಾರಕ್ಕಾಗಿ ಕೃತಜ್ಞತೆ ಸೂಚಿಸಿದರು. ಗೋಪಾಲಕೃಷ್ಣರಾಯರನ್ನು ಕಾಣಲು ಬಂದ ಅವರ ಪಕ್ಕದ ಮನೆಯ ಪ್ರಕಾಶನಿಗೆ ಒಮ್ಮೆಗೇ ಎದುರಾದ ಡಾಕ್ಟರ್ ಮುರಳೀಧರರ ಮುಖದಲ್ಲಿ ಕಂಡ ವಿಚಿತ್ರವಾದ ವಿಸ್ಮಯ ಅಥವಾ ಆತಂಕ ಭಾವಕ್ಕೆ ಕಾರಣವೇನು ಎಂದು ಚಿಂತಿಸುವಂತೆ ಮಾಡಿತು.

ಪ್ರಕಾಶನ ತಂದೆ ರಮಾನಂದ ಒಂದು ಸಣ್ಣ ಪ್ರಿಂಟಿಂಗ್ ಪ್ರೆಸ್ ನಡೆಸುತ್ತಿದ್ದ. ಅದರಿಂದಲೇ ಅವರು ಜೀವನ ಸಾಗಿಸುತ್ತಿದ್ದರು. ತಾಯಿಯನ್ನು ಕಳೆದುಕೊಂಡಿದ್ದ

ಪ್ರಕಾಶನಿಗೆ ಸ್ವಲ್ಪ ಸಮಯದ ಹಿಂದೆ ಬಿ.ಎ. ಓದಿದ್ದ ಅಕ್ಕ ಯಾಮಿನಿಯೂ ಆತ್ಮಹತ್ಯೆ ಮಾಡಿಕೊಂಡಿದ್ದರಿಂದ ತಂದೆಯೊಂದಿಗೆ ಬದುಕು ಸಾಗಿಸುತ್ತಿದ್ದ.

ಬ್ಯಾಂಕೊಂದರಲ್ಲಿ ಕೆಲಸ ಮಾಡುತ್ತಿದ್ದ ಯಾಮಿನಿ ಆತ್ಮಹತ್ಯೆ ಮಾಡಿಕೊಂಡ ನಾಲ್ಕೈದು ದಿನಗಳ ಹಿಂದೆ ತನ್ನೊಂದಿಗೆ ಮಾತನಾಡಿದ ಮಾತುಗಳು ಪ್ರಕಾಶನ ಕಿವಿಯಲ್ಲಿ ಪ್ರತಿಧ್ವನಿಸುತ್ತಿತ್ತು. ತಾನು ಹೆಣ್ಣಾಗಿದ್ದರೆ ತನಗೆ ಕೆಲಸ ಸಿಗುತ್ತಿತ್ತೇನೋ ಎಂದು ನಿರುದ್ಯೋಗಿಯಾಗಿದ್ದ ಪ್ರಕಾಶ ಕೇಳಿದಾಗ ಯಾಮಿನಿ ಕಣ್ಣೀರಿಟ್ಟಳು. ಅಲ್ಲದೆ "ಈ ಭೂಮಿಯಲ್ಲಿ ಹೆಣ್ಣಾಗಿ ಹುಟ್ಟುವುದೇ ಒಂದು ಶಾಪ. ಉದ್ಯೋಗವೇ ಆಗಲಿ, ವಿವಾಹವೇ ಆಗಲಿ, ಇದರಲ್ಲಿ ಹೆಣ್ಣಿಗೆ ಸಿಗುವುದು ಏನು? ಸಿಕ್ಕಿದರೆ ಒಂದಲ್ಲ ಸುಖ ಇಲ್ಲದಿದ್ದರೆ ನಿರಂತರವಾದ ಯಾತನೆ" ಎಂದಿದ್ದಳು.

ಪ್ರಕಾಶ ತಾನು ತಂದೆ ನಿಲ್ಲಿಸಿದ್ದ 'ಯುಗಧ್ವನಿ' ಪತ್ರಿಕೆಯನ್ನು ಪುನರಾರಂಭಿಸುವುದಾಗಿ ತಂದೆಯೊಂದಿಗೆ ತಿಳಿಸಿದಾಗ ರಮಾನಂದರು ಬೆಚ್ಚಿಬಿದ್ದು "ಏನು ಬೇಕಾದರೂ ಮಾಡು ಪ್ರಕಾಶ, ಪತ್ರಿಕೆಯೊಂದನ್ನು ಮಾಡಬೇಡ" ಎಂದು ಕಳಕಳಿಯಿಂದ ನುಡಿದಿದ್ದರು. ನಿರೂಪಕರು ತಿಳಿಸುವಂತೆ "ತಮ್ಮ ಮಕ್ಕಳಿಗೆ ನನ್ನಂತಾಗು ಎಂದೆನ್ನುವುದು, ತಮ್ಮಂತಾಗಲು ದೀಕ್ಷೆಯನ್ನು ನೀಡುವುದು ಬಹುಶಃ ರಾಜಕೀಯ ಪುಡಾರಿಯೊಬ್ಬನೇ. ಇವನನ್ನು ಬಿಟ್ಟರೆ ಅವನಂತೆಯೇ ಜನರನ್ನು ಸುಲಿದು ಮಹಲಿನ ಮೇಲೆ ಮಹಲು ಕಟ್ಟಿಸುವ ವ್ಯಾಪಾರಿಗಳು, ಕೆಲವು ವೈದ್ಯ ಮಹಾಶಯರು, ಇಂಡಸ್ಟ್ರಿಯಲಿಸ್ಟ್‌ಗಳು, ಕ್ಯಾಪಿಟಲಿಸ್ಟ್‌ಗಳು ಇರಬಹುದು. ಇವರೆಲ್ಲರಿಗಿಂತಲೂ ಧೈರ್ಯವಾಗಿ ಕ್ಯಾಪಿಟಲು ಇಲ್ಲದೇನೇ ಕ್ಯಾಪಿಟಲಿಸ್ಟುಗಳನ್ನು ತೆರಿಗೆಯೋ ಬೆದರಿಕೆಯೋ ಹಾಕಿ ಸುಲಿದು ಅವರ ಅಪ್ಪನಾಗಬಲ್ಲ ರಾಜಕೀಯ ಪುಡಾರಿ ತನ್ನ ಮಕ್ಕಳನ್ನೇ ಏಕೆ ತನ್ನ ಮೊಮ್ಮಕ್ಕಳನ್ನೂ ತನ್ನ ದಾರಿಯಲ್ಲೇ ನಡೆಸಿಕೊಂಡು ಹೋಗಬಲ್ಲ" ಎನ್ನುತ್ತಾ ಈ ದೇಶದ ರಾಜಕೀಯವನ್ನು ಅಧಿಕಾರಶಾಹಿ ವ್ಯವಸ್ಥೆಯನ್ನು ವಿರೋಧಿಸುತ್ತಾರೆ. ಬಡವರು ಬಡವರಾಗಿಯೇ ಇರಬೇಕಾದ ಅನಿವಾರ್ಯತೆಯ ಸೃಷ್ಟಿಯನ್ನು ವಿಮರ್ಶಿಸುತ್ತಾರೆ.

ಕಾಂತಿಮತಿಯ ತಂಗಿ ಮಾಲತಿ ಅನೇಕ ಇಂಟರ್‌ವ್ಯೂ, ಟೆಸ್ಟುಗಳನ್ನು ಎದುರಿಸಿದ್ದರೂ ಉದ್ಯೋಗ ದೊರಕಲಿಲ್ಲ. "ಶ್ರೀಮಂತರ ಮನೆ ಮಕ್ಕಳೆಲ್ಲಾ ಸಾಲು ಸಾಲಾಗಿ ಉದ್ಯೋಗಕ್ಕೆ ಹೋಗುತ್ತಿರುವುದನ್ನು ಕಾಣುವಾಗ ಆತ್ಮಹತ್ಯೆ ಮಾಡಿಕೊಳ್ಳೋಣ, ಬಡವರಿಗೆ ಈ ದೇಶದಲ್ಲಿ ಅಸ್ತಿತ್ವವಿಲ್ಲ, ನಾವೆಲ್ಲಾ ಹುಳುಗಳಾಗಿ ಹುಟ್ಟಿ ಸಾಯಬೇಕಾದವರು" ಎಂಬ ಭಾವನೆ ಅವಳಲ್ಲಿ ಮೂಡುತ್ತದೆ. ಬಡವರು ಬಡವರಾಗಿ

**(ಯುಗಾಂತರ, 1983. ಪುಟ 29)**

ಉಳಿಯುವಂತೆ ನಿರ್ಮಾಣವಾದ ಶ್ರೀಮಂತಿಕೆಯ ಅಟ್ಟಹಾಸದ ಪ್ರತಿರೋಧವನ್ನಿಲ್ಲಿ ಕಾಣಬಹುದು.

ಕೃಷ್ಣಗೋಪಾಲರ ಶಿಷ್ಯವರ್ಗದಲ್ಲಿ ಹಲವಾರು ಡಾಕ್ಟರರು, ಇಂಜಿನೀಯರರು, ರಾಜಕಾರಣಿಗಳು ಆ ಊರಿನಲ್ಲೇ ಇರಬಹುದು. ಅವರೆಲ್ಲ ಮನಸ್ಸು ಮಾಡಿದರೆ ಕೃಷ್ಣಗೋಪಾಲರ ಸ್ಥಿತಿ ಸುಧಾರಿಸುತ್ತಿತ್ತು "ಆದರೆ ಅವರು ಪುಣ್ಯ ಸಂಪಾದನೆಗಾಗಿ ದೇವಾಲಯಗಳಿಗೆ ಹೋಗುತ್ತಾರೆ. ಇಂಥವರು ತಮಗೆ ಕಲಿಸಿದ ಬಡ ಉಪಾಧ್ಯಾಯರಿಗೆ ಉಪಕಾರ ಮಾಡಬೇಕೆಂದು ಸಂವಿಧಾನದಲ್ಲಿ ಹೇಳಿಲ್ಲ, ಗೀತೆಯಲ್ಲೂ ಹೇಳಿಲ್ಲ. ಹಾಗಿರುವಾಗ ಇಂಥವರ ಸ್ಮೃತಿ ಪಟಲದಲ್ಲಿ ಎಲಿಮೆಂಟರಿ ಶಾಲೆಗಳ, ಬತ್ತಿದೆದೆಯ ಎಲಿಮೆಂಟರಿ ಶಾಲಾ ಉಪಾಧ್ಯಾಯರ, ಹರಿದ ಅಂಗಿ ಲಂಗಗಳನ್ನು ತೊಟ್ಟುಕೊಂಡು ತಮ್ಮೊಂದಿಗೆ ಕುಳಿತುಕೊಳ್ಳುತ್ತಿದ್ದ ಅವರ ಮಕ್ಕಳು, ಮತ್ತಿತರರ ಎಲುಬು ಗೂಡುಗಳ ಚಿತ್ರ ಹೇಗೆ ಮೂಡಲು ಸಾಧ್ಯ." ನಿರೂಪಕರ ಈ ಮಾತಿನಲ್ಲಿ ದೇಶದಲ್ಲಿ ಕುಸಿಯುತ್ತಿರುವ

**(ಅದೇ, ಪುಟ 31)**

ಆದರ್ಶಗಳು, ಜೀವನ ಮೌಲ್ಯಗಳ ಬಗ್ಗೆ ಚಿಂತನೆಯಿದೆ.

ಚಂದನಾವತಿ ರಾಜ್ಯದಲ್ಲಿ ಪ್ರಜಾರಂಗ ಸರಕಾರ ಬಂದು ಹನ್ನೆರಡು ವರ್ಷಗಳಲ್ಲಿ ಅದರ ನಾಯಕ ವಾದಿರಾಜರು ಮುಖ್ಯಮಂತ್ರಿಯಾಗಿ ಹಸ್ತಿಪುರದ ಬೀದಿ, ಗಲ್ಲಿ, ಚೌಕಗಳ ಹೆಸರನ್ನು ಆದರ್ಶ ಪುರುಷರ, ಋಷಿ ಪುಂಗವರ, ಪುಣ್ಯ ಪತ್ನಿಯರ ಹೆಸರನ್ನಾಗಿ ಬದಲಾಯಿಸಿದ್ದರು. ವಾದಿರಾಜರ ಮಗ ಜಯಂತ ಕಾಲೇಜಿನಲ್ಲಿ ಕಳೆದುದು ಒಂದೇ ವರ್ಷ. ಆತ ರಾಜಕೀಯಕ್ಕೆ ಹೊರತು ಬೇರೆಲ್ಲೂ ಸಲ್ಲುವವನಲ್ಲ ಎಂದು ಅವನ ತಂದೆ ತೀರ್ಮಾನಿಸಿಬಿಟ್ಟಿದ್ದರು. "ಯಾರು ಕಲಿಯುವುದರಲ್ಲಿ ಹಿಂದೆ ಬೀಳುವನೋ, ಯಾರು ಮೂರ್ಖನೋ, ಪೋಲಿಯೂ, ಗೂಂಡನೂ ಆಗಿರುವನೋ ಅವನು ರಾಜಕೀಯಕ್ಕೆ ಅರ್ಹ ಎಂಬ ನಂಬಿಕೆ ಚಂದನಾವತಿಯಲ್ಲೇ ಏಕೆ ಇಡೀ ದೇಶದ ಜನರಲ್ಲಿ ಅದೆಂತೋ ಮನೆ ಮಾಡಿದೆ. ಮೂರ್ಖರ, ಹೆಡ್ಡರ ಮತ್ತು ಪುಂಡರ ಸಂಖ್ಯೆ ಸಾಕಷ್ಟು ದೊಡ್ಡದೇ ಇರುವುದರಿಂದ ರಾಜಕೀಯ ಕ್ಷೇತ್ರದಲ್ಲಿ ಎಂದೂ ವ್ಯಕ್ತಿಗಳಿಗೆ ಬರಗಾಲವಿಲ್ಲ. ಒಂದು ಎಮ್ಮೆಲ್ಲೆ ಸ್ಥಾನಕ್ಕೆ ಹತ್ತಿಪ್ಪತ್ತು ಮಂದಿ ಏಕೆ? ಸಾವಿರ ಮಂದಿಯೇ ಮುಂದೆ ಬರಬಹುದು. ವಿಚಿತ್ರವೆಂದರೆ ಬುದ್ಧಿಜೀವಿಗಳೆನಿಸಿಕೊಳ್ಳುವವರೆಲ್ಲ ಈ ರಾಜಕೀಯ ತಮ್ಮದಲ್ಲ, ಇಂಥ ಜನರಿಗೇ ಸಲ್ಲುವಂಥದ್ದು, ತಾವು ಇಂಥವರಿಂದ ಆಳಿಸಿಕೊಳ್ಳಲಿಕ್ಕೇ ಇರುವವರು ಎಂದು ನಂಬಿಕೊಂಡಿರುವುದು." ಹೀಗೆ ಕಾದಂಬರಿ ಇಂದಿನ

**(ಅದೇ, ಪುಟ 35)**

ರಾಜಕೀಯ ಸ್ಥಿತಿ, ನಮ್ಮನ್ನು ಆಳುವ ವರ್ಗದಲ್ಲಿರುವ ಅಪ್ರಮಾಣಿಕತೆ, ಅಸತ್ಯ ಇವುಗಳನ್ನು ವಿರೋಧಿಸುತ್ತದೆ.

ಯಾವುದೇ ಮಂತ್ರಿಸ್ಥಾನವನ್ನು ಬಯಸದ ಜಯಂತ ಎಷ್ಟೋ ಬಡಪಾಯಿ ಹೆಣ್ಣು ಮಕ್ಕಳಿಗೆ ಉದ್ಯೋಗ ಕೊಡಿಸಿದ್ದಾನೆ. ಜಯಂತನಂತೆ ಎಲ್ಲರೂ ಇದ್ದರೆ ತಮ್ಮ ರಾಜ್ಯಕ್ಕೆ, ದೇಶಕ್ಕೆ ಏನು ಕೊರತೆಯೊ ಎಂದು ಜನ ಮಾತನಾಡಿಕೊಳ್ಳುವಂತೆ ನಡೆದುಕೊಳ್ಳುತ್ತಿದ್ದಾನೆ. ಕೃಷ್ಣಗೋಪಾಲರ ಯೋಗಕ್ಷೇಮ ವಿಚಾರಿಸಲು ಬಂದ ಜಯಂತ ಅವರ ಮಗಳು ಕಾಂತಿಮತಿಗೆ ಉದ್ಯೋಗ ದೊರಕಿಸಿಕೊಡುತ್ತಾನೆ.

ಹಸ್ತಿಪುರದ ಸುಮಾರು ನೂರಕ್ಕೂ ಮಿಕ್ಕಿದ ಸಿನಿಮಾ ಥಿಯೇಟರ್ ಮುಂದೆ ಸದಾ ನೂಕುನುಗ್ಗಲು ತುಂಬಿರುತ್ತಿತ್ತು. "ಯಾವ ದೇಶದಲ್ಲಿ ವೇದೋಪನಿಷತ್ತು, ಗೀತೆ, ಕೀರ್ತನೆಗಳಿಂದ ದಿನವು ಆರಂಭವಾಗುತ್ತಿತ್ತೋ ಆ ದೇಶದಲ್ಲಿ ಸಿನಿಮಾ ಹಾಡುಗಳನ್ನು ಆಲಿಸುತ್ತಾ ಸೂರ್ಯನುದಯಿಸುತ್ತಿದ್ದ. ಯಾವ ದೇಶದಲ್ಲಿ ಋಷಿಗಳಿಗೆ, ಮಹಾಪುರುಷರಿಗೆ ಮನ್ನಣೆ ದೊರೆಯುತ್ತಿತ್ತೋ ಆ ದೇಶದಲ್ಲಿ ಸಿನಿಮಾ ನಾಯಕ ನಾಯಕಿಯರನ್ನು ಆರಾಧಿಸಲಾಗುತ್ತಿತ್ತು. ಯಾವ ದೇಶದಲ್ಲಿ ದೇಶಕ್ಕಾಗಿ ಜೀವನ ಅರ್ಪಿಸಲು ಜನರು ಸಿದ್ಧರಿದ್ದರೋ, ಆ ದೇಶದಲ್ಲಿ ಮೂರ್ಖ ರಾಜಕೀಯ ಪುಡಾರಿಗಳಾಗಿ ಜೀವನವನ್ನು ಅರ್ಪಿಸಲು ಜನರು ಸಿದ್ಧರಿದ್ದರು. ಯಾವ ದೇಶದಲ್ಲಿ 'ಸ್ವಯಂಭು' ಎಂಬ ಪರಮಾರ್ಥವು ಪ್ರತಿಪಾದಿಸಲ್ಪಟ್ಟಿದೆಯೋ ಆ ದೇಶದಲ್ಲಿ ಜನರು ತನ್ನತನವೆಂಬುದಿಲ್ಲದಾಗಿ ದುರಾಚಾರಿಗಳಾದ ಬಾಬಗಳನ್ನು, ಸ್ವಾಮಿಗಳನ್ನು, ಸ್ವಾರ್ಥ ಸಾಧನೆಗಾಗಿ ಹುಟ್ಟಿರುವ ರಾಜಕೀಯ ಪುಡಾರಿಗಳನ್ನು, ಬರೇ ಚಿತ್ರವಾಗಿರುವ ಸಿನಿಮಾ ಮಂದಿಯನ್ನು ಪೂಜಿಸುತ್ತಿದ್ದರು. ಯಾವ ದೇಶವು ಜಗತ್ತಿನಲ್ಲಿ ಪಾತಿವ್ರತ್ಯ, ಏಕಪತ್ನೀವ್ರತಗಳಿಗಾಗಿ ಗೌರವಿಸಲ್ಪಡುತ್ತಿತ್ತೋ ಆ ದೇಶವು ಇಂದು ರೇಪು, ಸಿನಿಮಾಗಳಿಗೆ ಮತ್ತು ಬೀದಿ ಬಲತ್ಕಾರಗಳಿಗೆ ಪ್ರಸಿದ್ಧವಾಗಿತ್ತು."

**(ಅದೇ, ಪುಟ 47)**

ಬೀದಿ ದಾಟುತಿದ್ದ ಪ್ರಕಾಶನಿಗೆ ಸ್ಕೂಟರೊಂದು ಒರೆಸಿಕೊಂಡು ಹೋಗಿ ತನ್ನ ಮುಂದಿದ್ದ ನಡು ಹರೆಯದ ಹೆಂಗಸಿಗೆ ಡಿಕ್ಕಿ ಹೊಡೆಯಿತು. ತಕ್ಷಣವೇ ಅಲ್ಲಿ ಪ್ರತ್ಯಕ್ಷನಾದ ಜಯಂತ ತನ್ನ ಕಾರಿನಲ್ಲಿ ಆಕೆಯನ್ನು ಧನ್ವಂತರಿ ಕ್ಲಿನಿಕ್ಕಿಗೆ ಸೇರಿಸಿದ. ಇದನ್ನೆಲ್ಲಾ ಗಮನಿಸಿದ ಪ್ರಕಾಶನಿಗೆ ಜಯಂತನ ಮೇಲೆ ಏನೋ ಸಂದೇಹ ಬರಲಾರಂಭಿಸಿತು. ಆತ್ಮಹತ್ಯೆ ಮಾಡಿಕೊಂಡಿದ್ದ ತನ್ನ ಅಕ್ಕ ಯಾಮಿನಿಯೂ ಆಗಾಗ ಧನ್ವಂತರಿ ಕ್ಲಿನಿಕ್‌ಗೆ ಹೋಗುತ್ತಿದ್ದುದು ನೆನಪಿಗೆ ಬಂತು. ಅಕ್ಕ ಯಾಮಿನಿ ಪ್ರಕಾಶನ

ಓದಿಗೆ ಸಹಕರಿಸಿದ್ದಳು. ಬ್ಯಾಂಕಿನಲ್ಲಿ ಸುಮಾರು ಎರಡೂವರೆ ವರ್ಷ ಉದ್ಯೋಗದಲ್ಲಿದ್ದ ಆಕೆ ಹೆಚ್ಚೇನೂ ಸಂತೋಷವಾಗಿರಲಿಲ್ಲ. ಎಷ್ಟೋ ಬಾರಿ ಆಕೆ ಒಬ್ಬಳೇ ಕುಳಿತುಕೊಂಡು ಕಣ್ಣಲ್ಲಿ ನೀರು ತುಂಬಿಕೊಳ್ಳುತ್ತಿದ್ದಳು. ಪ್ರಕಾಶ, ಅಶೋಕ ಮತ್ತು ಆನಂದ ಇದರ ಹಿಂದಿರುವ ರಹಸ್ಯವನ್ನು ಭೇದಿಸುವ ಪ್ರಯತ್ನ ಆರಂಭಿಸಿದರು. ಅಶೊಕ ಮತ್ತು ಆನಂದ ಚಲನಚಿತ್ರ ನೋಡಿ ಬರುವ ಹೊತ್ತಿಗೆ ಯುವತಿಯೊಬ್ಬಳ ಸರವನ್ನು ಯಾರೋ ಅಪಹರಿಸಿದ್ದರು. ಅಲ್ಲಿಗೆ ಬಂದ ಎಮ್ಮೆಲ್ಲೆ ದಿಗಂಬರ ಆಕೆಯನ್ನು ತನ್ನ ಕಾರಿನಲ್ಲಿ ಕರೆದುಕೊಂಡು ಹೋಗಿದ್ದ. ವಿಚಾರಿಸಿದಾಗ ಆಕೆಯೂ ನಿರುದ್ಯೋಗಿಯಾಗಿರುವ ವಿಷಯ ತಿಳಿಯಿತು. ಇದೆಲ್ಲದರ ಹಿಂದೆ ಯಾರದೋ ಕೈವಾಡವಿದೆ ಎಂದು ಅಶೋಕನಿಗನ್ನಿಸಿತು.

ಕಾಂತಿಮತಿಗೆ ಉದ್ಯೋಗ ಸಿಕ್ಕಿದಂದಿನಿಂದ ಅವಳಲ್ಲಿ ಬದಲಾವಣೆ ಕಾಣುತ್ತಿತ್ತು. ತಿಂಗಳಿಗೆ ಮುನ್ನೂರು ರೂಪಾಯಿ ಸಂಬಳ ಬರುತ್ತಿದ್ದರೂ ಆಕೆಯ ಅಕೌಂಟಿನಲ್ಲಿ ಐದು ಸಾವಿರ ರೂಪಾಯಿ ಹಣವಿತ್ತು. ಹೊಸ ಸೀರೆಗಳನ್ನು ಖರೀದಿಸುತ್ತಿದ್ದಳು. ಪ್ರಕಾಶನಿಗೆ ಟೈಫಾಯಿಡ್ ಕಾಯಿಲೆಯಾದಾಗ ಕಾಂತಿಮತಿಯೇ ಆತನಿಗೆ ತಿಳಿಯದಂತೆ ಆಸ್ಪತ್ರೆಯ ಬಿಲ್ಲನ್ನು ಪಾವತಿಸಿದ್ದಳು. ಪ್ರಕಾಶ ಪತ್ರಿಕೆ ಆರಂಭಿಸುವ ತಯಾರಿಯಲ್ಲಿದ್ದಾಗ ಅಲ್ಲಿಗೆ ಆಗಮಿಸಿದ ಕಾಂತಿಮತಿ ತಾನು ಹಣದ ಸಹಾಯ ಮಾಡುವುದಾಗಿ ತಿಳಿಸಿದ್ದಳಲ್ಲದೆ ತನ್ನ ರಕ್ತವನ್ನೂ ನೀಡಬಲ್ಲೆ ಎಂದು ಉದ್ವೇಗದಿಂದ ನುಡಿದಳು. ಅವಳ ಆಡಂಬರದ ಜೀವನದ ಹಿಂದೆ ಅಂತರಂಗದ ಯಾತನೆ ಕಾಣಿಸುತ್ತಿತ್ತು.

ಆನಂದ ಅಪಘಾತದ ಹಿಂದಿನ ರಹಸ್ಯ ತಿಳಿದುಕೊಳ್ಳಲು ದಿವ್ಯದರ್ಶಿ ಹೋಟೇಲಿಗೆ ಭೇಟಿಕೊಟ್ಟ. ಅಲ್ಲಿಗೆ ದೊಡ್ಡ ದೊಡ್ಡ ಮನುಷ್ಯರು, ಉದ್ಯಮಿಗಳು, ವ್ಯಾಪಾರಿಗಳು, ಡಾಕ್ಟರರು ಬರಲಾರಂಭಿಸಿದರು. ಸಂಜೆ ಸುಮಾರು ಆರು ಗಂಟೆಯಿಂದ ಏಳು ಗಂಟೆಯ ಹೊತ್ತಿಗೆ ಸುಮಾರು ಹದಿನೈದು ಮಂದಿ ಸುಂದರಿಯರು ಆಗಮಿಸಿದರು. ಇದರಲ್ಲಿ ಕಾಂತಿಮತಿಯ ಗೆಳತಿ ರಶ್ಮಿ, ವಾಣಿಯ ಗೆಳತಿ ಬ್ಯಾಂಕ್ ಉದ್ಯೋಗಿ ಪ್ರತಿಮಾ ಕೂಡಾ ಇದ್ದಳು. ಆನಂದ ಅಲ್ಲಿ ನಡೆಯುತ್ತಿದ್ದ ವ್ಯವಹಾರವನ್ನು ಮನಸ್ಸಿನಲ್ಲೇ ಊಹಿಸುತ್ತಿದ್ದಂತೆ ದಿವ್ಯದರ್ಶಿಯಿಂದ ಜಯಂತನ ಕಾರು ಹೊರಟ ಕೂಡಲೇ ಕಾಂತಿಮತಿ ಕುಳಿತ ಕಾರೊಂದು ಹೊರಟು ಹೋಯಿತು. ಕಾಂತಿಮತಿಯೆಂದರೆ ಜಯಂತನಿಗೆ ಬಹಳ ಇಷ್ಟ.

ಪ್ರಕಾಶನ ತಂದೆ ರಮಾನಂದರ ಒಪ್ಪಿಗೆಯಂತೆ ಪ್ರಕಾಶನ ಸಂಪಾದಕತ್ವದಲ್ಲಿ 'ಯುಗಾಂತರ' ಪತ್ರಿಕೆ ಆರಂಭವಾಯಿತು. ಪರಂಪರಾಗತವಾಗಿ ಬರುವ ಮಂತ್ರಿ ಪದವಿ, ನಗರದಲ್ಲಿ ನಡೆಯುವ ಅವ್ಯವಹಾರ, ಬೆಲೆ ಏರಿಕೆ ಮೊದಲಾದ ವಿಷಯವನ್ನು ಪತ್ರಿಕೆ ಕಟುವಾಗಿ ಟೀಕಿಸಲಾರಂಭಿಸುತ್ತದೆ. ತನ್ನ ಮಗಳಿಗೇ ಎಂ.ಎ.ಯಲ್ಲಿ ಫಸ್ಟ್ ರ್‍ಯಾಂಕ್ ಕೊಡಬೇಕೆಂದು ಹಠ ಹಿಡಿದ ಯೂನಿವರ್ಸಿಟಿ ಚಾನ್ಸಲರ್ ಅವರ ಹೆಂಡತಿ, ಅದಕ್ಕೆ ತಲೆಬಾಗಿದ ಪ್ರೊಫೇಸರುಗಳು, ಮಂತ್ರಿಯ ಮಗನನ್ನು ಆರಾಧಿಸಿ ಮಂತ್ರಿ ಮಾಡುವ ಬುದ್ಧಿ ಜೀವಿಗಳು, ಪ್ರತಿಭಾವಂತರೆಲ್ಲ ವಿದೇಶಕ್ಕೆ ಪಲಾಯನಗೈಯುವುದು ಹೀಗೆ ಪತ್ರಿಕೆಯಲ್ಲಿ ಪ್ರತಿರೋಧ ಮುಂದುವರಿಯುತ್ತದೆ. ಪತ್ರಿಕೆಯಲ್ಲಿ ಪ್ರಕಟವಾದ ರಾಜಕೀಯ ಭಾಗವತದಲ್ಲಿ ಹಸ್ತಿಪುರದಲ್ಲಿ ಗುಪ್ತವಾಗಿ ನಡೆಯುತ್ತಿದ್ದ ಅವ್ಯವಹಾರವನ್ನು ನಿಗೂಢವಾದ ಭಾಷೆಯಲ್ಲಿ ವರ್ಣಿಸಿ ಬರೆಯಲಾಯಿತು. ಇದನ್ನು ಕಂಡ ಜಯಂತ ಸಿಡಿಮಿಡಿಗೊಂಡಿದ್ದ. ವಾಲ್ಮೀಕಿ ನಗರದ ಬಾವಿಯೊಂದರಲ್ಲಿ ತರುಣಿಯೊಬ್ಬಳ ಶವ ಕಾಣ ಸಿಕ್ಕಿದ ಬಗ್ಗೆ ಪತ್ರಿಕೆಯಲ್ಲಿ ಪ್ರಕಟವಾದ ಸುದ್ದಿ ಓದಿದ ಕಾಂತಿಮತಿ ಪ್ರಕಾಶನ ಮನೆಗೆ ಬಂದು ಇದರ ಬಗ್ಗೆ ಪತ್ತೇದಾರಿ ನಡೆಸಲು ತಿಳಿಸಿದಳು. ಯುಗಾಂತರ ಪತ್ರಿಕೆಗೆ ಬೆದರಿಕೆ ಕರೆಗಳು ಬರಲಾರಂಭಿಸಿದವು.

ಬಾಲ್ಯದಲ್ಲೇ ತಂದೆ ತಾಯಂದಿರನ್ನು ಕಳೆದುಕೊಂಡಿದ್ದ ಮನೀಷ ಅಧ್ಯಾಪಕರೊಬ್ಬರ ನೆರವಿನಿಂದ ಬೆಳೆದವನು. ಎಂ.ಎ. ಪದವಿಯನ್ನು ಪೂರೈಸಿದ್ದ. ಇಂಗ್ಲಿಷ್ ಪತ್ರಿಕೆಯಲ್ಲಿ ಕೆಲಸ ಮಾಡುತ್ತಿದ್ದ ಸಂದರ್ಭದಲ್ಲಿ ಆತ ಬರೆದ ಕ್ರಾಂತಿಕಾರಕ ಬರಹದಿಂದಾಗಿ ಕೆಲಸ ಕಳೆದುಕೊಂಡಿದ್ದ. ಕಮ್ಯೂನಿಸಂ ಬಗ್ಗೆ ಆತನಿಗೆ ನಂಬಿಕೆ. ಎಂ.ಎ. ಯಲ್ಲಿದ್ದಾಗ ಶ್ರೀಮಂತ ಹುಡುಗಿಯೊಬ್ಬಳನ್ನು ಆತ ಪ್ರೀತಿಸಿದ್ದ. ಆದರೆ ಅವರ ಮಧ್ಯೆ ಧರ್ಮ ಅಡ್ಡ ಬಂತು. ಆಕೆ ಮನೆಯವರ ಮಾತು ಕೇಳದಿದ್ದಾಗ ಅವಳನ್ನು ಇಲೆಕ್ಟ್ರಿಕ್ ಶಾಕ್ ಕೊಟ್ಟು ಸಾಯಿಸಿದರು. ಮನೀಷನಲ್ಲೂ ವ್ಯವಸ್ಥೆಯ ವಿರುದ್ಧ ಪ್ರತ್ತಿರೋಧವಿದೆ. ಎಂಥ ನೀಚ ಮಾರ್ಗದಿಂದಲೇ ಆಗಲಿ ಅಧಿಕಾರವನ್ನು ಸಂಪಾದಿಸಿಕೊಳ್ಳುವುದು, ಹಣ ಗಳಿಸುವುದು ಸರಿ ಎಂಬ ಧೋರಣೆ ಜನರಲ್ಲಿ ಬೇರೂರಿದೆ. ಲಂಚ, ಭ್ರಷ್ಟಾಚಾರ ಮತ್ತು ಹೃದಯಹೀನತೆ ಬೆಳೆಯುತ್ತಿದೆ. ಮಾನವೀಯತೆಗೆ ಬೆಲೆಯಿಲ್ಲವಾಗಿದೆ. ಸಿರಿವಂತರು ಸಿರಿವಂತಿಕೆಯ ಏಣಿಯಲ್ಲಿ ಮೇಲೆ ಮೇಲೆ ಹೋಗುತ್ತಾ ಇದ್ದಾರೆ. ಬಡವರು ಮತ್ತಷ್ಟು ಬಡವರಾಗುತ್ತಿದ್ದಾರೆ ಎನ್ನುತ್ತಾನೆ. ಪ್ರಕಾಶನ ಆಹ್ವಾನದ ಮೇರೆಗೆ ಮನೀಷ ಪ್ರಕಾಶನ ಪತ್ರಿಕೆಗೆ ಸೇರಲು ಒಪ್ಪಿಕೊಳ್ಳುತ್ತಾನೆ.

ಯುಗಾಂತರ ಪತ್ರಿಕೆಯ ಮೂಲಕ 'ಯುವಶಕ್ತಿ' ಎಂಬ ಸಂಘಟನೆ ಆರಂಭಿಸುವ ಕುರಿತು ಚಿಂತನೆ ನಡೆಸಲಾಯಿತು. ರಾಜ್ಯದಲ್ಲಿ ತಳವೂರಿರುವ ಹಲವು ಹತ್ತು ಬಗೆಯ ಭ್ರಷ್ಟಾಚಾರವನ್ನು, ಶೋಷಣೆಯನ್ನು, ಅನ್ಯಾಯವನ್ನು, ಬೆಳೆಯುತ್ತಿರುವ ಮಿಲಿಯಾಧೀಶರನ್ನು, ಬೆಳೆಯುತ್ತಿರುವ ದಾರಿದ್ರ್ಯವನ್ನು ಕಡಿಮೆ ಮಾಡುವ ಉದ್ದೇಶವನ್ನಿಟ್ಟುಕೊಂಡು ಯುವಶಕ್ತಿ ಸ್ಥಾಪಿಸಲು ನಿರ್ಧರಿಸಲಾಯಿತು. ಪತ್ರಿಕೆಯಲ್ಲಿ ಈ ಬಗ್ಗೆ ತಿಳಿಸಿದಾಗ ಸಾವಿರಾರು ಯುವಕ ಯುವತಿಯರಿಂದ ಪತ್ರಗಳು ಬಂದವು. ಪ್ರಕಾಶನ ತಂದೆ ರಮಾನಂದರಿಗೆ ಬಂದ ಬೆದರಿಕೆ ಫೋನ್‌ನಿಂದಾಗಿ ಎದೆನೋವು ಕಾಣಿಸಿಕೊಂಡು ಅವರು ಕೊನೆಯುಸಿರೆಳೆದರು.

ಚಂದನಾವತಿ ರಾಜ್ಯದ ಅಸೆಂಬ್ಲಿ ಚುನಾವಣೆಗೆ ಆರು ತಿಂಗಳು ಬಾಕಿಯಿರುವಾಗ ಯುವಶಕ್ತಿ ಕ್ರಾಂತಿಕಾರಿ ಚುನಾವಣಾ ಪ್ರಣಾಳಿಕೆ ತಯಾರಿಸಿ ಅದಕ್ಕೊಪ್ಪುವವರಿಗೆ ಬೆಂಬಲ ನೀಡುವ ನಿರ್ಧಾರ ಕೈಗೊಳ್ಳಲಾಯಿತು. ಪ್ರತೀ ಊರಿನಿಂದ ಐದೈದು ಮಂದಿ ತರುಣರನ್ನು ಕರೆಸಿ ಕಮಾಂಡಿಸಂ ಬಗ್ಗೆ ತಿಳಿಸಲಾಯಿತು. ಅಂಗೀರಸ ನಗರದಲ್ಲಿ ಒಮ್ಮೆ ಪೋಲೀಸರಿಂದಲೆ ಅತ್ಯಾಚಾರ ನಡೆಯುತ್ತದೆ. ಕಾಲೇಜು ಅಧ್ಯಾಪಕ ರಾಮಸ್ವಾಮಿ ತನ್ನ ಪತ್ನಿಯೊಂದಿಗೆ ಸಿನಿಮಾ ನೋಡಿ ರಾತ್ರಿ ಹನ್ನೆರಡು ಗಂಟೆಯ ಹೊತ್ತಿನಲ್ಲಿ ನಡೆದುಕೊಂಡು ಹೋಗುತ್ತಿದ್ದಾಗ ಪೋಲೀಸರು ಅಸಭ್ಯ ಪ್ರಶ್ನೆಗಳನ್ನು ಕೇಳಿ ಬೂಟುಗಾಲಿನಿಂದ ಒದೆಯುತ್ತಾರೆ. ರಾಮಸ್ವಾಮಿಗೆ ಕೋವಿಯಿಂದ ಗುಂಡು ಹಾರಿಸುತ್ತಾರೆ. ಆತನ ಪತ್ನಿಯನ್ನು ಪೋಲೀಸ್ ಸ್ಟೇಷನ್ನಿಗೆ ಕರೆದೊಯ್ಯಲಾಗುತ್ತದೆ. ಅಲ್ಲಿ ಅವಳನ್ನು ಕಾಗೆಗಳ ಹಿಂಡು ನೋಡುವಂತೆ ನೋಡುತ್ತಾರೆ. ನಾಲ್ಕು ತಿಂಗಳ ಗರ್ಭಿಣಿ ಹೆಣ್ಣು ಸುಮಿತ್ರಳ ದೇಹದ ಮೇಲೆ ಐದು ಮಂದಿ ಪೋಲೀಸರು ಒಬ್ಬನಾದ ಮೇಲೆ ಒಬ್ಬನಂತೆ ಎರಗಿ ಅಮಾನವೀಯ ವಿಧಾನದಲ್ಲಿ ತೃಪ್ತಿಪಡುತ್ತಾರೆ. ಕಾದಂಬರಿಯಲ್ಲಿ ಪೋಲೀಸರ ದೌರ್ಜನ್ಯದ ವಿರುದ್ಧ ಪ್ರತಿರೋಧ ಎದ್ದು ಕಾಣುತ್ತದೆ. ಸುಮಿತ್ರಳಿಗೆ ಹುಚ್ಚು ಹಿಡಿಯಿತು. ಆದರೆ ನಾನಾ ವಿಧದಿಂದ ಲಕ್ಷಾಧೀಶನಾಗುತ್ತಿರುವ ಸರಕಾರಿ ಡಾಕ್ಟರನಿಗೆ ಪೋಲೀಸರ ವರದಿಯಲ್ಲಿ ಏನೂ ಸುಳ್ಳು ಕಾಣಿಸಲಿಲ್ಲ. ಮರುದಿನ ಯುಗಾಂತರ ಪತ್ರಿಕೆಯಲ್ಲಿ "ಪೋಲೀಸು ಎಂಬ ಪದದ ಅರ್ಥ ದುರ್ಮಾರ್ಗಿ ಎಂದೇ ಜನ ನಂಬುವಂತಾಗಿದೆ. ಇಂಥ ಪೋಲೀಸರು ಚಂದನಾವತಿಗೆ ಮಾತ್ರವಲ್ಲ ಇಡೀ ದೇಶಕ್ಕೆ ಕಳಂಕ. ಇಂಥವರನ್ನು ಗಲ್ಲಿಗೇರಿಸದ ಹೊರತು ಈ ದೇಶಕ್ಕೆ ಸುಸಂಸ್ಕೃತವಾದ ದೇಶವೆಂದು ಕರೆದುಕೊಳ್ಳುವ ಅರ್ಹತೆಯಿಲ್ಲ. ಇಂಥ ಪೋಲೀಸರನ್ನು ಸಮಾಜದ್ರೋಹಿಗಳು, ದೇಶದ್ರೋಹಿಗಳು ಎಂದು ಪರಿಗಣಿಸಬೇಕು." ಎಂಬುದಾಗಿ

**(ಅದೇ, ಪುಟ 172)**

ವರದಿಯಾಗಿತ್ತು. ಇದರಿಂದ ಪ್ರಕಾಶ ಪೋಲೀಸ್ ಇನ್ಸ್‌ಪೆಕ್ಟರನ ಕೆಂಗಣ್ಣಿಗೆ ಗುರಿಯಾಗಬೇಕಾಯಿತಲ್ಲದೆ ಸ್ಟೇಷನ್ನಿನ ದರ್ಶನವನ್ನೂ ಮಾಡಬೇಕಾಯಿತು.

ಯುವಶಕ್ತಿ ಸಂಘಟನೆಯ ಮೂಲಕ ಇಂಡಸ್ಟ್ರಿಯಲ್ ಎಸ್ಟೇಟನ್ನು ಕಟ್ಟಿಸಿ ನಿರುದ್ಯೋಗಿಗಳಿಗೆ ಉದ್ಯೋಗ ನೀಡುವ ಯೋಜನೆ ರೂಪಿತವಾಗುತ್ತದೆ. ಅದಕ್ಕೆ ಬೇಕಾದ ಕಟ್ಟಡಕಾಗಿ ಶ್ರೀಮಂತ ದೇವೀಂದ್ರ ಸಿಂಧುರವರಿಂದ ಒತ್ತಾಯಪೂರ್ವಕವಾಗಿ ನೆರವನ್ನು ಪಡೆದುಕೊಳ್ಳುತ್ತಾರೆ. ಏಳೆಂಟು ಭಾರೀ ಶ್ರೀಮಂತರು ಯುವಶಕ್ತಿಯ ಹಸ್ತಿಪುರದ ಕಮಾಂಡ್‌ನ ಕೇಳಿಕೆಗಳಿಗೆ ಮಣಿದರು. ಕೆಲವರು ಸಂತೋಷದಿಂದ ಒಪ್ಪಿದರೆ ಕೆಲವರು ಬೆದರಿಕೆಗೆ ಮಣಿದರು. ಫ್ಯಾಕ್ಟರಿಯೊಂದರ ಮಾಲಕರಾದ ಕಾವೇರಿನಾಥರು ಯುವಶಕ್ತಿ ಸಂಘಕ್ಕೆ ಅವರು ಕೇಳಿದ ಒಂದು ಲಕ್ಷ ರೂಪಾಯಿ ನೀಡದ ಕಾರಣ ಅವರ ರೇಯಾನ್ ಕಂಪೆನಿಗೆ ಬೆಂಕಿ ಹಚ್ಚಲಾಗುತ್ತದೆ. ಅವರ ಟೆಕ್ಸ್‌ಟೈಲ್ ಮಿಲ್ಲಿಗೂ ಬಾಂಬ್ ಹಾಕುವುದಾಗಿ ತಿಳಿಸಿದಾಗ ಅವರು ಒಂದು ಲಕ್ಷ ನೀಡಲು ಒಪ್ಪುತ್ತಾರೆ. ಅಲ್ಲದೆ ವಯಸ್ಕರ ಶಿಕ್ಷಣ ನಿಧಿಗೆ ಐದು ಲಕ್ಷ ನೀಡುತ್ತಾರೆ. ಇಲ್ಲಿ ಕಾವೇರಿನಾಥರ ಪ್ರತಿರೋಧವೇ ಅವರನ್ನು ಇನ್ನಷ್ಟು ನಷ್ಟಕ್ಕೆ ಗುರಿಮಾಡಿತು. ಹಸ್ತಿಪುರ ಮತ್ತು ರಾಜ್ಯದ ಇತರ ಮುಖ್ಯ ನಗರಗಳಲ್ಲಿರುವ ಉದ್ಯಮ ಸಂಸ್ಥೆಗಳ ಮಾಲೀಕರು ಯುವಶಕ್ತಿಯ ಒತ್ತಾಯಕ್ಕೆ ಮಣಿದು ಉದ್ಯೋಗ ಕೊಡಲೊಪ್ಪಿದರು. ಯುವಶಕ್ತಿಯ ಸದಸ್ಯತ್ವ ಎರಡು ಲಕ್ಷಕ್ಕೇರಿತು.

ಈ ಮಧ್ಯೆ ಜಯಂತನಿಂದ ಯುಗಾಂತರ ಪ್ರೆಸ್‌ಗೆ ಬೆಂಕಿ ಹಚ್ಚುವ ಪ್ರಯತ್ನವೂ ನಡೆಯುತ್ತದೆ. ಯುವಶಕ್ತಿ ಸಂಘಟನೆ ವಿದ್ಯುತ್ ಸರಬರಾಜು, ನೀರಿನ ಸರಬರಾಜು, ರಸ್ತೆಗಳು, ವಾಹನ ಸೌಕರ್ಯ, ಶಾಲೆಗಳು, ಆಸ್ಪತ್ರೆ, ಶಿಕ್ಷಣ ಕೇಂದ್ರಗಳನ್ನು ನಿರ್ಮಿಸಿ ಸಮಾಜ ಸೇವೆ ಮಾಡುವ ಕಾರ್ಯವನ್ನು ಹಮ್ಮಿಕೊಳ್ಳುವುದಾಗಿ ಪತ್ರಿಕೆಯ ಮೂಲಕ ಜನರಿಗೆ ತಿಳಿಯಪಡಿಸುತ್ತದೆ.

ಯುವಶಕ್ತಿಯನ್ನು ಹೀಗೆ ಬೆಳೆಯಬಿಟ್ಟರೆ ಪ್ರಜಾರಂಗಕ್ಕೆ ಅಪಾಯವಿದೆ ಎಂದು ವಾದಿರಾಜರು ಯೋಚಿಸಿದರು. ಯುಗಾಂತರದ ಎಲ್ಲರನ್ನೂ ಬಂಧಿಸುವ ಬಗ್ಗೆ ಯೋಚಿಸಿದರು. ಜಯಂತನ ಸ್ನೇಹಿತರು ಆತ ಚುನಾವಣೆಗೆ ಸ್ಪರ್ಧಿಸಬೇಕು ಎಂದು ಬಯಸುತ್ತಾರೆ. ಜಯಂತ ತಂದೆ ವಾದಿರಾಜರೊಂದಿಗೆ "ಹದಿನೈದು ವರ್ಷ ಆಳಿದಿರಲ್ಲಾ ಸಾಕು. ಇನ್ನು ಸ್ವಲ್ಪ ನಾವು ನೋಡಿಕೊಳ್ತೇವೆ" ಎಂದಾಗ ವಾದಿರಾಜರ ನಾಲಿಗೆ ಕಟ್ಟಿ ಹೋಯಿತು. ತನ್ನನ್ನು ಬಲಾತ್ಕಾರವಾಗಿ ಪದವಿಯಿಂದ ಕೆಳಗಿಳಿಸುವ ಯತ್ನದಲ್ಲಿರುವ

ಮಗ ಅವರಿಗೆ ಬೇರೆಯೇ ಆಗಿ ತೋರಿದ. ಜಯಂತ ಚುನಾವಣೆಗೆ ನಿಲ್ಲುವ ತೀರ್ಮಾನ ಮಾಡುತ್ತಾನೆ.

ಡಾಕ್ಟರ್ ಮುರಳೀಧರನ ಮನೆಗೆ ಬಂದ ಮನೀಷನಿಗೆ ಮುರಳೀಧರನ ಪತ್ನಿ ತನ್ನ ಹಳೆಯ ಆಭರಣ ನೀಡಿ ಆಸ್ಪತ್ರೆ ಕಟ್ಟುವ ಕೆಲಸಕ್ಕೆ ಸಹಾಯ ಮಾಡಿದಳು. ಆದರೆ ಮುರಳೀಧರನ ಆಫೀಸಿಗೆ ತೆರಳಿದಾಗ ಆತ ಮಾತ್ರ ಬಿಡಿಗಾಸನ್ನೂ ನೀಡದೆ ಬೈದು ಕಳುಹಿಸುತ್ತಾನೆ. ಕೆರಳಿದ ಮನೀಷ ಮುರಳೀಧರನೊಂದಿಗೆ ಆತ ರತ್ನದೀಪ, ದಿವ್ಯದರ್ಶಿಯಲ್ಲಿ ಹುಡುಗಿಯರನ್ನು ಶ್ರೀಮಂತರಿಗೆ ಸರಬರಾಜು ಮಾಡುವ ವಿಷಯ ತಮಗೆ ತಿಳಿದಿದೆಯೆಂದೂ ಅದನ್ನು ಪತ್ರಿಕೆಯಲ್ಲಿ ಬರೆಯುವುದಾಗಿಯೂ ತಿಳಿಸುತ್ತಾನೆ. ತನ್ನ ಕ್ಲಿನಿಕ್ಕಿನಲ್ಲಿ ನಡೆದ ವಿಚಾರವನ್ನು ಮುರಳೀಧರ ಜಯಂತನಿಗೆ ತಿಳಿಸುತ್ತಾನೆ. ಜಯಂತ ಪ್ರಕಾಶನನ್ನು ಮುಗಿಸಿಬಿಡುವುದರ ಬಗ್ಗೆ ಯೋಚಿಸುತ್ತಾನೆ.

ಮಾಲತಿ ಪ್ರಕಾಶನೊಂದಿಗೆ ತನ್ನನ್ನು ಮದುವೆಯಾಗಬೇಕೆಂದು ತಿಳಿಸಿದಾಗ ಪ್ರಕಾಶ ಇನ್ನೆರಡು ತಿಂಗಳಿನಲ್ಲಿ ಮದುವೆಯಾಗುವುದಾಗಿ ಭರವಸೆ ನೀಡುತ್ತಾನೆ. ಕಾಂತಿಮತಿ ಪ್ರಕಾಶನೊಂದಿಗೆ ಜಯಂತನಿಂದ ಏನಾದರೂ ತೊಂದರೆ ಆಗಬಹುದೆಂಬ ಎಚ್ಚರಿಕೆಯನ್ನು ನೀಡುತ್ತಾಳೆ. ಒಂದು ದಿನ ಮಧ್ಯಾಹ್ನ ಪುಸ್ತಕದಂಗಡಿಯಿಂದ ಹೊರಬಿದ್ದು ಮನೆ ಕಡೆ ತೆರಳುತ್ತಿದ್ದ ಪ್ರಕಾಶನ ಮೇಲೆ ಇಬ್ಬರು ದಾಂಡಿಗರು ಎರಗಿ ಕೊಲೆ ಮಾಡುತ್ತಾರೆ. ಪ್ರಕಾಶನಿಗಿದ್ದ ವ್ಯವಸ್ಥೆಯ ಅಟ್ಟಹಾಸದ ವಿರುದ್ಧದ ಪ್ರತಿರೋಧ ಆತನನ್ನೇ ಬಲಿ ತೆಗೆದುಕೊಳ್ಳುತ್ತದೆ. ಆದರೆ ಪ್ರಕಾಶನ ಸಾವಿಗೆ ಪ್ರತೀಕಾರವನ್ನು ಹಿಂಸೆಯ ಮೂಲಕ ಮಾಡುವುದನ್ನು ಮನೀಷ ವಿರೋಧಿಸುತ್ತಾನೆ. ಪ್ರಕಾಶ ತೀರಿಕೊಂಡ ನಂತರ ಯುಗಾಂತರ ನಾಲ್ಕರಿಂದ ಎಂಟು ಪುಟಗಳಿಗೆ ಹೆಚ್ಚಾಯಿತು. ಐದು ಮಂದಿ ಸಂಪಾದಕರೊಂದಿಗೆ ಪಕ್ಷ ಪತ್ರಿಕೆ ವಾರಪತ್ರಿಕೆಯಾಯಿತು.

ಜಯಂತ ಕಾಂತಿಮತಿಯೊಂದಿಗೆ ಮಾಲತಿಯನ್ನು ತನ್ನ ಪಾರ್ಟಿಗೆ ಕರೆದುಕೊಂಡು ಬರುವಂತೆ ಪದೇ ಪದೇ ಒತ್ತಾಯಿಸಲಾರಂಭಿಸುತ್ತಾನೆ. ತಾನು ಇಬ್ಬರಿಗೂ ಅರಮನೆ ಕಟ್ಟಿಸಿಕೊಡುತ್ತೇನೆ ಎನ್ನುತ್ತಾನೆ. ಆದರೆ ಪಾರ್ಟಿ ನಡೆಯುವ ದಿನ ಆಕೆ ಮಾಲತಿಯನ್ನು ಕರೆದುಕೊಂಡು ಬಾರದಿರುವುದನ್ನು ಕಂಡು ಸಿಟ್ಟುಗೊಳ್ಳುತ್ತಾನೆ. ಪ್ರಕಾಶ ಸತ್ತ ನಂತರವೂ ಮಾಲತಿಯನ್ನು ಕರೆತರುವಂತೆ ಒತ್ತಾಯಪಡಿಸುತ್ತಾನೆ. ಆಕೆ ಬಾರದಿದ್ದರೆ ಅವಳ ಹೆಣ ಬಾವಿಯಲ್ಲಿ ತೇಲುತ್ತಿರುತ್ತದೆ ಎನ್ನುತ್ತಾನೆ. ಮರುದಿನ ಕರೆತರುತ್ತೇನೆ ಎನ್ನುತ್ತಾಳೆ ಕಾಂತಿಮತಿ.

ಭಾನುವಾರ ಜಯಂತನ ಪಾರ್ಟಿಗೆ ಹೋದ ಕಾಂತಿಮತಿ ಜಯಂತ ಹಾಗೂ ಅವನ ಗೆಳೆಯರು ಶರಾಬಿನ ಅಮಲಿನಲ್ಲಿ ತೇಲುತ್ತಿದ್ದಾಗ ತನ್ನ ಹೋಟೇಲಿನ ಬೇಡ್‌ರೂಮಿಗೆ ತೆರಳಿ ವಯರಿನ ತುಂಡೊಂದನ್ನು ತೆಗೆದು ಗೋಡೆಯ ಮೇಲಿದ್ದ ವಿದ್ಯುತ್ ಸಾಕೇಟಿಗೆ ತುರುಕುತ್ತಾಳೆ. ವಿದ್ಯುಚ್ಛಕ್ತಿ ಹೊರಟುಹೋಗುತ್ತದೆ. ಡ್ರಾವರ್‌ನಲ್ಲಿದ್ದ ಪಿಸ್ತೂಲೊಂದನ್ನು ಕೈಗೆತ್ತಿಕೊಳ್ಳುತ್ತಾಳೆ. ಟಾರ್ಚ್ ಬೆಳಕನ್ನು ಜಯಂತನೆಡೆಗೆ ಬೀರುತ್ತಾ ಆತನಿಗೆ ಗುಂಡು ಹಾರಿಸುತ್ತಾಳೆ. ಮುರಳೀಧರ, ಗೌತಮ, ಮಹಾದೇವ, ದಿಗಂಬರ ಇವರ ಮೇಲೂ ಗುಂಡು ಹಾರಿಸಿ ಕೊನೆಗೆ ಉಳಿದಿದ್ದ ಗುಂಡನ್ನು ತನ್ನ ಮೇಲೆ ಹಾರಿಸಿಕೊಳ್ಳುತ್ತಾಳೆ. ಕಾಂತಿಮತಿ ತಾನು ಜಯಂತನೊಂದಿಗಿದ್ದರೂ, ಆತನ ವ್ಯವಹಾರವನ್ನೆಲ್ಲ ತಿಳಿದರೂ ಪ್ರತಿಭಟಿಸಲಾರದೆ ತನ್ನ ಮನಸ್ಸಿನೊಳಗೆ ಕುದಿಯುತ್ತಿದ್ದಳು. ಆತನ ಅವ್ಯವಹಾರದ ಬಗ್ಗೆ ಆಕೆಯಲ್ಲಿ ಪ್ರತಿರೋಧವಿದ್ದರೂ ಆಕೆ ಏನೂ ಮಾಡಲಾಗದ ಸ್ಥಿತಿಯಲ್ಲಿದ್ದಳು. ಕೊನೆಗೆ ತನ್ನ ತಂಗಿಗೂ ತನ್ನದೇ ಸ್ಥಿತಿ ಬರುವುದನ್ನು ಸಹಿಸದ ಆಕೆ ಜಯಂತ ಹಾಗೂ ಅವನ ಗೆಳೆಯರ ಕೊಲೆ ಮಾಡುವುದರ ಮೂಲಕ ಪ್ರತಿರೋಧವನ್ನು ವ್ಯಕ್ತಪಡಿಸಿದಳು. ಆಕೆಯ ಮನದಲ್ಲಿ ಪ್ರತಿರೋಧ ಭಾವನೆ ಕಟ್ಟೆಯೊಡೆದಾಗ ಆಕೆ ಕೊಲೆ ಮಾಡಲೂ ಹಿಂದೇಟು ಹಾಕಲಿಲ್ಲ.

ಕಾದಂಬರಿಯಲ್ಲಿ ಬರುವ ಪ್ರಕಾಶ ಮತ್ತು ಅವನ ಸಂಗಡಿಗರಿಗೆ ತಮ್ಮ ಸುತ್ತ ನಡೆಯುತ್ತಿರುವ ಅನೈತಿಕ ಚಟುವಟಿಕೆ, ಅವ್ಯವಹಾರ, ಅನ್ಯಾಯಗಳನ್ನು ನೋಡಿಕೊಂಡು ಸುಮ್ಮನಿರಲಾಗಲಿಲ್ಲ. ತಾವಿರುವ ಪರಿಸ್ಥಿತಿಯಲ್ಲಿ ಅದನ್ನೆಲ್ಲಾ ಪ್ರತಿಭಟಿಸುವುದೂ ಅಸಾಧ್ಯವಾಗಿತ್ತು. ಅದಕ್ಕಾಗಿ ಅವರು ಕಂಡುಕೊಂಡ ದಾರಿ ಪತ್ರಿಕೆ ಆರಂಭಿಸುವುದು. ತಮ್ಮ ಪ್ರತಿಭಟನೆ ಇನ್ನಷ್ಟು ಬಲಗೊಳ್ಳಲು ಅವರು ಕಂಡುಕೊಂಡ ದಾರಿ ಯುವಕರ ಗುಂಪೊಂದನ್ನು ಕಟ್ಟುವುದು. ತಾವು ಯೋಚಿಸಿದಂತೆಲ್ಲಾ ನಡೆದಾಗ ತಮ್ಮ ಪ್ರತಿಭಟನೆಯನ್ನು ತೀವ್ರಗೊಳಿಸುತ್ತಾರೆ. ತಮ್ಮ ಪ್ರತಿರೋಧದಲ್ಲಿ ಜಯವನ್ನು ಗಳಿಸುತ್ತಾರೆ. ಆದರೆ ಪ್ರತಿಭಟನೆಯ ಹಿಂದೆ ದುಃಖವೂ ಇರುತ್ತದೆ ಎನ್ನುವುದು ಪ್ರಕಾಶನ ಸಾವು ಸಾಬೀತು ಪಡಿಸುತ್ತದೆ. ಆದರೆ ಅಂತಹ ದುಃಖವನ್ನು ಲೆಕ್ಕಿಸದ ಅವನ ಸಂಗಡಿಗರು ತಮ್ಮ ಕೆಲಸವನ್ನು ಮುಂದುವರಿಸುತ್ತಾರೆ. ಸಮಾಜದಲ್ಲಿ ನಡೆಯುವ ಅನ್ಯಾಯವನ್ನು ಪ್ರತಿಭಟಿಸುತ್ತಾ ಆದರ್ಶ, ಶಾಂತಿಯುತ ಸಮಾಜದ ನಿರ್ಮಾಣಕ್ಕೆ ಸಹಕರಿಸುತ್ತಾರೆ.

### ೪.೯. ಯುದ್ಧ:

ಕಾದಂಬರಿಯ ಹೆಸರೇ ಸೂಚಿಸುವಂತೆ 'ಯುದ್ಧ' ಎನ್ನುವುದೇ ಪ್ರತಿರೋಧದ ಅಭಿವ್ಯಕ್ತಿ. ಮನುಷ್ಯ ಮಾನಸಿಕ ಮತ್ತು ದೈಹಿಕ ನೋವಿಗೊಳಗಾಗಿ ಅದನ್ನು

ತಡೆದುಕೊಳ್ಳಲು ಸಾಧ್ಯವಾಗದಾಗ ಅದರ ವಿರುದ್ಧ ಆತನ ಮನಸ್ಸಿನಲ್ಲಿ ಒಂದು ರೀತಿಯ ಪ್ರತಿಭಟನೆ ವ್ಯಕ್ತವಾಗುತ್ತದೆ. ಸೇಡು ತೀರಿಸಿಕೊಳ್ಳಬೇಕೆಂಬ ಮನಸ್ಥಿತಿಗೆ ಒಳಗಾಗುತ್ತಾನೆ. 'ಯುದ್ಧ' ಬದುಕಿನಲ್ಲಿ ಒಳಗಾಗಬಲ್ಲಂತಹ ಅನಿವಾರ್ಯ ಸ್ಥಿತಿಯೊಂದಿಗೆ ಹೋರಾಟ ಮಾಡುವ ಮನಸ್ಸಿನ ಸ್ಥಿತಿಯನ್ನು ತೋರಿಸುತ್ತದೆ. ಆಳುವ ವ್ಯವಸ್ಥೆಯನ್ನು ಎದುರು ಹಾಕಿಕೊಳ್ಳುವ ಪ್ರತಿ ವ್ಯಕ್ತಿಗೂ ಯಾವ ಸೂಕ್ಷ್ಮತೆಯ ಅರಿವು ಇರಬೇಕಾಗುತ್ತದೆ ಎಂಬುದನ್ನು ಈ ಕಾದಂಬರಿಯು ಮುಖ್ಯವಾಗಿ ತಿಳಿಸುತ್ತದೆ. ಅಂತಹ ಸೂಕ್ಷ್ಮತೆಯ ಅರಿವು ಇಲ್ಲದೆ ಹೋದ ಮನುಷ್ಯನಿಗೆ ಒದಗುವ ಸ್ಥಿತಿಯನ್ನು ಕಾದಂಬರಿಯಲ್ಲಿ ಬರುವ ರಾಜಶೇಖರನ ಸ್ಥಿತಿಯ ಮೂಲಕ ವಿವರಿಸುತ್ತದೆ.

ಆಳುವ ಗುಣವು ಕೇವಲ ಸಾಮಾಜಿಕವಾಗಿ ಸಾಂಪ್ರದಾಯಿಕ ವ್ಯವಸ್ಥೆಯಲ್ಲಿ ಮಾತ್ರ ಇಲ್ಲ, ಅದು ಆಧುನಿಕ ಕಾನೂನು ವ್ಯವಸ್ಥೆಯಲ್ಲಿಯೂ ಸೇರಿಕೊಂಡಿದೆ. ಕಾನೂನು ವ್ಯವಸ್ಥೆಗೆ ಸಹಕರಿಸುವ ಪೋಲೀಸು ವ್ಯವಸ್ಥೆಯಲ್ಲಿಯೂ ಶ್ರೀಮಂತರ ಪರವಾದ ನಿಲುವು ಇರುವುದನ್ನು ಕೆ.ಟಿ.ಗಟ್ಟಿಯವರು ಕಾದಂಬರಿಯ ಮೂಲಕ ಗುರುತಿಸುತ್ತಾರೆ ಹಾಗೂ ಅದನ್ನು ವಿರೋಧಿಸುತ್ತಾರೆ. ಕಾನೂನು ವ್ಯವಸ್ಥೆಯಲ್ಲಿರುವ ತಪ್ಪು, ನ್ಯೂನತೆಗಳನ್ನು ಕಾದಂಬರಿ ವಿರೋಧಿಸುತ್ತದೆ.

ಕಾದಂಬರಿಯಲ್ಲಿ ಕಾಣಿಸಿಕೊಳ್ಳುವ ಪ್ರಮುಖ ವ್ಯಕ್ತಿ ರಾಜಶೇಖರ. ಅನಿವಾರ್ಯವಾಗಿ ಆತ ವಕೀಲಿ ವೃತ್ತಿಯನ್ನು ಆಯ್ಕೆಮಾಡಿಕೊಂಡಿದ್ದ. 'ಆದಿತ್ಯ ಪೆಟ್ರೋಕೆಮಿಕಲ್ಸ್'ನ ಮ್ಯಾನೇಜಿಂಗ್ ಡೈರೆಕ್ಟರ್‌ರ ಮಗ ಅಜಿತಪ್ರಸಾದ್‌ಆದಿತ್ಯ ತನ್ನ ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದ ಮಂಜರಿಯನ್ನು ಕೆಡಿಸಿದ ಸಂದರ್ಭದಲ್ಲಿ ಉಂಟಾದ ಕೇಸಿನ ವಿಚಾರಣೆಯನ್ನು ನಡೆಸುವ ಹೊಣೆಗಾರಿಕೆ ರಾಜಶೇಖರನ ಪಾಲಿಗೆ ಬರುತ್ತದೆ. ಆತ ತನ್ನ ಕಕ್ಷಿದಾರನ ಪರವಾಗಿ ವಾದಿಸಿ ಕೇಸು ಗೆಲ್ಲುತ್ತಾನೆ. ತನ್ನ ವೃತ್ತಿಯನ್ನು ನಿಷ್ಠೆಯಿಂದ ಮಾಡುತ್ತಿದ್ದ ಆತನಿಗೆ ತನ್ನ ಕಕ್ಷಿದಾರನ ಪರವಾಗಿ ವಾದಿಸಿ ಗೆಲ್ಲುವುದರಲ್ಲಿ ಯಾವ ಅಪರಾಧಿ ಪ್ರಜ್ಞೆಯೂ ಕಾಡುತ್ತಿರಲಿಲ್ಲ. ನ್ಯಾಯಾಲಯದಲ್ಲಿ ನ್ಯಾಯ ಸಿಗದ ಮಂಜರಿ ಅಸಹಾಯಕಳಾಗಿ ಆತ್ಮಹತ್ಯೆ ಮಾಡಿಕೊಳ್ಳುತ್ತಾಳೆ. ಮಂಜರಿಯ ಆತ್ಮಹತ್ಯೆಯಿಂದ ತನ್ನನ್ನು ತಾನು ಪ್ರಶ್ನಿಸಿಕೊಳ್ಳಲಾರಂಭಿಸಿದ ರಾಜಶೇಖರನಿಗೆ ಮಂಜರಿಗಾದ ಅನ್ಯಾಯದ ಅರಿವು ಉಂಟಾಗುತ್ತದೆ. ತಾನು ಮಂಜರಿಯ ವಿರುದ್ಧ ವಾದಿಸಿದುದರಿಂದ ತಾನೂ ಆಕೆಯ ಆತ್ಮಹತ್ಯೆಗೆ ಕಾರಣ ಎಂಬ ವಿಚಾರ ಆತನನ್ನು ಚಿಂತೆಗೀಡುಮಾಡುತ್ತದೆ. ಕಾನೂನು, ವಾದ ಇವುಗಳ ಮಧ್ಯೆ ಜೀವಿಸುತ್ತಿದ್ದ ರಾಜಶೇಖರನಿಗೆ ಕಾನೂನನ್ನು ಹೊರತುಪಡಿಸಿ ಮಾನವೀಯ ಪ್ರಪಂಚವೊಂದಿದೆ ಎಂಬ

ಅರಿವು ಮೂಡುತ್ತದೆ. ಅರಿವಿನ ಮೂಲಕ ಬದಲಾದ ರಾಜಶೇಖರ ವಕೀಲಿ ವೃತ್ತಿ ಮತ್ತು ಮನೆಯನ್ನು ತ್ಯಜಿಸಿ ಸಮಾಜಮುಖಿಯಾಗಿ ಹೊರಡುತ್ತಾನೆ. ಸಮಾಜದಲ್ಲಿ ಬೆರೆತುಕೊಂಡು ಕಾನೂನು, ಪೋಲೀಸು ವ್ಯವಸ್ಥೆಯ, ಅನ್ಯಾಯದ ವಿರುದ್ಧ ಯುದ್ಧ ಹೂಡುವಂತಹ ಜನಜಾಗೃತಿಯನ್ನು ಕೈಗೊಳ್ಳುತ್ತಾನೆ. ವ್ಯವಸ್ಥೆಯೊಳಗಡೆ ಇದ್ದು ಯುದ್ಧ ಹೂಡುವುದಕ್ಕಿಂತ ಸಮಾಜದಲ್ಲಿ ಅಂತಹ ಜಾಗೃತಿಯನ್ನು ಸೃಷ್ಟಿ ಮಾಡಿ ಸಮೂಹ ಜಾಗೃತಿ ಸೃಷ್ಟಿಸುವುದು ಕೂಡಾ ಹೋರಾಟದ ಒಂದು ರೀತಿಯೇ ಆಗುತ್ತದೆ. ಈ ರೀತಿಯ ಭಾವನೆಯಿಂದ ಸಮಾಜಕ್ಕಿಳಿದ ರಾಜಶೇಖರನ ಬದುಕಿನಲ್ಲಿನ ವೈಯಕ್ತಿಕ ಯುದ್ಧಗಳೇ ಮೇಲುಗೈ ಸಾಧಿಸುತ್ತವೆ.

ಆಕಸ್ಮಿಕ ತಿರುವೊಂದರಲ್ಲಿ ಸಿಲುಕಿಕೊಂಡು ರಾಜಶೇಖರ ವಕೀಲಿ ವೃತ್ತಿಯನ್ನು ಆಯ್ಕೆಮಾಡಿಕೊಳ್ಳುತ್ತಾನೆ. ರಾಜಶೇಖರನಿಗೆ ತನ್ನ ಕ್ಲಾಸ್‌ಮೇಟ್ ಶ್ರೀಮಂತರ ಮನೆಯ ಮಗಳು ಆರತಿಯೊಂದಿಗೆ ಪ್ರೀತಿ ಉಂಟಾಗುತ್ತದೆ. ಆರತಿ ಮೆಡಿಕಲ್ ಕಾಲೇಜು ಸೇರಿದಾಗ ರಾಜಶೇಖರ ಶಿವಪುರದ ಶಾಲೆಯೊಂದರಲ್ಲಿ ಅಧ್ಯಾಪಕನಾಗಿ ಸೇರಿಕೊಂಡ. ಎರಡು ವರ್ಷದ ನಂತರ ಎಂ.ಎ. ಓದಲು ಮೈಸೂರಿಗೆ ಬಂದಾಗ ಇಬ್ಬರು ಒಂದಾಗಿ ಬೆರೆತು ಹೋದರು. ನಂತರ ರಾಜಶೇಖರ ಶಿವಪುರದ ಕಾಲೇಜೊಂದರಲ್ಲಿ ಉಪನ್ಯಾಸಕನಾಗಿ ಸೇರಿಕೊಂಡಾಗ ಇವರಿಬ್ಬರ ನಡುವೆ ಪತ್ರವ್ಯವಹಾರಗಳು ನಡೆಯುತ್ತಿದ್ದವು. ಆದರೆ ಆರತಿ ಡಾಕ್ಟರ್ ಜಯರಾಮನನ್ನು ಮದುವೆಯಾದ ನಂತರ ರಾಜಶೇಖರನಿಗೆ ಸ್ತ್ರೀ ಜಾತಿಯ ಮೇಲೆಯೇ ದ್ವೇಷ ಉಂಟಾಯಿತು. ರಾಜಶೇಖರನ ಪ್ರೊಡ್ಯೂಸರಿಸಂ, ಕನ್ಸ್ಯೂಮರಿಸಂ ಲೇಖನ ಮೆಚ್ಚಿ ನಕ್ಸಲ್ ಗೌರೀಶಂಕರ ನಾಂಪಲ್ಲಿ ಎಂಬವನು ಬರೆದ ಪತ್ರ ಪೋಲೀಸರಿಗೆ ಸಿಕ್ಕಿ ರಾಜಶೇಖರನನ್ನು ನಕ್ಸಲ್ ಎಂದು ತಿಳಿದು ಪೋಲೀಸರು ಬಂಧಿಸಿ ಹಿಂಸಿಸುತ್ತಾರೆ. ಬಿಡುಗಡೆಯಾದ ನಂತರ ರಾಜಶೇಖರ ಬೆಂಗಳೂರಿಗೆ ಬಂದು ಲಾ ಓದಿ ಲಾಯರ್ ಆದ.

ಮನುಷ್ಯ ತನ್ನ ಎದುರಾಳಿಯನ್ನು ಸಾತ್ವಿಕ ವ್ಯಕ್ತಿತ್ವದಿಂದ ಎದುರಿಸಲಾಗದೇ ಇದ್ದಾಗ ಸೇಡು ತೀರಿಸಿಕೊಳ್ಳುತ್ತಾನೆ. ಹುಬ್ಬಳ್ಳಿಯ ಆರತಿಯ ಮನೆಗೆ ಹೋದ ರಾಜಶೇಖರ ಅಲ್ಲಿ ಆಕೆಯ ಗಂಡ ಜಯರಾಮನೊಂದಿಗೆ ಸ್ನೇಹ ಬೆಳೆಸಿ ತಾನು ಆರತಿಯ ಪ್ರೇಮಿ ಎಂಬುದನ್ನು ದಾಖಲೆ ಸಹಿತ ಆತನಿಗೆ ತಿಳಿಸಿದ. ಹೀಗೆ ಆಕೆ ಮಾಡಿದ ದ್ರೋಹಕ್ಕೆ ತನ್ನ ಪ್ರತಿಭಟನೆಯನ್ನು ವ್ಯಕ್ತಪಡಿಸುವುದರ ಮೂಲಕ ಸೇಡು ತೀರಿಸಿಕೊಂಡ.

ತನಗೆ ಹಿಂಸೆ ನೀಡಿದ ಇನ್ಸ್‌ಪೆಕ್ಟರ್ ತೇಜಪ್ಪನ ಮೇಲೆ ಸೇಡು ತೀರಿಸಿಕೊಳ್ಳಬೇಕೆಂಬ ಹಂಬಲದಿಂದ ನಿವೃತ್ತನಾಗಿದ್ದ ಆತನ ಮನೆಗೆ ತೆರಳಿ ತುರಿಕಜ್ಜಿಯ ವಿಚಿತ್ರ ರೋಗದಿಂದ ನರಳುತ್ತಿದ್ದ ಆತನಿಗೆ ತಾನು ಸಾಧುವೊಬ್ಬನಿಂದ ಔಷಧ ಕೊಡಿಸುವುದಾಗಿ ನಂಬಿಸಿ ಗುಡ್ಡಕ್ಕೆ ಕರೆದೊಯ್ದು ಕಟ್ಟಿಹಾಕಿ ಆತನ ಮೈಮೇಲೆ ಸಿಹಿ ದ್ರಾವಣ ಸುರಿದು ಇರುವೆಗಳಿಂದ ಕಚ್ಚಿಸಿದ. ಇದು ಆತ ತನ್ನ ಮೇಲೆ ಇನ್ಸ್‌ಪೆಕ್ಟರ್ ನಡೆಸಿದ ಹಲ್ಲೆಗೆ ತೋರಿದ ಪ್ರತಿರೋಧ.

ಸಮಾಜವನ್ನು ಬದಲಾಯಿಸಬೇಕಾದರೆ ಹಣದ ಅಗತ್ಯವಿದೆ ಎಂಬ ವಿಚಾರವನ್ನು ಅರಿತುಕೊಂಡ ರಾಜಶೇಖರ ತನ್ನ ಬಳಿಗೆ ಬಂದ ವ್ಯಕ್ತಿಗಳಿಗೆ ಅನುಕಂಪದೊಂದಿಗೆ ಹಣವನ್ನು ನೀಡಿ ಸಹಾಯ ಮಾಡುತ್ತಾನೆ. ತನ್ನನ್ನು ಪ್ರೀತಿಯಿಂದ ಕಂಡ ಮೀರಾಳಿಗೆ ಹಣ ಕೊಟ್ಟು ಸಹಾಯ ಮಾಡುತ್ತಾನೆ. ತಾಯಿಯನ್ನು ಹಣ ಕೊಟ್ಟು ಸಂತೋಷಪಡಿಸುತ್ತಾನೆ.

ಸಾಹಿತ್ಯವು ಇಂದು ಜನರ ಬದುಕಿನ ವಿಚಾರಗಳನ್ನು ಗಮನಿಸಿಕೊಂಡು ಅದರ ಬಗ್ಗೆ ಚರ್ಚಿಸುತ್ತದೆ. ಆದರೆ ಅಂತಹ ವಿಚಾರಗಳು ಪ್ರಚಾರಕ್ಕೆ ಬರುತ್ತಿಲ್ಲ. ಈ ಪರಿಸ್ಥಿತಿ ಉಂಟಾಗುವುದಕ್ಕೆ ಕಾರಣವಾಗುವ ದೂರದರ್ಶನ, ಪತ್ರಿಕೆಗಳ ಒಳಗಿರುವ ರಾಜಕಾರಣ, ಹಣ ಮಾಡುವ ಉದ್ದೇಶದಿಂದ ಬಂಡವಾಳಶಾಹಿಗಳಿಗಾಗಿ ಕೆಲಸ ಮಾಡುವ ಪತ್ರಿಕೋದ್ಯಮ ಕ್ಷೇತ್ರದ ಧೋರಣೆಯನ್ನು ಈ ಕಾದಂಬರಿಯ ಮೂಲಕ ಶೋಧಿಸುತ್ತಾರೆ.

### ೪.೧೦: ಪುನರಪಿ ಜನನಂ

1985ರಲ್ಲಿ ಪ್ರಕಟಗೊಂಡ ಕೆ.ಟಿ.ಗಟ್ಟಿಯವರ 'ಪುನರಪಿ ಜನನಂ' ಕಾದಂಬರಿಯು "ಸುಧಾ" ವಾರ ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಗಿತ್ತು.

ಶಂಕರ ಭಟ್ಟ ಹದಿನಾರು ವರ್ಷಗಳ ಹಿಂದೆ ಮುಂಬಯಿಯ ಚೆಂಬೂರಿನ ಉಡುಪಿ ಬ್ರಾಹ್ಮಣರ ಹೋಟೆಲೊಂದರಲ್ಲಿ ಗ್ಲಾಸು ತೊಳೆಯುವ ಕೆಲಸ ಆರಂಭಿಸಿದ್ದ. ನಂತರ ರಾತ್ರಿ ಸಮಯದಲ್ಲಿ ಸಂಜೆ ಶಾಲೆಗಳಲ್ಲಿ ಓದಿ, ಎಸ್.ಎಸ್.ಎಲ್.ಸಿ., ಬಿ.ಎ. ಸಮಾಜಶಾಸ್ತ್ರದಲ್ಲಿ ಎಂ.ಎ. ಮುಗಿಸಿದ್ದ. ಪಿಎಚ್.ಡಿ.ಯೂ ಮುಗಿಸಿ ಯೂನಿವರ್ಸಿಟಿ ಕಾಲೇಜಿನಲ್ಲಿ ಪ್ರೊಫೆಸರ್ ಆಗಿ ನೇಮಕಗೊಂಡಿದ್ದ. ಚೆಂಬೂರಿನ ಪ್ರಕಾಶ ಭವನದ ಅನಂತ ಭಟ್ಟರು ಆತನ ಓದಿಗೆ ಸಹಾಯ ಮಾಡಿದ್ದರು. ಓದಿನಲ್ಲಿ ಅತೀ ಬುದ್ಧಿವಂತನಾದ ಶಂಕರ ಭಟ್ಟನಿಗೆ ನಾರಾಯಣ ಭಟ್ಟರು ತಮ್ಮ ಮಗಳಾದ ಅರ್ಥಶಾಸ್ತ್ರದಲ್ಲಿ ಎಂ.ಎ. ಮುಗಿಸಿದ ಪಾರ್ವತಿಯನ್ನು ಕೊಟ್ಟು ಮದುವೆ

ಮಾಡಿಸುವುದಾಗಿ ಅನಂತ ಭಟ್ಟನ ಮುಖಾಂತರ ಕೇಳಿಕೊಳ್ಳುತ್ತಾರೆ. ತನಗೆ ತಂದೆ ತಾಯಿಗಳಿಲ್ಲ ಎಂದು ಹೇಳಿದ ಶಂಕರ ಭಟ್ಟ ಮದುವೆಗೆ ಒಪ್ಪಿಗೆ ಸೂಚಿಸುತ್ತಾನೆ. ಮದುವೆಯೂ ನಡೆಯುತ್ತದೆ. ಅವರಿಬ್ಬರೂ ಹನಿಮೂನ್‌ಗೆಂದು ಹೋದ ಸಂದರ್ಭದಲ್ಲಿ ಕೋನಾರ್ಕ್‌ನ ದೇವಾಲಯವನ್ನು ವೀಕ್ಷಿಸುತ್ತಾರೆ. ಆ ಸಂದರ್ಭದಲ್ಲಿ ಶಂಕರಭಟ್ಟ ತನ್ನ ಪತ್ನಿಯೊಂದಿಗೆ ಆಡುವ ಮಾತುಗಳು ಗಮನಸೆಳೆಯುತ್ತವೆ. "ನಾವು ಎಲ್ಲೋ ಒಂದು ಕಡೆ ಸಾಂಸ್ಕೃತಿಕವಾಗಿ ದಿಕ್ಸೂಚಿಗೊಳಗಾದೆವು. ಅದರ ಪರಿಣಾಮವಾಗಿ ನಾವು ಸಾವಿರ ಬಗೆಯ ವಿರೋಧಾಭಾಸಗಳನ್ನೂ ಕಾಣುತ್ತೇವೆ. ಕಾಲೇಜಿನ ರಂಗಭೂಮಿಯಲ್ಲಿ ಶ್ರೀ ಕೃಷ್ಣ ಗೋಪಿಯರ ಸೀರೆ ರವಿಕೆ ಕದಿಯುತ್ತಾನೆ, ರಾಧೆಯೊಡನೆ ಪ್ರಣಯ ನೃತ್ಯ ಮಾಡುತ್ತಾನೆ. ಅದೇ ಕಾಲೇಜಿನಲ್ಲಿ ಒಬ್ಬ ಹುಡುಗ ಮತ್ತು ಹುಡುಗಿ ಅನ್ಯೋನ್ಯವಾಗಿರುವುದನ್ನು ಕಂಡರೆ ಭೂಮಿ ನಡುಗುತ್ತದೆ. ಭರತನಾಟ್ಯ, ಕಥಕ್ಕಳಿ, ಕ್ಯಾಬರೆ ಇತ್ಯಾದಿಗಳಲ್ಲಿ ಹೆಣ್ಣಿನ ಎದೆ, ಹೊಕ್ಕುಳು, ನಿತಂಬದ ಪ್ರದರ್ಶನ ಬೇಕಾದಷ್ಟು ಆಗ್ತದೆ. ಆಗ ನಾವೆಲ್ಲ ರಸಋಷಿಗಳಾಗ್ತೇವೆ. ಅಪೂರ್ವ ಕಲಾಪ್ರಜ್ಞೆಯುಳ್ಳ ನಾಗರಿಕರಾಗ್ತೇವೆ. ಆದರೆ ನಮ್ಮ ಹೆಂಗಸರು ಒಂದಿಷ್ಟು ಮೈಕಾಣುವ ಉಡುಪು ತೊಟ್ಟೊಡನೆ ಮಡಿವಂತಿಕೆಯ ಧೋರಣೆ ಬದಲಾಗ್ತದೆ. ಎದೆ ಮುಚ್ಚಿಸ್ತಾರೆ, ತೋಳು ಮುಚ್ಚಿಸ್ತಾರೆ. ತಲೆ ಮುಚ್ಚಿಸ್ತಾರೆ, ಬುರ್ಖದಲ್ಲಿ ಸರ್ವಾಂಗವನ್ನೂ ಮುಚ್ಚಿಸ್ತಾರೆ. ಹೆಣ್ಣು ಒಂದು ವಸ್ತುವಾಗಿ ಬಿಡುತ್ತಾಳೆ. ಧರ್ಮದ ಹೆಸರಿನಲ್ಲೂ ಗಂಡು ಹೆಣ್ಣಿನ ತೀರಾ ವೈಯಕ್ತಿಕವಾದ ಸಂಬಂಧದಲ್ಲಿ ಮೂಗು ತೂರಿಸಿ ತಮ್ಮ ಪರ್ವರ್ಸಿವ್ ಫಿಲಾಸಫಿಯನ್ನು ಬೋಧಿಸುವ, ಆಷಾಢಭೂತಿಗಳು ಪಾಷಂಡಿಗಳು" ಎನ್ನುತ್ತಾನೆ.

**(ಪುನರಪಿ ಜನನಂ, 1985, ಪುಟ 58)**

ಕೋನಾರ್ಕ್ ದೇವಾಲಯದ ಕಾಮಭಂಗಿಯ ಶಿಲ್ಪಕಲೆಯ ಬಗ್ಗೆ ಮಾತನಾಡುತ್ತಾ ಅಲ್ಲಿರುವ ಶಿಲ್ಪಗಳಲ್ಲಿ ಚಿತ್ರಿಸಲ್ಪಟ್ಟಿರುವುದು ಕಾಮ ಅಲ್ಲ, ಭಕ್ತಿ ಎಂಬ ವಾದ ಅಥವಾ ನಂಬಿಕೆಯನ್ನು ವಿರೋಧಿಸುತ್ತಾನೆ. ಅದು ಆತ್ಮ ವಂಚನೆ, ಪಾಪಪ್ರಜ್ಞೆಯಲ್ಲದೆ ಬೇರೇನೂ ಅಲ್ಲ. ಕಾಮವನ್ನು ಯಾಕೆ ನೇರವಾಗಿ ಕಾಮವೆನ್ನಬಾರದು? ಸಂಭೋಗವನ್ನು ಯಾಕೆ ನೇರವಾಗಿ ಸಂಭೋಗ ಎನ್ನಬಾರದು? ಅದರಲ್ಲಿ ಅಸಹ್ಯ ಏನು? ಎನ್ನುತ್ತಾನೆ.

ಪ್ರವಾಸ ಮುಗಿಸಿ ಕಿದಿಯೂರಿನ ಪಾರ್ವತಿಯ ಮನೆಗೆ ಬರುತ್ತಾರೆ. ಅಲ್ಲಿಂದ ಶಂಕರ ಮತ್ತು ಪಾರ್ವತಿ ಉಡುಪಿ ಕೃಷ್ಣ ಮಠಕ್ಕೆ ಹೋಗುತ್ತಾರೆ. ಅಲ್ಲಿನ ಸ್ವಾಮಿ ಸುಕೃತಾನಂದ ತೀರ್ಥ ಶ್ರೀಪಾದರನ್ನು ಭೇಟಿಯಾಗುತ್ತಾರೆ. ಅವರಲ್ಲಿ ಶಂಕರ ಭಟ್ಟ

ಅಧ್ಯಾತ್ಮ, ದೇವರು, ಧರ್ಮಗಳ ಬಗ್ಗೆ ಚರ್ಚಿಸುತ್ತಾನೆ. "ಭ್ರಷ್ಟಾಚಾರದಲ್ಲಿ, ಅನ್ಯಾಯದಲ್ಲಿ, ಅಧರ್ಮದಲ್ಲಿ ಲಂಚ ರಿಷುವತ್ತುಗಳಲ್ಲಿ ನಿರತರಾದ ಲಕ್ಷೋಪಲಕ್ಷ ಮಂದಿ ಕೂಡಾ ನಿಯತ್ತಿನಿಂದ ದೇವಾಲಯಕ್ಕೆ ಮಸೀದಿಗೆ, ಇಗರ್ಜಿಗೆ ಗುರುದ್ವಾರಕ್ಕೆ, ಹೋಗ್ತಾರಲ್ಲ ! ಇವರೆಲ್ಲರ ಕರ್ಮದಲ್ಲಿರೋ ಧರ್ಮವು ಏನು? ಕಾಳಸಂತೆಕೋರನ ದುರ್ಮಾರ್ಗದಿಂದ ಹಣಗಳಿಸುವವನ ಸಂಧ್ಯಾವಂದನೆಯಲ್ಲಿ ಅಡಗಿರುವ ಧರ್ಮವು ಏನು? ಶಸ್ತ್ರಾಸ್ತ್ರಗಳನ್ನು, ವಿಷಾನಿಲಗಳನ್ನು, ವಿಷ ರಾಸಾಯನಿಕಗಳನ್ನು, ಉತ್ಪಾದಿಸುವ ಕಾರ್ಖಾನೆಗಳಲ್ಲಿ ಕೆಲಸ ಮಾಡುವ ಸಾವಿರಗಟ್ಟಲೆ ಸಂಬಳದ ಇಂಜಿನಿಯರುಗಳು ಕೂಡಾ "ಓಂ ಭೂರ್ಭುವಸ್ವ" ಅಂತ ದಿನಾ ಉರು ಹಾಕುತ್ತಾರಲ್ಲ ಅವರಲ್ಲಡಗಿರುವ ಧರ್ಮವು ಏನು?" ಎಂದು ಚರ್ಚಿಸುತ್ತಾನೆ. **(ಅದೇ, ಪುಟ 82).**

ಶ್ರೀಪಾದರ ಖಾಸಗಿ ಕೋಣೆಯ ಬೀರುವಿನಲ್ಲಿ ಕಾಮಶಾಸ್ತ್ರದ, ರೋಚಕವಾದ ಲೈಂಗಿಕ ಕಥೆಗಳ ಪುಸ್ತಕಗಳಿದ್ದವು. ನಗ್ನ ಸುಂದರಿಯರ ಚಿತ್ರಗಳ ಆಲ್ಬಮ್ ಇತ್ತು. ಪಾರ್ವತಿಯನ್ನು ನೋಡಿದ ಸಮಯದಿಂದ ಮಕರಪೀಠಕ್ಕಿಂತ ಪಾರ್ವತಿಯಂತಹ ಹೆಣ್ಣನ್ನು ಅಪ್ಪಿಕೊಳ್ಳುವುದರಲ್ಲಿ ಹೆಚ್ಚು ಸುಖವಿದೆ ಅನ್ನಿಸುತ್ತಿತ್ತು. "ಶಂಕರಾಚಾರ್ಯರು ಒಬ್ಬಳು ಕ್ಷತ್ರಿಯ ಸ್ತ್ರೀಯೊಡನೆ ಒಂದು ವರ್ಷ ಮನುಷ್ಯ ಸಹಜ ಕಾಮ ಜೀವನ ನಡೆಸಿದರು–ವಿಷಯಾಸಕ್ತಿಯಿಂದಲ್ಲ, ಲಂಪಟತನದಿಂದಲ; ಕಾಮವೆಂದರೇನೆಂದು ತಿಳಿದುಕೊಳ್ಳುವುದಕ್ಕಾಗಿಯೇ. ಅದು ಒಂಬತ್ತನೇ ಶತಮಾನ, ಬ್ರಾಹ್ಮಣನ ಭೋಗಕ್ಕೆ ಕ್ಷತ್ರಿಯ ತನ್ನ ಹೆಂಡತಿಯನ್ನು ಕೊಡುತ್ತಿದ್ದ. ಈ ಪದ್ಧತಿ ಶಂಕರರು ಹುಟ್ಟಿದ ನೆಲದಲ್ಲಿ ಮೊನ್ನೆ ಮೊನ್ನೆಯವರೆಗೂ ಇತ್ತು. ಅಂದಿನ ಹೆಣ್ಣು ಇಂದಿನ ಹೆಣ್ಣಿನಂತಲ್ಲ. ಅಂದು ಅವಳು ದನ ಕರುಗಳಂತೆ, ಫಲ ಪುಷ್ಪಗಳಂತೆ, ತಾಂಬೂಲದಂತೆ ಒಂದು ವಸ್ತುವಾಗಿದ್ದಳು. ಅವಳನ್ನು ದಾನ ಮಾಡಲಾಗುತ್ತಿತ್ತು. ಒತ್ತೆಯಿಡಲಾಗುತ್ತಿತ್ತು. ಮಾರಾಟ ಮಾಡಲಾಗುತ್ತಿತ್ತು. ಅವಳಿಗೆ ಯಾವ ಸ್ಥಾನವೂ ಇರಲಿಲ್ಲ. ಗಂಡಿನ ಭೋಗ ವಸ್ತುವಾಗುವ ಒಂದು ಸ್ಥಾನ ಮಾತ್ರ. ಬಹುಶಃ ಈ ಅನುಭವದ ಬಳಿಕ ಶಂಕರಾಚಾರ್ಯರು ಹೆಣ್ಣಿನ ಸೌಂದರ್ಯವನ್ನು ಅರ್ಥ ಮಾಡಿಕೊಂಡಿದ್ದಿರಬೇಕು"

**(ಅದೇ, ಪುಟ 90).**

ಎಂದು ಶಂಕರಾಚಾರ್ಯರು ರಚಿಸಿದ ದೇವಿ ದೇವತೆಗಳನ್ನು ವರ್ಣಿಸಿರುವ ಶ್ಲೋಕದಲ್ಲಿರುವ ಸ್ತ್ರೀ ವರ್ಣನೆಯನ್ನು ತಿಳಿಸುತ್ತಾನೆ. ಶಂಕರಾಚಾರ್ಯ ಸಾಮಾನ್ಯ ಮನುಷ್ಯ ಎಂದು ವಾದಿಸುತ್ತಾನೆ. ಅದಕ್ಕೆ ಶ್ರೀಪಾದನು ನಾವೆಲ್ಲರೂ ಸಾಮಾನ್ಯ ಮನುಷ್ಯರೇ ಎನ್ನುತ್ತಾರೆ. ಅವರ ಮಾತಿಗೆ ಪ್ರತಿಯಾಗಿ ಶಂಕರ ಭಟ್ಟ "ಅಲ್ಲಿ ನೀವು ಬೇರೆ ನಾವು ಬೇರೆ. ಈ ಕಾರಣದಿಂದಲೇ ಹಿಂದೂ ಧರ್ಮ ಜೀರ್ಣ ಹೊಂದಿತು.

ಕ್ರೈಸ್ತ ಗುರು ಜನರ ನಡುವೆ ಹೋಗ್ತಾನೆ, ಅವರ ಕೈ ಕುಲುಕುತ್ತಾನೆ, ಅವರನ್ನು ಅಪ್ಪಿಕೊಳ್ತಾನೆ. ಮುಸಲ್ಮಾನ ಮುಲ್ಲಾ ಜನರ ನಡುವೆ ಹೋಗ್ತಾನೆ, ತಲೆ ಬಾಗ್ತಾನೆ, ಜನರನ್ನು ಅಪ್ಪಿಕೊಳ್ತಾನೆ. ಆದ್ದರಿಂದಲೇ ಅವರ ಧರ್ಮದ ಕೊಳ್ಳ ಸಾಗರವಾಯಿತು. ಆದರೆ ನಮ್ಮ ಮಠದ ಧರ್ಮಚಾರ್ಯರುಗಳು ಏನು ಮಾಡಿಯಾರು? ಜನರಿಂದ ದೂರನಿಂತರು. ಜನರನ್ನು ಆಡ್ಡ ಬೀಳಿಸಿದರು. ಕಾಲು ತೊಳೆಸಿದರು. ಅವರಿಂದ ಪೂಜೆ ಮಾಡಿಸಿಕೊಂಡರು. ಅಷ್ಟು ಸಾಲದೆಂದು ಶಂಕರನನ್ನು, ಮಧ್ವನನ್ನು, ರಾಮಾನುಜನನ್ನು ತಮ್ಮ ಸಾಲಿಗೆ ಸೇರಿಸಿಕೊಂಡರು. ಕೃಷ್ಣನನ್ನು ಒಳಗಿರಿಸಿ ಜನರನ್ನು ಹೊರಗಿರಿಸಿದರು. ಪ್ರಶ್ನೆಗಳು ಬಂದಾಗ ದೃಷ್ಟಾಂತವನ್ನು ಕೊಟ್ಟು ಕತೆ ಹೇಳಿ ಮೂಲವಾದವನ್ನು ಮರೆಸಿದರು. ಜನರು ದೃಷ್ಟಾಂತಗಳಲ್ಲಿ ಮೈಮರೆತು ಕುರಿಗಳಂತೆ ತಲೆಯಾಡಿಸಿದರು"

**(ಅದೇ, ಪುಟ 91)**

ಎಂದು ಹೇಳುತ್ತಾನೆ. ಆತ ತನ್ನ ವಾದವನ್ನು ಮುಂದುವರಿಸುತ್ತಾ "ಎಲ್ಲಾ ಮಂತ್ರಗಳನ್ನೂ ಎಲ್ಲಾ ಶ್ಲೋಕಗಳನ್ನೂ ಮನುಷ್ಯನೇ ಸೃಷ್ಟಿಸಿದ, ಮತ್ತು ಅದರಲ್ಲಿ ಅದ್ಭುತವಾದ ಶಕ್ತಿ ಅಡಗಿದೆ ಎಂದು ಅವನೆ ಹೇಳಿದ, ಪ್ರಚಾರ ಮಾಡಿದ. ಅಂಥ ಮಂತ್ರಗಳನ್ನು ಮತ್ತು ಶ್ಲೋಕಗಳನ್ನು ನಾವು ಈಗಲೂ ಸೃಷ್ಟಿಸಬಹುದು. ಅದರಲ್ಲಿ ಅದ್ಭುತವಾದ ಶಕ್ತಿಯಿದೆ ಎಂದು ಹೇಳಬಹುದು. ನಾವು ಕೂಡಾ ಕತೆಗಳನ್ನು ಸೃಷ್ಟಿಸಿ ಆ ಕತೆಗಳನ್ನು ಕೇಳಿದವರ, ಪೂಜೆಗಳನ್ನು ಮಾಡಿದವರ ಪಾಪ ಪರಿಹಾರವಾಗ್ತದೆ ಎಂದು ಪ್ರಚಾರ ಮಾಡಬಹುದು. ಮನುಷ್ಯನ ದೈಹಿಕ ವಿಕಸನ ಮಾತ್ರವೇ ಪೂರ್ಣಗೊಂಡಿದೆ, ಅವನ ಮಾನಸಿಕ ವಿಕಸನ ಪೂರ್ಣಗೊಂಡಿಲ್ಲ. ಅದಕ್ಕಿನ್ನೊಂದು ಕೋಟಿ ವರ್ಷಗಳು ಬೇಕಾಗಬಹುದೇನೊ".

**(ಅದೇ, ಪುಟ 91)**

ಮಠದಿಂದ ಮರಳಿದ ಪಾರ್ವತಿ ಶಂಕರರು ಮತ್ತೆ ಮಾತಿಗೆ ಆರಂಭಿಸುತ್ತಾರೆ. ದೇವಾಲಯಕ್ಕೆ ಹೋಗುವಾಗ ಗಂಡಸರು ಬಟ್ಟೆ ಕಳಚಿ ಒಳಹೋಗುವ ವಿಷಯದ ಬಗ್ಗೆ ಪಾರ್ವತಿ ಗಂಡನಲ್ಲಿ ಪ್ರಶ್ನಿಸುತ್ತಾಳೆ. ಅದಕ್ಕೆ ಅವಳು "ಹೆಂಗಸ್ರು ಬಟ್ಟೆ ಕಳಚಿಯೇ ಒಳಹೋಗ್ಬೇಕು ಅಂತ ಮಾಡಿದ್ರೆ ಎಷ್ಟೋ ಹೆಂಗಸರು ಬಟ್ಟೆ ಕಳಚಿ ಹೋಗ್ತಿದ್ರು. ಯಾಕಂದ್ರೆ ಎಷ್ಟೋ ಮನೆಗಳಲ್ಲಿ ದೇವರು ಇರೊಲ್ಲ. ದೇವರು ಇರೋದು ದೇವಸ್ಥಾನದಲ್ಲೆ. ಬಟ್ಟೆ ಕಳಚೋ ಉಪಧ್ಯಾಪ ಬೇಡ ಅಂತ ಇದೀಗ ಎಷ್ಟೋ ಜನ ದೇವಸ್ಥಾನಕ್ಕೆ ಹೋಗೋದನ್ನ ಬಿಟ್ಟು ಬಿಟ್ಟಿದ್ದಾರಂತೆ. ಗಂಡಸರಿಗೂ ಇದೆ ನಾಚುಗೆ. ಬಹುಶಃ ಜನಿವಾರ ಯಾರಿಗಿದೆ, ಯಾರಿಗಿಲ್ಲ ಅಂತ ತಿಳಿಯೋದಕ್ಕಾಗಿ ಈ ಕ್ರಮ ಅಂತ

ತೋರುತ್ತೆ. ಹೆಣ್ಣು ಯಾವ ಜಾತಿದಾದ್ರು ಆಗುತ್ತೆ ನಮ್ಮ ದೇವರುಗಳಿಗೆ ಮತ್ತು ದೇವಸ್ಥಾನಗಳ ಗುತ್ತೆಗಾರಿಕೆ ಹಿಡಿದಿರುವವರಿಗೆ." ಎಂದು ಕಠಿಣವಾಗಿಯೇ ನಡಿಯುತ್ತಾನೆ.

**(ಅದೇ, ಪುಟ 104)**

ಜನರನ್ನೆಲ್ಲಾ ಆಸ್ತಿಕರನ್ನಾಗಿ ಮಾಡಬೇಕಾದರೆ ದೇವಾಲಯದೊಳಗೆ ಹೋಗುವಾಗ ಹೆಂಗಸರು ಸೊಂಟದ ಮೇಲಿನ ಬಟ್ಟೆ ಕಳಚಿಯೇ ಹೋಗಬೇಕೆಂಬ ನಿರ್ಬಂಧ ಹೇರಬೇಕು. ಹಾಗೆ ಮಾಡಿದ್ರೆ ದೇವಾಲಯಗಳಲ್ಲಿ ಭಕ್ತರ ಸಂಖ್ಯೆ ವೃದ್ಧಿ ಮಾಡಬಹುದು ಎನ್ನುತ್ತಾನೆ. ಒಂದು ದಿನ ಸಂಜೆ ಕಾಂತಾವರಕ್ಕೆ ಹೋಗುವ ಸಿದ್ಧತೆ ನಡೆಸುತ್ತಾನೆ.

ಶಂಕರ ಭಟ್ಟನ ತಂದೆ ಕಾಂತಾವರದ ಎಲಿಮೆಂಟರಿ ಶಾಲೆಯೊಂದರಲ್ಲಿ ಮುಖ್ಯೋಪಾಧ್ಯಾಯರಾಗಿದ್ದ ರಾಮಭಟ್ಟ ಎಂಬವರು. ಶಂಕರ ಹತ್ತು ವರ್ಷದವನಿದ್ದಾಗ ತಾಯಿಯನ್ನು ಕಳೆದುಕೊಂಡಿದ್ದ. ಈ ಸಂದರ್ಭದಲ್ಲಿ ರಾಮಭಟ್ಟರು ಮನೆ ಕೆಲಸಕ್ಕೆ ಬರುತ್ತಿದ್ದ ಅಮ್ಮು ಪೂಜಾರ್ತಿಯಿಂದ ಅಡಿಗೆ ಕೆಲಸವನ್ನು ಮಾಡಿಸುತ್ತಿದ್ದರು. ಇದನ್ನು ತಿಳಿದ ಊರಿನ ಕೆಲವು ಬ್ರಾಹ್ಮಣರು ಅವಳು ಕೀಳು ಜಾತಿಯವಳು. ಅವಳು ಬೇಯಿಸಿದ್ದನ್ನು ತಿನ್ನಬಾರದು ಎಂದು ತಿಳಿಸಿದ್ದರು. ಆದರೆ ರಾಮಭಟ್ಟರು ಅವರ ಉಪದೇಶಕ್ಕೆ ಕಿವಿಗೊಡಲಿಲ್ಲ. ಹಾಗಾಗಿ ಬ್ರಾಹ್ಮಣರು ಅವರನ್ನು ದೂರವೇ ಇರಿಸಿದ್ದರು. "ಬ್ರಾಹ್ಮಣರ ಹೋಟೇಲೆಂದರೆ ಸರಿ, ಯಾರು ಮಾಡಿದ ಅಡುಗೆಯಾದರೂ ಆಗುತ್ತೆ. ಯಾರು ಉಂಡು ತಿಂದ ತಟ್ಟೆಗಳಾದರೂ ಆಗುತ್ತವೆ. ಮನೆಯಲ್ಲಿ ಶೂದ್ರಳೊಬ್ಬಳು ನಿರ್ಮಲವಾಗಿ ಅಡುಗೆ ಮಾಡಿಕೊಟ್ಟರೆ ಆಗುವುದಿಲ್ಲ." ಎಂದು ರಾಮಭಟ್ಟರು

**(ಅದೇ, ಪುಟ 117)**

ಯೋಚಿಸುತ್ತಾರೆ. ಇತರರು ಪೂಜೆ ಪುನಸ್ಕಾರಗಳಿಗಾಗಿ ನೂರಾರು, ಸಾವಿರಾರು ರೂಪಾಯಿ ಖರ್ಚು ಮಾಡಿ ಸಂತೋಷಪಟ್ಟರೆ ಅದಕ್ಕಿಂತ ಮಿಗಿಲಾದ ಸಂತೋಷವನ್ನು ಅವರು ಬಡ ಮಕ್ಕಳಿಗೆ ಪುಸ್ತಕ ಪೆನ್ಸಿಲು ತೆಗಿಸಿ ಕೊಡುವುದರ ಮೂಲಕ ಪಡೆದರು. ಕೆಲಸದಾಕೆ ಅಮ್ಮು ರಾಮಭಟ್ಟರಿಂದ ಗರ್ಭಿಣಿಯೂ ಆಗಿದ್ದಳು. ರಾಮಭಟ್ಟರು ಆಕೆಗೆ ಆಶ್ರಯ ನೀಡಿದರು. ಆಕೆ ಹೆಂಡತಿಯಂತೆಯೇ ಸೇವೆ ಮಾಡುತ್ತಾ ಇದ್ದು ಬಿಟ್ಟಳು. ಕ್ರಮೇಣ ಊರವರೂ ಇದನ್ನು ಒಪ್ಪಿಕೊಂಡಂತೆ ಇದ್ದು ಬಿಟ್ಟರು. ಈ ಎಲ್ಲಾ ಪ್ರಭಾವ ಮಗ ಶಂಕರನ ಮೇಲೆ ಆಗುತ್ತಿತ್ತು.

ಕಾಂತಾವರದ ದೀನಸಿ ಅಂಗಡಿ ನಡೆಸುತ್ತಿದ್ದ ಅಬ್ಬೊಕರೆಯೂ ಅಪ್ಪಣ್ಣನೂ ಆತ್ಮೀಯರು. ಅಪ್ಪಣ್ಣ ಸತ್ತ ಮೇಲೆ ಆತನ ಪತ್ನಿ ಅಚ್ಚಮ್ಮ ಹಾಗೂ ಅಪ್ಪಣ್ಣನ ಮನೆಯವರು ತಮ್ಮ ಹಿಂದಿನ ಆತ್ಮೀಯತೆಯನ್ನು ಉಳಿಸಿಕೊಂಡಿದ್ದರು. ಆದರೆ

ಅಬ್ಬೊಕರೆಗೂ ಅಚ್ಚಮ್ಮಳಿಗೂ ದೈಹಿಕ ಸಂಬಂಧವಿದೆಯೆಂದು ಸುದ್ದಿ ಹಬ್ಬಿತ್ತು. ಅದ್ಯಾವುದಕ್ಕೂ ಕಿವಿಕೊಡದ ಅಬ್ಬೊಕರೆ ಅಚ್ಚಮ್ಮಳ ಮಗಳ ಮದುವೆಗೆ ಹಣದ ಸಹಾಯವನ್ನೂ ಮಾಡಿದ್ದ.

ಬಾಲ್ಯದಲ್ಲಿ ಶಾಲೆಗೆ ಹೋಗುವಾಗ ಅಬ್ಬೊಕರೆಯ ಮಗ ಕಾಸಿಮ್ ಮತ್ತು ಶಂಕರ ಭಟ್ಟ ಪರಸ್ಪರ ಅನೇಕ ವಿಚಾರಗಳನ್ನು ಚರ್ಚಿಸುತ್ತಿದ್ದರು. ಪರಸ್ಪರರ ಧಾರ್ಮಿಕ ಆಚಾರ ವಿಚಾರಗಳ ಬಗೆಗೂ ಅವರು ಚರ್ಚಿಸುತ್ತಿದ್ದರು. ಅಲೆಸುಬ್ಬ ಎಂಬವನು ಅಬ್ಬೊಕರೆಯ ಬಗ್ಗೆ ಕೆಟ್ಟ ಸುದ್ದಿ ಹಬ್ಬಿಸುತ್ತಿದ್ದ. ಒಮ್ಮೆ ಆತನಿಗೂ ಅಬ್ಬೊಕರೆಯ ಅಂಗಡಿಯ ಇಬ್ರಾಹಿಮನಿಗೂ ಮಾತುಕತೆ ಜೋರಾಗಿಯೇ ನಡೆದು ಸುಬ್ಬ ಇಬ್ರಾಹಿಮನ ಎದೆಗೆ ಚಾಕುವಿನಿಂದ ತಿವಿದ. ಆಗ ಅಲ್ಲಿಗೆ ಬಂದ ಅಬ್ಬೊಕರೆ ಕತ್ತಿಯಿಂದ ಸುಬ್ಬನ ಕೈಗೆ ಕಡಿದ. ಆದರೆ ಅದು ಸುಬ್ಬನ ಕುತ್ತಿಗೆಯನ್ನು ಕತ್ತರಿಸಿತ್ತು. ಇಬ್ರಾಹಿಮ್ ಹಾಗೂ ಸುಬ್ಬ ಕೊನೆಯುಸಿರೆಳೆದಿದ್ದರು. ಪೋಲೀಸರು ಅಬ್ಬೊಕರೆಯನ್ನು ಬಂಧಿಸಿದರು. ಆತನಿಗೆ ಜೀವಾವಧಿ ಶಿಕ್ಷೆಯಾಯಿತು. ಆತನ ಪತ್ನಿಯೂ ಕೊನೆಯುಸಿರೆಳೆದಳು. ಕಾಸಿಮ್ ಮತ್ತು ಶಂಕರ ಯಾರಿಗೂ ತಿಳಿಸದೇ ಮುಂಬೈ ಸೇರಿಕೊಳ್ಳುತ್ತಾರೆ. ಮುಂಬೈ ಸೇರಿದ ಶಂಕರಭಟ್ಟನಿಗೆ ಅತಿಯಾದ ಜ್ವರ ಕಾಣಿಸಿಕೊಂಡು ಆತ ರೈಲ್ವೆ ಸ್ಟೇಷನ್ನಿನಲ್ಲಿಯೇ ಸಾವನ್ನಪ್ಪಿದ. ಕಾಸಿಮ್ ತಾನು ಶಂಕರ ಭಟ್ಟ ಎಂದು ಹೆಸರು ಹೇಳಿ ಹೋಟೆಲ್ ಕೆಲಸಕ್ಕೆ ಸೇರಿಕೊಂಡ. ನೂಲು ತಂದು ಜನಿವಾರ ಮಾಡಿ ಅದನ್ನು ತಾನೇ ಹಾಕಿಕೊಂಡ. ಪುಸ್ತಕ ನೋಡಿ ಸಂಧ್ಯಾವಂದನೆ ಮಂತ್ರಗಳನ್ನು ಕಲಿತುಕೊಂಡ. ಭಗವದ್ಗೀತೆಯನ್ನು ಬಾಯಿಪಾಠ ಮಾಡಿಕೊಂಡ. ಅದರೊಂದಿಗೆ ವಿದ್ಯಾಭ್ಯಾಸ ಮುಂದುವರಿಸಿದ. ಬಿ.ಎ, ಎಂ.ಎ., ಪಿಎಚ್.ಡಿ. ಮಾಡುತ್ತಾನೆ. ಮುಂಬಯಿ ವಿ.ವಿ. ಕಾಲೇಜಿನಲ್ಲಿ ಅಸಿಸ್ಟೆಂಟ್ ಪ್ರೊಫೆಸರ್ ಆಗಿ ಕೆಲಸಕ್ಕೆ ಸೇರಿಕೊಳ್ಳುತ್ತಾನೆ. ಊರಿಗೆ ಬಂದ ಆತ ಶಂಕರನ ತಂದೆ ರಾಮ ಮಾಸ್ತರರೊಂದಿಗೆ ನಡೆದ ಎಲ್ಲಾ ಘಟನೆಗಳನ್ನು ವಿವರಿಸುತ್ತಾನೆ. ತನ್ನನ್ನು ನೀವು ಹೇಗೆ ಕರೆಯುತ್ತೀರಿ ಎಂದು ಕೇಳಿದಾಗ ರಾಮ ಮಾಸ್ತರರು ಶಂಕರ ಎಂದೇ ಕರೆಯುವುದಾಗಿ ತಿಳಿಸುತ್ತಾರೆ. ಆತನನ್ನು ಮಗನೆಂದು ಒಪ್ಪಿಕೊಳ್ಳುವುದಾಗಿಯೂ ತಿಳಿಸುತ್ತಾರೆ. ತಂದೆ ಅಬ್ಬೊಕರೆ ಮಗನಿಗಾಗಿ ಹಂಬಲಿಸುತ್ತಿರುವ ವಿಷಯ ತಿಳಿಯುತ್ತದೆ. ಆತನನ್ನು ಹುಡುಕಿ ತಾನು ನಿನ್ನ ಮಗ ಎಂದು ಪರಿಚಯಿಸಿಕೊಳ್ಳುತ್ತಾನೆ. ಮನೆಗೆ ಬಂದ ಶಂಕರ ತನ್ನ ಬದುಕಿನ ಕಥೆಯನ್ನು ಪತ್ನಿಗೆ ಹೇಳಲು ಇಚ್ಛಿಸುತ್ತಾನೆ.

ಒಂದು ದಿನ ರಾತ್ರಿ ಆತ ಪಾರ್ವತಿಯೊಂದಿಗೆ "ನಾನು ಶಂಕರ ಹೌದು. ಆದರೆ ನನ್ನ ತಂದೆ ರಾಮಭಟ್ಟರಲ್ಲ ಅಬ್ಬೊಕರೆ. ನಾನು ಫಾತಿಮಳ ಹೊಟ್ಟೆಯಲ್ಲಿ ಅಬ್ಬೊಕರೆಯಿಂದಲೇ ಹುಟ್ಟಿದವನು. ಸತ್ತವನು ಶಂಕರ, ಕಾಸಿಮನಲ್ಲ. ನಾನು ಕಾಸಿಂ. ಶಂಕರಭಟ್ಟ ಎಂದು ಹೇಳಿಕೊಂಡಿರುವ ಕಾಸಿಂ. ನೀನು ನನ್ನವಳಾಗಬೇಕೆಂಬ ಒಂದೇ ಆಸೆಯಿಂದ ನಾನು ಈ ವಿಷಯವನ್ನು ರಹಸ್ಯವಾಗಿರಿಸಿದೆ. ಅಷ್ಟು ಮಾತ್ರವಲ್ಲ. ನಾನು ಯಾರು, ನನ್ನನ್ನು ಯಾರು ಹೆತ್ತರು, ನನ್ನ ಜನನಕ್ಕೆ ಯಾರು ಕಾರಣರು ಎಂಬುದು ನನಗೆ ಏನೇನು ಮುಖ್ಯವಲ್ಲ. ನಾನು ಇಂಥ ಧರ್ಮದವನು, ಇಂಥ ಮತದವನು ಎಂದು ನನಗೆ ಅನಿಸುವುದಿಲ್ಲ. ನಾನು ನಾನೇ. ನನಗೆ ಯಾವ ಹೆಸರಿರಿಸಿದರೂ ಆ ಹೆಸರು ನನ್ನ ಮೇಲೆ ಏನೂ ಪರಿಣಾಮ ಬೀರುವುದಿಲ್ಲ. ವೈಯಕ್ತಿಕವಾಗಿ ಕೆಲವು ಕಾರಣಗಳಿಂದ ಶಂಕರ ಎಂಬ ಹೆಸರು ನನಗೆ ಹೆಚ್ಚು ಪ್ರಿಯವಾಗಿದೆ. ನಾನು ಕಾಸಿಂ ಅಲ್ಲ ಶಂಕರ ಎಂದು ತಿಳಿದುಕೊಳ್ಳುವುದರಲ್ಲಿ ನನಗೆ ತುಂಬಾ ಸುಖವಿದೆ. ತುಂಬಾ ಆನಂದವಿದೆ". ಎನ್ನುತ್ತಾನೆ. ಆತನ ಮಾತು ಕೇಳಿದ ಪಾರ್ವತಿ ನಾನು ನಿಮ್ಮನ್ನು

**(ಅದೇ, ಪುಟ 200)**

ಸ್ವೀಕರಿಸಿದ್ದೇನೆ. ನೀವು ನನ್ನನ್ನು ಸ್ವೀಕರಿಸಿದ್ದೀರಿ, ಆಯಿತು ಎಂದು ನಗುತ್ತಾಳೆ. ಅವಳು ಶಂಕರನೊಂದಿಗೆ ಯಾವುದೇ ಸಮಸ್ಯೆ ಬಂದರೂ ಎದುರಿಸಲು ಸಿದ್ಧಳಾಗಿದ್ದಳು.

"ಎಲ್ಲಾ ಧಾರ್ಮಿಕ ವಿಧಿಗಳು ನಡೆಯುವುದು ಜೀವನಕ್ಕೋಸ್ಕರ. ಜೀವನ ಅನ್ನೋದು ಬರೀ ಹೊಟ್ಟೆ ತುಂಬಿಸೋ ವಿಚಾರ ಅಂತ ಅರ್ಥವಲ್ಲ. ಅದರಲ್ಲಿ ಪ್ರತಿಷ್ಠೆ ಗೌರವ, ಭಯದಿಂದ ರಕ್ಷಣೆ, ಹೋರಾಟದಲ್ಲಿ ಮೇಲುಗೈ ಮತ್ತೆ ಮನುಷ್ಯನ ಜೀವನದಲ್ಲಿ ಇನ್ನೇನೆಲ್ಲ ಇದೆಯೋ ಅದೆಲ್ಲಾ ಇದೆ ಅಂತ ಅರ್ಥ. ಅದೇನೂ ಇಲ್ಲದೆ ಯಾವ ಹಿಂದೂವೂ ಮತಾಂತರ ಹೊಂದಲಿಲ್ಲ. ಯಾವ ಮುಸಲ್ಮಾನ ಅಥವಾ ಕ್ರಿಶ್ಚಿಯನ್ ಶುದ್ಧೀಕರಣ ಬಯಸಿ ಬರಲಿಲ್ಲ" ಎಂದು ತನ್ನ ತಂದೆಯನ್ನು ನೋಡಿಕೊಳ್ಳುತ್ತಿದ್ದ

**(ಅದೇ, ಪುಟ 212)**

ರೆಹಮಾನ್ ಸಾಹೇಬರೊಂದಿಗೆ ಹೇಳುತ್ತಾನೆ. ಅಬ್ಬೊಕರೆಯ ಕೊನೆಯ ಘಳಿಗೆ ಸಮೀಪಿಸುತ್ತಿರುವುದನ್ನು ತಿಳಿದು ಶಂಕರ ಆತನ ಬಳಿಯಲ್ಲಿಯೇ ಇರತೊಡಗಿದ. ಅಬ್ಬೊಕರೆಯ ಸಾವು ಸಮೀಪಿಸುತ್ತಿರುವುದನ್ನು ಗಮನಿಸಿದ ರೆಹಮಾನ್ ಸಾಹೇಬರಿಗೆ ಇವನನ್ನು ಇಟ್ಟುಕೊಂಡು ಅಬ್ಬೊಕರೆಯ ಸಂಸ್ಕಾರದ ವಿಧಿಯನ್ನು ಹೇಗೆ ನೆರವೇರಿಸುವುದು ಎಂಬ ಚಿಂತೆ ಕಾಡತೊಡಗಿತು. ಅಬ್ಬಾಸ್ ಸಾಹೇಬರಿಗೆ ಈ ವಿಷಯ ತಿಳಿಸುತ್ತಾರೆ. ಅವರಿಗೆ ಶಂಕರ ಕಾಸೀಮನೇ ಅಲ್ಲ ಎಂಬ ಸಂದೇಹ ಬರುತ್ತದೆ. ಅಬ್ಬೊಕರೆ ಸತ್ತನಂತರ ಅಬ್ಬಾಸ್ ಸಾಹೇಬರು ಆತನ ಧರ್ಮದ ಬಗ್ಗೆ ವಿಚಾರಿಸುತ್ತಾರೆ.

ಆತ "ಅಪ್ಪ ಮುಸಲ್ಮಾನನಾದರೆ ಮಗನೂ ಮುಸಲ್ಮಾನನಾಗಿರಬೇಕೆಂದೇನೂ ಇಲ್ಲ. ಅಪ್ಪ ಹಿಂದುವಾದರೆ ಮಗನೂ ಹಿಂದುವಾಗಿರಬೇಕೆಂದೇನೂ ಇಲ್ಲ. ಧರ್ಮ ಹುಟ್ಟಿನಿಂದ ಬರುವುದಲ್ಲ ನಂಬಿಕೆಯಿಂದ ಬರುವುದು ಎನ್ನುತ್ತಾನೆ. ಅವರು ಆತ ಮುಸಲ್ಮಾನನೆಂದು ಒಪ್ಪಿಕೊಳ್ಳದ ಹೊರತು ಸಂಸ್ಕಾರ ನಡೆಸಲಾಗುವುದಿಲ್ಲ ಎನ್ನುತ್ತಾರೆ. ಅದಕ್ಕೆ ಶಂಕರ "ಮನುಷ್ಯ ಹೆಣವಾದಾಗ ಅದ್ಹೇಗೆ ಅವನ ಧರ್ಮ ಅಷ್ಟು ಮುಖ್ಯವಾಗ್ತದೆ? ಶವಸಂಸ್ಕಾರದ ಸಮಸ್ಯೆಯೂ ಒಂದು ಸಮಸ್ಯೆಯೇ? ನಿಜವಾದ ಸಮಸ್ಯೆ ಇರುವುದು ಜೀವಿಸುತ್ತಿರುವ ಮನುಷ್ಯನಿಗೆ. ಹೆಣವನ್ನು ನೀವೇನು ಮಾಡಿದರೂ ಅದು ಆಕ್ಷೇಪಿಸುವುದಿಲ್ಲ. ನೀವು ಹೂಳಬಹುದು ಸುಡಬಹುದು ಬೇಕಾದ್ದನ್ನು ಮಾಡಬಹುದು" ಎಂದು ಹೇಳಿ ಹೊರನಡೆಯುತ್ತಾನೆ.

ಈ ವಿಚಾರದ ಬಗ್ಗೆ ರಾಮ ಮಾಸ್ತರರಿಗೆ ತಿಳಿಸಿದ. "ನಮ್ಮ ಧರ್ಮಗಳ ವೈಚಿತ್ರ ನೋಡಿ ಒಂದು ಅನಾಥ ಶವವನ್ನಾದರೆ ಅದರ ಧರ್ಮ ಜಾತಿ, ಮತ ಇತ್ಯಾದಿ ಯಾವುದನ್ನೂ ಪ್ರಶ್ನಿಸದೆ ದಹನ ಮಾಡಲು ಜನ ಮನಸ್ಸು ಮಾಡೋದಿದೆ. ಆದರೆ ಆ ಶವ ಯಾವ ಧರ್ಮೀಯನದಾಗಿತ್ತು ಎಂದು ತಿಳಿದರೆ ಅವನ ಮಗ ಆ ಧರ್ಮದವನಲ್ಲವಾಗಿದ್ದರೆ ಅವನು ಶವ ಸಂಸ್ಕಾರದಲ್ಲಿ ಭಾಗವಹಿಸಬಾರದು. ನಮ್ಮ ಜನ ಶವದ ಬಗ್ಗೆ ಯಾಕೆ ಇಷ್ಟೊಂದು ತಲೆ ಚಚ್ಚಿಕೊಳ್ಳುತ್ತಾರೆ? ಆಗ ಧಾರ್ಮಿಕ ಕಟ್ಟು ಕಟ್ಟಲೆ ಯಾಕೆ ಅಷ್ಟೊಂದು ಮುಖ್ಯವಾಗ್ತದೆ?" ಎಂದು ಚಿಂತಿಸುತ್ತಾನೆ. ರಾಮ ಮಾಸ್ತರರನ್ನು ತನ್ನ ತಂದೆಯಾಗಿ ಮುಂಬಯಿಗೆ ಕರೆದುಕೊಂಡು ಹೋಗುವ ನಿರ್ಧಾರವನ್ನು ಮಾಡುತ್ತಾಳೆ ಪಾರ್ವತಿ. ಅವಳು ಇದನ್ನು ಸಂತೋಷದಿಂದಲೇ ಸ್ವೀಕರಿಸುತ್ತಾಳೆ. ಅವರಿಬ್ಬರೂ ಯಾವ ಪರಿಸ್ಥಿತಿ ಬಂದರೂ ಪರಸ್ಪರ ಧೈರ್ಯದಿಂದ ಎದುರಿಸುವ ನಿರ್ಧಾರ ಮಾಡುತ್ತಾರೆ. ರಾಮ ಮಾಸ್ತರರೊಂದಿಗೆ ಮುಂಬಯಿ ತಲುಪುತ್ತಾರೆ. ಹೀಗೆ ಕಾದಂಬರಿ ಕೊನೆಗೊಳ್ಳುತ್ತದೆ.

ಕಾದಂಬರಿಯುದ್ದಕ್ಕೂ ಬಂಡಾಯದ ಕೆಚ್ಚು ಇದೆ. ಇಲ್ಲಿ ಬರುವ ಮುಖ್ಯ ಪಾತ್ರ ಶಂಕರನದು. ಆತ ಸಮಾಜಶಾಸ್ತ್ರದಲ್ಲಿ ಡಾಕ್ಟರೇಟ್ ಮಾಡಿದ್ದಾನೆ. ಆತನಲ್ಲಿ ವೈಚಾರಿಕ ಪ್ರಖರತೆಯಿದೆ. ಬುದ್ಧಿಜೀವಿತನ ಮತ್ತು ವೈಚಾರಿಕ ತರ್ಕ ಮಂಡನೆಯು ಆತನ ಪಾತ್ರಗುಣವಾಗಿದೆ. ಇಲ್ಲಿ ಬರುವ ನಾಯಕ ಶಂಕರ ಹಾಗೂ ನಾಯಕಿ ಪಾರ್ವತಿ ಬುದ್ಧಿಜೀವಿಗಳು. ಶಂಕರ ವಿದ್ಯಾಭ್ಯಾಸ ಪಡೆದು ಒಳ್ಳೆಯ ಕೆಲಸದಲ್ಲಿದ್ದಾನೆ. ಇವರಿಬ್ಬರೂ ಬುದ್ಧಿವಂತರು. ಇಬ್ಬರಿಗೂ ಜಾತಿ, ಧರ್ಮ ಪದ್ಧತಿಯಲ್ಲಿ ನಂಬಿಕೆಯಿಲ್ಲ. ಹಾಗಾಗಿ ಮುಸಲ್ಮಾನನಾದ ಕಾಸಿಮ್ ಶಂಕರ ಎಂದು ಹೆಸರಿಟ್ಟುಕೊಂಡು ಜನಿವಾರ ಧರಿಸುತ್ತಾನೆ. ಜನಿವಾರ ಧರಿಸಿ ಶಂಕರನಾದ ಕಾಸಿಮ್ ಅದನ್ನು ಕಡಿದು ಹಾಕುವುದರ ಮೂಲಕ ಮತ್ತೆ

ಅದನ್ನು ವಿರೋಧಿಸುತ್ತಾನೆ. ಆತನದು ಶಿಕ್ಷಣದ ಮೂಲಕ ಪರಂಪರಾಗತ ಜಿಗುಟಿನಿಂದ ತನ್ನನ್ನು ತಾನು ಬಿಡಿಸಿಕೊಂಡ ವ್ಯಕ್ತಿತ್ವ. ಬ್ರಾಹ್ಮಣ ಹಾಗೂ ಮುಸ್ಲಿಂ ಎಂಬ ಒಂದೇ ವ್ಯಕ್ತಿತ್ವ ಧರ್ಮ ಸಂಬಂಧಿಯಾದ ಮಾನವ ಚಿಂತನೆಯನ್ನು ಕಾದಂಬರಿಕಾರರು ಈ ಪಾತ್ರದ ಮೂಲಕ ತೋರಿಸಿದ್ದಾರೆ. ಶಂಕರ ಪಾರ್ವತಿಯರು ತಮ್ಮ ಹನಿಮೂನಿನ ಸಂದರ್ಭದಲ್ಲಿ ನಡೆಸಿದ ಚರ್ಚೆ ಅದು ಕೇವಲ ಪ್ರೇಮ ಸಂಭಾಷಣೆ ಮಾತ್ರ ಆಗಿರಲಿಲ್ಲ. ಆ ಚರ್ಚೆ ಮನುಷ್ಯ ತನ್ನಲ್ಲಿ ಕಟ್ಟಿಕೊಂಡಿರುವ ಜಾತಿ ಧರ್ಮಗಳ ಇಕ್ಕಟ್ಟನ್ನು ವಿವರಿಸುತ್ತದೆ, ವಿರೋಧಿಸುತ್ತದೆ.

ಕಿದಿಯೂರಿಗೆ ಹೋಗಿ ಸ್ವಾಮೀಜಿಯೊಬ್ಬರನ್ನು ಭೇಟಿಯಾದ ಸಂದರ್ಭದಲ್ಲಿ ಅವರೊಂದಿಗೆ ಮತ್ತೊಮ್ಮೆ ವೈಚಾರಿಕ ಸಂಘರ್ಷ ಏರ್ಪಡುತ್ತದೆ. ಇಲ್ಲಿ ಸಂಸಾರ, ಹೆಣ್ಣನ್ನು ವಿರೋಧಿಸುವ ಸ್ವಾಮಿಗಳನ್ನು ಶಂಕರ ತನ್ನ ವೈಚಾರಿಕ ಮಂಥನದ ಮೂಲಕ ಅವುಗಳಿಗೆ ಸ್ವಾಮೀಜಿಯೂ ಶರಣಾಗುವಂತೆ ಮಾಡುತ್ತಾನೆ. ಆತನ ಮಾತುಗಳಲ್ಲಿ ಮಠಗಳ ವಿರುದ್ಧ ಬಂಡಾಯದ ಧ್ವನಿಗಳಿದ್ದರೂ ಅದರಲ್ಲಿ ಸ್ವಾಮೀಜಿಯ ಸೋಲು, ಆತನ ಮನೋಸಂಕಟ ಮುಖ್ಯವಾಗಿ ಗಮನ ಸೆಳೆಯುತ್ತದೆ. ತಾನು ಏನು ಎಂಬ ಸತ್ಯವನ್ನು ತಾನು ಒಪ್ಪಿಕೊಂಡಿದ್ದ ಇಬ್ಬರು ತಂದೆಯಂದಿರ ಮುಂದಿಟ್ಟು ತನ್ನ ವ್ಯಕ್ತಿತ್ವದ ಅಸ್ತಿತ್ವ ಸಂಬಂಧೀ ಗೊಂದಲಗಳನ್ನು ರಾಮಪ್ಪ ಮಾಸ್ತರರೊಂದಿಗೆ ಸಮಾಲೋಚಿಸಿ ಪರಿಹರಿಸಿಕೊಂಡು ತನ್ನ ಪತ್ನಿ ಪಾರ್ವತಿ ಗರ್ಭಿಣಿಯಾದ ಬಳಿಕವಷ್ಟೇ ಆಕೆಯೊಂದಿಗೆ ತನ್ನ ಹುಟ್ಟಿನ ಮೂಲವನ್ನು ಬಹಿರಂಗ ಪಡಿಸುತ್ತಾನೆ. ತಾನು ಮುಸ್ಲಿಂ ಆಗಿ ಉಳಿಯದೆ, ಹಿಂದೂ ಧರ್ಮದ ಒಳಗೆ ಇರಬಯಸದೆ ಮುಕ್ತವಾಗಿ ತಾನು ಮಾನವನಾಗುತ್ತೇನೆ ಎಂದು ಮತ್ತೆ ಮತ್ತೆ ಹೇಳುತ್ತಾನೆ. ತನ್ನ ತಂದೆ ಅಬ್ಬೋಕರೆ ಸತ್ತಾಗ ಧಾರ್ಮಿಕ ನಾಯಕರಿಗೆ ತಂದೆಯ ಹೆಣವನ್ನು ಒಪ್ಪಿಸುತ್ತಾನೆ. ಕಾದಂಬರಿಯ ಅಂತ್ಯದಲ್ಲಿ ನೆಮ್ಮದಿಯ ವಾತಾವರಣ ಸೃಷ್ಟಿಯಾಗಿದೆ.

ಕಾದಂಬರಿಯ ಬಗ್ಗೆ ಅದರ ಬೆನ್ನುಡಿಯಲ್ಲಿ ಈ ರೀತಿ ಹೇಳುತ್ತಾರೆ. "ಹುಟ್ಟಿನಲ್ಲಿ ಯಾರೂ ಏನೂ ಆಗಿರುವುದಿಲ್ಲ. ಹುಟ್ಟಿನಲ್ಲಿ ಅವನದೆಂದು ಗುರುತಿಸಲ್ಪಡುವ ಜಾತಿಗೆ, ಮತಕ್ಕೆ ಏನೂ ಅರ್ಥವಿರುವುದಿಲ್ಲ. ಒಳ್ಳೆಯವನಾಗಿ ಜೀವಿಸಬಲ್ಲವನಿಗೆ ಯಾವ ವಿಶೇಷಣಗಳೂ ಬೇಕಾಗುವುದಿಲ್ಲ. ಜಾತಿ ಮತಗಳಿಗೆ ಸಂಬಂಧಪಟ್ಟ ಅಂಕಿತಗಳು ಅಗತ್ಯವಿರುವುದಿಲ್ಲ. ಅಷ್ಟೇ ಏಕೆ, ವ್ಯಕ್ತಿ ಯಾರ ಖಾಸಗಿ ಸೊತ್ತೂ ಅಲ್ಲ; ಅವನೊಂದು ಸ್ವತಂತ್ರ ಘಟಕ. ತೀರ ಹೊಸಬಗೆಯ, ಬೆಚ್ಚಿ ಬೀಳಿಸುವ ಕಥಾವಸ್ತು ಜಾತಿ, ಮತ ಸಂಬಂಧ ಇತ್ಯಾದಿಗಳ ಕುರಿತು ಚಿಂತಿಸುವಂತೆ ಮಾಡುವ ವಿಚಾರಗಳು.

ಮಾನವೀಯತೆಯನ್ನು ಗುರುತಿಸುವ ಸಾಧನ ಮಾನವೀಯತೆ ಮಾತ್ರ ಎಂಬ ತರ್ಕದಲ್ಲಿ ಜೀವತಳೆದ ಪತ್ರಗಳು". ಈ ಮೇಲಿನ ಮಾತಿನಂತೆ ಕಾದಂಬರಿಯುದ್ದಕ್ಕೂ ಜಾತಿ, ಮತಗಳ ಬಗ್ಗೆ ಪ್ರತಿರೋಧದ ಧೋರಣೆ ಕಂಡುಬರುತ್ತದೆ.

ಕಾದಂಬರಿಯ ಮುನ್ನುಡಿಯಲ್ಲಿ ಕಾದಂಬರಿಯ ವಸ್ತುವಿಗೆ ಸಂಬಂಧಿಸಿದ ಪ್ರತಿರೋಧದ ಧ್ವನಿ ನಿಚ್ಚಳವಾಗಿ ಕಂಡು ಬರುತ್ತದೆ. "ಪ್ರಚಲಿತ ಧಾರ್ಮಿಕ ಸಂಪ್ರದಾಯಗಳ ಯುಕ್ತಾ ಯುಕ್ತತೆಯನ್ನು ಪ್ರಶ್ನಿಸಿದೊಡನೆ ಪ್ರಶ್ನಿಸಿದಾತನು ನಾಸ್ತಿಕನಾಗಿ ಬಿಡುತ್ತಾನೆ, ಧರ್ಮಾಂಧರ ದೃಷ್ಟಿಯಲ್ಲಿ. ಕುರುಡು, ಆಚಾರಗಳ, ಮೂಢನಂಬಿಕೆಗಳ, ಅಂಧ ವಿಶ್ವಾಸಗಳ ವಿರುದ್ಧ ದನಿಯೆತ್ತಿದಾತನು ಧರ್ಮ ವಿರೋಧಿಯಾಗುತ್ತಾನೆ, ಧರ್ಮಾಂಧರ ದೃಷ್ಟಿಯಲ್ಲಿ. ಪ್ರಶ್ನಿಸುವುದು ಮಾನವನ ಸಹಜ ಧರ್ಮ. ಪ್ರಶ್ನೆಗಳನ್ನು ಅದುಮಿ ಹಿಡಿಯುವವರು ಭಯಗ್ರಸ್ತರು, ಮನುಷ್ಯರಾಗಲಾಗದವರು. ಅವರೇ ನಿಜವಾದ ಪಾಖಂಡಿಗಳು ನಾಸ್ತಿಕರು."

**(ಅದೇ, ಪುಟ 6).**

"ಧರ್ಮಗ್ರಂಥಗಳ ಕುರಿತಾದ ಯಾವ ಜ್ಞಾನವೂ ಇಲ್ಲದ ಕೋಟಿಗಟ್ಟಲೆ ಜನರು ಒಳ್ಳೆಯವರಾಗಿ ಜೀವಿಸುತ್ತಿಲ್ಲವೆ?. ಧರ್ಮದ ಹೆಸರಿನಲ್ಲಿ, ಜಾತಿಯ ಹೆಸರಿನಲ್ಲಿ ಮತ ಯಾಚಿಸುವ ರಾಜಕಾರಣಿಗಳಿಗೆ ಈ ಭೇದದ ಅಗತ್ಯವಿದೆ. ಇವರು ಮತಗಳ ನಡುವೆ ಮಾತ್ರವಲ್ಲ, ಜಾತಿ – ಉಪಜಾತಿಗಳ ನಡುವೆಯು ಭೇದವನ್ನು ಸೃಷ್ಟಿಸುತ್ತಾರೆ. ಇವರು ಮಂತ್ರಿಗಳಾಗಿ, ಮುಖ್ಯ ಮಂತ್ರಿಗಳಾಗಿ, ಜಾತಿ ಸಮ್ಮೇಳನಗಳಲ್ಲಿ ಭಾಷಣಮಾಡಿ ನಮ್ಮ ಜಾತಿಗೆ ಅನ್ಯಾಯವಾಗಿದೆ. ನಾವು ತಲೆಯೆತ್ತಿ ನಿಲ್ಲಬೇಕು ಎಂದು ಕೂಗುತ್ತಾರೆ. ಆದ್ದರಿಂದಲೇ ಜಾತಿ ಸಂಘಗಳು ಹುಟ್ಟಿಕೊಂಡಿವೆ. ಇದರಿಂದ ರಾಜಕೀಯ ಪುಡಾರಿಗಳಿಗೆ ಮತ್ತಷ್ಟು ಅನುಕೂಲವಾಗುತ್ತದೆ. ಧರ್ಮದ ಹೆಸರಿನಲ್ಲಿ ಜೀವಿಸುವ ಪೂಜಿಸಿಕೊಳ್ಳುವ, ಹಣ ಸಂಗ್ರಹಿಸುವ ಮಠದ ಸ್ವಾಮೀಜಿಗಳಿಗೆ ಮತ ಗುರುಗಳಿಗೆ ಈ ಭೇದ ಬೇಕು. ಧರ್ಮಗಳು ಒಂದಾದರೆ ಅವರು ತಮ್ಮ ಜೀವನಕ್ಕೆ ಬೇರೆ ದಾರಿಗಳನ್ನು, ದಂಧೆಗಳನ್ನು ಕಂಡು ಕೊಳ್ಳಬೇಕಾಗುತ್ತದೆ. ಇವರ ಹಣಗಳಿಸುವ ದಾರಿಗಳು ಮುಚ್ಚಿ ಹೋಗುತ್ತವೆ. ಪ್ರತಿವರ್ಷ ನಗರದ ಫುಟ್‌ಪಾತುಗಳಲ್ಲಿ ಹೊಸ ಹೊಸ ಗುಡಿಗಳು ಕಟ್ಟಲ್ಪಡುತ್ತವೆ. ಹೊಸ ಹೊಸ ದೇವಾಲಯಗಳ ಸೃಷ್ಟಿಯಾಗುತ್ತಿರುತ್ತದೆ. ಇಲ್ಲಿ ಚಪ್ಪಲಿ ಕಳಚಿ ತಲೆಬಾಗಿ ನಿಲ್ಲುವವರು ಕೋಟಿಗಟ್ಟಲೆ ಸಂಪಾದಿಸುವ ವ್ಯಾಪಾರಿಗಳಲ್ಲ. ಬಡ ಕೂಲಿಕಾರರು, ದೀನದಲಿತರು. ಇವರಿಂದ ಹೀರಲ್ಪಡುವ ನಾಣ್ಯ ರೂಪದ ನೆತ್ತರಿನ ಮೇಲೆ ನಿಂತಿವೆ ಈ ದೇವರು, ಈ ಧರ್ಮ. ಆರ್ಥಿಕವಾಗಿ ಅತ್ಯಂತ ಮೇಲಿನ

ಸ್ತರದಲ್ಲಿರುವವರಿಗೆಲ್ಲಾ ಒಂದೇ ಧರ್ಮ, ಹಣದರಾಶಿಯ ಮೇಲೆ ನಿಂತಿರುವ ಧರ್ಮ. ಅವರಿಗೆ ಜನಿವಾರ ನಿಲ್ಲದಿದ್ರೂ ಆಗ್ತದೆ, ಬುರ್ಖಾ ಇಲ್ಲದಿದ್ರೂ ಆಗ್ತದೆ. ಅವರನ್ನು ಪುರೋಹಿತರು ಮುಲ್ಲಾಗಳು ಪ್ರಶ್ನಿಸಲಾರರು.

ಗಾಂಧೀಜಿ ಬ್ರಿಟೀಷರನ್ನೋಡಿಸಿದ್ದು ಗಾಯತ್ರಿಯ ಬಲದಿಂದಲ್ಲ. ಚಂದ್ರ ಲೋಕಕ್ಕೆ ಮನುಷ್ಯ ಹೋದುದು ಯಜ್ಞ ಬಲದಿಂದಲ್ಲ. ಮಕ್ಕಳ ಆಟವನ್ನು ಹೋಲುವ ಈ ಜಪ ತಪಗಳು, ಪೂಜೆ ಪುರಸ್ಕಾರಗಳು ಈ ಮಣ್ಣಿನಲ್ಲಿ ಬಿತ್ತಿ ಬೆಳೆಸಿದ್ದು ಹೇಡಿತನವನ್ನು, ಪುರುಷ ಹೀನತೆಯನ್ನು. ಯಾರೂ ಬಂದರೂ ತಲೆ ಬಾಗಿಸಿ ಶರಣಾಗುವ ದಾಸ್ಯಭಾವವನ್ನು, ಬಲಹೀನತೆಯನ್ನು, ಶರಣು ಶರಣೆಂಬ ನಿರ್ವೀರ್ಯತೆಯನ್ನು. ಆತ್ಮೋನ್ನತಿ, ಸಾಮಾಜಿಕ ಜಾಗೃತಿಯನ್ನಲ್ಲ, ಅಯ್ಯೋ ನನ್ನ ವಿಧಿಯೆ ಎಂದು ಗೋಗರೆಯುವ ಮನೋಧರ್ಮವನ್ನು. ಎಲ್ಲ ಮತ ಗ್ರಂಥ ರಚನೆ ಮತ್ತು ಕಾಲಕಾಲಕ್ಕೆ ಅದನ್ನು ಪರಿಷ್ಕರಿಸುತ್ತ ನಡೆದ ಕೃತಿಯ ಹಿಂದೆ ಪಟ್ಟಭದ್ರ ಪರೋಹಿತಶಾಹಿ ಹಿತಾಸಕ್ತಿ ಅಡಗಿದೆ. ಸನ್ಮಾರ್ಗದಲ್ಲಿ ಜೀವಿಸಲು ಮಾರ್ಗದರ್ಶನ ಬೇಕೆಂದಿದ್ದರೆ ಅದನ್ನು ಬುದ್ಧನಲ್ಲೂ ಕಾಣಬಹುದು, ಏಸುವಿನಲ್ಲೂ ಕಾಣಬಹುದು. ಸಾಕ್ರಟೀಸ್, ಕನ್ಫೂಶಿಯಸ್, ವಿವೇಕಾನಂದ, ಗಾಂಧೀಜಿ ಯಾರಲ್ಲೂ ಕಾಣಬಹುದು. ಪುರೋಹಿತರನ್ನು ನೇಮಿಸಿ ಸಂಸ್ಕೃತ ಶ್ಲೋಕಗಳನ್ನು ಉಚ್ಚರಿಸಿ ಸಾವಿರಾರು ರೂಪಾಯಿ ಖರ್ಚು ಮಾಡಿ ನಡೆಸಿದ ಪ್ರಾರ್ಥನೆ ಪೂಜೆಗಳಿಗೆ ಮಾತ್ರ ಶಕ್ತಿಯಿರುವುದು ಎಂದು ನಂಬುವವರು ಅಜ್ಞಾನಿಗಳಲ್ಲವೆ? ಹಿಂದೂ ಧರ್ಮ ಪರ ಅಥವಾ ಮುಸ್ಲಿಮ್ ಧರ್ಮ ಪರ ರಾಜಕೀಯ ಪಕ್ಷಗಳಿಂದ ಹಿಂದುಗಳಿಗೆ, ಮುಸ್ಲಿಮರಿಗೆ ಏನೂ ಪ್ರಯೋಜನ ಆಗಿಲ್ಲ. ಹಿಂದೂ ಪಕ್ಷಗಳು ಅಂಧ ಶ್ರದ್ಧೆಗಳನ್ನು ಧರ್ಮ ಸಂಸ್ಕೃತಿಯ ಹೆಸರಿನಲ್ಲಿ ದೇವರ ನಂಬಿಕೆಯ ಹೆಸರಿನಲ್ಲಿ ಬೆಂಬಲಿಸುತ್ತವೆ. ಅಖಂಡ ಹಿಂದೂ ರಾಷ್ಟ್ರವಾಗಬೇಕೆಂಬ ಕೂಗು ಸತ್ಯವಾಗಿಲ್ಲ, ಎಂದೂ ಆಗಲಾರದು. ಭಾವೈಕ್ಯಕ್ಕಾಗಿ ವೇದಿಕೆಯ ಮೇಲಿಂದ ಕರೆಕೊಡುವ ರಾಜಕೀಯ ಪುಡಾರಿಗಳು ನಿರಕ್ಷರತೆಯ ಫಲವತ್ತಾದ ಮಣ್ಣಿನಲ್ಲಿ ವಿಷಬೀಜಗಳನ್ನು ಬಿತ್ತಿದ್ದಾರೆ. ಯಾವ ಧರ್ಮವೂ ಮೇಲಲ್ಲ, ಯಾವ ಧರ್ಮವೂ ಕೀಳಲ್ಲ ಎಲ್ಲಕ್ಕಿಂತಲೂ ಮೇಲಿನದು ಮಾನವೀಯತೆ. ದೇವರ ಉದ್ಧಾರಕ್ಕೆ ಸುರಿಯುವ ಹಣವನ್ನು ಮನುಷ್ಯನ ಉದ್ಧಾರಕ್ಕೆ ಸುರಿಯುವ ಮನಸ್ಸು ಮನುಷ್ಯನಿಗಿದ್ದರೆ ದೇವರು ಕಾಣಿಸಿಕೊಳ್ಳುತ್ತಾನೆ".

**(ಅದೇ, ಮುನ್ನುಡಿ, ಪುಟ 5ರಿಂದ 26)**

ಕಾದಂಬರಿಯ ಮುನ್ನುಡಿಯಲ್ಲಿ ಕೆ.ಟಿ.ಗಟ್ಟಿಯವರು ಧರ್ಮಗಳನ್ನು ವಿರೋಧಿಸುತ್ತಾರೆ. ಜಾತಿ ಪದ್ಧತಿ, ದೇವರ ಮೇಲಿನ ನಂಬಿಕೆ, ಅಂಧಶ್ರದ್ಧೆ, ಮೂಢನಂಬಿಕೆ, ಮಠಗಳಲ್ಲಿನ ಸ್ವಾರ್ಥ ಚಿಂತನೆ, ಸ್ವಾರ್ಥತುಂಬಿದ ರಾಜಕೀಯ ಇವುಗಳನ್ನು ವಿರೋಧಿಸುತ್ತಾರೆ.

## ೪.೧೧: ಅಭಿಚಾರ:

ಕೆ.ಟಿ.ಗಟ್ಟಿಯವರ 'ಅಭಿಚಾರ' ಕಾದಂಬರಿಯು 1987ರಲ್ಲಿ ಪ್ರಕಟವಾಗಿದೆ. ಇದು ಎರಡು ಕುಟುಂಬಗಳ ನಡುವೆ ನಡೆದ ಎರಡು ತಲೆಮಾರುಗಳ ಕಥೆಯನ್ನು ತಿಳಿಸುತ್ತದೆ. ಅಭಿಚಾರ ಎಂದರೆ ವಿರುದ್ಧವಾದ ಆಚರಣೆ ಎಂಬ ಅರ್ಥವೂ ಇದೆ. ಸೀತಾಪತಯ್ಯ ಕರ್ನಾಟಕದ ಅತಿ ದೊಡ್ಡ ಪ್ರಕಾಶಕನೆಂದು ತನ್ನನ್ನು ತಾನು ಕರೆದುಕೊಳ್ಳುತ್ತಿದ್ದ. ಅವನ ತಮ್ಮ ರಾಮಚಂದ್ರಯ್ಯ ತಂಪು ಪಾನೀಯದ ಅಂಗಡಿ ಆರಂಭಿಸಿ ಉತ್ತಮ ಲಾಭ ಗಳಿಸುತ್ತಿದ್ದ. ಉತ್ತಮವಾಗಿ ಗಳಿಸುವಲ್ಲಿ ಅಣ್ಣ ತಮ್ಮಂದಿರಿಬ್ಬರಿಗೂ ಸ್ಪರ್ಧೆ ಇತ್ತು. ಶ್ರೀರಾಮಚಂದ್ರನ ಹೆಸರು ಇಬ್ಬರಿಗೂ ಇದ್ದರೂ ಅವರ ಸ್ವಭಾವ ಮಾತ್ರ ಬೇರೆಯಾಗಿತ್ತು. ಸೀತಾಪತಯ್ಯ ಕಾದಂಬರಿಯಲ್ಲಿ ಕೇಂದ್ರ ವ್ಯಕ್ತಿಯಾಗಿ ಕಂಡುಬರುತ್ತಾನೆ.

ಅರವತ್ತೊಂಬತ್ತು ವರ್ಷ ಕಳೆದಿದ್ದ ರಾಮಚಂದ್ರಯ್ಯ ತನ್ನ ಶಾಲಾ ಗೆಳೆಯ ಪರಮಶಿವಯ್ಯ ಮರಣವನ್ನಪ್ಪಿದ ಸಂದರ್ಭದಲ್ಲಿ ಆತನ ಮಕ್ಕಳು ಪತ್ರಿಕೆಯಲ್ಲಿ "ನೀವು ಅಳಿದರೂ ನೀವು ಉಳಿಸಿ ಹೋದ ಚೇತನ ಸದಾ ನಮ್ಮೊಂದಿಗಿರುತ್ತದೆ" ಎಂಬ ಸಂದೇಶ ಹಾಕಿಸಿದ್ದನ್ನು ಗಮನಿಸುತ್ತಾನೆ. ನಿಮ್ಮ ಚೇತನ ನಮ್ಮೊಂದಿಗಿರುತ್ತದೆ ಎಂದಿರುವುದು ಪರಮ ಶಿವಯ್ಯ ಕಟ್ಟಿಸಿದ ಮನೆ, ಫರ್ನೀಚರ್, ಫ್ರಿಜ್ ಇರಬಹುದು ಎಂದು ಯೋಚಿಸಿದ. ಬಹುಶಃ ತಾನು ಸತ್ತ ಮೇಲೆ ತನ್ನ ಹೆಂಡತಿ ಮಕ್ಕಳು ಇಂಥದೇ ಒಂದು ಮಾತು ಮತ್ತು ಫೋಟೋ ಹಾಕಿಸಿಯಾರು ಎಂದು ಯೋಚಿಸಿದ. ಆತ ಹಾಗೆ ಯೋಚಿಸಲು ಕಾರಣವೂ ಇತ್ತು.

ಮಗಳು ಲಕ್ಷ್ಮಿ ಹುಟ್ಟಿದ ಬಳಿಕ ಸೀತಾಪತಯ್ಯನ ಆದಾಯದಲ್ಲಿ ಹೆಚ್ಚಳ ವಾಗತೊಡಗಿತು. ಅವರು ವಾಸಿಸುತ್ತಿದ್ದ ಬೆಂಗಳೂರಿನ ಕಾವೇರಿ ನಗರದ ಹೆಚ್ಚಿನ ಮಹಡಿ ಮನೆಗಳಲ್ಲಿ ವಯೋವೃದ್ಧರು, ವೃದ್ಧೆಯರು ತಮ್ಮ ಪ್ರತಿಭಾವಂತರಾದ ಪುತ್ರರನ್ನು ದೇಶ ವಿದೇಶಗಳಿಗೆ ಕಳಿಸಿಕೊಟ್ಟು ತಾವು ಏಕಾಂತದಲ್ಲಿ ನರಳುತ್ತಾ ಸುಖವಾಗಿದ್ದೇವೆ ಎಂದುಕೊಳ್ಳುತ್ತಿದ್ದಾರೆ. ಅನುಕೂಲವಂತರಾದ ನಗರವಾಸಿಗಳು

ತಟ್ಟಿದ್ದಕ್ಕೆ, ಮುಟ್ಟಿದ್ದಕ್ಕೆ, ಹರಿದುದಕ್ಕೆ, ಹೊಲಿದುದಕ್ಕೆ, ಎಲ್ಲದಕ್ಕೂ ಒಂದೊಂದು ಪೂಜೆ ಮಾಡಿಸುತ್ತಾರೆ. ಅಂಧಶ್ರದ್ಧೆ, ಕಂದಾಚಾರಗಳಲ್ಲಿ ಅವರು ಹಳ್ಳಿಯವರಿಗಿಂತ ಹತ್ತು ಹೆಜ್ಜೆ ಮುಂದೆ ಹೋಗಿದ್ದಾರೆ. ಬೀದಿಗೊಬ್ಬ ಜ್ಯೋತಿಷ್ಯರಿದ್ದಾರೆ. ಬೀದಿಗೆ ಮೂರು ನಾಲ್ಕರಂತೆ ದೇವ ದೇವಿಯರ ಗುಡಿಗಳಿವೆ. "ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ಭಾರತದ ಹಳ್ಳಿಗಳ ಅಂಧಶ್ರದ್ಧೆಗಳೆಲ್ಲ ಹಳ್ಳಿಗಳಿಂದ ನಗರಕ್ಕೆ ವಲಸೆ ಹೋದವು ಎಂಬುದಕ್ಕೆ ಕಾವೇರಿ ನಗರ ಒಂದು ಉತ್ತಮ ಉದಾಹರಣೆ".

**(ಅಭಿಚಾರ, 1987, ಪುಟ 17)**

ರಾಮಚಂದ್ರಯ್ಯ ತನ್ನ ಮಗಳ ಹದಿನಾರನೇ ಹುಟ್ಟುಹಬ್ಬವನ್ನು ವಿಜೃಂಭಣೆಯಿಂದ ಮಾಡಿದುದನ್ನು ಕಂಡು ಸೀತಾಪತಯ್ಯನ ಪತ್ನಿ ಭಾಗ್ಯಮ್ಮ ಮಗಳು ಶಾರದೆಯ ಮಗನ ಹುಟ್ಟು ಹಬ್ಬವನ್ನು ಇದಕ್ಕಿಂತ ವಿಜೃಂಭಣೆಯಿಂದ ಆಚರಿಸಬೇಕು ಎನ್ನುತ್ತಾಳೆ. ಅವರು ನಾಯಿ ಕೂಡಾ ಕುಡೀದಿರೋ ಬಣ್ಣದ ನೀರು ಮಾರಿ ಇಷ್ಟು ಮಾಡಿರುವಾಗ ಸಾವಿರಗಟ್ಲೆ ಪುಸ್ತಕಗಳನ್ನು ಮಾರಾಟಮಾಡೊ ನಿಮ್ಮಿಂದ ಇಷ್ಟು ಆಗಲ್ವೇ ಎಂದು ಗಂಡನೊಂದಿಗೆ ಹೇಳುತ್ತಾಳೆ. ಸೀತಾಪತಯ್ಯ ತನ್ನ ವೈವಾಹಿಕ ಜೀವನದ ಸುವರ್ಣ ಮಹೋತ್ಸವವನ್ನು ಆಚರಿಸಬೇಕೆಂದು ಯೋಚಿಸುತ್ತಾನೆ.

ವೈನತೇಯ ಮತ್ತು ರಾಗಿಣಿಯವರ ಕಾದಂಬರಿಗಳು ಸೀತಾಪತಯ್ಯನ ಪ್ರೆಸ್‌ನಲ್ಲಿ ಪ್ರತಿ ತಿಂಗಳು ಮುದ್ರಣಗೊಂಡು ಹೆಚ್ಚಾಗಿ ಮಾರಾಟವೂ ಆಗುತ್ತಿದ್ದವು. ಆದರೆ ದಿನಗಳೆದಂತೆ ಅವರ ಕಾದಂಬರಿಗಳನ್ನು ಓದುವವರ ಸಂಖ್ಯೆ ಕಡಿಮೆಯಾಯಿತು. ಸೀತಾಪತಯ್ಯ ವ್ಯವಹಾರದಲ್ಲಿ ಬಹಳ ಬುದ್ಧಿವಂತ. ಲೇಖಕರಿಗೆ ಸಾವಿರ ಪ್ರತಿ ಅಚ್ಚು ಹಾಕುತ್ತೇನೆಂದು ಹೇಳಿ ಮೂರು ಸಾವಿರ ಪ್ರತಿ ಅಚ್ಚು ಹಾಕಿಸುತ್ತಿದ್ದ. ಪುಸ್ತಕ ಬರೆಯುವಂತೆ ಕೇಳಿಕೊಳ್ಳಲು ಸೀತಾಪತಯ್ಯನು ರಾಜದೇವನ ಮನೆಗೆ ಬಂದಾಗ ಅವನ ಹೆಂಡತಿ ಮಕ್ಕಳು ಅದೃಶ್ಯರಾಗಿದ್ದರು. ಯಾವುದೋ ದಲಿತ ಪಂಗಡದವನಾದ ರಾಜದೇವನ ಮನೆಯಲ್ಲಿ ಸೀತಾಪತಯ್ಯ ತಿನ್ನುವುದು, ಕುಡಿಯುವುದಕ್ಕೆ ಸಿದ್ಧನಿರಲಿಲ್ಲ. ಇಂದ್ರ 'ಬ್ರಾಹ್ಮಣರ' ಮನೆ ಕಂಡೊಡನೆ ಗೌರಿ ಪಕ್ಕದ ಮನೆಗೆ ಹೋಗುವ ಅಭ್ಯಾಸ ಬೆಳೆಸಿಕೊಂಡಿದ್ದಳು. ಬಂದವರು ಅಂಥ ಬ್ರಾಹ್ಮಣರಲ್ಲ ಎಂದು ತೀರ್ಮಾನವಾದರೆ ರಾಜದೇವನೇ ಅವಳನ್ನು ಕರೆಯುತ್ತಿದ್ದ.

ಬೆಂಗಳೂರಿನ ಕಾವೇರಿ ನಗರದಲ್ಲಿ ನೀರಿನ ಸಮಸ್ಯೆ ಸದಾ ತಲೆದೋರುತ್ತಿತ್ತು. ಅದಕ್ಕೆ ಆ ಹೆಸರೇ ಕಾರಣ ಎಂದು ಆ ನಗರದ ಜ್ಯೋತಿಷಿ ರಾಮೇಶ್ವರ ಭಟ್ಟರ ಅಭಿಪ್ರಾಯ. ಹಿಂದೊಮ್ಮೆ ಇದನ್ನು ಬದಲಾಯಿಸುವ ಬಗ್ಗೆ ಮುಖ್ಯ ಮಂತ್ರಿಗಳು

ಪ್ರಯತ್ನ ಮಾಡಿದಾಗ ವಿರೋಧ ಪಕ್ಷದವರು ವಿರೋಧಿಸಿದ್ದರು. ಇಡೀ ನಗರಕ್ಕೆ ನೀರಿಲ್ಲದಿದ್ದರೂ ಊರಿನ ಶ್ರೀಮಂತರು ಕೊಳವೆ ಬಾವಿ ಹಾಕಿಸಿ, ಸರ್ಕಾರಿ ನಲ್ಲಿಗೆ ರಬ್ಬರ್ ಪೈಪ್ ಜೋಡಿಸಿ ಬಂಗಲೆಯ ಮುಂದಿನ ಲಾನಿಗೆ ನೀರು ಬಿಡುತ್ತಿದ್ದರೆ ಬಡವರು ನೀರಿಗಾಗಿ ಸಾಲಾಗಿ ಕಾಯುತ್ತಿದ್ದರು. ಶ್ರೀಮಂತರ ಅಟ್ಟಹಾಸಕ್ಕೆ ಕಾದಂಬರಿಯಲ್ಲಿ ಪ್ರತಿರೋಧ ವ್ಯಕ್ತವಾಗಿದೆ.

ಸೀತಾಪತಯ್ಯನ ಪುತ್ರಿಯರಾದ ಜಾನಕಿ ಮತ್ತು ಲಕ್ಷ್ಮಿಯರ ವಿಚಾರ ಬಹುಮಟ್ಟಿಗೆ ಸರಳ. ಆದರೆ ರಾಮಚಂದ್ರಯ್ಯನ ಪುತ್ರಿಯರಾದ ಮಾಧವಿ ಸರಸ್ವತಿಯರ ವಿಚಾರ ಸ್ವಲ್ಪ ಜಟಿಲ. ರಾಮಚಂದ್ರಯ್ಯ ಮತ್ತು ರಾಜಮ್ಮ ಮಗಳು ಮಾಧವಿಗೆ ಬಿ.ಕಾಂ. ಮುಗಿಸಿದ ಕೂಡಲೇ ಸಿರಿವಂತ ಡಾಕ್ಟರ್ ಗಂಡನನ್ನು ಹುಡುಕಿ ಮದುವೆ ಮಾಡಲು ತೀರ್ಮಾನಿಸಿದ್ದರು. ಆಗಾಗ ತನ್ನ ಮನೆಯ ಕರೆಂಟ್ ಫ್ಯೂಸ್ ಹೋಗುತ್ತಿದ್ದಾಗ ಅದನ್ನು ಸರಿಪಡಿಸಲು ಬರುತ್ತಿದ್ದ ಪಕ್ಕದ ಮನೆಯಲ್ಲಿ ಬಾಡಿಗೆಗಿದ್ದ ಲೈನ್‌ಮ್ಯಾನ್ ರಂಗಣ್ಣನೊಡನೆ ಆಕಸ್ಮಿಕವಾಗಿ ನಡೆದ ಘಟನೆಯಿಂದಾಗಿ ಸರಸ್ವತಿ ಹಾಗೂ ರಂಗಣ್ಣರ ನಡುವೆ ಪ್ರೀತಿ ಹುಟ್ಟುವಂತಾಯಿತು. ರಂಗಣ್ಣ ಮತ್ತು ಸರಸ್ವತಿಯರ ನಡುವೆ ಫ್ಯೂಸಿನ ಮೂಲಕ ಜೋಡಣೆಗೊಂಡ ಸಂಬಂಧ ಕಾಂಕ್ರೀಟಿನ ಥರಾ ಬಿಗಿಯಾಗಿ ಬಿಟ್ಟಿತು. ರಂಗಣ್ಣ ಸರಸ್ವತಿಯೊಡನೆ ಇಬ್ಬರೂ ಓಡಿ ಹೋಗಿ ರಿಜಿಸ್ಟರ್ ಮದುವೆ ಆಗೋಣವೆಂದಾಗ ಸರಸ್ವತಿ ತಾನು ಅಮ್ಮನ ಹತ್ರ ಮಾತಾಡ್ತೀನಿ ಅಂದಳು. ತಿರುಪತಿಗೆ ತೆರಳುವ ಸಂದರ್ಭದಲ್ಲಿ ಸರಸ್ವತಿ ತಾನು ರಂಗಣ್ಣನನ್ನು ಮದುವೆಯಾಗುವುದಾಗಿ ತಿಳಿಸಿ ತಾಯಿಯಿಂದ ಬೈಗುಳ ತಿಂದಿದ್ದಳು. ತಿರುಪತಿಗೆ ಹೋದ ರಾಮಚಂದ್ರಯ್ಯ ಅಲ್ಲೇ ಕೊನೆಯುಸಿರೆಳೆದ. ರಂಗಣ್ಣನನ್ನು ಮದುವೆಯಾಗುವ ವಿಚಾರ ತಾಯಿಯಿಂದಾಗಿ ಸರಸ್ವತಿಯ ಅಣ್ಣನಿಗೆ ತಿಳಿದು ಅವರಿಬ್ಬರ ನಡುವೆ ಜಗಳವಾಯಿತು. ರಂಗಣ್ಣನನ್ನು ಮುಗಿಸಿಬಿಡಬೇಕೆಂದು ಅಣ್ಣಂದಿರು ಯೋಜನೆ ಹಾಕುವುದನ್ನು ತಿಳಿದ ಸರಸ್ವತಿ ಬೆಳಿಗ್ಗೆ ನಾಲ್ಕು ಗಂಟೆಗೆ ರಂಗಣ್ಣನ ಕೋಣೆಗೆ ಬರುವುದಾಗಿ ಪತ್ರ ಬರೆದು ತಿಳಿಸಿದಳು. ಬಾಗಿಲು ತೆರೆದು ಕಾಯಬೇಕೆಂದು ಹೇಳಿ ಸೀಮೆಎಣ್ಣೆಯೊಂದಿಗೆ ಆತನ ಮನೆಗೆ ತೆರಳಿ ಬಾಗಿಲು ಹಾಕಿಕೊಂಡಳು. ಮರುದಿನ ಆಕೆಯನ್ನು ಮನೆಯವರು ಹುಡುಕಿದರೂ ಆಕೆ ಮನೆಯಲ್ಲಿಲ್ಲದಿರುವುದನ್ನು ಕಂಡು ರಂಗಣ್ಣನ ಮನೆ ಬಾಗಿಲಿಗೆ ಬಂದು ಬಾಗಿಲು ಬಡಿದರು. ವಿಷಯ ಜನರಿಗೆಲ್ಲಾ ತಿಳಿದು ಸುತ್ತ ಮುತ್ತ ಜನ ನೆರೆದರು. ಪೋಲೀಸರಿಗೆ ಸುದ್ದಿ ತಿಳಿದು ಅವರೂ ಬಂದರು. ಸರಸ್ವತಿ ತನಗೆ ಮದುವೆಯಾಗಲು ಒಪ್ಪಿಗೆ ನೀಡಬೇಕಲ್ಲದೆ, ತಾಯಿ ಅಣ್ಣಂದಿರು ಬಂದು ಈ ಕ್ಷಣದಲ್ಲಿ ನಮ್ಮಿಬ್ಬರಿಗೆ ಮದುವೆಗೆ ಬೇಕಾದ ಹೂಮಾಲೆ ತರಬೇಕು. ಇಲ್ಲದಿದ್ದರೆ ನಾವಿಬ್ಬರೂ ರೂಮಿನೊಳಗೆ ಸುರಿದ

ಸೀಮೆಎಣ್ಣೆಗೆ ಬೆಂಕಿ ಹಚ್ಚಿಕೊಂಡು ಸಾಯುತ್ತೇವೆ ಎಂಬ ತಮ್ಮ ತೀರ್ಮಾನ ತಿಳಿಸಿದಳು. ಬೇರೆ ಉಪಾಯವಿಲ್ಲದೆ ಮನೆಯವರು ಅವಳ ಮಾತಿಗೆ ಒಪ್ಪಿಗೆ ಸೂಚಿಸಿದರು.

ಸೀತಾಪತಯ್ಯನ ಪುತ್ರಿ ಜಾನಕಿ ಕಾಲೇಜು ಓದುತ್ತಿದ್ದ ಭೀಮಸ್ವಾಮಿಯನ್ನು ಪ್ರೀತಿಸುತ್ತಿದ್ದುದಲ್ಲದೆ ಅವನೊಂದಿಗೆ ಮೂರು ನಾಲ್ಕು ಬಾರಿ ಹೋಟೆಲ್ ರೂಮಿಗೆ ಹೋಗಿ ದೈಹಿಕ ಸಂಬಂಧವನ್ನೂ ಹೊಂದಿದ್ದಳು. ತಂದೆ ಸೀತಾಪತಯ್ಯ ಮಗಳು ಜಾನಕಿಯ ಬಿ.ಕಾಂ. ಪರೀಕ್ಷೆ ಮುಗಿದೊಡನೆ ಡಾಕ್ಟರ್‌ನೊಂದಿಗೆ ಮದುವೆ ಮಾಡಿಸಿಬಿಡುವ ತೀರ್ಮಾನ ಮಾಡಿದ್ದ.

ಭೀಮಸ್ವಾಮಿಗೆ ತಾನು ಸೀತಾಪತಯ್ಯನ ಮೊದಲ ಮಗಳನ್ನು ಪ್ರೀತಿಸುತ್ತಿದ್ದು ಆಕೆಯನ್ನು ಮದುವೆಯಾಗುವುದು ಸಾಧ್ಯವಾಗದಿದ್ದುದರಿಂದ ಸೀತಾಪತಯ್ಯನ ಮೇಲೆ ಭಯಂಕರ ಸಿಟ್ಟು ಇತ್ತು. ಆತ ಸೇಡು ತೀರಿಸಲು ಹೊಂಚುಹಾಕುತ್ತಾನೆ. ಜಾನಕಿ ತನಗೆ ಸಿಗದಂತೆ ಮಾಡಿದೆಯಲ್ಲ, ಲಕ್ಷ್ಮಿಯನ್ನು ಕೆಡಿಸ್ತೇನೆ ಆಗ ನಿನಗೆ ಬುದ್ಧಿ ಬರುತ್ತದೆ ಎಂದುಕೊಂಡ. ಅದಕ್ಕಾಗಿ ಆತ ಸೀತಾಪತಯ್ಯನ ಎರಡನೆಯ ಮಗಳನ್ನು ಪ್ರೀತಿಸಿ ಆಕೆಯನ್ನು ಗರ್ಭಿಣಿಯಾಗಿಸಿ ಸೇಡು ತೀರಿಸಿಕೊಳ್ಳುತ್ತಾನೆ. ಕೃತಿಚೌರ್ಯದ ಕೃತಿಯೊಂದನ್ನು ಅಚ್ಚುಹಾಕುವಂತೆ ಮಾಡಿ ಆಘಾತಕ್ಕೆ ಒಳಪಡಿಸುತ್ತಾನೆ.

ಲಕ್ಷ್ಮಿಯನ್ನು ಕರೆದುಕೊಂಡು ಹೋಟೆಲ್ ರೂಮಿಗೆ ಹೋದ ಭೀಮಸ್ವಾಮಿ ಆಕೆಯನ್ನು ತಾನು ಪ್ರೀತಿಸುವುದಾಗಿ ತಿಳಿಸುತ್ತಾನೆ. ಜಾನಕಿಯೂ ಆತನ ರೂಪಕ್ಕೆ ಅಂಗಸೌಷ್ಟವಕ್ಕೆ ಮಾರುಹೋಗಿದ್ದಳು. ಸೀತಾಪತಯ್ಯನ ಬುಡಕ್ಕೆ ಕೊಡಲಿಯೇಟನ್ನು ಹಾಕಬೇಕೆಂಬ ಉದ್ದೇಶದಿಂದಲೇ ಲಕ್ಷ್ಮಿಯನ್ನು ಬುಟ್ಟಿಗೆ ಹಾಕಿಕೊಂಡಿದ್ದ ಭೀಮಸ್ವಾಮಿ ಲಕ್ಷ್ಮಿಗೆ ಮೋಸ ಮಾಡಲು ನಿರ್ಧರಿಸಿದ್ದ. ಇಪ್ಪತ್ತು ಮೂವತ್ತು ವರ್ಷಗಳ ಹಿಂದೆ ಪ್ರಕಟವಾದ ಕಾದಂಬರಿಯೊಂದನ್ನು ನಕಲು ಮಾಡಿ ತಾನು ಹೇಮಂತನೆಂದು ಹೇಳಿ ಸೀತಾಪತಯ್ಯನೊಡನೆ ಅದನ್ನು ಪ್ರಕಟಿಸುವಂತೆ ತಿಳಿಸಿದ. ಆದರೆ ಪ್ರೆಸ್‌ನಲ್ಲಿ ಬೈಂಡಿಂಗ್ ಕೆಲಸ ಮಾಡುತ್ತಿದ್ದ ಉಮೇಶ ಸೀತಾಪತಯ್ಯನೊಂದಿಗೆ ಈ ಕಾದಂಬರಿಯು ಖ್ಯಾತ ಲೇಖಕ ನೀಲಕಂಠಯ್ಯನ 'ಋತುವಿಜಯ' ಕಾದಂಬರಿಯ ತಾಜಾ ನಕಲು ಎಂದು ತಿಳಿಸಿದಾಗ ಆಘಾತಕ್ಕೊಳಗಾದ ಸೀತಾಪತಯ್ಯ ಕುಸಿದು ಬಿದ್ದಿದ್ದ. ಡಾಕ್ಟರ್ ಆತನಿಗೆ ಸ್ಟ್ರೋಕ್ ಆಗಿದೆ ಎಂದು ತಿಳಿಸಿದರು. ಸೀತಾಪತಯ್ಯ ಹದಿನೈದು ಸಾವಿರ ಕಳೆದುಕೊಂಡು ಚಿಂತೆಯಲ್ಲಿದ್ದ. ಮಗಳು ನೀಡಿದ ಪರಿಹಾರೋಪಾಯ ಆತನನ್ನು ನಷ್ಟದಿಂದ ರಕ್ಷಿಸಿತು.

ಭೀಮಸ್ವಾಮಿಯಿಂದಾಗಿ ಗರ್ಭಿಣಿಯಾದ ಲಕ್ಷ್ಮಿ ಹೊಟ್ಟೆಯಲ್ಲಿ ನಾಲ್ಕು ತಿಂಗಳ ಮಗುವನ್ನು ಹೊತ್ತುಕೊಂಡು ತಂದೆಗೆ ವಿಚಾರ ತಿಳಿಸಲು ಒಳಗೊಳಗೆ ಅಂಜಿದಳು. ಸಿನಿಮಾ ಥಿಯೇಟರ್ ಒಂದಕ್ಕೆ ಭಾಗ್ಯಮ್ಮ ಹೋದುದನ್ನು ಗಮನಿಸಿದ ಭೀಮಸ್ವಾಮಿ ಆಕೆ ನೋಡಬೇಕೆಂದು ಲಕ್ಷ್ಮಿಯನ್ನು ಅದೇ ಸಿನಿಮಾ ನೋಡಲು ಅಲ್ಲಿಗೇ ಕರೆದುಕೊಂಡು ಹೋಗಿ ಭಾಗ್ಯಮ್ಮ ತಮ್ಮನ್ನು ನೋಡುವಂತೆ ಮಾಡಿದ. ಮನೆಗೆ ಬಂದ ಭಾಗ್ಯಮ್ಮ ಲಕ್ಷ್ಮಿಯೊಡನೆ ವಿಚಾರಿಸಲು ತಾನು ಪ್ರೀತಿಸುತ್ತಿರುವ ಭೀಮಸ್ವಾಮಿಯ ಬಗ್ಗೆ ತಿಳಿಸುತ್ತಾಳೆ. ತನ್ನ ಹೊಟ್ಟೆಯಲ್ಲಿ ಬೆಳೆಯುತ್ತಿರುವ ಆತನ ಮಗುವಿನ ಬಗ್ಗೆ ತಿಳಿಸುತ್ತಾಳೆ. ಭಾಗ್ಯಮ್ಮಳಿಂದ ವಿಷಯ ತಿಳಿದ ಸೀತಾಪತಯ್ಯ ಮಗಳನ್ನು ವಿಚಾರಿಸಿ ವಿಷಯ ತಿಳಿದುಕೊಂಡ. "ಅವನು ಯೋಚಿಸಿದ, ಅವಳು ಗರ್ಭಿಣಿಯಾಗಿರೋದ್ರಿಂದ ಇರುವುದು ಎರಡೇ ದಾರಿ, ಒಂದೋ ಅದನ್ನು ತೆಗೆಸೋದು ಅಥವಾ ಅವನಿಗೇ ಅವಳನ್ನು ಕೊಟ್ಟು ಮದುವೆ ಮಾಡಿಸೋದು. ಮೊದಲಿನ ವಿಚಾರದ ಬಗ್ಗೆ ಮಗಳಲ್ಲಿ ವಿಚಾರಿಸಿದಾಗ ಆಕೆ ಒಪ್ಪಿಕೊಳ್ಳುವ ಸ್ಥಿತಿಯಲ್ಲಿರಲಿಲ್ಲ. ತಾನು ಯೋಗ್ಯ ವರನೆಂದು ಆರಿಸಿದ ಲಕ್ಷ್ಮಿಯ ಡಾಕ್ಟರ್ ಗಂಡ ಡ್ರಗ್ ಎಡಿಕ್ಟ್ ಎಂಬ ವಿಷಯ ಲಕ್ಷ್ಮಿಯಿಂದಲೇ ತಿಳಿದಿತ್ತು. ಹಾಗಾಗಿ ಲಕ್ಷ್ಮಿಯನ್ನು ಭೀಮಸ್ವಾಮಿಗೇ ಮದುವೆ ಮಾಡಿಸಿದರೆ ತನ್ನ ಪ್ರಕಾಶನ ಕಾರ್ಯವೂ ಮುಂದುವರಿಯಬಹುದೆಂದು ಯೋಚಿಸಿದ. ಮಗಳು ತಂದೆಯ ಸೂಚನೆಯಂತೆ ಭೀಮಸ್ವಾಮಿಯನ್ನು ಮನೆಗೆ ಕರೆದುಕೊಂಡು ಬಂದಳು. ಭೀಮಸ್ವಾಮಿಯನ್ನು ನೋಡಿದ ಸೀತಾಪತಯ್ಯ ಒಮ್ಮೆಲೇ ಆಘಾತಕ್ಕೊಳಗಾದ. ಆತನ ಬಲಕೈ ಮತ್ತು ಬಲಕಾಲು ನಿಷ್ಕ್ರಿಯಕ್ಕೊಳಗಾಗಿತ್ತು. ಅನಿವಾರ್ಯವಾಗಿ ಆತ ಭೀಮಸ್ವಾಮಿಯನ್ನು ಒಪ್ಪಿಕೊಳ್ಳಬೇಕಾಯಿತು. ಪ್ರೇಮವಿವಾಹವನ್ನು ಒಪ್ಪದೆ ಕೇವಲ ಹುದ್ದೆ, ಅಂತಸ್ತುಗಳಿಗೆ ಬೆಲೆಕೊಡುತ್ತಿದ್ದ ಸಾಂಪ್ರದಾಯಿಕ ಕುಟುಂಬ ತಮ್ಮ ಮಕ್ಕಳ ಪ್ರೀತಿ ಪ್ರೇಮಗಳ ಬಗ್ಗೆ ಪ್ರತಿರೋಧ ವ್ಯಕ್ತಪಡಿಸುತ್ತದೆ. ಆದರೆ ಅವರ ಪ್ರತಿರೋಧ ಯಾವುದೇ ಪರಿಣಾಮ ಬೀರುವುದಿಲ್ಲ. ಕಾಲದ ನಿರ್ಧಾರವನ್ನು ಅವರೇ ಒಪ್ಪಿಕೊಳ್ಳಬೇಕಾಗುತ್ತದೆ.

ರಾಮಚಮಂದ್ರಯ್ಯನ ಮಗ ಪದ್ಮನಾಭ ತಂಪು ಪಾನೀಯದ ಮಾರಾಟ ಹೆಚ್ಚಿಸಲು ಪಾನೀಯದಲ್ಲಿ ಕ್ಯಾಡ್ಮಿಯಮನ್ನು ಬೆರೆಸಲು ನಿರ್ಧರಿಸಿದ. ಆದರೆ ತಂದೆ ರಾಮಚಂದ್ರಯ್ಯ ಒಪ್ಪಲಿಲ್ಲ. ತಂದೆಗೆ ತಿಳಿಯದಂತೆ ಪದ್ಮನಾಭ ಐಸ್‌ಕ್ರೀಂಗೆ ಬೆರೆಸಿ ಮಾರಾಟ ವೃದ್ಧಿಯಾಗುವಂತೆ ಮಾಡಿದ. ಆದರೆ ಒಂದು ದಿನ ಐವತ್ತೊಂಬತ್ತು ವರ್ಷದ ಮುದುಕ ಒಂದು ಬಾಟಲಿ ಕಿತ್ತಳೆ ಹಣ್ಣಿನ ರುಚಿಯ ಬಬ್ಲಿ ಕೋಲದ ಬಾಟಲಿಯನ್ನು ಮುಗಿಸಿ ಡರ್ರೆಂದು ತೇಗಿ ಏಳುವ ಮೊದಲು ಕುಸಿದು ಬಿದ್ದು ಸತ್ತ.

ಇದರಿಂದ ಚಿಂತಿತನಾದ ರಾಮಚಂದ್ರಯ್ಯ ತಮ್ಮ ಮೇಲೆ ಆರೋಪ ಬರಬಾರದೆಂದು ದೇವರಲ್ಲಿ ಹರಕೆ ಹೊತ್ತುಕೊಂಡ.

ಎರಡನೆಯ ತಲೆಮಾರಿನ 'ಅಭಿಚಾರ' ಆರಂಭವಾಗುವುದು ಹೆಣ್ಣು ಮಕ್ಕಳಿಂದ. ಮೊದಲ ತಲೆಮಾರಿನವರು ತಮ್ಮ ಮಕ್ಕಳು ವೈದ್ಯ ಅಥವ ಇಂಜಿನಿಯರ್‌ನನ್ನು ಮದುವೆಯಾಗಬೇಕೆಂದು ಬಯಸುತ್ತಾರೆ. ಆದರೆ ಲಕ್ಷ್ಮಿ ಮತ್ತು ಸರಸ್ವತಿಯರು ಅದಕ್ಕೆ ವಿರುದ್ಧವಾಗಿ ಭೀಮಸ್ವಾಮಿ ಮತ್ತು ಬಡವ ರಂಗಣ್ಣನನ್ನು ಆಯ್ಕೆ ಮಾಡುತ್ತಾರೆ. ಅವರಿಗೆ ಪ್ರೇಮಕ್ಕಿಂತ ಕಾಮವೇ ಮುಖ್ಯ. ಇಲ್ಲಿ ಸೀತಾಪತಯ್ಯ ಮತ್ತು ರಾಮಚಂದ್ರಯ್ಯನವರದು ಆರ್ಥಿಕ 'ಅಭಿಚಾರ'ವಾದರೆ ಹೆಣ್ಣುಮಕ್ಕಳದು ದೈಹಿಕ 'ಅಭಿಚಾರ'. ಮೊದಲ ತಲೆಮಾರಿನ ಆದರ್ಶಗಳನ್ನು ಧಿಕ್ಕರಿಸುವ ಪ್ರತಿರೋಧ ಎರಡನೆಯ ತಲೆಮಾರಿನಲ್ಲಿ ಕಾಣುತ್ತದೆ.

## ೪.೧೨: ಪರಮಾರ್ಥ

'ಪರಮಾರ್ಥ' ಇಪ್ಪತ್ತೊಂಬತ್ತು ಅಧ್ಯಾಯಗಳಿರುವ ಇನ್ನೂರ ಹನ್ನೆರಡು ಪುಟಗಳ ಕೆ.ಟಿ.ಗಟ್ಟಿಯವರ ಕಾದಂಬರಿ. ಈ ಕಾದಂಬರಿಯು ಆಧುನಿಕ ಬದುಕಿನ ಹಲವಾರು ಸಮಸ್ಯೆಗಳನ್ನು ಚಿತ್ರಿಸುತ್ತದೆ. 'ಪರಮಾರ್ಥ' ಎಂಬ ಪದಕ್ಕೆ ಶ್ರೇಷ್ಠವಾದ ಸತ್ಯ, ಮೋಕ್ಷ ತತ್ವ, ಪರ ತತ್ವ ಮುಂತಾದ ಅರ್ಥಗಳಿವೆ. ಕೆ.ಟಿ.ಗಟ್ಟಿಯವರು ಕಾದಂಬರಿಯ ಬೆನ್ನುಡಿಯಲ್ಲಿ ಕಾದಂಬರಿಯ ಬಗ್ಗೆ "ಮಧ್ಯಮ ವರ್ಗದ ಬಣ್ಣ ಬಣ್ಣದ ಪದರಗಳನ್ನು ಸರಿಸುತ್ತಾ ಹೋದಂತೆ, ತೆರೆದುಕೊಳ್ಳುವ ಪುಟ್ಟ ಪುಟ್ಟ ಲೋಕಗಳು ಒಂದೊಂದರಲ್ಲಿ ಒಂದೊಂದು ತೆರನಾದ ಬದುಕು. ಸಂಸಾರ ಸಾಗರದ ನಿಂತ ನೀರಿನಲ್ಲಿ ಹುಟ್ಟು ಕೆಟ್ಟ, ಚುಕ್ಕಾಣಿ ಕೆಟ್ಟ, ದಿಕ್ಕು ಕೆಟ್ಟ ನೌಕೆಗಳು, ವಿಹಾರ ನೌಕೆಗಳು; ಮಹತ್ವಾಕಾಂಕ್ಷೆಗಳ ಮರ್ಮರ ಸುಖದುಃಖಗಳ ಅವಿಶ್ರಾಂತ ಅಲೆಗಳು, ಬದುಕುಗಳ ಕ್ಷ ಕಿರಣ ಚಿತ್ರ, ಅದರಾಚೆಗಿನ ಅರ್ಥ" ಎಂದು ತಿಳಿಸುತ್ತಾರೆ.

ಕಾದಂಬರಿಗೆ ಬರೆದ ಮುನ್ನುಡಿಯಲ್ಲಿ ಹಿರಿಯ ಲೇಖಕರೊಬ್ಬರು ಹೇಳಿದ- ಸಮಾಜವನ್ನು ಸಾಹಿತ್ಯದ ಮೂಲಕ ತಿದ್ದುವೆನೆಂಬ ಹುಚ್ಚಿನಿಂದ ನನ್ನನ್ನು ನಾನು ಬಿಡಿಸಿಕೊಂಡೆ, ನನ್ನ ಕಾದಂಬರಿಗಳನ್ನು ಓದಿ ಯಾರೂ ಬದಲಾಗಲಿಲ್ಲ ಎಂಬ ಮಾತನ್ನು ವಿರೋಧಿಸುತ್ತಾರೆ. ಸಮಾಜವನ್ನು ತಿದ್ದುವೆನೆಂಬ ಹಟದಿಂದ ಸಾಹಿತ್ಯ

ಹುಟ್ಟಲಿಲ್ಲ ನಿಜ, ಆದರೆ ಹುಟ್ಟಬಾರದು ಎಂದಿಲ್ಲ. ಆ ಹಟದ ಹಿಂದೆ ಅಷ್ಟೇ ಅದ್ಭುತವಾದ ಪ್ರತಿಭೆಯಿದ್ದರೆ ಅದು ಸಾಧ್ಯವಾಗಬಹುದು. ಸಾಹಿತ್ಯದಿಂದ ಸಮಾಜದಲ್ಲಿ ಬದಲಾವಣೆ ಆಗುತ್ತದೆ ಎಂಬುದು ಕೂಡಾ ನಿಜ ಎನ್ನುತ್ತಾರೆ. ನೂರಾರು ಕೃತಿಗಳು ಶ್ರೇಷ್ಠ ಸಾಹಿತ್ಯವಾಗಿದ್ದು ಸಮಾಜ ಪರಿವರ್ತನೆಯಲ್ಲಿ ಗಮನೀಯ ಪಾತ್ರ ವಹಿಸಿವೆ. ಬುದ್ಧ, ವಿವೇಕಾನಂದ, ರಾಜಾರಾಮ ಮೋಹನರಾಯ್, ಗಾಂಧಿ, ಲೋಹಿಯ, ಅಂಬೇಡ್ಕರ್, ರೂಸೊ, ವಾಲ್ಟೈರ್ ಮುಂತಾದವರಿಲ್ಲದಿರುತ್ತಿದ್ದರೆ ಸಮಾಜ ಹೀಗಿರುತ್ತಿರಲಿಲ್ಲ. ಕನ್ನಡ ನೆಲದಲ್ಲಿ ಡಿ.ವಿ.ಜಿ., ಕೈಲಾಸಂ, ಕುವೆಂಪು, ಬೇಂದ್ರೆ, ಅ.ನ.ಕೃ, ಕಟ್ಟೀಮನಿ, ನಿರಂಜನ, ಕಾರಂತ ಮುಂತಾದವರಿಲ್ಲದಿರುತ್ತಿದ್ದರೆ ಕನ್ನಡ ನಾಡಿನ ಸಾಮಾಜಿಕ ಸ್ವರೂಪ ಬೇರೆಯೇ ಇರುತ್ತಿತ್ತು ಎಂದು ತಮ್ಮ ಅಭಿಪ್ರಾಯ ತಿಳಿಸುತ್ತಾರೆ. ಸಾಮಾಜಿಕ ಪರಿವರ್ತನೆಯನ್ನು ತಿಳಿಯಬೇಕಾದರೆ 50–100 ವರ್ಷಗಳ ಅವಧಿಯನ್ನು ತೆಗೆದುಕೊಂಡು ಪರಿಶೀಲಿಸಬೇಕು. ಸಾಹಿತ್ಯದ ಮೂಲಕ ಆಗುವ ಪರಿವರ್ತನೆ ಬಹಳ ಸೂಕ್ಷ್ಮವಾಗಿ ಆಗುವ ಪರಿವರ್ತನೆ.

"ಮನುಸ್ಮೃತಿಯಂತಹ ಕೀಳು ಚಿಂತನೆಯ ಅಮಾನವೀಯ ದಂಡ ಸಂಹಿತೆಯಲ್ಲಿ ಧರ್ಮವೂ ಇಲ್ಲ, ಸಾಹಿತ್ಯವೂ ಇಲ್ಲ. ನೂರಕ್ಕೆ ನೂರು ಶುದ್ಧ ಚಿಂತನೆ ಮತ್ತು ವಿಶಾಲ ದೃಷ್ಟಿಯುಳ್ಳ ಧರ್ಮ ಗ್ರಂಥವಿಲ್ಲ. ಬಹುತೇಕ ಎಲ್ಲ ಧರ್ಮ ಗ್ರಂಥಗಳೂ ಅನ್ಯ ಧರ್ಮಗಳ ಬಗ್ಗೆ ಅಸಹನೆಯನ್ನು ವ್ಯಕ್ತಪಡಿಸುತ್ತವೆ. ಯಾವ ನಿಯಮಗಳು, ಕಾನೂನುಗಳು ನೂರಾರು ವರ್ಷ ಹಿಂದಿನ ಪತ್ರಿಕೆ, ಸಿನಿಮಾ, ಟಿ.ವಿ., ಫ್ರಿಜ್, ಕಂಪ್ಯೂಟರ್, ರೈಲು, ಕಾರು, ವಿಮಾನ, ಗಗನಚುಂಬಿಗಳು ಇತ್ಯಾದಿ ಇಲ್ಲದ ಸಮಾಜಕ್ಕೆ ಸಂಬಂಧಿಸಿದವುಗಳಾಗಿದ್ದವೋ ಅವು ಇಂದಿನ ಸಮಾಜಕ್ಕೆ ಹೊಂದುವುದು ಅಸಾಧ್ಯ. ಇಂದಿಗೂ ಜಗತ್ತಿನ ಅತ್ಯುತ್ತಮ ಸಾಹಿತ್ಯ ಕೃತಿಗಳಲ್ಲಿ ಒಂದು ಎಂದು ಪರಿಗಣಿಸಲ್ಪಡುವ ರಾಮಾಯಣವನ್ನು ಒಂದು ಧಾರ್ಮಿಕ ಗ್ರಂಥವಾಗಿ, ಪರಮಾತ್ಮನ ಅವತಾರದ ಕಥೆಯಾಗಿ ಮಾಡಿದ್ದರಲ್ಲಿ ಬಹಳ ಕುಟಿಲತನ, ಮೋಸ ಇದೆ. ಜಗತ್ತಿನ ಬೇರೆ ಬೇರೆ ಯಾವ ಭಾಗಗಳಲ್ಲಿಯೂ ಇಂತಹ ಉದಾಹರಣೆ ಇಲ್ಲ. ಜನರನ್ನು ಈ ಬಗೆಯ ಭಕ್ತರನ್ನಾಗಿಸಿ, ಭಯಗ್ರಸ್ತರನ್ನಾಗಿ ಮಾಡಿದ್ದರಿಂದ ಪ್ರಯೋಜನವಾಗುವುದು ಅಧಿಕಾರಶಾಹಿಗೆ. ಈ ತೆರನ ಧರ್ಮವು ಭಯವನ್ನು, ದಾಸ್ಯ ಭಾವನೆಯನ್ನು ಪೋಷಿಸುತ್ತದೆ. ಧರ್ಮ ಸಾಮಾನ್ಯ ಮನುಷ್ಯರನ್ನು ದೇವರು ಮಾಡಿ ಅವನನ್ನು ನಮ್ಮಿಂದ ದೂರ ಒಯ್ಯುತ್ತದೆ. ಸಾಹಿತ್ಯ ದೇವರನ್ನು ಮನುಷ್ಯರನ್ನಾಗಿ ಮಾಡಿ ನಮ್ಮ ಹತ್ತಿರಕ್ಕೆ ತರುತ್ತದೆ". ಹೀಗೆ ಕೆ.ಟಿ.ಗಟ್ಟಿಯವರು ಕಾದಂಬರಿಯ ಮುನ್ನುಡಿಯಲ್ಲಿ ವೈಚಾರಿಕ

**(ಪರಮಾರ್ಥ, 1989, ಪುಟ VI)**

ಚಿಂತನೆಯನ್ನು ನಡೆಸುತ್ತಾರೆ. ಅಧಿಕಾರಶಾಹಿಗಳು ಧರ್ಮ, ದೇವರನ್ನು ಕೈಗೊಂಬೆಯನ್ನಾಗಿ ಮಾಡಿಕೊಂಡು ತಮ್ಮ ಕೆಲಸ ಸಾಧಿಸಿಕೊಳ್ಳುವ ಪರಿಯನ್ನು ವಿರೋಧಿಸುತ್ತಾರೆ. "ಸುಮಾರು ಮೂವತ್ತು-ನಲುವತ್ತು ವರ್ಷಗಳ ಹಿಂದೆ ಬಹಳ ಜನ ಮಠದ ಸ್ವಾಮಿಗಳ ಕಾಲು ತೊಳೆದು ಆ ನೀರನ್ನು ತಮ್ಮ ತಲೆಯ ಮೇಲೆ ಹಾಕಿಕೊಳ್ಳುತ್ತಿದ್ದರು. ಈಗ ಅಂಥ ಮೂಢರ ಸಂಖ್ಯೆ ಇಲ್ಲವೇ ಇಲ್ಲವೆನ್ನುವಷ್ಟು ಕಡಿಮೆಯಾಗಿದೆ. ಕಾವಿ ಕಂಡಲ್ಲಿ ಧಡಲ್ಲೆಂದು ನೆಲದ ಮೇಲೆ ಬೀಳುವ ಜನಗಳ ಸಂಖ್ಯೆ ಕೂಡಾ ಕಡಿಮೆಯಾಗಿದೆ. ಈಗ ಮಾರ್ಜಾಲ ಸನ್ಯಾಸಿಗಳನ್ನು, ಮೂರ್ಖ ಶಿಖಾಮಣಿಗಳಾದ ಮಠದ ಸ್ವಾಮಿಗಳನ್ನು ಪ್ರಶ್ನಿಸುವ ಧೈರ್ಯ ಜನಕ್ಕೆ ಬಂದಿದೆ" ಎನ್ನುತ್ತಾರೆ. ಇವರ ಹೆಚ್ಚಿನ ಕೃತಿಗಳಲ್ಲಿರುವ ಮುನ್ನುಡಿಗಳಂತೆ ಈ ಕಾದಂಬರಿಯ ಮುನ್ನುಡಿಯೂ ವೈಚಾರಿಕತೆಯಿಂದ ಕೂಡಿದೆ. ಸಮಾಜದಲ್ಲಿನ ಢಂಬಾಚಾರಗಳನ್ನು ವಿರೋಧಿಸುತ್ತದೆ.

ಕಾದಂಬರಿ ಆರಂಭವಾಗುವುದು ಸಮಾನ ವಯಸ್ಸಿನ ಮಿತ್ರರಾದ ಕಮಲಾಕ್ಷ, ದಿವಾಕರ ಹಾಗೂ ಉಮಾನಾಥ ಇವರ ಮಾತುಕತೆಯಿಂದ. ಈ ಮೂವರೂ ಹೋಟೆಲೊಂದರಲ್ಲಿ ಮದ್ಯಪಾನ ಮಾಡುತ್ತಾ ತಮ್ಮ ಕುಟುಂಬದ ಸುಖ-ದುಃಖ, ನೋವು ನಲಿವುಗಳ ಕುರಿತಾಗಿ ಮಾತನಾಡುತ್ತಿರುತ್ತಾರೆ. ಕಮಲಾಕ್ಷ ಸಿ.ಎ. ಮಾಡಿ ಚಾರ್ಟರ್ಡ್ ಎಕೌಂಟೆಂಟ್ ಆಗಿದ್ದಾನೆ. ಆತನ ಪತ್ನಿ ಜಯಂತಿ ಬ್ಯಾಂಕ್‌ನಲ್ಲಿ ಕೆಲಸ ಮಾಡುತ್ತಾಳೆ. ದಿವಾಕರ ಬ್ಯಾಂಕೊಂದರ ಆಫೀಸರ್, ಡೌರಿ ತೆಗೆದುಕೊಂಡು ಮದುವೆಯಾಗಿದ್ದಾನೆ. ಅದಕ್ಕಾಗಿ ಪ್ರತೀ ದಿನ ಹೆಂಡತಿಯಿಂದ ಮೂದಲಿಕೆಗೆ ಒಳಗಾಗುತ್ತಾನೆ. ಆಕೆಗೆ ಗರ್ವ ಹೆಚ್ಚು. ಮೂರು ಮಕ್ಕಳಿದ್ದಾರೆ. ಉಮಾನಾಥ ಬಿ.ಎ. ಮುಗಿಸಿ ತಾಲೂಕು ಆಫೀಸಿನಲ್ಲಿ ಗುಮಾಸ್ತನಾಗಿ ಕೆಲಸಕ್ಕೆ ಸೇರಿ ಈಗ ಡೆಪ್ಯುಟಿ ತಹಶೀಲ್ದಾರನಾಗಿದ್ದಾನೆ. ಹೆಂಡತಿ ಸುಮತಿ ಸಹಕಾರಿ ಬ್ಯಾಂಕಿನಲ್ಲಿ ಅಸಿಸ್ಟೆಂಟ್ ಮ್ಯಾನೇಜರ್ ಕೆಲಸ ಮಾಡುತ್ತಾಳೆ. ಇವರಿಗೆ ಒಬ್ಬನೇ ಮಗ. ಈ ಮೂವರೂ ತಮ್ಮ ಮಡದಿಯರ ಕಿರುಕುಳದಿಂದ ಬೇಸತ್ತು ಹೋಗಿದ್ದಾರೆ. ಅದಕ್ಕಾಗಿ ಒಟ್ಟಾಗಿ ಮದ್ಯ ಸೇವಿಸುತ್ತಾರೆ. ಕಮಲಾಕ್ಷ ಹೇಳುವಂತೆ " ಹೆಂಗಸರು ಏನಿದ್ದರೂ ಬುದ್ಧಿಗೇಡಿಗಳು. ಅವರು ತಮ್ಮದೇ ಆದ ಮತ್ತು ನಮ್ಮಿಂದ ಅರ್ಥಮಾಡಿಕೊಳ್ಳಲಾಗದ ಪ್ರಪಂಚದಲ್ಲಿ ಅವರದೇ ಆದ ಭ್ರಮೆಗಳಲ್ಲಿ ಮುಳುಗಿದ್ದು ತಾವೂ ಸುಖ ಪಡುವುದಿಲ್ಲ, ನಮ್ಮನ್ನು ನೆಮ್ಮದಿಯಿಂದ ಇರಲೂ ಬಿಡುವುದಿಲ್ಲ". ಗೆಳೆಯರ ಮಾತುಗಳನ್ನೆಲ್ಲಾ ಕೇಳುತ್ತಾ

**(ಅದೇ, ಪುಟ 18)**

ಉಮಾನಾಥ ಯೋಚಿಸುತ್ತಾನೆ "ಹೊರಗೆ ಒಬ್ಬರಿನ್ನೊಬ್ಬರ ಕೈ ಕುಲುಕಿ ಮಾತನಾಡುವಾಗ ತಾವು ಸಂತೋಷದಲ್ಲಿದ್ದೇವೆ, ಈ ಪ್ರಪಂಚ ತಮ್ಮದು ಎಂದು ತೋರಿಸಿಕೊಳ್ಳುತ್ತಾರೆ

ಗಂಡಸರು. ನಿಜವಾದ ರಾಜ್ಯಭಾರ ಹೆಂಗಸರದೇ. ಗಂಡ ಲಂಚಕ್ಕೆ ಕೈ ನೀಡುತ್ತಾನೆ: ಕಾರಣ ಮನೆಯಲ್ಲಿರುವ ಹೆಂಗಸು! ಗಂಡ ಭ್ರಷ್ಟ; ಕಾರಣ, ಹೆಂಗಸು! ಗಂಡ ಕುಡೀತಾನೆ; ಕಾರಣ, ಹೆಂಗಸು! ಅಷ್ಟೇ ಏಕೆ ಗಂಡ ಬೇರೆ ಹೆಣ್ಣಿನ ಹಿಂದೆ ಹೋಗ್ತಾನೆ; ಕಾರಣ ಮನೆಯಲ್ಲಿರುವ ಹೆಂಗಸು; ಗಂಡನೊಡನೆ ಮಲಗುವ ತನ್ನ ಬಯಕೆಯನ್ನು ಅವಳು ವರ್ಷಗಟ್ಟಲೆ ತಡೆದುಕೊಳ್ಳಬಲ್ಲಳು. ಆದರೆ ಟಿ.ವಿ. ಫ್ರಿಜ್ ಬೇಕೆಂಬ ಬಯಕೆಯನ್ನು ಹಾಗೆ ತಡೆದುಕೊಳ್ಳಲಾರಳು. ಮದುವೆಯಾದ ದಿನದಿಂದ ಗಂಡು ಸ್ವಲ್ಪ ಸ್ವಲ್ಪವೇ ಹೆಣ್ಣಾಗ್ತಾ ಹೋಗ್ತಾನೆ. ಆದರೆ ಹೆಣ್ಣು ಹೆಣ್ಣಾಗಿಯೇ ಉಳಿದುಕೊಂಡು ಅದಕ್ಕೆ ಗಂಡಸುತನವನ್ನು ಸೇರಿಸುತ್ತಾ ಇರುತ್ತಾಳೆ".

**(ಅದೇ, ಪುಟ 21)**

ತಾಲೂಕು ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದ ಉಮಾನಾಥ ಸುಮತಿಯನ್ನು ಮದುವೆಯಾಗಿ ಹನ್ನೆರಡು ವರ್ಷ ಬಾಡಿಗೆ ಮನೆಯಲ್ಲಿ ಸಂಸಾರ ಸಾಗಿಸಿ ಹೆಂಡತಿಯ ಆಸೆಯಂತೆ ಬ್ಯಾಂಕಿನಲ್ಲಿ ಸಾಲ ಮಾಡಿ ಸ್ವಂತ ಮನೆ ಕಟ್ಟಿಸುತ್ತಾನೆ. ಸುಮತಿಗೆ ತನ್ನ ಒಬ್ಬನೇ ಮಗನನ್ನು ಡಾಕ್ಟರ್ ಮಾಡಬೇಕು ಎಂಬ ಆಸೆ. ಉಮಾನಾಥ ತಡವಾಗಿ ಬಂದಾಗ ಆತ ಕುಡಿದಿಲ್ಲವೆಂದು ಖಾತ್ರಿ ಪಡಿಸಿಕೊಂಡು ಸಮಾಧಾನ ಪಟ್ಟುಕೊಳ್ಳುತ್ತಾಳೆ. ಆಕೆಗೆ ತಾನು ಕೆಲಸ ಮಾಡುತ್ತಿರುವ ಬ್ಯಾಂಕಿನ ಮ್ಯಾನೇಜರ್ ಆಗಬೇಕೆಂಬಾಸೆ. ಅದಕ್ಕಾಗಿ ಬ್ಯಾಂಕಿನ ಚೇರ್‌ಮೆನ್ ಮುಕುಂದರಾಯರ ಬಳಿಯೂ ತನ್ನ ಮನಸ್ಸಿನ ಇಂಗಿತವನ್ನು ತಿಳಿಸುತ್ತಾಳೆ. ಅದರಂತೆ ಕೆಲವು ದಿನಗಳ ಬಳಿಕ ಆಕೆಗೆ ತಾತ್ಕಾಲಿಕವಾಗಿ ಮ್ಯಾನೇಜರ್ ಹುದ್ದೆಯೂ ಲಭಿಸುತ್ತದೆ. ಆರಂಭದಲ್ಲಿ ಕುಡಿತದಿಂದ ದೂರವಿದ್ದ ಉಮಾನಾಥ ತನ್ನ ಗೆಳೆಯರ ಒತ್ತಾಯಕ್ಕೆ ಮಣಿದು ಮದ್ಯಪಾನ ಮಾಡುತ್ತಾನೆ. ಕುಡಿತದ ಮತ್ತಿನಲ್ಲಿ ತನ್ನ ಹೆಂಡತಿಯ ಬಗೆಗಿನ ಅಸಮಾಧಾನ ಹೊರಕ್ಕೆ ಬರುತ್ತದೆ. ತನ್ನ ಹೆಂಡತಿಯ ಸರ್ವಾಧಿಕಾರಿ ಧೋರಣೆಯ ಬಗ್ಗೆ ಆತನಿಗೆ ತಿರಸ್ಕಾರವಿದೆ. "ಗಂಡ ಹೆಂಡತಿ ಬೇರೆ ಬೇರೆ ಜೀವಿಸಬೇಕು. ಬೇರೆ ಬೇರೆ ಮನೆಗಳಲ್ಲಿ. ಅವನ ಸಂಪಾದನೆ ಅವನದು, ಅವಳ ಸಂಪಾದನೆ ಅವಳದು. ಅವನ ಅಡುಗೆ ಪಿಡುಗೆ ಎಲ್ಲಾ ಕೆಲಸಗಳನ್ನು ಅವನೇ ಮಾಡಿಕೊಳ್ಳಬೇಕು. ಅವಳ ಅಡುಗೆ ಪಿಡುಗೆ ಎಲ್ಲಾ ಕೆಲಸವನ್ನೂ ಅವಳೇ ಮಾಡಿಕೊಳ್ಳಬೇಕು" ಎನ್ನುತ್ತಾನೆ. ತನ್ನ ಹೆಂಡತಿಯ ಮೇಲೆ ಪ್ರತೀಕಾರ

**(ಅದೇ, ಪುಟ 69)**

ತೀರಿಸಿಕೊಳ್ಳಬೇಕೆಂದು ಕುಡಿದು ಬಂದ ಉಮಾನಾಥನಿಗೆ ಪತ್ನಿಯಿಂದ ತಕ್ಕ ಶಾಸ್ತಿ ಆಗುತ್ತದೆ. "ಗಂಡಸರ ಹಣೆಬರಹವೇ ಇಷ್ಟು! ಒಂದಲ್ಲ ಒಂದು ದಿನ ಈ ಹೊಂಡಕ್ಕೆ ಬಿದ್ದೇ ಬೀಳುವರು! ಇಷ್ಟು ದಿವಸ ತಡಕೊಂಡಿರಿ. ಈವತ್ತು ನಿಮ್ಮ ತಲೆ ಕೆಟ್ಟು

ಹೋಯಿತು. ಈವತ್ತು ಇದಾಯ್ತು ಇನ್ನು ಯಾರಾದರೊಬ್ಬಳು ಬಜಾರಿ ಕರೆದರೆ ಅಲ್ಲಿ ಹೋಗಿ ಬೀಳ್ತೀರಿ! ನಾಚಿಕೆಯಿಲ್ಲ ಈ ಗಂಡಸರಿಗೆ! ನಾಳೆ ನಿಮ್ಮ ಮಗನಿಗೆ ಇಂಥವ ಅಪ್ಪ ಅಂತ ಗೊತ್ತಾದ್ರೆ ಏನೆಂದುಕೊಳ್ಳುತ್ತಾನೆ!" ಪತ್ನಿಯ ಈ ಮಾತುಗಳು ಉಮಾನಾಥನಿಗೆ

**(ಅದೇ, ಪುಟ 74)**

ಒಂದು ಕ್ಷಣ ನಿಜ ಅನ್ನಿಸುತ್ತದೆ. ಆಕೆಯನ್ನು ಮದುವೆಯಾಗಿ ಹದಿನೆಂಟು ವರ್ಷವಾಗಿ ಆಕೆಯಲ್ಲಿ ಆತ ಗಮನಿಸಿದ್ದು ಬಿಂಕ ಹಮ್ಮು ಮಾತ್ರ. ಆತನ ಪ್ರಕಾರ ಗಂಡನಿಗಿಂತ ಹೆಚ್ಚು ಸಂಬಳದ ಉದ್ಯೋಗದಲ್ಲಿರುವ ಹೆಂಡತಿಯನ್ನು ಪಡೆದಿರುವ ಗಂಡನ ಪಾಡು ನಾಯಿ ಪಾಡು. ಗಂಡಸಾದವನಿಗೆ ಆಗಬಾರದ್ದು ಎಂಬ ಅಭಿಪ್ರಾಯವಿದೆ. ಪತ್ನಿ ಸುಮತಿ ಬ್ಯಾಂಕಿನಲ್ಲಿ, ನೆರೆಹೊರೆಯವರೊಡನೆ, ಹೊರಗಿನ ಜನಗಳೊಡನೆ ನಗು ನಗುತ್ತಾ ಮಾತನಾಡುತ್ತಿದ್ದಳು. ಇದನ್ನು ಗಮನಿಸಿದ ಉಮಾನಾಥ ಯೋಚಿಸುತ್ತಿದ್ದ "ಗಂಡ ಹೆಂಡತಿಯ ಸಂಬಂಧ ಇಷ್ಟೇನೇ? ಇದರಲ್ಲೇನೋ ತಪ್ಪು ಇದೆ. ಇದು ಹೀಗಿರಬೇಕಾದುದಲ್ಲ. ಇದರಿಂದ ಬಿಡಿಸಿಕೊಳ್ಳಬೇಕು, ಈ ಮೃಗೀಯತೆಯನ್ನು ಸಾಧ್ಯವಿರುವಷ್ಟು ಕಳಚಿಕೊಂಡು ಮನುಷ್ಯನಾಗಬೇಕು. ಕತ್ತಲಲ್ಲಿ ಒಂದು ಸ್ವರೂಪ ಬೆಳಕಿನಲ್ಲಿನ್ನೊಂದು ಸ್ವರೂಪ ಪಡೆಯುವ ಮನಸ್ಸಿಗೆ ಬದಲಾಗದ ಒಂದು ನಿಶ್ಚಿತ ರೂಪವನ್ನು ಕೊಟ್ಟುಕೊಳ್ಳಬೇಕು." ಆಫೀಸಿನ ಕಾಗದ ಪತ್ರ ಕಳೆದು ಹೋದ ವಿಷಯದಲ್ಲಿ

**(ಅದೇ, ಪುಟ 91)**

ಸುಮತಿ ಹಾಗೂ ಉಮಾನಾಥನಿಗೆ ವಾಗ್ವಾದ ನಡೆಯಿತು. ಹೆಂಡತಿಯ ಮೇಲಿನ ಸಿಟ್ಟಿನಿಂದ ಉಮಾನಾಥ ಬೇರೆಡೆ ತಾನೊಬ್ಬನೇ ಬಾಡಿಗೆ ಕೋಣೆಯೊಂದನ್ನು ಪಡೆದು ಅಲ್ಲಿಯೇ ಇರಲಾರಂಭಿಸಿದ. ಆತನಿಗೆ ತನ್ನದೇ ಸ್ಥಿತಿಯಲ್ಲಿದ್ದ ಲೋಬೋ ಎಂಬಾತನ ಪರಿಚಯವಾಗಿತ್ತು. ಆತನ ಕೋರಿಕೆಯಂತೆ ಉಮಾನಾಥ ಮೇರಿ ಎಂಬಾಕೆಯ ಬಳಿಗೆ ಆತ ನೀಡಿದ ಐನೂರು ರೂಪಾಯಿ ಕೊಡಲು ಹೋಗುತ್ತಾನೆ. ಅಲ್ಲಿ ಮೇರಿ ಆತನೊಂದಿಗೆ ಸೇರಲು ಬಯಸಿದರೂ ಆತನ ಮನಸ್ಸು ಒಪ್ಪುವುದಿಲ್ಲ. ಕಷ್ಟಪಟ್ಟು ತನ್ನ ಮಗನನ್ನು ಡಾಕ್ಟರ್ ಓದಿಸುತ್ತಿದ್ದ ಆಕೆಯ ಮನಸ್ಸು ತನ್ನ ಪತ್ನಿಯ ಮನಸ್ಸಿಗಿಂತಲೂ ಸುಂದರವಾಗಿದೆಯೆಂದು ಅನ್ನಿಸುತ್ತದೆ.

ಅನೇಕ ದಿನ ಮನೆ ಬಿಟ್ಟು ಹೊರಗೆ ವಾಸಿಸುತ್ತಿದ್ದ ಉಮಾನಾಥ ಮಗನ ಪಿ.ಯು.ಸಿ. ಫಲಿತಾಂಶ ಬಂದಾಗ ಮನೆಗೆ ಬಂದು ಹೆಂಡತಿಯೊಂದಿಗೆ ಒಂದು ದಿನವಿದ್ದು ಹೋಗಿದ್ದ. ಪತ್ನಿ ತನ್ನ ಬಗ್ಗೆ ಯಾವುದೇ ಪ್ರಶ್ನೆ ಕೇಳಲಿಲ್ಲ. ಮಗ ಚಿದಾನಂದ ಪತ್ನಿ ತರಿಸಿದ ಟಿ.ವಿ.ಯಿಂದಾಗಿ ಓದಿನಲ್ಲಿ ಹಿಂದೆ ಬಿದ್ದಿದ್ದ. ಮನೆಯ ಹೊರಗೆ ಒಂಟಿಯಾಗಿ ಮೂರು ನಾಲ್ಕು ತಿಂಗಳು ಜೀವಿಸತೊಡಗಿದ ಉಮಾನಾಥನಿಗೆ ಏಕತಾನತೆ

ಮೂಡಲಾರಂಭಿಸಿತ್ತು. ನಂತರ ತಿಂಗಳಿಗೆ ಮೂರು ನಾಲ್ಕು ಬಾರಿ ಮನೆಗೆ ಬಂದು ಹೋಗಲಾರಂಭಿಸಿದ. ಬ್ಯಾಂಕಿನ ಜವಾಬ್ದಾರಿ ಹೊತ್ತ ಸುಮತಿಗೆ ಉಮಾನಾಥ ಸೃಷ್ಟಿಸಿದ ಈ ವ್ಯವಸ್ಥೆ ಆಕರ್ಷಕವಾಗಿಯೇ ತೋರಿತ್ತು. ಆಕೆ ವಿರೋಧಿಸುತ್ತಿರಲಿಲ್ಲ. ಆತನಾಗಿಯೇ ಬರಬೇಕು, ಅವನೇ ಮಾಡಿಕೊಂಡ ಏರ್ಪಾಡು ಅವನೇ ಮುರಿಯಲಿ ಎಂದು ತೀರ್ಮಾನಿಸಿಬಿಟ್ಟಿದ್ದಳು. ಆದರೆ ಸುಮತಿಯನ್ನು ಬ್ಯಾಂಕ್ ಮ್ಯಾನೇಜರ್ ಸ್ಥಾನದಿಂದ ಹಿಂದಕ್ಕೆ ಕರೆಸಿಕೊಂಡಿದ್ದರು. ಆ ಸಂದರ್ಭದಲ್ಲಿ ಉಮಾನಾಥನಿಗೆ ಆಕೆಯಲ್ಲಿ ಅದ್ಭುತವಾದ ಬದಲಾವಣೆ ಕಾಣಿಸಿತು. ತಾನು ಗೆಲ್ಲುತ್ತಿದ್ದೇನೆ ಎಂದು ಉಮಾನಾಥನಿಗೆ ಅನ್ನಿಸಿತು. ಮರುದಿನ ಬೆಳಿಗ್ಗೆ ಪತ್ನಿ ಫೋನ್ ಮಾಡಿ ಮನೆಗೆ ಬರುವಂತೆ ಕೇಳಿಕೊಳ್ಳುತ್ತಾಳೆ. ಆಕೆ ಮತ್ತೆ ಗರ್ಭಿಣಿಯಾಗಿದ್ದಳು. ಹೆಂಡತಿಯ ಶೀಲದ ಬಗ್ಗೆ ಸಂದೇಹ ವ್ಯಕ್ತಪಡಿಸಿದಾಗ ತಾನು ಅಂಥವಳಲ್ಲವೆಂದು ಗಂಡನ ಕಾಲು ಹಿಡಿದು ಅಳುತ್ತಾಳೆ. ನೀವು ಹೇಳಿದ ಹಾಗೆ ಇರುತ್ತೇನೆ. ನೀವು ಇಲ್ಲಿಯೇ ಬಂದು ಇರಬೇಕು ಎನ್ನುತ್ತಾಳೆ.

ಕಮಲಾಕ್ಷ ಜಯಂತಿಯರ ಸಂಬಂಧದಲ್ಲಿಯೂ ಏನೂ ವಿಶೇಷತೆ ಇರಲಿಲ್ಲ. ಜಯಂತಿ ಕೇವಲ ತಿನ್ನುವುದು ದೇಹ ಬೆಳೆಸಿಕೊಳ್ಳುವುದು ಮಾಡುತ್ತಿದ್ದಳು. ಕಮಲಾಕ್ಷನಿಗೆ ಆಕೆಯ ಬಗ್ಗೆ ಹೆಚ್ಚು ಆಸಕ್ತಿ ಇರಲಿಲ್ಲ. ಸುಮತಿ ದೇಹದ ಅತಿಯಾದ ಕೊಬ್ಬನ್ನು ಆಪರೇಷನ್ ಮಾಡಿಸಿ ತೆಗೆಸಿದ್ದಳು. ಹಾಗಾಗಿ ಆಕೆಗೆ ಮಲಗಿದ್ದಲ್ಲಿಂದ ಎದ್ದು ಓಡಾಡುವುದು ಸಾಧ್ಯವಾಗುತ್ತಿರಲಿಲ್ಲ. ಈ ಸಂದರ್ಭವನ್ನು ಬಳಸಿಕೊಂಡ ಕಮಲಾಕ್ಷ ಕೆಲಸದಾಕೆ ಸುಂದರಿಯೊಂದಿಗೆ ಲೈಂಗಿಕ ಸಂಬಂಧ ಇಟ್ಟುಕೊಳ್ಳಲಾರಂಭಿಸಿದ. ಇದು ಬೊಜ್ಜು ದೇಹದ ಹೆಂಡತಿಯ ವಿರುದ್ಧ ಆತ ವ್ಯಕ್ತಪಡಿಸುವ ಪ್ರತಿರೋಧ. ಸುಮತಿಗೆ ಈ ಬಗ್ಗೆ ಅನುಮಾನ ಬಂದರೂ ಏನೂ ಮಾಡಲಾರದ ಸ್ಥಿತಿಯಲ್ಲಿದ್ದಳು. ಸುಂದರಿ ತನ್ನಿಂದ ಗರ್ಭಿಣಿಯಾಗಿರುವ ಸುದ್ದಿ ತಿಳಿದಾಗ ಕಮಲಾಕ್ಷ ಚಡಪಡಿಸುತ್ತಾನೆ. ಆದರೆ ಜಯಂತಿಗೆ ಈ ವಿಷಯ ತಿಳಿದು ತಾನೇ ಆ ಸಮಸ್ಯೆಯನ್ನು ಬಗೆಹರಿಸುತ್ತಾಳೆ. ವರದಕ್ಷಿಣೆಯ ಕಾರಣದಿಂದಾಗಿ ಗಂಡನಿಂದ ದೂರವಾಗಿದ್ದ ಸುಂದರಿಗೆ ಸ್ವಲ್ಪ ಹಣ ಕೊಟ್ಟು ಆಕೆಯ ಗಂಡನ ಮನೆಗೆ ಕಳುಹಿಸುತ್ತಾಳೆ. ಹೋಟೆಲ್‌ನಲ್ಲಿ ಮದ್ಯಪಾನ ಮಾಡುತ್ತಿದ್ದಾಗ ಕಮಲಾಕ್ಷನಿಗೆ ಮೈಲ್ಡ್ ಸ್ಟ್ರೋಕ್ ಆಯಿತು. ಪತ್ನಿಯಿಂದ ಸಮಾಧಾನದ ಮಾತುಗಳನ್ನು ಕೇಳಬೇಕಾಗಿ ಬಂತು. ಹೆಂಡತಿ ಆತನ ಬಗ್ಗೆ ಕಾಳಜಿ ವಹಿಸಲಾರಂಭಿಸುತ್ತಾಳೆ.

ದಿವಾಕರನ ಪತ್ನಿ ಪರಿಮಳ ತನ್ನ ಪತಿಯೊಂದಿಗೆ ತನ್ನ ಅಣ್ಣನ ಮಗ ಡಾಕ್ಟರ್ ಓದಿದ್ದಾನೆ ಎಂಬ ಕಾರಣದಿಂದ ಅವನನ್ನು ತಮ್ಮ ಮಗಳೊಂದಿಗೆ ಮದುವೆ ಮಾಡಿಸುವ ಪ್ರಸ್ತಾಪ ಎತ್ತುತ್ತಾಳೆ. ಆದರೆ ಆತನಿಗೆ ಕೊಡಬೇಕಾದಷ್ಟು ವರದಕ್ಷಿಣೆಯ ಹಣ ತಮ್ಮಲ್ಲಿಲ್ಲವೆಂದು ಇಬ್ಬರಿಗೂ ತಿಳಿದಿದೆ. ದಿವಾಕರನಿಗೆ ತಮ್ಮ ಜಾತಿಯಲ್ಲಿನ ವರದಕ್ಷಿಣೆ ಪದ್ಧತಿಯ ಬಗ್ಗೆ ಆಕ್ರೋಶ ಇದೆ. ತನ್ನ ಮಗಳನ್ನು ತನ್ನ ಪತ್ನಿಯ ಅಕ್ಕನ ಮಗನು ಮದುವೆಯಾಗಲು ಐದು ಲಕ್ಷ ವರದಕ್ಷಿಣೆ ಕೇಳುತ್ತಾನೆ. ಐವತ್ತು ಲಕ್ಷ ಮತ್ತು ಬೊಗ್ಗಿಯನ್ನು ಕರೆದುಕೊಂಡು ಬಂದರೆ ಆತ ಖಂಡಿತವಾಗಿಯೂ ಬೊಗ್ಗಿಗೆ ತಾಳಿ ಕಟ್ಟುತ್ತಾನೆ ಎನ್ನುತ್ತಾನೆ. ದಿವಾಕರ ಹೇಳುವಂತೆ "ಈ ಹೆಂಗಸರ ಬಾಯಿಂದ ಬಚಾವಿಲ್ಲ. ನಾವು ಅವರನ್ನು ತೃಪ್ತಿಪಡಿಸಲಿಕ್ಕೆ ಬೇಕಾಗಿ ಏನೆಲ್ಲ ಕುಸ್ತಿ ಮಾಡ್ಬೇಕು. ಸಾಧ್ಯವಾದರೆ ಯಾರ್‍ಯಾರ ತಲೆ ಒಡೆದು ಹಣ ತಂದರೂ ಆದೀತು. ಮನೆ ಕಟ್ಟಬೇಕು, ಕಾರು ತೆಗೀಬೇಕು. ಐದು ಲಕ್ಷ ಖರ್ಚು ಮಾಡಿ ಮದುವೆ ಎಬ್ಬಿಸಬೇಕು. ಇಲ್ಲದಿದ್ದರೆ ಮರ್ಯಾದೆ ಇಲ್ಲ. ಇಷ್ಟೆಲ್ಲ ಮಾಡಿದ ಮೇಲೂ ಹೆಂಡತಿ ಕಳ್ಳ ಅಂತ ಕರೆದರೆ ಕೇಳಿಸಿಕೊಳ್ಳಬೇಕು ಅಥವಾ ಕಣ್ಣಿನಲ್ಲೇ ಸೂಚಿಸಿದರೆ ತಲೆ ತಗ್ಗಿಸಿ ಒಪ್ಪಿಕೊಳ್ಳಬೇಕು"

**(ಅದೇ, ಪುಟ 135)**

ಎಂದು ಹೆಣ್ಣು ಗಂಡಿನ ಮೇಲೆ ತೋರುವ ತನ್ನ ಪೌರುಷವನ್ನು ಮನದಲ್ಲೇ ವಿರೋಧಿಸುತ್ತಾನೆ. ತಂದೆ ತಾಯಿ ತಮ್ಮ ಹೆಣ್ಣು ಮಕ್ಕಳಿಗೆ ಗಂಡು ಹುಡುಕುತ್ತಾರೆ. ವರದಕ್ಷಿಣೆಯ ಮೊತ್ತವನ್ನು ಕಿವಿಯಿಂದ ಕೇಳಿದ್ದೇ ಕುಸಿದು ಕೂರುತ್ತಾರೆ. ಅದನ್ನು ಕಾಣುತ್ತಾ, ಕಾಣುತ್ತಾ ಬೇಸತ್ತ ಬಡ ಹುಡುಗಿಯರು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ ಎಂದು ಉಮಾನಾಥ ಯೋಚಿಸುತ್ತಾನೆ. "ಜನ ಯಾರ್‍ಯಾರ ರಕ್ತ ಹೀರಿ, ಯಾರ್‍ಯಾರ ತಲೆ ಒಡೆದು ತಮ್ಮ ಹೆಂಡತಿಗೆ ಚಿನ್ನ ಮಾಡಿಸುತ್ತಾರೆ. ಅವಳು ಕೇಳಿದ್ದು ಕೇಳಿದ್ದನ್ನೆಲ್ಲಾ ಅವರ ಮುಂದೆ ತಂದು ಹಾಕುತ್ತಾರೆ. ಯಾಕೆ? ಅವಳ ಒಂದು ಮಿನಿಟಿನ ಸೇವೆಗಾಗಿಯಲ್ಲದೆ ಬೇರೆಯಾವುದಕ್ಕೂ ಅಲ್ಲ ಅಂತ ಅನಿಸುತ್ತದೆ ನನಗೆ. ಆಯ್ತು ಅಷ್ಟೆಲ್ಲ ಮಾಡಿದರೂ ಅವಳು ಅವನಿಗೆ ಕೊಡುವ ಮರ್ಯಾದೆ ಎಂಥದು? ಅವಳ ಹೃದಯದ ಒಳಗೆ ನೀಚ! ಯಾರಿಗೆಲ್ಲ ಮೋಸ ಮಾಡಿ ತಂದಿದ್ದಿ! ಎನ್ನುವ ಭಾವನೆ ಇದ್ದೇ ಇರುತ್ತದೆ" ಎಂದು

**(ಅದೇ, ಪುಟ 137)**

ಪತ್ನಿಯ ಆಂತರ್ಯವನ್ನು ಶೋಧಿಸುತ್ತಾನೆ.

ತನ್ನ ಹೆಂಡತಿಯಿಂದ ದೂರವಾಗಬಯಸಿದ್ದ ದಿವಾಕರನಿಗೆ ಬೇರೆ ಊರಿಗೆ ವರ್ಗವಾದಾಗ ಸಂಭ್ರಮಿಸುತ್ತಾನೆ. ಮಗಳು ಜನನಿ ಬಿ.ಕಾಂ. ಓದಿದ ದಯಾನಂದನನ್ನು ಪ್ರೀತಿಸುತ್ತಿರುತ್ತಾಳೆ. ಅದರೆ ಜನನಿಗೆ ಈ ಬಗ್ಗೆ ಭಯವಿದೆ. "ಯುವಕರಲ್ಲಿ ಯಾರ ಹತ್ರ

ಕೇಳಿದ್ರೂ ಎಲ್ಲರೂ ಸಾಂಪ್ರದಾಯಿಕ ವಿವಾಹವನ್ನು ವಿರೋಧಿಸುವವರೇ. ಎಲ್ಲರದೂ ಪ್ರೇಮ ವಿವಾಹಕ್ಕೆ ಓಟು! ಸಿನಿಮಾದಲ್ಲಿ ಪ್ರೇಮ ಗೆಲ್ಲಬೇಕು ಇವರಿಗೆ! ಕಾದಂಬರಿಯಲ್ಲಿ ಪ್ರೇಮ ಗೆಲ್ಲಬೇಕು! ವಾಸ್ತವದಲ್ಲಿ? ಒಬ್ಬ ಯುವಕ ಮತ್ತು ಯುವತಿ ಒಂದು ಕಡೆ ಮಾತನಾಡುತ್ತಾ ನಿಂತರೆ ಸಾಕು ಎಲ್ಲರದೂ ಕುತೂಹಲದ ದೃಷ್ಟಿ, ಟೀಕೆ ಕೀಟಲೆ. ಯಾಕೆ ಹೀಗೆ?" ಜನನಿ ಸಮಾಜದ ಈ ಧೋರಣೆಯನ್ನು ಮನದಲ್ಲೇ ಖಂಡಿಸುತ್ತಾಳೆ.

**(ಅದೇ, ಪುಟ 142)**

ದಯಾನಂದನಿಗೆ ಬೆಂಗಳೂರಿನ ಸ್ಟೇಟ್ ಬ್ಯಾಂಕ್ ಒಂದರಲ್ಲಿ ಉದ್ಯೋಗ ಸಿಕ್ಕಿ ಆತ ಹೊರಡಲು ಸಿದ್ಧನಾದಾಗ ಜನನಿ ಭಯಗೊಂಡಿದ್ದಳು. ಮಗಳು ಟ್ಯುಟೋರಿಯಲ್ ಕ್ಲಾಸಿಗೆ ಬೇಗನೆ ತೆರಳುತ್ತಿದ್ದುದನ್ನು ಕಂಡು ಸಂದೇಹಗೊಂಡ ತಾಯಿ ಪರಿಮಳ ಅವಳನ್ನು ಹಿಂಬಾಲಿಸಿದಾಗ ತನ್ನ ಮಗಳು ಕಮಲಾಕ್ಷನ ಮನೆಯ ಕೆಲಸದಾಕೆ ಸುಂದರಿಯ ಚಿಕ್ಕಮ್ಮನ ಮಗನನ್ನು ಪ್ರೀತಿಸುವ ವಿಷಯ ತಿಳಿಯಿತು. ಮಗಳನ್ನು ಮನೆಯಲ್ಲಿ ಕೂಡಿ ಹಾಕಿದಳು. ಇದರಿಂದ ಏನೂ ತೋಚದಂತಾಗಿ ಜನನಿ ಆತ್ಮಹತ್ಯೆಗೆ ಪ್ರಯತ್ನಿಸುತ್ತಾಳೆ. ದಿವಾಕರ ದಯಾನಂದನೊಂದಿಗೆ ತನ್ನ ಮಗಳನ್ನು ನಿನಗೇ ಕೊಟ್ಟು ಮದುವೆ ಮಾಡುತ್ತೇನೆಂದು ಮಾತು ಕೊಡುತ್ತಾನೆ. ದಿವಾಕರನಿಗೆ ತಾನು ಹೀಗೆ ಮಾಡುವುದರ ಹಿಂದಿನ ಉದ್ದೇಶ ತನ್ನ ಹೆಂಡತಿ ಪರಿಮಳಳನ್ನು ದಾರಿಗೆ ತರುವುದೇ ಆಗಿತ್ತು. ಮಗಳು ದಯಾನಂದನನ್ನು ಮದುವೆಯಾಗುವುದನ್ನು ವಿರೋಧಿಸುತ್ತಿದ್ದ ಪರಿಮಳಳಿಗೆ ದಿವಾಕರ ಬುದ್ಧಿ ಹೇಳುತ್ತಾನೆ. ಕೇಳದಿದ್ದಾಗ ಕೆನ್ನೆಗೆ ಎರಡು ಏಟನ್ನೂ ನೀಡುತ್ತಾನೆ. ಆಗ ಪರಿಮಳ ತನ್ನ ಗಂಡನನ್ನು ಅರ್ಥ ಮಾಡಿಕೊಳ್ಳಲಾರಂಭಿಸುತ್ತಾಳೆ. ದಿವಾಕರನ ಸಮಸ್ಯೆ ಪರಿಹಾರಗೊಂಡಿತ್ತು. ಪರಿಮಳ ದಿವಾಕರನೊಂದಿಗೆ ಕಾರ್ಕಳಕ್ಕೆ ಹೋಗಲು ಒಪ್ಪುತ್ತಾಳೆ.

ಲೋಬೋ ಎರಡು ವಾರಗಳಿಂದ ಕಾಣದಿದ್ದಾಗ ಮೇರಿಯ ಬಳಿಗೆ ವಿಚಾರಿಸಲು ಹೋದ ಉಮಾನಾಥನಿಗೆ ಆಕೆ ಸಮಾಧಾನಪಡಿಸುತ್ತಾಳೆ " ಕೆಲವು ಹೆಂಗಸರೇ ಹಾಗೆ ಜಗಳ ಮಾಡದಿದ್ದರೆ ಅವರಿಗೆ ಮನಃಶಾಂತಿಯೇ ಇರುವುದಿಲ್ಲ. ಮನೆಯಲ್ಲಿ ಏನಾದರೂ ಕಟಿ ಪಿಟಿ ಇಲ್ಲದಿದ್ದರೆ ಬೋರಾಗುತ್ತದೆ ಅಂಥವರಿಗೆ. ಏನಾದರೂ ಮಾಡಿ ಜಗಳಾಡುತ್ತಾರೆ". ಎನ್ನುತ್ತಾಳೆ. ಪೆರಾಲಿಸಿಸ್‌ಗೆ ತುತ್ತಾದ ಲೋಬೋ ಅನಿವಾರ್ಯವಾಗಿ

**(ಅದೇ, ಪುಟ 163)**

ತನ್ನ ಮನೆ ಸೇರುತ್ತಾನೆ. ಉಮಾನಾಥನ ಮೂಲಕ ಮೇರಿಯ ಮಗನ ಕ್ಲಿನಿಕ್ಕಿಗೆ ಸಹಾಯ ಮಾಡಲೆಂದು ಇಪ್ಪತ್ತೈದು ಸಾವಿರ ನೀಡುತ್ತಾನೆ.

ಕಾದಂಬರಿಯ ಕತೆ ಮಂಗಳೂರು ಹಾಗೂ ಪಣಂಬೂರಿನ ಸುತ್ತಲಿನ ಪರಿಸರದಲ್ಲಿ ನಡೆಯುತ್ತದೆ. ಮೂವರು ದಂಪತಿಗಳ ಕೌಟುಂಬಿಕ ಸಮಸ್ಯೆ, ಲೈಂಗಿಕ ಜೀವನ, ಕುಡಿತ, ಔದ್ಯೋಗಿಕ ಜೀವನದ ವಿವರಣೆಗಳು ಕಥೆಯಲ್ಲಿ ಬಂದಿವೆ. ಗಂಡ ಹೆಂಡಿರ ಸಂಬಂಧ, ಅವರ ಮಧ್ಯೆ ತಾವು ಮೇಲೆಂಬ ಭಾವನೆ, ಪರಸ್ಪರ ವಿರೋಧ, ಸೋಲು ಕಥೆಯಲ್ಲಿ ಚಿತ್ರಿತವಾಗಿದೆ. ಗಂಡು ಹೆಣ್ಣಿನ ದೈಹಿಕ ಹಾಗೂ ಮಾನಸಿಕ ಸಂಬಂಧದ ಪ್ರಶ್ನೆಯನ್ನು ಕಾದಂಬರಿ ವಿಶ್ಲೇಷಿಸುತ್ತದೆ. ಲೇಖಕರು ಕಾದಂಬರಿಯಲ್ಲಿ ಪ್ರೇಮ ವಿವಾಹಕ್ಕೆ ಉಂಟಾಗುವ ಅಡೆ ತಡೆಗಳು, ವರದಕ್ಷಿಣೆಯ ಪಿಡುಗು, ಲೈಂಗಿಕ ಸಂಬಂಧಗಳು, ಅಂತರ್ಜಾತೀಯ ವಿವಾಹ, ಜಾತಿ ಸಮಸ್ಯೆಯನ್ನು ಚಿತ್ರಿಸುತ್ತಾ ಅವುಗಳಿಂದ ಸಮಾಜದಲ್ಲಿ ನಿರ್ಮಾಣವಾಗುವ ಸಮಸ್ಯೆಗಳನ್ನು ಹೇಳುತ್ತಾ ಅವುಗಳನ್ನು ವಿರೋಧಿಸುತ್ತಾರೆ. ವರದಕ್ಷಿಣೆಯನ್ನು ಕಾದಂಬರಿಯಲ್ಲಿ ಟೀಕಿಸುತ್ತಾರೆ.

## ೪.೧೩: ಕಾರ್ಮುಗಿಲು

ಪ್ರೀತಿಗೆ ಸಮಾಜದಲ್ಲಿ ಗೌರವ ಸಿಕ್ಕಿದರೆ ಜಾತಿ ಮುಕ್ತ ಸಮಾಜದ ನಿರ್ಮಾಣ ಸಾಧ್ಯವಾಗುತ್ತದೆ ಎಂಬ ಚಿಂತನೆಯನ್ನು ಒಳಗೊಂಡ ಕಾದಂಬರಿ 'ಕಾರ್ಮುಗಿಲು'.

ಗೌರಮ್ಮ ತನ್ನ ಗಂಡ ಶಂಕರನಾರಾಯಣ ಭಟ್ಟನನ್ನು ಕಳೆದುಕೊಳ್ಳುವ ಹೊತ್ತಿಗೆ ಆಕೆಗೆ 40 ವರ್ಷ ವಯಸ್ಸಾಗಿತ್ತು. ಜೋಗಿ ಹಳ್ಳಿಯ ನಿವಾಸಿಗಳಾದ ಶಂಕರ ನಾರಾಯಣ ಭಟ್ಟ ಹಾಗೂ ಗೌರಮ್ಮನಿಗೆ ಮೀನಾಕ್ಷಿ ಎಂಬಾಕೆ ಮಗಳು. ಹೈಸ್ಕೂಲು ಓದಿ ಮುಗಿಸಿದ್ದಳು. 20 ವರ್ಷ ವಯಸ್ಸಿನ ಮೀನಾಕ್ಷಿ ಹೊಲಿಗೆ ಕೆಲಸ ಮನೆಯಲ್ಲಿಯೇ ಮಾಡುತ್ತಿದ್ದಳು. ಪೌರೋಹಿತ್ಯ ಕೆಲಸ ಮಾಡುವ ತಂದೆಯ ಆದಾಯ ಮಗಳ ಮದುವೆಗೆ ಸಾಕಾಗುವಷ್ಟಿರಲಿಲ್ಲ. ಇನ್ನೊಬ್ಬ ಮಗ ಕೃಷ್ಣ ಎರಡೂ ಕಾಲುಗಳಲ್ಲಿ ಶಕ್ತಿ ಕಳೆದುಕೊಂಡಿದ್ದಾನೆ. ಬೆಳ್ಳಂಪುರದಲ್ಲಿ ಬಿ.ಎ. ವರೆಗೆ ಓದಿ ಮೈಸೂರಲ್ಲಿ ಬಿ.ಎಡ್. ಮುಗಿಸಿ ಉದ್ಯೋಗ ಅರಸುತ್ತಿದ್ದ ಗುರುರಾಜ ಭಟ್ಟ ಉದ್ಯೋಗ ಸಿಕ್ಕಿದ ಕೂಡಲೇ ಮೀನಾಕ್ಷಿಯನ್ನು ಮದುವೆಯಾಗುವುದಾಗಿ ತಿಳಿಸಿದ್ದ. ಹಲವಾರು ಸಲ ಶಂಕರನಾರಯಣ ಭಟ್ಟನ ಮನೆಗೆ ಹೋಗಿಬಂದಿದ್ದ. ಶಂಕರನಾರಯಣ ಭಟ್ಟ ತೀರಿಕೊಂಡ ಬಳಿಕ ಮನೆಗೆ ಬಂದ ಗುರುರಾಜ್ ತನಗೆ ಕುಂದಾಪುರದಲ್ಲಿ ಹೈಸ್ಕೂಲಿನಲ್ಲಿ ಅಧ್ಯಾಪಕನಾಗಿ ಕೆಲಸ ಸಿಕ್ಕಿದ್ದು, ನಾನು ಅಲ್ಲಿಯೇ ನೆಲೆಸಬೇಕಾಗಿದೆಯೆಂದು ಹೇಳಿ ಮದುವೆ ಪ್ರಸ್ತಾಪ ಎತ್ತಿದ.

ಶಂಕರಯ್ಯ ಗೌರಮ್ಮನ ಹತ್ತಿರದ ಸಂಬಂಧಿಕ, ಅನುಕೂಲಸ್ಥ. ಶಂಕರಯ್ಯನನ್ನು ಗೌರಮ್ಮ ಆತ್ಮೀಯವಾಗಿ ಕಾಣುತ್ತಿದ್ದಳು. ಆತ ಎರಡನೇ ಮಗ ಮಾಧವನಿಗೆ ಮೀನಾಕ್ಷಿಯನ್ನು ತರುವ ಇಚ್ಛೆಯನ್ನೂ ವ್ಯಕ್ತಪಡಿಸಿದ್ದ. ಮಾಧವ ಚಿಕ್ಕ ಮಕ್ಕಳಂತೆ ವರ್ತಿಸುತ್ತಿದ್ದ. ಹೆಣ್ಣಿನ ಬಗ್ಗೆ ಆತನಿಗೆ ಆಕರ್ಷಣೆ ಇರಲಿಲ್ಲ. ಶಂಕರಯ್ಯ ತನ್ನ ಮಗನನ್ನು ಸನ್ಯಾಸಿ ಮಾಡುವ ಯೋಚನೆ ಮಾಡಿಯೂ ಸೋತಿದ್ದ. ಮೀನಾಕ್ಷಿ ಹೊಸನಗರಕ್ಕೆ ಹೋಗಿಬರುತ್ತಿದ್ದಾಗ ಯುವಕನೊಬ್ಬ ಹಿಂಬಾಲಿಸುತ್ತಾನೆ. ಅವಳನ್ನು ನೋಡಿ ಕಣ್ಣು ಮಿಟುಕಿಸುತ್ತಾನೆ. ಒಮ್ಮೆ ಆಚೆ ಬಸ್ಸಿನಿಂದಿಳಿದಾಗ ಅವಳ ಮನೆಯವರೆಗೂ ಹಿಂಬಾಲಿಸಿಕೊಂಡು ಹೋಗಿದ್ದ. ಕೊನೆಗೆ ಬಸ್ಸಿನ ಡ್ರೈವರ್, ಕಂಡಕ್ಟರ್ ಅದನ್ನು ನೋಡಿ ಆತನಿಗೆ ಒಂದೆರಡೇಟು ಚೆನ್ನಾಗಿಯೇ ಬಾರಿಸಿದ್ದರು. ಡ್ರೈವರ್ ಸೂಫಿಯ ಧೈರ್ಯವನ್ನು ಮೆಚ್ಚಿಕೊಂಡಿದ್ದಳು.

ಮಠಾಧಿಪತಿಯಾದ ವಿಷ್ಣು ಭಟ್ಟ ಶಂಕರಯ್ಯನ ಕ್ಲಾಸ್‌ಮೇಟ್. ಈಗ ಆತ ಜ್ಞಾನೇಂದ್ರ ಭಾರತಿ ಆಗಿದ್ದಾನೆ. ಯೌವ್ವನದಲ್ಲಿ ಸಾಕಷ್ಟು ಸುಖ ಅನುಭವಿಸಿದ್ದಾನೆ. ಶಂಕರಯ್ಯ ಮದುವೆ ಆದ ಮೇಲೂ ಐದು ಕಡೆಯ ಹೆಂಗಸರೊಂದಿಗೆ ಸಂಪರ್ಕವಿರಿಸಿಕೊಂಡಿದ್ದ. ಶಂಕರಯ್ಯನಿಗೆ ಗೌರಮ್ಮ ಮೀನಾಕ್ಷಿಯರ ಮೇಲೂ ಕಣ್ಣಿತ್ತು. ಹಾಗಾಗಿ ತನ್ನ ಮಗನಿಗೆ ಮೀನಾಕ್ಷಿಯನ್ನು ತಂದುಕೊಂಡು ತನ್ನವಳಾಗಿಸಿಕೊಳ್ಳಬೇಕೆಂಬ ಆಸೆಯೂ ಇತ್ತು. ಗುರುರಾಜನಿಗೆ ಮೀನಾಕ್ಷಿಯ ಚೆಲುವಿನ ಆಕರ್ಷಣೆ ಒಂದು ಕಡೆಗಾದರೆ ಅವಳ ಆಸ್ತಿಯೂ ಅವನನ್ನು ಸೆಳೆದಿತ್ತು. ಮೀನಾಕ್ಷಿಯ ತಾಯಿ ತನ್ನೊಂದಿಗಿದ್ದರೆ ಅನುಕೂಲ. ಆದರೆ ತಮ್ಮನನ್ನು ಅಂಗವಿಕಲರ ಆಶ್ರಮಕ್ಕೆ ಸಾಗಹಾಕ ಬೇಕೆಂದು ಯೋಚಿಸುತ್ತಿದ್ದ. ಅದರಂತೆ ಗೌರಮ್ಮನಿಗೂ ತಿಳಿಸಿದಾಗ ಆಕೆ ಒಪ್ಪಲು ಸಿದ್ಧಳಿರಲಿಲ್ಲ. ಗುರುರಾಜ ಗೌರಮ್ಮನ ಮನೆಯಲ್ಲಿ ರಾತ್ರಿ ಉಳಿದುಕೊಂಡು ಮೀನಾಕ್ಷಿಯನ್ನೂ ತನ್ನ ಬಳಿಗೆ ಒಮ್ಮೆ ಕರೆದಿದ್ದ. ಆದರೆ ಆಕೆ ಅದಕ್ಕೆ ಸಮ್ಮತಿಸಿರಲಿಲ್ಲ. ಇನ್ನೊಮ್ಮೆ ಬಂದು ಉಳಿದಾಗಲು ಹಾಗೆಯೇ ಕರೆದ. ಆಗಲೂ ಆಕೆ ತಪ್ಪಿಸಿಕೊಂಡಳು. ರಾತ್ರಿ ಮಳೆ ಸುರಿದುದರಿಂದ ಜೋಪಡಿಗೆ ಹಾನಿಯಾಗಿ ರಾಮು ಮತ್ತು ಪಾತು ಗೌರಮ್ಮನ ಹಟ್ಟಿಯಲ್ಲಿ ಆಶ್ರಯ ಪಡೆಯುತ್ತಾರೆ. ಶಂಕರಯ್ಯ ತುಪ್ಪ ಹಿಡಿದುಕೊಂಡು ಗೌರಮ್ಮನ ಮನೆಗೆ ಬರುತ್ತಾನೆ. ಹೆಂಡತಿ ದೀಪಾವಳಿಗಾಗಿ ಕೊಟ್ಟು ಕಳಿಸಿರುವುದಾಗಿ ಹೇಳುತ್ತಾನೆ. ಮೀನಾಕ್ಷಿಯ ಮದುವೆ ನಂತರ ಜಾಗ ಮಾರುವುದು ಬೇಡ. ಇಲ್ಲಿ ವ್ಯವಸಾಯ ಮಾಡು ನಾನು ಸಹಾಯ ಮಾಡುತ್ತೇನೆ ಎನ್ನುತ್ತಾನೆ. ಗುರುರಾಜನ ಕಣ್ಣು ಆಸ್ತಿಯ ಮೇಲಿರುವುದರ ಬಗ್ಗೆ ಸಂಶಯ ವ್ಯಕ್ತಪಡಿಸುತ್ತಾನೆ. ಶಂಕರಯ್ಯ ಹೊರಟು ಹೋದ ಕೂಡಲೇ ಅವನ ಮಗ ಶ್ರೀನಿವಾಸ ಗೌರಮ್ಮಳ ಮನೆಗೆ ಬರುತ್ತಾನೆ. ತನ್ನೊಂದಿಗೆ

ಶ್ರೀನಿವಾಸನ ಒಕ್ಕಲು ಮನೆಯ ಶೂದ್ರ ಜಾತಿಯ ರಘುವೀರನನ್ನು ಕರೆದುಕೊಂಡು ಬರುತ್ತಿರುವುದು ಗೌರಮ್ಮನಿಗೆ ಹಿಡಿಸುತ್ತಿರಲಿಲ್ಲ. ಶ್ರೀನಿವಾಸ ಮತ್ತು ರಘುವೀರರ ಕಣ್ಣುಗಳಲ್ಲಿ ಮೀನಾಕ್ಷಿಗೆ ಕಾಮವಲ್ಲದೆ ಬೇರೇನೂ ಕಾಣುತ್ತಿರಲಿಲ್ಲ. ಹರಿಜನ ಹೆಂಗಸರು ರವಿಕೆ ಹೊಲಿಸಲು ಬಂದಾಗ ಮೀನಾಕ್ಷಿ ತಂದೆಯಿದ್ದಾಗ ಒದ್ದೆ ಬಟ್ಟೆ ಉಟ್ಟುಕೊಂಡು ಅಳತೆ ತೆಗೆಯುತ್ತಿದ್ದಳು.

ಗೌರಮ್ಮ ಮನೆಮಾರುವುದಿಲ್ಲವೆಂದು ತಿಳಿದ ಗುರುರಾಜ ಐವತ್ತು ಸಾವಿರ ಬೇಕೆಂದು ಕೇಳುತ್ತಾನೆ. ನಿರಾಕರಿಸಿದಾಗ ಆತ ಬೇರೆ ಮದುವೆಯಾಗುತ್ತಾನೆ. ಶಂಕರ ಸ್ವಾಮೀಜಿಯ ಮೂಲಕ ತನ್ನ ಮಗನನ್ನು ಮದುವೆಯಾಗಲು ಒತ್ತಾಯಪಡಿಸುವಂತೆ ತಿಳಿಸುತ್ತಾನೆ. ಅದರಂತೆ ಸ್ವಾಮೀಜಿ ಅವರನ್ನು ಕರೆಸಿ ಉಪದೇಶ ಮಾಡುತ್ತಾನೆ. ಆಗ ಆತನ ಕಣ್ಣು ಸುಂದರಿಯಾದ ಮೀನಾಕ್ಷಿ ಮತ್ತು ಚೆಲುವೆಯಾದ ಅವಳ ಮೇಲೆಯೂ ಹರಿಯುತ್ತದೆ.

ಪಾತು ತಾನು ಸಂಗ್ರಹಿಸಿದ ಹೂವನ್ನು ಗೌರಮ್ಮನೊಡನೆ ಸಂಗ್ರಹಿಸಿಡಲು ಕೊಡುತ್ತಿದ್ದಳು. ಮನೆಯ ಸುತ್ತ ಮುತ್ತಲು ಸಣ್ಣ ಪುಟ್ಟ ಕೆಲಸವನ್ನು ಮಾಡುತ್ತಿದ್ದಳು. ತನ್ನ ಜಾಗದಲ್ಲಿರುವ ಕಲ್ಲು ಒಡೆದು ತೆಗೆದುದಕ್ಕಾಗಿ ರಾಮು ಗೌರಮ್ಮನಿಗೆ ಹಣವನ್ನು ನೀಡುತ್ತಾನೆ. ಅದರಿಂದ ಆಕೆ ಮನೆಯವರಿಗೆ ವಸ್ತ್ರವನ್ನು ಖರೀದಿಸುತ್ತಾಳೆ. ಆದರೆ ಬದುಕು ಸಾಗಿಸಲು ಬೇಕಾದಷ್ಟು ಹಣವಿಲ್ಲದೆ ತಾನು ಕೂಲಿ ಕೆಲಸಕ್ಕೆ ಹೋಗುವ ನಿರ್ಧಾರವನ್ನು ಕೈಗೊಳ್ಳುತ್ತಾಳೆ. ಗೌರಮ್ಮ ಗದ್ದೆಯ ಕೆಲಸಕ್ಕೆ ಹೋಗತೊಡಗಿದಾಗ ಕೆಲವು ಹೆಂಗಸರು ಅವಳನ್ನು ನೀವೂ ಗದ್ದೆ ಕೆಲಸಕ್ಕೆ ಬರುವುದಾ ಎಂದು ಪ್ರಶ್ನಿಸುತ್ತಾರೆ. ಏಕೆಂದರೆ ಕೂಲಿ ಕೆಲಸಕ್ಕೆ ಅಥವಾ ತಮ್ಮ ಸ್ವಂತ ಗದ್ದೆಯಲ್ಲಿ ಕೂಡಾ ನಾಟಿ ಅಥವಾ ಕೊಯ್ಲಿಗೆ ಬ್ರಾಹ್ಮಣ ಹೆಂಗಸರು ಇಳಿಯುವ ಸಂಪ್ರದಾಯವಿರಲಿಲ್ಲ. ಗೌರಮ್ಮ ಕೆಲಸಕ್ಕೆ ಹೋದ ವಿಷಯ ತಿಳಿದ ಶಂಕರಯ್ಯ ಆಕೆಯ ಮನೆಗೆ ಒಂದು ಮುಡಿ ಅಕ್ಕಿ ಕಳುಹಿಸುತ್ತಾನೆ. ಆಕೆ ಕೆಲಸಕ್ಕೆ ಹೋಗುವುದು ಬೇಡ ಎನ್ನುತ್ತಾನೆ. ಅದಕ್ಕೆ ತಾಯಿ ಮಗಳಿಬ್ಬರೂ ಅದನ್ನು ಸ್ವೀಕರಿಸದೆ ಹಿಂದಕ್ಕೆ ಒಯ್ಯುವಂತೆ ಮಾಡುತ್ತಾರೆ. ಪ್ರತಿದಿನ ಬಾವಿಕಟ್ಟೆಯಲ್ಲಿ ಸ್ನಾನ ಮಾಡುತ್ತಿದ್ದ ರಾಮುವಿನ ದೇಹವನ್ನು ನೋಡಿ ಮೀನಾಕ್ಷಿಗೆ ಏನೋ ಆಕರ್ಷಣೆ. ಡ್ರೈವರ್ ಸೂಫಿಯ ವ್ಯಕ್ತಿತ್ವ ಆಕೆಯನ್ನು ಆಕರ್ಷಿಸಿತ್ತು. ತನ್ನ ಈ ಬಗೆಯ ಯೋಚನೆಯಿಂದ ತಪ್ಪಿಸಿಕೊಳ್ಳಲು ಕಡಿಮೆ ಊಟ ಮಾಡಿ ದೇಹ ದಂಡನೆ ಮಾಡಿಕೊಳ್ಳುವುದೇ ಸರಿಯಾದ ದಾರಿಯೆಂದು ಆಕೆಗೆ ಅನ್ನಿಸಿ ಹಾಗೆ ಮಾಡುತ್ತಿದ್ದಳು.

ಕೃಷ್ಣ ರಾಮುವಿನ ಹಟ್ಟಿಯಲ್ಲಿ ಬೇಯಿಸಿದ ಅನ್ನ ತಿಂದಕ್ಕಾಗಿ ಮೀನಾಕ್ಷಿ ಆತನಿಗೆ ಚೆನ್ನಾಗಿ ಥಳಿಸಿದಳು. ರಾಮು ಕೃಷ್ಣನ ಆರೈಕೆ ಮಾಡಿ ಆತನಿಗೆ ಕಾಡಿನಿಂದ ಗಿಡ ಮೂಲಿಕೆ ತಂದು ಕಷಾಯ ತಯಾರಿಸಿ ಕೊಟ್ಟ ಪರಿಣಾಮವಾಗಿ ಆತ ಸ್ವತಂತ್ರವಾಗಿ ಓಡಾಡಲಾರಂಭಿಸಿದ. ಗೌರಮ್ಮನ ಪಡೀಲು ಬಿದ್ದ ಗದ್ದೆಯನ್ನು ರಾಮುವೇ ನಾಟಿ ಮಾಡಿಸುತ್ತಾನೆ. ಹೆಂಡತಿ ಊರಿಗೆ ಹೋಗಿರುವ ನೆಪ ಹೇಳಿ ಅಡುಗೆ ಮಾಡಲು ತನ್ನ ಮನೆಗೆ ಗೌರಮ್ಮನನ್ನು ಕರೆಸಿಕೊಂಡ. ಶಂಕರಯ್ಯ ಆಕೆಯೊಂದಿಗೆ ಸಂಬಂಧ ಹೊಂದುವಂತೆ ಮಾತನಾಡುತ್ತಾನೆ. ಆದರೆ ಗೌರಮ್ಮ ಅದಕ್ಕೆ ಸಮ್ಮತಿಸುವುದಿಲ್ಲ. ಆತನ ಮನೆಗೆ ಹೋಗುವುದನ್ನೇ ನಿಲ್ಲಿಸುತ್ತಾಳೆ. ಗೌರಮ್ಮ ಇಲ್ಲದ ಸಮಯ ನೋಡಿ ಮನೆಗೆ ಬಂದ ಶ್ರೀನಿವಾಸ ಮೀನಾಕ್ಷಿಯೊಂದಿಗೆ ನಾನು ನಿನ್ನನ್ನು ಸುಖವಾಗಿ ಇಟ್ಟುಕೊಳ್ಳುತ್ತೇನೆ ಎಂಬ ಮಾತನ್ನು ಆಡುತ್ತಾನೆ, ಬಲಾತ್ಕಾರಕ್ಕೆ ಪ್ರಯತ್ನಿಸುತ್ತಾನೆ. ಆದರೆ ಅಲ್ಲಿಗೆ ಆಗಮಿಸಿದ ರಾಮು ಅವಳನ್ನು ರಕ್ಷಿಸುತ್ತಾನೆ. ಆಕೆ ರಾಮುವನ್ನು ಹಿಡಿದುಕೊಂಡು ಅತ್ತಾಗ ರಾಮು ಸಮಾಧಾನ ಪಡಿಸುತ್ತಾನೆ. ಆಕೆಗೆ ರಾಮು ಒಬ್ಬ ಮಹಾನ್ ವ್ಯಕ್ತಿಯಾಗಿ ಕಾಣುತ್ತಾನೆ. ಅವಳ ಮನಸ್ಸಿನಲ್ಲಿ "ಇವತ್ತಿನಿಂದ ನನ್ನ ಪ್ರಾಣ ನಿನ್ನದು" ಎಂಬ ಭಾವನೆ ಉಂಟಾಗುತ್ತದೆ. ಆತನಿಂದಾಗಿ ಗದ್ದೆಯಲ್ಲಿ ಉತ್ತಮ ಬೆಳೆಯೂ ಬಂದಿತ್ತು.

ಊರಿನ ಕೆಲವರನ್ನು ಕರೆತಂದ ಶ್ರೀನಿವಾಸ ರಾಮುವಿನೊಂದಿಗೆ ಈ ಮನೆಬಿಟ್ಟು ಹೋಗುವಂತೆ ಹೇಳುತ್ತಾನೆ. ಇವನನ್ನು ಹೊರಹಾಕದಿದ್ದರೆ ಜಾತಿಯಿಂದ ಹೊರ ಹಾಕುವ ಬೆದರಿಕೆ ಒಡ್ಡುತ್ತಾರೆ. ರಾಮು ಅಲ್ಲಿಂದ ಜಾಗ ಖಾಲಿ ಮಾಡುತ್ತಾನೆ. ಒಂದು ದಿನ ರಾತ್ರಿ ರಾಮುವಿನ ಜೋಪಡಿಗೆ ಬಂದು ಮೀನಾಕ್ಷಿ ನಾನು ನಿನ್ನನ್ನು ಪ್ರೀತಿಸ್ತೀನಿ, ನನ್ನ ಕೈ ಬಿಡಬೇಡ ಎನ್ನುತ್ತಾಳೆ. ತನ್ನನ್ನು ಮದುವೆಯಾಗೆಂದು ಕೇಳಿಕೊಳ್ಳುತ್ತಾಳೆ. ನೀನು ಒಪ್ಪಿಕೊಳ್ಳದಿದ್ದರೆ ತಾನು ಸಾಯುವುದಾಗಿ ತಿಳಿಸುತ್ತಾಳೆ. ಒಂದು ದಿನ ರಾತ್ರಿ ರಾಮುವಿನ ಗುಡಿಸಲ ಬಳಿಗೆ ಬಂದ ಮೂರು ನಾಲ್ಕು ಜನ ಅದನ್ನು ಸುಡುವ ಪ್ರಯತ್ನ ನಡೆಸಿದರು. ಆದರೆ ಮತ್ತಡಿ, ಬಡೇತಿ ಮೊದಲಾದವರಿಗೆ ಅದು ತಿಳಿದು ಅವರನ್ನು ಓಡಿಸಿದರು. ಈ ಪ್ರಯತ್ನ ಶ್ರೀನಿವಾಸನದೇ ಎಂದು ರಾಮುವಿಗೆ ತಿಳಿಯದೇ ಇರಲಿಲ್ಲ. ಈ ಘಟನೆ ನಡೆದ ನಂತರ ರಾಮು ಗೌರಮ್ಮನ ತೋಟದಲ್ಲಿ ಪಂಪಿಗೆ ಮರೆಯಾಗಿ ಕಟ್ಟಿದ್ದ ಮಡಲುಗಳ ಒಳಗೆ ರಾತ್ರಿ ಕಳೆಯಲಾರಂಭಿಸಿದ. ಗೌರಮ್ಮ ರಾಮುವಿಗೆ ಮದುವೆ ಮಾಡುವ ಸಲಹೆ ನೀಡಿದರು. ಮನೆ ಕಟ್ಟಿಕೊಳ್ಳಲು ಅರ್ಧ ಎಕರೆ ತನ್ನ ಭೂಮಿಯನ್ನು ಆತನ ಹೆಸರಿಗೆ ಮಾಡುವುದಾಗಿಯೂ ತಿಳಿಸುತ್ತಾಳೆ. ಹಾವು ಕಂಡು ಹೆದರಿದ ಗೌರಮ್ಮ ರಾಮುವಿನ ಮೇಲೆ ಬಿದ್ದ ಸಂದರ್ಭದಲ್ಲಿ ಮನಸ್ಸು ಚಂಚಲಗೊಂಡು ತನ್ನನ್ನೊಮ್ಮೆ ಮರೆಯುತ್ತಾಳೆ. ತನ್ನಲ್ಲಿ ಈ ಕಾಮ ಹುಟ್ಟಿಕೊಳ್ಳಲು ಕಾರಣವೇನೆಂದು ಯೋಚಿಸುತ್ತಾಳೆ. ಒಂದು ದಿನ

ರಾತ್ರಿ ಒಂದು ಗಂಟೆಯ ಹೊತ್ತಿಗೆ ಗೌರಮ್ಮ ತನ್ನ ಮಗಳು ಮೀನಾಕ್ಷಿಯನ್ನು ಕಾಣದಿದ್ದಾಗ ಸಂದೇಹ ಬಂದು ಪಂಪು ಕೊಟ್ಟಿಗೆ ಬಳಿ ಬಂದಳು. ಮೀನಾಕ್ಷಿ ಅಲ್ಲಿರುವುದನ್ನು ತಿಳಿದು ವಿಷಯ ಅರ್ಥವಿಸಿಕೊಂಡಳು. ಆಕೆಯನ್ನು ಈ ಬಗ್ಗೆ ವಿಚಾರಿಸಿದಳು. ಮೀನಾಕ್ಷಿ ತಾನು ರಾಮುವನ್ನು ಮದುವೆಯಾಗುವುದಾಗಿ ತಿಳಿಸಿದಳು. ಗೌರಮ್ಮ ವಿರೋಧಿಸಲಿಲ್ಲ. ನಂತರ ಏಳೆಂಟು ಬಾರಿ ರಾತ್ರಿ ರಾಮುವಿನ ಬಳಿಗೆ ಹೋಗಿ ಭೇಟಿಯಾದಾಗಲೂ ಆತ ಹದ್ದು ಮೀರಿ ವರ್ತಿಸಲಿಲ್ಲ. ತಾವಿಬ್ಬರೂ ಮದುವೆಯಾಗಲು ಸಮಾಜ ಬಿಡದಿದ್ದಾಗ ಏನು ಮಾಡಬಹುದೆಂದು ಮೀನಾಕ್ಷಿ ರಾಮುವಿನೊಂದಿಗೆ ಹೇಳುತ್ತಾಳೆ." ಏನು ಬೇಕಾದರಾಗಲಿ, ಮದುವೆಯೂ ಬೇಡ, ಏನೂ ಬೇಡ. ಎಷ್ಟು ದಿನ ಹೀಗೇ ಸಂತೋಷವಾಗಿರ್ತೀವೋ ಅಷ್ಟು ದಿನ ಇರೋದು, ಆಮೇಲೆ ಸತ್ತು ಬಿಡೋದು,"

**(ಕಾರ್ಮುಗಿಲು, 1993, ಪುಟ 179)**

ಬಡವರದ್ದೆಲ್ಲಾ ಒಂದೇ ಜಾತಿ ಎನ್ನುವ ಅಭಿಪ್ರಾಯ ಅವಳದು. ರಾಮು ಮತ್ತು ಮೀನಾಕ್ಷಿಯರ ಪ್ರೀತಿ ಶಂಕರಯ್ಯನಿಗೆ ತಿಳಿದು ವಿಚಾರಿಸಲು ಬಂದಾಗ ಆತನಿಗೆ ಮುಖಕ್ಕೆ ಯಾರಿಂದಲೋ ಅಕ್ಕಚ್ಚಿಯ ಎರಚಾಟ ಉಂಟಾಗಿತ್ತು. ಆತ ಅವರಿಗೆ ಜಾತಿಯಿಂದ ಬಹಿಷ್ಕಾರ ಹಾಕಬೇಕು ಎಂಬ ತೀರ್ಮಾನಕ್ಕೆ ಬಂದನು. ಈ ಕುರಿತು ಜ್ಞಾನೇಂದ್ರ ಭಾರತಿಯೊಂದಿಗೆ ಹೇಳಿದಾಗ ಆತ ಅದಕ್ಕೆ ಸಮ್ಮತಿಸುವುದಿಲ್ಲ. ಶಂಕರಯ್ಯ ಈ ಬಗ್ಗೆ ವಿಚಾರಿಸಲು ಕೆಲವು ಸ್ವಜಾತಿಯವರನ್ನು ಆಹ್ವಾನಿಸಿ ಚರ್ಚಿಸಿದ. ಅವರಲ್ಲಿ ಈಶ್ವರಭಟ್ಟ ಮನುಸ್ಮೃತಿಯಲ್ಲಿ ಹೇಳಿರುವ ವಿಚಾರವನ್ನು ತಿಳಿಸುತ್ತಾ "ಬ್ರಾಹ್ಮಣ ಸ್ತ್ರೀಯನ್ನು ಭೋಗಿಸಿದ ಶೂದ್ರನನ್ನು ಚಾಪೆಯಲ್ಲಿ ಸುತ್ತಿ ಸುಡಬೇಕು" ಎನ್ನುತ್ತಾನೆ. ಬ್ರಾಹ್ಮಣನಾದರೆ ತಲೆಬೋಳಿಸಿ

**(ಅದೇ, ಪುಟ 187)**

ಬಿಡಬೇಕು ಎನ್ನುತ್ತಾನೆ. ಬಹಿಷ್ಕಾರದ ವಿಷಯ ತಿಳಿಸಲು ಶಂಕರನ ಮಗ ಮಾಧವನನ್ನು ಗೌರಮ್ಮನ ಮನೆಗೆ ಕಳುಹಿಸುತ್ತಾನೆ. ವಿಷಯ ತಿಳಿದ ಗೌರಮ್ಮ ಆತ ನೀಡಿದ್ದ ಸೀರೆಯ ಪೊಟ್ಟಣವನ್ನು ಅವನೊಂದಿಗೆ ಹಿಂದಕ್ಕೆ ಕಳುಹಿಸುತ್ತಾಳೆ.

ಶಂಕರಯ್ಯ ಈ ಬಗ್ಗೆ ರಾಮುವಿನಲ್ಲಿಯೂ ವಿಚಾರಿಸುತ್ತಾನೆ. ಮೀನಾಕ್ಷಿ ತಾಯಿಗೆ ತಿಳಿಸಿ ರಾಮುವನ್ನು ತನ್ನ ಮನೆಯಲ್ಲಿಯೇ ಇರುವಂತೆ ಹೇಳುತ್ತಾಳೆ. ಆ ರಾತ್ರಿ ರಾಮುವಿನ ಗುಡಿಸಲಿಗೆ ಯಾರೋ ಬೆಂಕಿಯಿಡುತ್ತಾರೆ. ಡ್ರೈವರ್ ಸೂಫಿ ಗೌರಮ್ಮನ ಮನೆಗೆ ಬಂದು ರಾಮುವಿನೊಂದಿಗೆ ತನ್ನದೇನಾದರೂ ಸಹಾಯಬೇಕಿದ್ದರೆ ಕೇಳು ಎಂದು ಹೇಳಿಹೋದ. ಊರು ಬಿಟ್ಟು ಓಡಿ ಹೋಗಲು ಮೀನಾಕ್ಷಿಯೂ ರಾಮುವೂ ಸಿದ್ಧರಿರಲಿಲ್ಲ. ಅವರಿಬ್ಬರೂ ರಿಜಿಸ್ಟರ್ಡ್ ಮದುವೆ ಆಗಲು ನಿರ್ಧರಿಸಿದರು. ಸೂಫಿಯ ಸಹಾಯದಿಂದ ಸಬ್ ಇನ್ಸ್‌ಪೆಕ್ಟರ್ ಬಳಿಗೆ ಹೋದಾಗ ಆತ ತಾನೇ ಮದುವೆಯ

ಮಾರ್ಪಾಡು ಮಾಡುವುದಾಗಿ ತಿಳಿಸುತ್ತಾನೆ. ಆದರಂತೆ ಮದುವೆ ಮಾಡಿಸಿ ಕಳುಹಿಸುತ್ತಾರೆ. ವಿಷಯ ಊರಿನವರಿಗೆಲ್ಲ ತಿಳಿದರೂ ಪೋಲೀಸರೇ ಮದುವೆ ಮಾಡಿಸಿದ್ದರಿಂದ ವಿಚಾರಿಸಲು ಯಾರೂ ಬರಲಿಲ್ಲ. ಶಂಕರಯ್ಯ ಮತ್ತು ಶ್ರೀನಿವಾಸರಿಗೆ ಒಳಗೊಳಗೇ ಸಿಟ್ಟಿನಿಂದಾಗಿ ಅವರ ರಕ್ತ ಕುದಿಯುತ್ತಿತ್ತು. ರಾಮು ಬಂದಾಗಿನಿಂದ ಗೌರಮ್ಮ ಹೆಚ್ಚು ಕಡಿಮೆ ಪೂರ್ತಿ ಮೌನಿಯಾಗಿದ್ದಳು.

ಒಂದು ದಿನ ರಾತ್ರಿ ಸುಮಾರು ನಾಲ್ಕು ಗಂಟೆಗೆ ಹೊಗೆಯ ವಾಸನೆಯಿಂದಾಗಿ ಎಚ್ಚರಗೊಂಡ ರಾಮುವಿಗೆ ಮನೆ ಉರಿಯುತ್ತಿರುವುದು ಕಾಣಿಸಿತು. ಮೀನಾಕ್ಷಿ ಮತ್ತು ಕಿಟ್ಟುವನ್ನು ಮನೆಯಿಂದ ಹೊರಕ್ಕೆ ಕಳುಹಿಸಿದ. ಗೌರಮ್ಮನನ್ನು ಹುಡುಕುತ್ತಿದ್ದಾಗ ಅಡಿಗೆ ಕೋಣೆಯಲ್ಲಿ ಗೌರಮ್ಮ ಮಲಗಿದ್ದ ಹಾಸಿಗೆ ಉರಿಯುತ್ತಿತ್ತು. ರಾಮುವಿಗೆ ಅವಳನ್ನು ರಕ್ಷಿಸುವುದು ಸಾಧ್ಯವಾಗಲಿಲ್ಲ. ಸೂಫಿ ಉಳಿದುಕೊಳ್ಳಲು ತಾನು ಏರ್ಪಾಡು ಮಾಡುತ್ತೇನೆ ಎಂದಾಗ ಅದಕ್ಕೆ ಒಪ್ಪದ ಮೀನಾಕ್ಷಿ ಹಾಗೂ ರಾಮು ಮರುದಿನವೇ ಅಲ್ಲಿಯೇ ಮನೆಕಟ್ಟಲು ಆರಂಭಿಸಿದರು. ಆ ಕೆಲಸಕ್ಕೆ ಅನೇಕ ಮಂದಿ ಸಹಕಾರವಿತ್ತರು. ಹೀಗೆ ಕಥೆ ಮುಕ್ತಾಯವಾಗುತ್ತದೆ.

ಇಲ್ಲಿ ಬ್ರಾಹ್ಮಣ ಹೆಣ್ಣನ್ನು ಶೂದ್ರನೊಬ್ಬ ಮದುವೆಯಾಗುವುದನ್ನು ಬ್ರಾಹ್ಮಣರಾದ ಶಂಕರಯ್ಯ ಮತ್ತು ಶ್ರೀನಿವಾಸ ವಿರೋಧಿಸುತ್ತಾರೆ. ಅವರ ಪ್ರತಿರೋಧ ಜಾತಿ ವ್ಯವಸ್ಥೆಯನ್ನು ಉಳಿಸಿಕೊಂಡು ಹೋಗುವ ಕಾರಣಕ್ಕೆ ಮಾತ್ರವಾಗಿರದೆ ಅದರಲ್ಲಿ ತಮ್ಮ ಸ್ವಾರ್ಥ ಚಿಂತನೆಯೂ ಸೇರಿರುತ್ತದೆ. ಗೌರಮ್ಮನ ಆಸ್ತಿಯನ್ನು ತಮ್ಮ ವಶಕ್ಕೆ ತೆಗೆದುಕೊಳ್ಳುವ ಹುನ್ನಾರ ಮನಸ್ಸಿನ ಒಂದೆಡೆಯಾದರೆ ಬಡವರಾದ ಗೌರಮ್ಮ ಹಾಗೂ ಮೀನಾಕ್ಷಿಯರೊಂದಿಗೆ ದೈಹಿಕ ಸಂಬಂಧವಿರಿಸಿಕೊಳ್ಳಬೇಕೆಂಬ ಕಾಮನೆ ಇನ್ನೊಂದೆಡೆಯಲ್ಲಿ ಇರುತ್ತದೆ. ಅವರ ಈ ಬಗೆಯ ಪ್ರತಿರೋಧ ಗೌರಮ್ಮನ ಜೀವವನ್ನು ಬಲಿತೆಗೆದುಕೊಳ್ಳುವುದರ ಮೂಲಕ ಅಂತ್ಯವನ್ನು ಕಾಣುತ್ತದೆ.

ಜ್ಞಾನಭಾರತಿ ಎಂಬ ಸ್ವಾಮಿಯ ಮೂಲಕ ನಿರೂಪಕರು ಮಠದಲ್ಲಿರುವ ಮಠಾಧಿಪತಿಗಳ ದುಷ್ಟ ವ್ಯವಹಾರವನ್ನು ವಿರೋಧಿಸುತ್ತಾರೆ. "ನೋಡು ಶಂಕ್ರು ಸ್ವಾಮಿಯಾದವರು ಕಚ್ಚೆ ಬಿಚ್ಚಿದ್ರೆ ಏನೂ ತಪ್ಪಿಲ್ಲ, ಬಲಾತ್ಕಾರ ಮಾತ್ರ ಮಾಡ್ಬಾರ್ದು. ಪ್ರಕೃತಿ ವಿರುದ್ಧ ಹೋರಾಡೋದಕ್ಕಿಂತ ಪ್ರಕೃತಿಯ ಕರೆಗೆ ಸಾಧ್ಯವಿರೋ ರೀತೀಲಿ ಸಮಾಧಾನ ಹೇಳಿ, ಬೇರೆ ಒಳ್ಳೆಯ ಕೆಲಸ ಮಾಡೋದೊಳ್ಳೆಯದು. ಆದ್ರೆ ಈ ಜನ ನೋಡು ಎಂಥ ಹುಚ್ಚರು ! ಸ್ವಾಮಿಯಾದೋನು ಕಳವು, ಕೊಲೆ, ಸುಲಿಗೆ ಮಾಡಿದ್ರು ಅವರ ದೃಷ್ಟೀಲಿ ಪೀಠಕ್ಕೆ ಅಪಚಾರ ಎನಿಸೊಲ್ಲ. ಹೆಣ್ಣಿನ ಸಂಗ ಮಾಡಿದ್ರೆ ಮಾತ್ರ ಅಪಚಾರವಾಯ್ತೂಂತ

ಬಡ್ಕೊಳ್ತಾರೆ. ಅದು ಅಪರಾಧ ಅಲ್ಲ, ಅದು ಊಟ ನಿದ್ರೆಯಂತೆ ಸಾಮಾನ್ಯವಾದ ಸಂಗತಿ. ಕೊಲೆ, ಸುಲಿಗೆ, ಕಳವು ಮೋಸವೇ ನಿಜವಾದ ಅಪರಾಧ ಅಂತ ಯಾಕೆ ಈ ಜನ ತಿಳಿಯಲ್ಲ ?" ಎನ್ನುತ್ತಾನೆ. ಕಾದಂಬರಿಯಲ್ಲಿ ಡ್ರೈವರ್ ಸೂಫಿಯು ಮೀನಾಕ್ಷಿ

**(ಅದೇ, ಪುಟ 131)**

ಮತ್ತು ರಾಮುವಿನ ಮದುವೆಗೆ ಸಹಾಯ ಮಾಡುವುದು ಬಹಳ ಮುಖ್ಯ ಅಂಶವಾಗಿ ತೋರುತ್ತದೆ.

ಕೆ.ಟಿ.ಗಟ್ಟಿಯವರು ಕಾದಂಬರಿಯ ಬಗ್ಗೆ ಬೆನ್ನುಡಿಯನ್ನು ಬರೆಯುತ್ತಾ "ನಗರದಲ್ಲಿ ಸಾಮಾಜಿಕ ಸಂಘರ್ಷವೆಂಬುದಿಲ್ಲ. ಅದು ನಡೆಯುವುದು ಹಳ್ಳಿಯಲ್ಲಿ. ಸಾಮಾಜಿಕ ಸಂಘರ್ಷಗಳ ಮೂಲಕ ಹಳ್ಳಿ ಬದಲಾಗುತ್ತಾ ಹೋಗುತ್ತದೆ. 50 ವರ್ಷಗಳ ಹಿಂದಿನ ನಗರಕ್ಕೂ ಇಂದಿನ ನಗರಕ್ಕೂ ವಿಸ್ತಾರದಲ್ಲಿ, ಕಟ್ಟಡಗಳ ಸಂಖ್ಯೆಯಲ್ಲಿ ಮತ್ತು ಜನ ಸಮುದಾಯದಲ್ಲಿ ಬದಲಾವಣೆಯನ್ನು ಕಾಣಬಹುದು. ಅಲ್ಲಿನ ಬದುಕು ಹಾಗೆಯೇ ಇರುತ್ತದೆ. ಆದರೆ ಹಳ್ಳಿಯ ಬದುಕು ಚಲನಶೀಲ. 50 ವರ್ಷಗಳ ಹಿಂದೆ ಒಂದು ಹಳ್ಳಿ ಹೇಗಿತ್ತೋ ಈಗ ಅದು ಹಾಗೆ ಇಲ್ಲ. ಹಳ್ಳಿಯ ಬದುಕು ನಿಧಾನವಾಗಿ ಬದಲಾಗುತ್ತಿರುವಂತೆಯೇ ಕೆಲವೊಮ್ಮೆ ಸಾಮಾಜಿಕ ಸಂಘರ್ಷಗಳ ಮೂಲಕ ದಾಪುಗಾಲು ಹಾಕುತ್ತದೆ. ಇಂಥದೊಂದು ಸಂಘರ್ಷದಡಿಯಲ್ಲಿ ಸಿಲುಕಿದ ಮೂರು ಮನುಷ್ಯರು ಗೌರಮ್ಮ, ಮೀನಾಕ್ಷಿ ಮತ್ತು ರಾಮು. 'ಕಾರ್ಮುಗಿಲು' ಪ್ರಕೃತಿಗೂ ಮನುಷ್ಯನಿಗೂ ಇರುವ ಅವಿನಾಭಾವ ಸಂಬಂಧವನ್ನು ಪ್ರತಿನಿಧೀಕರಿಸುತ್ತದೆ. 'ಕಾರ್ಮುಗಿಲು' ಒಂದು ಸಾಮಾಜಿಕ ಸಂಘರ್ಷದ ಚಿತ್ರಣ" ಎನ್ನುತ್ತಾರೆ.

ಕಾದಂಬರಿಯಲ್ಲಿ ಜಾತೀಯತೆಯ ಬಗ್ಗೆ ಪ್ರತಿರೋಧವಿದೆ. ಜಾತೀಯತೆಯ ನಿರ್ಮೂಲನೆಯ ಬಗೆಗೆ ಕಾದಂಬರಿ ಚಿಂತನೆ ನಡೆಸುತ್ತದೆ. ಇಲ್ಲಿ ಜಾತಿಗಿಂತ ಮಾನವ ಸಂಬಂಧ ಮುಖ್ಯ. ಅದರಲ್ಲಿಯು ಪ್ರೀತಿ ಎಂಬ ಮೌಲ್ಯವು ಗೌರವಿಸಲ್ಪಟ್ಟರೆ ಜಾತಿಮುಕ್ತ ಸಮಾಜದ ನಿರ್ಮಾಣ ಸಾಧ್ಯ ಎಂಬ ಚಿಂತನೆಯೂ ಕಾದಂಬರಿಯಲ್ಲಿದೆ. ಲೇಖಕ ಸುಮತೀಂದ್ರ ನಾಡಿಗರು 'ಕಾರ್ಮುಗಿಲು' ಕಾದಂಬರಿಯ ಬಗ್ಗೆ ಬರೆಯುತ್ತಾ ಹೀಗೆ ಹೇಳುತ್ತಾರೆ "ಗಾಂಧಿ ಮತ್ತು ಅಂಬೇಡ್ಕರರ ಕನಸಾದ ಜಾತೀಯತೆಯ ನಿರ್ಮೂಲನ ಈ ಕಾದಂಬರಿಯಲ್ಲಿ ನಮ್ಮ ಕಣ್ಣೆದುರೇ ನಡೆಯುವ ವಾಸ್ತವವಾಗುತ್ತದೆ. ಭಾರತದ ಭವಿಷ್ಯದ ಸಾಮಾಜಿಕ ವ್ಯವಸ್ಥೆ ಗಂಡು ಹೆಣ್ಣಿನ ನಡುವಿನ ಪ್ರೀತಿ ಎನ್ನುವ ಮೌಲ್ಯಕ್ಕೆ ಬೆಲೆ ಕೊಟ್ಟರೆ ಮಾತ್ರ ಅರ್ಥಪೂರ್ಣ ಸಾಮಾಜಿಕ ವ್ಯವಸ್ಥೆಯಾಗುತ್ತದೆ ಎನ್ನುವುದು ಈ ಕಾದಂಬರಿಯ ಒಳದನಿಯಾಗಿದೆ. ಈ ಕಾದಂಬರಿ ಬಡತನ ಮತ್ತು ಅಸ್ಪೃಶ್ಯತೆ ಎಂತಹ

ಯಾತನೆಯನ್ನು ಉಂಟುಮಾಡುತ್ತವೆ ಎನ್ನುವುದನ್ನು ತೋರಿಸುತ್ತದೆ. ಈ ರೋಗಗಳು ನಿವಾರಣೆಯಾಗಬೇಕಾದರೆ ಮನುಷ್ಯರನ್ನು ಮನುಷ್ಯರಾಗಿಯೇ ಕಾಣಬೇಕೆನ್ನುವುದು ಈ ಕಾದಂಬರಿಯ ಆಶಯವಾಗಿದೆ."

**(ಶ್ರೀಧರ್ ಹೆಚ್.ಜಿ.(ಸಂ), 2009, ಪುಟ 325).**

## ೪.೧೪: ಇತಿಹಾಸದ ಮೊಗಸಾಲೆಯಲ್ಲಿ

ಬರಹಗಾರನೊಬ್ಬ ತಾನು ನೋಡಿದ ಅನುಭವಿಸಿದ ಎಷ್ಟೋ ವಿಚಾರಗಳು ಅವನ ಬರಹಗಳ ಮೂಲಕ ಒಂದು ಚೌಕಟ್ಟನ್ನು ಪಡೆದುಕೊಳ್ಳುವುದನ್ನು ಕಾಣಬಹುದು. ತನ್ನ ಮನಸ್ಸಿಗೆ, ಸಮಾಜಕ್ಕೆ ಒಪ್ಪಿತವಲ್ಲದ ಎಷ್ಟೋ ವಿಚಾರಗಳು ಘಟಿಸಿದಾಗ ಆತನ ಮನಸ್ಸು ಅದನ್ನು ವಿರೋಧಿಸುವುದು ಸಹಜ. ಆತನ ಕೃತಿಯಲ್ಲಿ ಬರುವ ಪಾತ್ರಗಳು ಅಂತಹ ವಿಚಾರಗಳಿಗೆ ಪ್ರತಿರೋಧವನ್ನು ಒಡ್ಡುತ್ತಿರುತ್ತವೆ.

ಕೆ.ಟಿ.ಗಟ್ಟಿಯವರು ಯಜಮಾನನ ಕ್ರೌರ್ಯವನ್ನು ಬಹಳ ಹತ್ತಿರದಿಂದ ಕಂಡವರು. ಇವರ 1991ರ ಸುಮಾರಿಗೆ ಪ್ರಕಟವಾದ 'ಇತಿಹಾಸದ ಮೊಗಸಾಲೆಯಲ್ಲಿ' ಕಾದಂಬರಿ ಮುಖ್ಯವಾಗಿ ಯಾಜಮಾನ್ಯ ಪದ್ಧತಿಯನ್ನು ವಿರೋಧಿಸುತ್ತಿರುವುದನ್ನು ಕಾಣಬಹುದು. ಯಾಜಮಾನ್ಯ ಪದ್ಧತಿ ತಲೆಮಾರಿನಿಂದ ತಲೆಮಾರಿಗೆ ಅವನತಿಯನ್ನು ಹೊಂದುತ್ತಾ ಬಂದಿರುವುದನ್ನು ಕಾದಂಬರಿ ವಿವರಿಸುತ್ತದೆ. ಹದಿಮೂರು ತಲೆಮಾರುಗಳ ಇತಿಹಾಸವನ್ನು ಈ ಕಾದಂಬರಿಯಲ್ಲಿ ಕಾಣಬಹುದು. ಯಜಮಾನರ ಅಟ್ಟಹಾಸವನ್ನು ಕಾದಂಬರಿ ಚಿತ್ರಿಸುತ್ತದೆ. ಇಂತಹ ಅಟ್ಟಹಾಸಕ್ಕೆ ಬಲಿಯಾದ ಊಳಿಗದವರ ವಿನಾಶದ ಬದುಕನ್ನು ಕಾದಂಬರಿ ತಿಳಿಸುತ್ತದೆ.

ಅಕ್ಕಮ್ಮನಿಗೂ ಅವಳ ಮಾವನ ಮಗ ಸುಬ್ಬನಿಗೂ ಸಂಬಂಧ ಇರುವುದು ಇಡೀ ಊರಿಗೇ ತಿಳಿದಿತ್ತು. ಆಕೆ ಆತನನ್ನು ಬೇಗನೆ ಮದುವೆಯಾಗಿ ಕೃಷ್ಣಯ್ಯ ಮತ್ತು ಕೇಶವಯ್ಯನವರ ಕಾಟದಿಂದ ತಪ್ಪಿಸಿಕೊಳ್ಳಬಯಸುತ್ತಾಳೆ. ಬಟ್ಯನ ಮಗಳು ಜಾನಕಿಯನ್ನು ಕೇಶವಯ್ಯ ಬಸಿರಾಗಿಸಿದ್ದಾನೆ. ಕೃಷ್ಣಯ್ಯ ಐತಪ್ಪನ ಹೆಂಡತಿ ದೆಯ್ಯಕ್ಕುವಿನೊಂದಿಗೆ ಸಂಬಂಧ ಇರಿಸಿಕೊಂಡಿದ್ದಾನೆ. ಅಂಬಾವರದ ಅರಮನೆಯಲ್ಲಿ ಹನ್ನೆರಡು ತಲೆಮಾರುಗಳು ಮುಗಿದು ಹದಿಮೂರನೆಯ ತಲೆಮಾರಿನ ಬದುಕು ನಡೆಯುತ್ತಿತ್ತು. ಅದು ಒಂದೆಕರೆ ವಿಸ್ತೀರ್ಣವುಳ್ಳ ಮಹಾ ಗೃಹ ಸಮುಚ್ಚಯವಾಗಿತ್ತು. ವೆಂಕಪ್ಪಯ್ಯನಿಗೆ ಕಮೀಷನರ್ ರೋಲಂಡ್ ಸಾಹೇಬರಿಂದಾಗಿ ಎರಡು ಗ್ರಾಮಗಳು ಅವನ ಸ್ವಂತ

ಆಸ್ತಿಯೆಂದು ಸಾರುವ ದಾಖಲೆ ಪತ್ರ ಲಭಿಸಿತ್ತು. ಆತನ ನಂತರ ಗೋಪಣಯ್ಯ ಮನೆಯ ಯಜಮಾನನಾಗಿ ಸ್ವಲ್ಪ ಸಮಯ ಬದುಕಿದ ನಂತರ ಅವನ ತಮ್ಮ ಮಾಧವಯ್ಯನಿಗೆ ದೊಡ್ಡ ಮನೆಯ ಒಡೆತನ ಬಂದಿತು. ಆ ಕಾಲದಲ್ಲಿ ಮನೆಯ ಖಜಾನೆ ತುಂಬಿ ತುಳುಕಿತು. ಮಾಧವಯ್ಯನ ಪೂರ್ವಜರು ಕ್ರೂರಿಗಳಾಗಿದ್ದರು. ಚಿಕ್ಕ ಪುಟ್ಟ ಕಳ್ಳತನಕ್ಕೆ ಕಂಗಿಗೆ, ತೆಂಗಿಗೆ ಕಟ್ಟಿಹಾಕಿ ಹೊಡೆದು ಸಾಯಿಸುತ್ತಿದ್ದರು. ಒಲ್ಲೆನೆಂದು ಹೇಳಿದ ಹೆಣ್ಣಿನ ಗುಡಿಸಲಿಗೆ ಬೆಂಕಿ ಹಾಕಿಸುತ್ತಿದ್ದರು. ಶಾಲೆಗೆ ಹೋದ ಆಳು ಮಕ್ಕಳನ್ನು ಶಾಲೆ ಬಿಡಿಸಿ ತೋಟದ ಕೆಲಸಕ್ಕೆ ತಳ್ಳುತ್ತಿದ್ದರು. ಮಾಧವಯ್ಯ ಸಾಯುವಾಗ ಕೆಲವು ತಲೆಮಾರುಗಳಿಗೆ ಬೇಕಾಗುವಷ್ಟು ಮಾಡಿಟ್ಟು ಹೋಗಿದ್ದ.

ದೊಡ್ಡ ಮನೆಯವರು ಆರಂಭಿಸಿದ ಯಕ್ಷಗಾನ ಮೇಳ ಅಂಬಾವರದಲ್ಲಿದೆ. ದೊಡ್ಡ ಮನೆಯ ಮುಂದೆ ಆಟ ನಡೆಯುತ್ತಿದ್ದಾಗ ಕೃಷ್ಣಯ್ಯ ಹೊಲೇರ ಅಂಗಾರನ ಹೆಂಡತಿಯ ಗುಡಿಸಲಿಗೆ ತೆರಳುತ್ತಾನೆ. ಆಕೆಯೊಂದಿಗೆ ರಾತ್ರಿ ಕಳೆಯುತ್ತಾನೆ. ಈ ವಿಚಾರ ಹಳ್ಳಿಯ ಎಲ್ಲರಿಗೂ ತಿಳಿದಿದೆ. ದೊಡ್ಡ ಮನೆಯಲ್ಲಿ ಕೃಷ್ಣಯ್ಯ, ಕೇಶವಯ್ಯ ನಾರಾಯಣಯ್ಯ ಈ ಮೂರು ಸಹೋದರರ ಸಂಸಾರಗಳು ಬೇರೆ ಬೇರೆ ಕಡೆ ಉಣ್ಣುತ್ತವೆ. ಅಕ್ಕಮ್ಮ ಕೃಷ್ಣಯ್ಯನ ಭಾಗದ ಮನೆಗೆಲಸ ಮಾಡುತ್ತಿದ್ದಳು. ಮನೆಯ ಮೂರು ಮಂದಿ ಯಜಮಾನರ ಹೆಂಡತಿಯರು ಅವರ ಮನೆಯ ಕತ್ತಲೆ ಮೂಲೆಗಳಲ್ಲಿ ತಮ್ಮ ಗಂಡಂದಿರ ಜೊತೆ ಅಕ್ಕಮ್ಮನನ್ನು ಕಂಡಿದ್ದರು. ಊರಿನ ಶ್ರೀಮಂತ ದೊಡ್ಡ ಮನೆಯ ಗೋಪಣಯ್ಯನಿಗೆ ಮಕ್ಕಳಿರುವುದಿಲ್ಲ. ಆ ಊರಿಗೆ ಬಂದ ಬ್ರಿಟಿಷ್ ಪ್ರವಾಸಿಯೊಬ್ಬನಿಂದಾಗಿ ಆಕೆ ಬಿಳಿ ಬಣ್ಣದ ಮಗುವಿಗೆ ಜನ್ಮ ನೀಡುತ್ತಾಳೆ. ಹಾಗಾಗಿ ಆ ತಲೆಮಾರಿನಲ್ಲಿ ಬಂದ ನಾರಾಯಣಯ್ಯನದು ಬಿಳಿಬಣ್ಣ ಹಾಗೂ ಬೆಕ್ಕಿನ ಕಣ್ಣಿನ ರೂಪ.

ಲಕ್ಷ್ಮಣಯ್ಯ ಗೇಣಿ ಕೊಡದಿರುವ ಕೊರಗಪ್ಪನನ್ನು ಕರೆಸಿ ಬೈಯುತ್ತಾನೆ. ಹಾಗೆ ಬೈದಾಗ ತಕ್ಷಣ ಮಾತನಾಡಿದರೆ ಆತನಿಗೆ ಕೋಪಬರುತ್ತದೆ. ಅಲ್ಲದೆ, 'ದನಿಗಳೊಡನೆ ಮಾತಾನಾಡುವಾಗ ಹೆಂಡ್ತಿ' ಅನ್ನಬಾರದು. 'ಅವಳು' ಅಥವಾ 'ಮನೆಯವಳು' ಎನ್ನಬೇಕು. ಕೀಳು ಜಾತಿಯವರೆನಿಸಿಕೊಂಡವರು ದನಿಗಳೊಡನೆ ಮಾತನಾಡುವಾಗ ಶಬ್ದಗಳನ್ನು ಸ್ಪಷ್ಟವಾಗಿ ಉಚ್ಚರಿಸುವುದು, ಸ್ಫುಟವಾಗಿ ಗಟ್ಟಿಯಾಗಿ ಮಾತಾನಾಡುವುದು ಆಕ್ಷೇಪಾರ್ಹವಾಗಿತ್ತು. ಮಹಾಪ್ರಾಣಗಳ ಜಾಗದಲ್ಲಿ ಅಲ್ಪ ಪ್ರಾಣಗಳನ್ನು ಉಪಯೋಗಿಸ ಬೇಕಾಗಿತ್ತು. ತನ್ನ ಮನೆಯನ್ನು 'ಮನೆ' ಎನ್ನಬಾರದು. 'ಹಟ್ಟಿ'ಯೆನ್ನಬೇಕು. ಚೌತಿಯಿರಲಿ, ಅಷ್ಟಮಿಯಿರಲಿ, ದೀಪಾವಳಿಯಿರಲಿ ಎಲ್ಲವನ್ನು 'ಒಳ್ಳೆಯ ದಿನ' ಎಂಬ

ಒಂದು ಶಬ್ದದಿಂದ ಸೂಚಿಸಬೇಕು. ವಾಸ್ತವದಲ್ಲಿ, ಬಡವರಿಗೆ ಒಳ್ಳೆಯ ದಿನ ಎಂಬುದು ಶಬ್ದದಲ್ಲಿ ಮಾತ್ರವೇ ಆಗಿತ್ತು"
**(ಇತಿಹಾಸದ ಮೊಗಸಾಲೆಯಲ್ಲಿ, 1991. ಪುಟ 64)**

"ಊರಿನ ದೇವಾಲಯದಲ್ಲಿ ಸ್ವತಂತ್ರವಾಗಿ ಎಲ್ಲಾ ಕಡೆ ವಿಹರಿಸುವ ಅವಕಾಶ ದೊಡ್ಡ ಮನೆಯವರದು ಮತ್ತವರ ಪಾಳ್ಯದವರಿಗೆ ಮಾತ್ರ. ಅವರು ಮತ್ತು ಅವರ ಜಾತಿಯವರಿಗೆ ಕುಳಿತುಕೊಳ್ಳಲು ಬೇರೆ ಜಾಗ, ಇತರ ಜಾತಿಯವರು ಕುಳಿತುಕೊಳ್ಳಲು ಬೇರೆ ಜಾಗ. ದೇವಾಲಯದ ಒಳ ಸುತ್ತಿಗೆ ದೊಡ್ಡ ಮನೆಯವರು ಮತ್ತು ಅವರ ಜಾತಿಯವರಿಗೆ ಮಾತ್ರ ಪ್ರವೇಶ. ಗಾಂಧಿ ಅಸ್ಪೃಶ್ಯರಿಗಾಗಿ ಹೋರಾಡಿ ಸತ್ತು ಹದಿನೈದು ವರ್ಷ ಕಳೆಯಿತು ಆದರೂ ಅಂಬಾವರದಲ್ಲಿ ಹರಿಜನರೆಂದು ಕರೆಸಿಕೊಳ್ಳುವ ಆ ಜನಗಳಿಗೆ ದೇವಸ್ಥಾನದ ಮುಂದಿನ ಗದ್ದೆಯನ್ನು ದಾಟಿ ದೇವಸ್ಥಾನದ ಕಡೆಗೆ ಒಂದು ಹೆಜ್ಜೆ ಇಡುವ ಧೈರ್ಯ ಕೂಡಾ ಬಂದಿಲ್ಲ" ಸ್ವಾತಂತ್ರ್ಯಾನಂತರ ದೇಶದಲ್ಲಿ ಉಂಟಾಗುತ್ತಿದ್ದ ಅರಾಜಕತೆ,

**(ಅದೇ, ಪುಟ 70).**

ಭ್ರಷ್ಟಾಚಾರದ ಸುಳಿವನ್ನು ಕಾದಂಬರಿ ನೀಡುತ್ತದೆ. ಊರಲ್ಲಿ ಧಾರಾಳವಾಗಿ ಸಾರಾಯಿ ಸಿಗುತ್ತಿತ್ತು. ಕಳ್ಳ ಭಟ್ಟಿ ದಂಧೆ ಶುರುವಾಗಿ ಬಿಟ್ಟಿತ್ತು. ಅವರು ಪೋಲೀಸರಿಗೆ ಸಿಕ್ಕಿಬಿಟ್ಟರೂ ಸುಲಭವಾಗಿ ಪಾರಾಗುತ್ತಿದ್ದರು. "ಕಣ್ಣಲ್ಲಿ ರಕ್ತವಿರುವ ಪೋಲಿಸರ ಕೈಗೆ ಇಪ್ಪತ್ತೈದು ಹೆಚ್ಚೆಂದರೆ ಐವತ್ತು ರೂಪಾಯಿ ತುರುಕಿದರೆ ಅವರು ಆನಂದವಾಗಿ ಕೇಸು ಬಿಟ್ಟು ಹೋಗುತ್ತಿದ್ದರು"

**(ಅದೇ, ಪುಟ 75)**

"ಹಬ್ಬ ಎಂದರೆ ಮಾಂಸದೂಟ, ಕುಡಿತ, ಮೋಜು, ಜಗಳ, ಕೂಗಾಟ, ಅರಚಾಟ ಮಾರಾಮಾರಿ. ಪ್ರತಿ ಭಾನುವಾರ ಹಬ್ಬ ! ಒಂದು ಕಾಲದಲ್ಲಿ ಹಿಂದೂ ಮತದಿಂದ ಕಿರಿಸ್ತಾನರಾಗಿ ಮತಾಂತರ ಹೊಂದಿದ ಜನಗಳ ಮಕ್ಕಳು, ಮೊಮ್ಮಕ್ಕಳು ಈ ರೀತಿಯಲ್ಲಿ ತಾವು ಯುರೋಪಿಯನರು, ಕಿರಿಸ್ತಾನರು ಎಂದು ತೋರಿಸಿಕೊಳ್ಳುತ್ತಿದ್ದರು".

**(ಅದೇ, ಪುಟ 75)**

ಪಿಯಾದಳ ಮನೆಯಲ್ಲಿ ಕುಡಿದು ಬಂದು ತೋಡಿಗೆ ಬಿದ್ದ ಕೃಷ್ಣಯ್ಯನನ್ನು ಯಮುನ ಚೆನ್ನಾಗಿ ತರಾಟೆಗೆ ತೆಗೆದುಕೊಂಡಳು. ಆಕೆ ಉದ್ದನೆಯ ಕತ್ತಿ ಎದೆಗೊತ್ತಿಕೊಂಡು ಇರಿದು ಸಾಯುತ್ತೇನೆ ಎನ್ನುತ್ತಿದ್ದಳು. ಇನ್ನು ಸೂಳೆಯರ ಬಳಿಗೆ ಹೋಗುವುದಿಲ್ಲವೆಂದು ಹೇಳುವಂತೆ ಗಂಡನಿಂದ ದೇವರು, ದೈವಗಳಿಗೆ ಆಣೆ ಹಾಕಿಸಿದ್ದಳು. ಅಂದಿನಿಂದ

ಕೃಷ್ಣಯ್ಯ ಹಗಲು ಮೊಗಸಾಲೆಯಲ್ಲಿಯೇ ಕಳೆಯ ತೊಡಗಿದ. ಆದರೆ ಮಧ್ಯಾಹ್ನದ ಒಳಗೆ ಪಂಚೆಯನ್ನು ತೊಡೆ ಕಾಣಿಸುವಂತೆ ಎತ್ತಿಕಟ್ಟಿ ಹೊರ ಹೊರಡುತ್ತಾನೆ. ಊರಿನ ಜಾತ್ರೆಯ ಸಂದರ್ಭದಲ್ಲಿ ನಾರಾಯಣಯ್ಯನಿಗೆ ಮಂಗಳೂರಿನಲ್ಲಿ ನರ್ಸಿಂಗ್ ಓದುತ್ತಿದ್ದ ಅಣ್ಣು ಮಡಿವಾಳನ ಮಗಳು ಕಾಣಿಸುತ್ತಾಳೆ.

ಅಗೋಚರ ಜಗತ್ತಿನಲ್ಲಿ ವೆಂಕಪ್ಪಯ್ಯ ಹಾಗೂ ಬ್ರಿಟಿಷ್ ಅಧಿಕಾರಿ ರೋಲೆಂಡ್ ಮಧ್ಯೆ ಮಾತುಕತೆ ನಡೆಯುತ್ತದೆ. ರೋಲೆಂಡ್ ವೆಂಕಟ್ಟಯ್ಯನೊಂದಿಗೆ "ದೇವರ ಹೆಸರಿನಲ್ಲಿ ನಿಮ್ಮ ದೇಶದಲ್ಲಿ ನಡೆಯುವಷ್ಟು ಶೋಷಣೆ ಬೇರೆ ಯಾವ ದೇಶದಲ್ಲೂ ನಡೆಯಲಿಕ್ಕಿಲ್ಲ. ಈ ದೇಶದಲ್ಲಿ ಒಂದು ದಿನ ದೇವರ ಮಡಿಲಿಗೆ ಬೀಳುವ ಹಣವೆಷ್ಟು? ಈ ಹಣದಿಂದ ಐದೇ ವರ್ಷದಲ್ಲಿ ಇಡೀ ದೇಶದ ಎಲ್ಲಾ ಅವಿದ್ಯಾವಂತರನ್ನು ವಿದ್ಯಾವಂತರನ್ನಾಗಿ ಮಾಡಬಹುದು"ಎನ್ನುತ್ತಾನೆ.

**(ಅದೇ, ಪುಟ 109)**

"ನೀವು ನಿಮ್ಮ ಹೆಂಗಸರನ್ನು ನಡೆಸಿಕೊಳ್ಳುವ ರೀತಿ ನೋಡಿ ನಗುಬರುತ್ತದೆ. ನಿಮ್ಮ ಸಂಸ್ಕೃತಿ ನಿಮ್ಮ ಫಿಲಾಸಫಿ ಭವ್ಯವಿರಬಹುದು. ಆದರೆ ಎಲ್ಲದಕ್ಕೂ ಹಿರಿಯಳಾದ ಹೆಣ್ಣನ್ನು ಅರ್ಥಮಾಡಿಕೊಳ್ಳುವ ಪ್ರಯತ್ನವನ್ನು ನೀವು ಎಂದೂ ಮಾಡಲಿಲ್ಲ. ಮಾಡುತ್ತಿದ್ದರೆ ವಿಧವೆ ಎಂಬ ವಿಶಿಷ್ಟಾರ್ಥದ ಶಬ್ದವೇ ನಿಮ್ಮ ಭಾಷೆಯಲ್ಲಿರುತ್ತಿರಲಿಲ್ಲ. ಗಂಡನ ಶವದೊಡನೆ ಅವಳನ್ನು ನೀವು ಸುಡುತ್ತಿರಲಿಲ್ಲ. ಕತ್ತಲು ಕೋಣೆಯಲ್ಲಿ ಕೂಡಿ ಹಾಕುತ್ತಿರಲ್ಲಿಲ್ಲ. ಇದನ್ನು ಏನೆಂದು ತಿಳಿಯಬೇಕು. ಅನಾಗರಿಕತೆಯೆ, ಭಯವೆ, ಅಜ್ಞಾನವೇ?" ಎಂದು ಹೇಳುತ್ತಾನೆ.

**(ಅದೇ, ಪುಟ 111).**

ಅಂಬಾವರದಲ್ಲಿ ಯಾರೂ ಮನೆಗೆ ಹೆಂಚು ಹೊದಿಸಬಾರದೆಂಬ ಕಾನೂನಿತ್ತು. ಆಗ ಹೆಂಚು ಹೊದಿಸಿದ ಮಾಡುಗಳಿದ್ದುದು ದೊಡ್ಡ ಮನೆಗೆ, ವೆಂಕಟರಮಣ ದೇವಸ್ಥಾನಕ್ಕೆ, ಭೂತದ ಗುಡಿಗಳಿಗೆ. ಯಾರೂ ಮಹಡಿ ಮನೆ ಕಟ್ಟಿಸಬಾರದೆಂಬ ಕಾನೂನು ಕೂಡಾ ಇತ್ತು. ಹೆಂಚು ಹೊದಿಸಿದರೆ ಜುಮಾದಿ ಮತ್ತು ಪಂಜುರ್ಲಿ ದೈವಗಳಿಗೆ ಸಿಟ್ಟು ಬಂದು ಅವರ ಸಂತಾನವನ್ನು ನಿರ್ಮೂಲನಗೊಳಿಸುವುದು ಎಂಬ ನಂಬಿಕೆಯಿತ್ತು. ಇದು ದೊಡ್ಡ ಮನೆಯ ಯಾಜಮಾನರೇ ಮಾಡಿದ ಕಾನೂನಾಗಿತ್ತು.

ದೊಡ್ಡ ಮನೆಯ ಚಿಕ್ಕದಣಿ ರಘುರಾಮಯ್ಯ ಪಟ್ಟಣದಲ್ಲಿ ನರ್ಸಿಂಗ್ ಓದುತ್ತಿದ್ದ ಅಣ್ಣು ಮಡಿವಾಳನ ಮಗಳು ಕಲ್ಯಾಣಿಯನ್ನು ಊರ ಜಾತ್ರೆಗೆ ಬಂದಾಗ ಕಾಣುತ್ತಾನೆ. ಆಕೆಯೊಂದಿಗೆ ಮಾತನಾಡಿಸಲು ಆಕೆಯ ಮನೆಗೂ ತೆರಳುತ್ತಾನೆ. ಕಲ್ಯಾಣಿಯನ್ನು ಡಾಕ್ಟರನೊಬ್ಬ ಮದುವೆಯಾಗಿ ನಂಬಿಸಿ ಕೈ ಕೊಟ್ಟಿದ್ದ. ರಘುರಾಮನಿಗೆ ಆಕೆಯ ಮೇಲೆ ಏನೋ ಒಂದು ರೀತಿಯ ಆಕರ್ಷಣೆ ಇತ್ತು. ಕಲ್ಯಾಣಿಯ ತಂದೆ ಅಣ್ಣು ಮಡಿವಾಳನಿಗೆ ರಘುರಾಮ ಪಂಪು ತೆಗೆಸಿಕೊಟ್ಟ ಸುದ್ದಿ ಕೇಳಿ ಕೃಷ್ಣಯ್ಯ ಮಗನ ಮೇಲೆ ಸಿಡುಕಾಡಿದ. ಕೃಷ್ಣಯ್ಯ ರಘುರಾಮನಿಗೆ ಹೊಡೆಯಲು ಬರುತ್ತಾನೆ. ಆಗ ರಘುರಾಮಯ್ಯನ ರೋಷ ಕೆರಳುತ್ತದೆ. ನೀವೆಲ್ಲ ಮಾಡುವುದು ಯಾರಿಗೆ ಗೊತ್ತಿಲ್ಲ? ನಾನು ನಿಮ್ಮ ಹಾಗೆ ಶರಾಬು ಕುಡೀಲಿಲ್ಲ. ಸೂಳೆಗಾರಿಕೆ ಮಾಡ್ಲಿಲ್ಲ. ಅಣ್ಣುವಿನ ಮನೆಗೆ ಹೋದ್ರೆ ಏನಾಯ್ತು ? ಅವನ ಜಾತಿಯವರು ಮಡಿ ಮಾಡಿದ ಬಟ್ಟೆ ಹಾಕ್ಕೊಂಡು ಹೊಲೇರ ಹಟ್ಟಿಯಲ್ಲಿ ಮಲಗ್ತೀರಿ ! ನಾನು ಅಂಥದೇನೂ ಮಾಡ್ಲಿಲ್ಲ. ನಾನು ಅಣ್ಣುವಿನ ಮಗಳನ್ನು ಮದುವೆಯಾಗ್ತೇನೆ"

**(ಅದೇ ಪುಟ 142).**

ಎನ್ನುತ್ತಾನೆ. ಬೀರಗೆಯ ಮನೆಗೆ ಬಂದ ಕೃಷ್ಣಯ್ಯ ಆಕೆಯೊಡನೆ ನೀನು ಹೂಂ ಅಂದ್ರೆ ಅವಳನ್ನು ನೋಡಿಕೊಳ್ಳೋ ಜವಾಬ್ದಾರಿ ನನ್ನದು ಎಂದು ಇಟ್ಟುಕೊಳ್ಳುವ ಮಾತನಾಡಿದ. ಅಕ್ಕಮ್ಮ ಸ್ನಾನ ಮಾಡುವಾಗ ಅವಳ ದೇಹವನ್ನು ಕೃಷ್ಣಯ್ಯ ಕದ್ದು ನೋಡುತ್ತಾನೆ. ಅಕ್ಕಮ್ಮನ ಬೈಗುಳ ಕೇಳಿ ಓಡಿ ಹೋಗುತ್ತಾನೆ. ಕ್ಷೌರಿಕ ಕಿಟ್ಟನ ಮೂರನೇ ಹೆಂಡತಿ ತುಂಗನ ಸಂಗ ಮಾಡಲು ಆಕೆಯ ಮನೆಗೆ ಹೋದ ನಾರಾಯಣನಿಗೆ ಅಲ್ಲಿಂದ ತಪ್ಪಿಸಿಕೊಳ್ಳುವ ಸಂದರ್ಭದಲ್ಲಿ ಸೊಂಟ ಉಳುಕುತ್ತದೆ. ಅಜ್ಜಂಪುರ ಮೇಳದಲ್ಲಿ ಸೇರಿಕೊಳ್ಳುವ ಅವಕಾಶ ಲಭಿಸಿದರೂ ಸುಬ್ಬ ಅಂಬಾರವರ ಮೇಳದಲ್ಲಿದ್ದರೆ ತನಗೆ ಅನುಕೂಲವೆಂದು ಭಾವಿಸುತ್ತಾನೆ. ಆತ ಬಹಳ ಸರಳವಾಗಿ ಹತ್ತಿಪ್ಪತ್ತು ಜನ ಬಂಧು ಬಳಗದವರ ಸಮ್ಮುಖದಲ್ಲಿ ಅಕ್ಕಮ್ಮನನ್ನು ಮದುವೆಯಾಗುತ್ತಾನೆ. ಮೇಳ ಹೊರಡಲು ಇನ್ನೂ ಒಂದೆರಡು ತಿಂಗಳು ಕಾಯಬೇಕು, ಖರ್ಚಿಗೆ ಹಣವಿಲ್ಲದಿದ್ದಾಗ ಸುಬ್ಬ ರಘುರಾಮಯ್ಯನ ಬಳಿ ಬಂದು ಕೂಲಿ ಕೆಲಸ ಯಾಚಿಸಿದ. ಅಲ್ಲದೆ ತನಗೆ ಮನೆ ಕಟ್ಟಲು ಜಾಗ ಕೇಳಿದ. ರಘುರಾಮಯ್ಯ ಆತನಿಗೆ ಸರಕಾರಿ ಜಾಗ ತೋರಿಸಿ ಮನೆಕಟ್ಟಿಕೊಳ್ಳಲು ತಿಳಿಸುತ್ತಾನೆ.

ಈಶ್ವರಯ್ಯನ ಹಿರಿಯ ಮಗ ವಾಸುದೇವಯ್ಯನು ತಂದೆ ನಡೆದ ದಾರಿಯಲ್ಲೇ ಮುಂದುವರಿಯುತ್ತಿದ್ದ. ಸರ್ಕಸ್ ಕಂಪೆನಿಯ ಕ್ರಿಶ್ಚಿಯನ್ ಹುಡುಗಿಯನ್ನು ಮದುವೆಯಾಗಬೇಕೆಂದು ಆತ ನಿರ್ಧರಿಸಿದ್ದ. ಆದರೆ ಅದು ಸಾಧ್ಯವಾಗದಿದ್ದಾಗ ಮಾನಸಿಕವಾಗಿ ವಿಚಲಿತನಾಗಿದ್ದ. ನಂತರ ತಾನೊಂದು ಹುಡುಗಿಯನ್ನು ಲವ್

ಮಾಡಬೇಕೆಂದು ನಿರ್ಧರಿಸುತ್ತಾನೆ. ಹಣಕ್ಕಾಗಿ ಅಪ್ಪನೊಂದಿಗೆ ಆಸ್ತಿಯಲ್ಲಿ ಪಾಲು ಕೇಳಬೇಕೆಂದು ಯೋಚಿಸುತ್ತಾನೆ. ಕಾಲ ಕಳೆದಂತೆ ದೊಡ್ಡ ಮನೆಯಲ್ಲಿದ್ದ ಐಶ್ವರ್ಯ ಕಡಿಮೆಯಾಗತೊಡಗಿತು. ಇವನ ಆಸ್ತಿ ಬೇರೆಯವರ ಪಾಲಾಗಿತ್ತು. ಕೃಷಿಯನ್ನು ಸರಿಮಾಡಿ ನೋಡಿಕೊಳ್ಳುವವರು ಇರಲಿಲ್ಲ. ಹಿಂದೆ ದಿನಕ್ಕೆ ನೂರಿನ್ನೂರು ಜನರಿಗೆ ಊಟ ಹಾಕಲಾಗುತ್ತಿದ್ದ ಮನೆಯಲ್ಲಿ ಈಗ ಮನೆಮಂದಿಗೆ ಅನ್ನ ಬೇಯಿಸಲು ಬೇಕಾದಷ್ಟು ಅಕ್ಕಿಯಿಲ್ಲ ಎಂಬ ಪರಿಸ್ಥಿತಿಯುಂಟಾಗಿದೆ. ತಮ್ಮ ಭೂಮಿಗಳನ್ನು ಮಾರಾಟ ಮಾಡಲಾರಂಭಿಸುತ್ತಾರೆ. ನಾರಾಯಣಯ್ಯನ ಮಗಳು ಕಾಲೇಜಿನಲ್ಲಿದ್ದಾಗ ಶಿವಪ್ರಸಾದ ಎಂಬ ಹುಡುಗನನ್ನು ಪ್ರೀತಿಸಿ ಗರ್ಭಿಣಿಯಾಗುತ್ತಾಳೆ. ತಾಯಿ ಸುಮಿತ್ರಮ್ಮ ದೆಯ್ಯಕ್ಕು ಎಂಬ ಮುದುಕಿಯ ಮೂಲಕ ಅವಳ ಗರ್ಭ ತೆಗೆಸುವ ಪ್ರಯತ್ನ ನಡೆಸುತ್ತಾಳೆ. ಆದರೆ ಆಕೆ ಬದುಕಿ ಉಳಿಯುವುದಿಲ್ಲ.

ಜವಾಹರಲಾಲರ ಕನಸಿನಲ್ಲಿ ವಾರನ್ ಹೇಸ್ಟಿಂಗ್ ಕಾಣಿಸಿಕೊಳ್ಳುತ್ತಾನೆ. ಆತ ಈ ದೇಶದ ಬಗ್ಗೆ ಮಾತನಾಡುತ್ತಾನೆ. "ನಮ್ಮ ಹದಿನೈದು ಪಟ್ಟು ಜನ ಇರುವ ನಿಮ್ಮ ದೇಶದಲ್ಲಿ ಕಳೆದ ಹದಿನೇಳು ವರ್ಷಗಳಲ್ಲಿ ಏನು ನಡೆಯಿತು? ಪುನಃ ಭಜನೆ, ಪೂಜೆ, ರಥ ಕಟ್ಟುವುದು, ಗುಡಿ ಕಟ್ಟುವುದು ಮುಂದುವರಿಸಿದ್ದೀರಿ. ಘಜನಿ, ಘೋರಿ, ನಾದಿರ್ - ಷಾ, ಪೋರ್ಚುಗೀಸರು, ಡಚ್ಚರು, ಫ್ರೆಂಚರು ಎಲ್ಲರೂ ನಿಮ್ಮ ಧನ, ಕನಕ, ವಜ್ರ ವೈಢೂರ್ಯ, ಕಲ್ಲಿನ ಮೂರ್ತಿ, ಚಿನ್ನದ ಮೂರ್ತಿಗಳನ್ನು ಎತ್ತಿಕೊಂಡು ಹೋದರು. ದೇವಾಲಯಗಳನ್ನು ಸೀಳಿ ಒಳಗಿದ್ದುದನ್ನು ಕಿತ್ತುಕೊಂಡರು ನಿಮ್ಮಿಂದ ಏನೂ ಮಾಡಲಾಗಲಿಲ್ಲ. ನೀವು ಓಂ ಭೂರ್ಭುವಸ್ವ........ಅಂತ ಜಪಿಸಿದ್ದೀರಿ ಏನೂ ಪ್ರಯೋಜವಾಗಲಿಲ್ಲ."ಎನ್ನುತ್ತಾನೆ.

**(ಅದೇ, ಪುಟ 171)**

ವಾರನ್ ಹೇಸ್ಟಿಂಗ್, ಕಾಣಿಸಿಕೊಂಡು ಹೇಳುತ್ತಾನೆ. "ದೇವರು ಧರ್ಮದ ಬಗ್ಗೆ ಬುರುಡೆ ಬಿಡುವುದರಲ್ಲಿ ನಿಮಗೆ ಸಾಟಿಯೇ ಇಲ್ಲ. ದೇವರು ತನ್ನ ಎಲ್ಲಾ ಅವತಾರಗಳನ್ನು ನಿಮ್ಮ ದೇಶದಲ್ಲೇ ಎತ್ತುವ ಹಾಗೆ ಮಾಡಿದ್ದೀರಿ ನೀವು. ಆದರೆ ನೆನಪಿಟ್ಟುಕೊಳ್ಳಿ: ನಾಳೆ ನಿಮ್ಮ ಜುಟ್ಟು ಚೈನದ ಅಥವಾ ಪಾಕಿಸ್ತಾನದ ಕೈಗೆ ಸಿಕ್ಕಿದರೆ ನಿಮ್ಮ ದೈವ ದೇವರುಗಳು ಒಂದೂ ಉಳಿಯೋಲ್ಲ. ನಿಮ್ಮ ಚಿನ್ನದ ತೇರುಗಳ ವಿಚಾರ ಅಂತಿರಲಿ ನಿಮ್ಮ ಕಟ್ಟಿಗೆಯ ತೇರೂ ಉಳಿಯುವುದಿಲ್ಲ".

ರಘುರಾಮಯ್ಯ ಕುಳಿತುಕೊಂಡು ಈ ಮನೆ, ದೇವಸ್ಥಾನ, ಮುದಿ ತೋಟ, ಬಂಚೆ ಗದ್ದೆಗಳು ಇವನ್ನೆಲ್ಲಾ ಮಾರಿ ಈ ಹುಡುಗಿಯರನ್ನು ಸಿಕ್ಕ ಸಿಕ್ಕವರಿಗೆ ಮದುವೆ ಮಾಡಿಕೊಟ್ಟು ಮಂಗಳೂರಿನಲ್ಲಿ ಚಿಕ್ಕ ಮನೆ ಮಾಡಿಕೊಂಡು ಒಂದು ಅಂಗಡಿ ಇಟ್ಟುಕೊಂಡು ಆರಾಮವಾಗಿ ಬದುಕಬಹುದು ಎಂದು ಯೋಚಿಸುತ್ತಾನೆ.

ಕೇಶವಯ್ಯ ಮತ್ತು ಕೃಷ್ಣಯ್ಯನ ಹೆಂಡತಿಯರು ತಮ್ಮ ಗಂಡಂದಿರು ನಡೆಸುತ್ತಿರುವ ವ್ಯಭಿಚಾರವನ್ನು ಅವರಲ್ಲಿಯೇ ಪ್ರಶ್ನಿಸುತ್ತಾರೆ, ವಿರೋಧಿಸುತ್ತಾರೆ. ವಾಸುದೇವಯ್ಯ ತಂದೆಯೊಂದಿಗೆ ಹಣಕೇಳುತ್ತಾನೆ. ಕೊಡದಿದ್ದಾಗ ಕಪಾಟಿನಿಂದ ಐದು ಸಾವಿರ ಹಿಡಿದುಕೊಂಡು ನಾಪತ್ತೆಯಾಗುತ್ತಾನೆ. ಅಕ್ಕಮ್ಮ ದೊಡ್ಡ ಮನೆಯ ಕಸ ಮುಸುರೆ ತಿಕ್ಕಿ ತರುವ ಅನ್ನವನ್ನು ಉಣ್ಣುತ್ತಾ ಹಾಯಾಗಿರಲು ತನ್ನಿಂದ ಸಾಧ್ಯವಿಲ್ಲ ಎಂದುಕೊಂಡು ಸುಬ್ಬ ಕೆಲಸ ಹುಡುಕಿಕೊಂಡು ಹೋಗುತ್ತಾನೆ. ಐದು ರೂಪಾಯಿ ದಿನಗೂಲಿಯಲ್ಲಿ ಸುಬ್ಬ ರಸ್ತೆ ಕೆಲಸಕ್ಕೆ ಸೇರಿಕೊಳ್ಳುತ್ತಾನೆ. "ಸರಕಾರಿ ಭೂಮಿ ಯಾವುದು, ದೊಡ್ಡ ಮನೆಯ ಭೂಮಿ ಯಾವುದು ಎಂದು ಬಡವರಿಗೆ ಗೊತ್ತಿರಲಿಲ್ಲ. ಇನ್ನೂರು ವರ್ಷಗಳಿಂದ ಸರಕಾರಿ ಭೂಮಿಯಲ್ಲಿ ವಾಸಿಸುತ್ತಿದ್ದವರಿಂದಲೂ ಗೇಣಿ ವಸೂಲಾಗುತ್ತಿತ್ತು" ಗೇಣಿ ಕೊಡಲಿಲ್ಲವೆಂದು ಸರಕಾರಿ ಭೂಮಿಯಿಂದಲೂ ಎಬ್ಬಿಸಿ ಓಡಿಸಲಾಗಿತ್ತು.

**(ಅದೇ, ಪುಟ 218).**

ಎಪ್ಪತ್ತು ವರ್ಷ ವಯಸ್ಸಿನ ಮುದುಕಿ ಅಂಗಾರು ಈಶ್ವರಯ್ಯನ ತೋಟದಲ್ಲಿ ಬಿದ್ದ ಅಡಿಕೆಗಳನ್ನು ಹೆಕ್ಕುತ್ತಿರುವುದನ್ನು ನೋಡಿ ಆಕೆಯ ಬಟ್ಟೆ ಬಿಚ್ಚಿಸಿ ಅಡಿಕೆಗಳನ್ನು ಆ ಬಟ್ಟೆಯಲ್ಲಿ ಕಟ್ಟಿಸಿ, ತನ್ನ ಮನೆ ತನಕ ಹೊರಿಸಿಕೊಂಡು ಹೋಗುತ್ತಾನೆ. ಈ ನೋವಿನಿಂದ ಅನ್ನ ನೀರು ಬಿಟ್ಟ ಆಕೆ ಸಾಯುತ್ತಾಳೆ. ಮಗ ರಘುರಾಮಯ್ಯ ಕಲ್ಯಾಣಿಯನ್ನು ಮದುವೆಯಾಗುವ ತೀರ್ಮಾನ ಮಾಡಿದ್ದ ವಿಷಯ ತಿಳಿದ ತಂದೆ ಕೃಷ್ಣಯ್ಯ ಮೊದಲು ಹತ್ತು ಎಕರೆ ಜಾಗ ಮಾರಿ ಇಬ್ಬರು ಮಕ್ಕಳಿಗೆ ಮದುವೆ ಮಾಡಿಸುವ ತೀರ್ಮಾನ ಮಾಡಿದ. ಆದರೆ ಕಲ್ಯಾಣಿಯನ್ನು ರಘುರಾಮ ಮದುವೆ ಆಗುವುದನ್ನು ನಿರಾಕರಿಸುತ್ತಾನೆ. ಆತ ಬ್ರಾಹ್ಮಣ ಹುಡುಗಿಯನ್ನೇ ಮದುವೆಯಾಗಬೇಕು, ಕಲ್ಯಾಣಿಯನ್ನು ಇಟ್ಟುಕೊಳ್ಳಬಹುದು ಎಂದು ತಿಳಿಸುತ್ತಾನೆ. ಕೆಲವೇ ದಿನಗಳಲ್ಲಿ ಜ್ವರ ಹೆಚ್ಚಾಗಿ ಕೃಷ್ಣಯ್ಯ ಸಾಯುತ್ತಾನೆ. ಕೇಶವಯ್ಯನೊಂದಿಗೆ ಐದು ಸಾವಿರ ಕಿತ್ತುಕೊಂಡು ಹೋದ ಮಗ ವಾಸುದೇವಯ್ಯ ಅಕ್ಕಮ್ಮ ಎಂಬ ಸೂಳೆಯ ಮಗಳೊಂದಿಗೆ ಬದುಕು ಆರಂಭಿಸಿದ್ದ. ಆಕೆ ಗಂಡು ಮಗುವಿಗೆ ಜನ್ಮವಿತ್ತಿದ್ದಳು. ಅಜ್ಜಂಪುರ ಮೇಳದ ತಿರುಗಾಟ ಮುಗಿಸಿಬಂದ

ಸುಬ್ಬನ ಜೇಬಿನಲ್ಲಿದ್ದ ಸಾವಿರದ ಆರುನೂರು ರೂಪಾಯಿ ಖಾಲಿಯಾದಾಗ ಅರಗೋಡು ಶಂಕರನಾರಾಯಣ ಕೆದ್ಲಾಯರ ಅಡಿಕೆ ತೋಟದಲ್ಲಿ ಕೂಲಿ ಕೆಲಸಕ್ಕೆ ಸೇರಿಕೊಂಡ. ತಂದೆಯ ಸಾವಿನಿಂದಾಗಿ ಸಂಸಾರದ ಜವಾಬ್ದಾರಿ ರಘುರಾಮಯ್ಯನ ಮೇಲೆ ಬಂತು. ತಾನೇ ಯಕ್ಷಗಾನ ಮೇಳ ಕಟ್ಟುವ ಯೋಚನೆ ಬಂತು. ಸುಬ್ಬನಿಗೆ ಹೇಳಿ ಕಳಿಸಿದ. ಮಿತ್ತೋಡಿಯ ಒಂದೆಕರೆ ತೆಂಗಿನ ತೋಟವನ್ನು ಇಪ್ಪತ್ತೈದು ಸಾವಿರಕ್ಕೆ ಮಾರಿದ. ಯಕ್ಷಗಾನ ಮೇಳ ತಿರುಗಾಟ ಆರಂಭಿಸಿತು. ಆದರೆ ಹೆಚ್ಚೇನು ಲಾಭಗಳಿಸಲಾಗಲಿಲ್ಲ.

ಅಂಬಾವರದ ಶಾಲೆಯಲ್ಲಿ ಮೊದಲು ಹರಿಜನ ಮಕ್ಕಳಿಗೆಂದು ಒಂದು ಪ್ರತ್ಯೇಕ ಬೆಂಚು ಇರುತ್ತಿತ್ತು. ಅವರು ಅಂಬಾವರದ ವೆಂಕಟರಮಣ ದೇವಸ್ಥಾನವನ್ನು ಎಂದೂ ಪ್ರವೇಶಿಸಲಿಲ್ಲ. ದೇವಸ್ಥಾನದ ಒಳ ಅಂಗಣಕ್ಕೆ ಹರಿಜನರಿಗೆ ಮಾತ್ರವಲ್ಲ ಶೂದ್ರರಿಗೆ ಕೂಡಾ ಪ್ರವೇಶವಿರಲಿಲ್ಲ. ರಘುರಾಮಯ್ಯ ಕಲ್ಯಾಣಿಯ ಬಗ್ಗೆ ವಿಚಾರಿಸಲು ಆಕೆಯ ತಂದೆ ಅಣ್ಣು ಮಡಿವಾಳನ ಬಳಿಗೆ ಹೋದಾಗ ಆಕೆ ಆರ್ಮಿಯ ಡಾಕ್ಟರ್ ಒಬ್ಬನನ್ನು ಮದುವೆಯಾಗಿರುವ ವಿಷಯ ತಿಳಿಯುತ್ತದೆ. ಕತ್ತಲಲ್ಲಿ ಬಂದ ಯಾರೋ ಕೇಶವಯ್ಯನಿಗೆ ಚೂರಿ ಚುಚ್ಚಿ ಕೊಂದಿದ್ದರು. ಕೊಂದವನು ಯಾರೆಂದು ತಿಳಿದರೂ ಯಾರೂ ಬಾಯಿ ತೆರೆಯುವುದಿಲ್ಲ. ಹೀಗೆ ಕಾದಂಬರಿ ಕೊನೆಗೊಳ್ಳುತ್ತದೆ.

ಈ ಕಾದಂಬರಿಯಲ್ಲಿ ಐತಿಹಾಸಿಕ ವಿಶ್ಲೇಷಣೆಯಿದೆ. ಇತಿಹಾಸದ ಬಗ್ಗೆ ವಿಶ್ಲೇಷಣಾತ್ಮಕವಾಗಿ ಚರ್ಚೆ ನಡೆದರೆ ವರ್ತಮಾನದಲ್ಲಿ ನಡೆಯುವ ಅನ್ಯಾಯದ ಸಂಖ್ಯೆ ಕಡಿಮೆಯಾಗಬಹುದು. ಇದಕ್ಕಾಗಿ ಪುರಾಣದ ಸಂದರ್ಭವನ್ನು ಬಳಸಿಕೊಂಡಿದ್ದಾರೆ. ಲೇಖಕರ ಗಟ್ಟಿಯವರು ಈ ಕಾದಂಬರಿಯನ್ನು ಅಮ್ಮನ ಕಥೆ ಎಂದು ಹೇಳುತ್ತಾರೆ. ಜಯಂತ ಕಾಯ್ಕಿಣಿಯವರು ಈ ಕಾದಂಬರಿಯ ಬಗ್ಗೆ ಬರೆಯುತ್ತಾ "ಕಾದಂಬರಿ ಅವರ ಮಾನವಿಕ ಶಾಸ್ತ್ರೀಯ ನಿಲುಕುಗಳನ್ನು ಮತ್ತು ಅಭಿವ್ಯಕ್ತಿಯ ಪ್ರಯೋಜನಶೀಲತೆಯನ್ನು ರೋಚಕವಾಗಿ ಪ್ರತಿನಿಧಿಸುವ ಮಹತ್ವದ ಕೃತಿಯಾಗಿದೆ" ಎಂದಿದ್ದಾರೆ.

**(ಶ್ರೀಧರ್ ಹೆಚ್.ಜಿ.(ಸಂ) 2009, ಪುಟ 326).**

ಇದು ಒಂದು ಆಳುವ ಮನೆತನದ ಪತನದ ಕತೆಯಾಗಿ ತೋರುತ್ತದೆ. ಮನೆತನದ ಪತನದೊಂದಿಗೆ ಜಾತಿಯ ಪತನವಾಗಿದೆ. ಶ್ರೀಮಂತ ಧಣಿಗಳ ಏಕಾಧಿಪತ್ಯದ ಪತನವಾಗಿದೆ. ಕಾದಂಬರಿಯು ಶ್ರೀಮಂತರ ದಬ್ಬಾಳಿಕೆಯನ್ನು ಪ್ರತಿಭಟಿಸುತ್ತದೆ. ಈ ಪ್ರತಿಭಟನೆ ಬಾಹ್ಯವಾಗಿಯೂ ಆಂತರ್ಯದಲ್ಲಿಯೂ ನಡೆಯುತ್ತದೆ. ಹಿರಿಯ ತಲೆಮಾರಿನವರ ದಬ್ಬಾಳಿಕೆಗೆ ಆಧುನಿಕ ಕಾಲದ ಕಿರಿಯ ತಲೆಮಾರಿನ ರಘುರಾಮಯ್ಯ

ನಂತಹವರು ಪ್ರತಿರೋಧ ಒಡ್ಡುತ್ತಾರೆ. ಜಾತಿ ಜಾತಿಯೆಂದು, ಮಡಿ ಮೈಲಿಗೆ ಹೇಳುವ ಅವರು ಕೆಳಜಾತಿಯವರ ಹಟ್ಟಿಗೆ ಹೋಗಿ ಅಲ್ಲಿನ ಹೆಂಗಸರೊಂದಿಗೆ ಸಂಬಂಧ ಹೊಂದುತ್ತಾರೆ.

ಇಲ್ಲಿ ಬರುವ ಸ್ತ್ರೀ ಪ್ರಪಂಚ ಜೀತದ ಆಳಾಗಿ ಕಂಡು ಬರುತ್ತದೆ. ದೊಡ್ಡ ಮನೆಯ ಯಜಮಾನರು ತಮ್ಮ ಮನೆಯ ಹೊರಗೆ ಹೆಂಗಸರನ್ನು ಭೋಗದ ವಸ್ತುಗಳಾಗಿ ಕಾಣುತ್ತಾರೆ. ತಮ್ಮ ಮನೆಯ ಒಳಗೆ ಹೆಂಡತಿಯರಿಗೆ ತಮ್ಮ ಭಾವನೆಗಳನ್ನು ವ್ಯಕ್ತಪಡಿಸುವ ಸ್ವಾತಂತ್ರ್ಯವಿಲ್ಲ. ಹೆಂಡತಿ ಇದ್ದಾಗಲೇ ತಮ್ಮ ಮನೆಯ ಕತ್ತಲು ಮೂಲೆಯಲ್ಲಿ ಕೆಲಸದ ಹೆಂಗಸರೊಂದಿಗೆ ತಮ್ಮ ಕಾಮತೃಷೆಯನ್ನು ತೀರಿಸಿಕೊಳ್ಳುವ ಪ್ರಯತ್ನ ನಡೆಸುತ್ತದೆ. ಅದರಲ್ಲೂ ದಲಿತ ಮುದುಕಿ ಅಂಗಾರು ಅಡಿಕೆ ಹೆಕ್ಕುತ್ತಿದ್ದ ಸಂದರ್ಭದಲ್ಲಿ ಸಿಕ್ಕಿಬಿದ್ದಾಗ ಅವಳ ಬಟ್ಟೆ ಬಿಚ್ಚಿ ಅದರಲ್ಲೆ ಅಡಿಕೆ ಹೊರಿಸಿಕೊಂಡು ಹೋಗುವುದು ಒಂದೆಡೆಯಲ್ಲಿ ದಲಿತ ಶೋಷಣೆಯನ್ನು ತೋರಿಸಿದರೆ ಮತ್ತೊಂದೆಡೆಯಲ್ಲಿ ಸ್ತ್ರೀ ದೌರ್ಜನ್ಯದ ಚಿತ್ರಣವನ್ನು ನೀಡುತ್ತದೆ. "ಕಲ್ಯಾಣಿಯ ಮನಸ್ಸಿನಲ್ಲಿ ಮಾತ್ರ ಸತ್ತ ಹುಲಿಯ ಮೇಲೆ ಕಾಲಿರಿಸಿಕೊಂಡು ಫೋಟೋ ತೆಗೆಸಿಕೊಳ್ಳುವ ರಾಜರುಗಳಿಗಿದ್ದಷ್ಟೇ ತವಕ, ಸಾಧ್ಯವಿದ್ದಿದ್ದರೆ ಈ ನಾರಾಯಣಯ್ಯನನ್ನ ಅಡ್ಡ ಮಲಗಿಸಿ ಅವನ ಮುಸುಡಿಯ ಮೇಲೆ ಕಾಲಿರಿಸಿ ಫೋಟೋ ತೆಗೆಸಿಕೊಳ್ಳುವುದರಲ್ಲಿ ಇತ್ತು" ಎಂಬ ಮಾತು ಗಮನಿಸಿದರೆ ಸ್ತ್ರೀ ಲೋಕ ತಮ್ಮ ಮೇಲೆ ನಡೆಯುತ್ತಿದ್ದ ದೌರ್ಜನ್ಯವನ್ನು ಒಳಗೊಳಗೇ ಪ್ರತಿಭಟಿಸುತ್ತಿತ್ತು ಅನ್ನಿಸುತ್ತದೆ. ಆದರೆ ಹೊರಗೆ ಏನೂ ಮಾಡಲಾಗದ ಸ್ಥಿತಿಯಲ್ಲಿತ್ತು. ಮಾಧವಯ್ಯ ತನ್ನ ಮಕ್ಕಳಿಗೆ ಸಂಪತ್ತನ್ನು ನೀಡಿದರೂ ಸರಿಯಾದ ಶಿಕ್ಷಣ ನೀಡದೆ ಅವರ ಅವನತಿಗೆ ಕಾರಣವಾಗುತ್ತಾನೆ. ಅವರ ಅನಕ್ಷರತೆ ಅಜ್ಞಾನ, ಅಂಧಕಾರಗಳು ಇಡೀ ಕುಟುಂಬದ ದುಃಸ್ಥಿತಿಗೆ ಕಾರಣವಾಗುತ್ತವೆ. ಎಲ್ಲಾ ರೀತಿಯ ದೌರ್ಜನ್ಯ, ದಬ್ಬಾಳಿಕೆಗೆ ಪ್ರತಿರೋಧವಾಗಿ ಕೊನೆಯಲ್ಲಿ ನಡೆಯುವ ಹಿಂಸೆ ಕಾಣಿಸಿಕೊಳ್ಳುತ್ತದೆ. ಈ ಕಾದಂಬರಿಯು ಶಿಕ್ಷಣದಿಂದ ವಂಚಿತರಾದ ವ್ಯಕ್ತಿಗಳು ಹೇಗೆ ಬದುಕಿದ್ದಾರೆ ಎಂಬುದನ್ನು ಚಿತ್ರಿಸುತ್ತದೆ. ಅದರಲ್ಲಿ ತುಂಬಾ ಹಣವಿದ್ದುದರಿಂದ ಅವರಿಗೆ ಶಿಕ್ಷಣ ಅನಿವಾರ್ಯ ಅನ್ನಿಸಲಿಲ್ಲ.

ಯಜಮಾನರ ಸುಖಕ್ಕಾಗಿ ಜೀವನವನ್ನೇ ಕೊಟ್ಟ ಕೇಳವರ್ಗದ ಜನರ ಬದುಕು ಇತಿಹಾಸದಲ್ಲಿ ದಾಖಲಾಗಬೇಕು ಎಂಬ ತುಡಿತ ಈ ಕಾದಂಬರಿಯಲ್ಲಿದೆ. ಶಿಕ್ಷಣದ ಅರಿವು ಇಲ್ಲದಿರುವುದರಿಂದಲೇ ಈ ಮಾಧವಯ್ಯನ ಮಕ್ಕಳ ಬದುಕು

ದುರಂತವಾಗುತ್ತದೆ. ದೊಡ್ಡ ಮನೆಯ ದುರಾಡಳಿತದ ಚಿತ್ರಣವನ್ನು ನೀಡುವಲ್ಲಿಯೇ ಪ್ರತಿರೋಧದ ಧ್ವನಿಯಿದೆ ಎನ್ನಬಹುದು.

ಕೆ.ಟಿ.ಗಟ್ಟಿಯವರಂತಹ ಎಷ್ಟೋ ಸಾಹಿತಿಗಳು ಜನರಿಗೆ ಹತ್ತಿರವಾಗಿದ್ದರೂ ಇವರ ಕೃತಿಗಳ ಅಧ್ಯಯನಗಳು ನಡೆಯುವುದು ಕಡಿಮೆಯಾಗಿದೆ. ಕೆ.ಟಿ. ಗಟ್ಟಿಯವರ ಕಾದಂಬರಿಗಳು ಸಾಮಾನ್ಯ ಮಾನವನಿಗೆ ಹತ್ತಿರವಾಗುವಂತೆ ರೂಪುಗೊಂಡವುಗಳು. ಕಾದಂಬರಿಯನ್ನು ಸಾಮಾನ್ಯವಾಗಿ ಓದುವ ಮಧ್ಯಮ ವರ್ಗದವರ ನೋವು, ನಲಿವು, ವಿರೊಧ, ಇವುಗಳು ಕೆ.ಟಿ.ಗಟ್ಟಿಯವರ ಕಾದಂಬರಿಗಳಲ್ಲಿ ಸಹಜವಾಗಿ ಮೂಡಿ ಬಂದಿರುವುದರಿಂದ ಇವು ಓದುಗರಿಗೆ ಹತ್ತಿರವಾದವು. ಇವರ ಕಾದಂಬರಿಗಳ ಬಗ್ಗೆ ಲೇಖನಗಳು, ವಿಮರ್ಶೆಗಳು, ಪ್ರಕಟಗೊಂಡಿವೆ. ಹಾಗೆಂದು ಎಲ್ಲೂ ಗಂಭೀರ ಚರ್ಚೆಗಳು ನಡೆದಿಲ್ಲ. ಇವರ ಕಾದಂಬರಿಗಳಲ್ಲಿ ತಾತ್ವಿಕತೆ, ವೈಚಾರಿಕತೆಯಿರುವುದನ್ನು ಗುರುತಿಸಬಹುದು. ಇವರ 'ಅಬ್ರಾಹ್ಮಣ', 'ಪುನರಪಿ ಜನನಂ', 'ಅಂತರಂಗದ ಅತಿಥಿ' ಕಾದಂಬರಿಗಳನ್ನು ಗಮನಿಸಿದರೆ ಬಹಳ ಹಿಂದಿನಿಂದಲೂ ಸಮಾಜದಲ್ಲಿ ರೂಪ ಪಡೆದುಕೊಂಡಿರುವ ಜಾತೀಯತೆ, ಆಳುವ ಗುಣ ಇವುಗಳ ಬಗ್ಗೆ ಕಾದಂಬರಿಕಾರರಲ್ಲಿ ಪ್ರತಿರೋಧ ಭಾವನೆಗಳು ಮುಖ್ಯವಾಗಿ ಕಂಡುಬರುತ್ತವೆ. ಮನುಷ್ಯ ಜೀವನ ಅವನು ಹುಟ್ಟುವ ಜಾತಿಯ ಮೂಲಕ ನಿರ್ಧಾರವಾಗುವುದು ಹಾಗು ಅದರಿಂದ ಉಂಟಾಗುವ ಅಪಾಯಗಳು ಇವುಗಳ ವಿಶ್ಲೇಷಣೆಯನ್ನು ಈ ಕಾದಂಬರಿಗಳಲ್ಲಿ ಕಾಣಬಹುದು. ಹೀಗೆ ಕೆ.ಟಿ.ಗಟ್ಟಿಯವರು ಕಾದಂಬರಿಗಳ ಮೂಲಕ ಆಯಾ ಕಾಲದಲ್ಲಿ ಸಮಾಜವನ್ನು ಕಾಡುತ್ತಿದ್ದ ಅನೇಕ ಸಮಸ್ಯೆಗಳಿಗೆ ಸ್ಪಂದಿಸುತ್ತಾ ಬಂದಿದ್ದಾರೆ.

ನಿನ್ನೆ–ಇಂದು ನಾಳೆ ಕಾದಂಬರಿಯ ಮುನ್ನುಡಿಯಲ್ಲಿ "ಯಾರೋ ಒಬ್ಬ ಬ್ರಾಹ್ಮಣನಿಗೆ ಅನ್ಯಾಯವಾದರೆ ಬ್ರಾಹ್ಮಣರು ಮಾತ್ರ, ಯಾರೋ ಒಬ್ಬ ದಲಿತನಿಗೆ ಅನ್ಯಾಯವಾದರೆ ದಲಿತರು ಮಾತ್ರ, ಯಾರೋ ಒಬ್ಬ ಮುಸಲ್ಮಾನನಿಗೆ ಅನ್ಯಾಯವಾದರೆ ಮುಸಲ್ಮಾನರು ಮಾತ್ರ ಪ್ರತಿಭಟಿಸುವಂಥ ಪರಿಪಾಠ ನಮ್ಮಲ್ಲಿ ಇದೆ. ಇದೆಂಥಾ ಸೆಕ್ಯುಲರಿಸಮ್? ಇದು ಯಾವ ರೀತಿಯ ಮನೋಧರ್ಮವನ್ನು ಪೋಷಿಸುತ್ತದೆಂದರೆ ಒಬ್ಬಳು ಮಹಿಳೆಗೆ ಅನ್ಯಾಯವಾದರೆ, ಮಹಿಳೆಯರು ಮತ್ತು ಮಹಿಳಾ ಸಂಘಟನೆಗಳು ಮಾತ್ರ ಪ್ರತಿಭಟಿಸುತ್ತಾರೆ. ಪುರುಷರೆಲ್ಲ ಬಾಯಿ ಮುಚ್ಚಿಕೊಂಡು ಸುಮ್ಮನಿರುತ್ತಾರೆ. ಇದು ಎಂಥ ಸಾಮಾಜಿಕತೆ? ಮನೆ ಅಂಗಡಿಗಳಿಗೆ ಕಲ್ಲೆಸೆಯಲು ವಾಹನಗಳಿಗೆ ಬೆಂಕಿ ಹಚ್ಚಲು ಎಲ್ಲಾ ಜಾತಿಯವರೂ ಸೇರುತ್ತಾರೆ. ಯಾರೋ ಒಬ್ಬನಿಗೆ ಅನ್ಯಾಯವಾದರೆ ಅವನ ಜಾತಿಯವರೇ ಬರಬೇಕು. ಇದು ಎಂಥ ಮಾನವೀಯತೆ? ನಾವು ಸಾಮಾಜಿಕವಾಗಿ,

ಸಾಂಸ್ಕೃತಿಕವಾಗಿ, ಪ್ರಜಾಸತ್ತಾತ್ಮಕವಾಗಿ ವಿಕಾಸ ಹೊಂದಿದ್ದೇವೆಯೇ?" ಎಂದು ಪ್ರಶ್ನಿಸುತ್ತಾರೆ.

**(ಗಟ್ಟಿ ಕೆ.ಟಿ. ನಿನ್ನೆ ಇಂದು ನಾಳೆ, 2008, ಪುಟ 13)**

ಕೆ.ಟಿ.ಗಟ್ಟಿಯವರ 'ಹೇ ಕಾ ಪುರುಷ', 'ಗ್ಲಾನಿ' ಮೊದಲಾದ ಕಾದಂಬರಿಗಳು ಧರ್ಮವನ್ನು ತನ್ನ ಸ್ವಾರ್ಥಕ್ಕಾಗಿ ಬಳಸುವ ಮನುಷ್ಯ ಸ್ವಭಾವ ಹಾಗೂ ಅದರ ಹೆಸರಿನಲ್ಲಿ ನಡೆಯುವ ರಾಜಕೀಯಗಳನ್ನು ಕುರಿತು ಚರ್ಚಿಸುತ್ತವೆ. ದೇವಮಾನವನ ವೇಷ ಧರಿಸಿಕೊಂಡು ರಾಜಕೀಯ ಮಾಡುವವರನ್ನು, ದೇವರ ಹೆಸರಿನಲ್ಲಿ ದೇವಾಲಯಗಳು ಹಾಗೂ ಅಲ್ಲಿರುವ ಪುರೋಹಿತರು ಜನಸಾಮಾನ್ಯರನ್ನು ದೋಚುವ, ಶೋಷಿಸುವ ವ್ಯವಸ್ಥೆಯನ್ನು ವಿರೋಧಿಸುತ್ತಾರೆ. ಜನರಿಗೆ ಅಂತಹ ವ್ಯವಸ್ಥೆಯಿಂದ ಉಂಟಾಗುವ ಅಪಾಯಗಳನ್ನು ತಿಳಿಸುತ್ತಾರೆ. ಇವರು ಮನುಷ್ಯ ಸ್ವಾರ್ಥದ ಬೇರೆ ಬೇರೆ ಆಯಾಮಗಳನ್ನು ತಮ್ಮ ಕಾದಂಬರಿಗಳಲ್ಲಿ ವಿರೋಧಿಸುವ ಮನೋಭಾವದ ಹಿಂದೆ ಮನುಷ್ಯ ಪ್ರಪಂಚದಲ್ಲಿ ಸುಂದರವಾಗಿ ಬಾಳಬೇಕೆಂಬ ಆಶಯ ಇರುವುದನ್ನು ಗುರುತಿಸಬಹುದು. ಮಾನವನಲ್ಲಿ ಮನುಷ್ಯತ್ವ, ಮಾನವೀಯತೆಯನ್ನು ಗುರುತಿಸಬೇಕೆಂಬ ಬದ್ಧತೆಯಿಂದ ಕಾದಂಬರಿಗಳಲ್ಲಿ ಚಿಂತನೆ ನಡೆಸಿದ್ದಾರೆ. ಮನುಷ್ಯ ನೆಮ್ಮದಿಯಿಂದ ಬಾಳಬೇಕೆಂದರೆ ಸಮಾಜದಲ್ಲಿ ಸಮಾನತೆ ಇರಬೇಕು. ಮೇಲು–ಕೀಳು, ಬಡವ–ಶ್ರೀಮಂತ, ಸ್ಪೃಶ್ಯ–ಅಸ್ಪೃಶ್ಯ, ಗಂಡು–ಹೆಣ್ಣು, ಎಂಬ ಅಸಮಾನತೆಯಿಂದ ಮನುಷ್ಯನನ್ನು ಗುರುತಿಸಬಾರದು. ಕೆ.ಟಿ.ಗಟ್ಟಿಯವರು ತಮ್ಮ ಕಾದಂಬರಿಗಳಲ್ಲಿ ಮನುಷ್ಯನನ್ನು ಜಾತಿಯ, ಐಶ್ವರ್ಯದ, ಲಿಂಗದ ನೆಲೆಯಿಂದ ಗುರುತಿಸುವ ಪ್ರವೃತ್ತಿಗಳನ್ನು ವಿರೋಧಿಸುತ್ತಾರೆ.

****************

# ಅಧ್ಯಾಯ–೫: ಕೆ.ಟಿ.ಗಟ್ಟಿಯವರ ಸಣ್ಣ ಕತೆಗಳು

೫.೧: ಮನುಷ್ಯನ ವಾಸನೆ

೫.೨: ನೀಲಿ ಗುಲಾಬಿ ಮತ್ತು ಇತರ ಕತೆಗಳು

೫.೩: ಭೂಗತ ಮತ್ತು ಇತರ ಕತೆಗಳು

೫.೪: ವಿಶ್ವ ಸುಂದರಿ

# ಅಧ್ಯಾಯ–೫

# ಕೆ.ಟಿ.ಗಟ್ಟಿಯವರ ಸಣ್ಣ ಕತೆಗಳು

ಕತೆ ಹೇಳುವ, ಕೇಳುವ ಪ್ರವೃತ್ತಿ ಅನೇಕ ಶತಮಾನಗಳಿಂದಲೂ ನಡೆದುಕೊಂಡು ಬಂದಿದೆ. ಅಜ್ಜಿಯು ಮೊಮ್ಮಕ್ಕಳಿಗೆ ವಿರಾಮದ ಸಮಯದಲ್ಲಿ ಹೇಳುತ್ತಿದ್ದ ಚಿಕ್ಕ ಚಿಕ್ಕ ಅಜ್ಜಿ ಕತೆಗಳನ್ನು ಸಣ್ಣಕತೆಯ ಮೂಲ ರೂಪ ಎಂದು ಹೇಳಬಹುದು. "ಕನ್ನಡ ಸಾಹಿತ್ಯದಲ್ಲಿ ಲಭ್ಯವಿರುವ ಮೊತ್ತ ಮೊದಲ ಗದ್ಯ ಕೃತಿ "ವಡ್ಡಾರಾಧನೆ"ಯು ಚಿಕ್ಕ ಚಿಕ್ಕ ಕತೆಗಳ ಸಂಕಲನವಾಗಿರುವುದನ್ನು ಗಮನಿಸಬೇಕು. ಈ ಕೃತಿಯೇ ಮೊತ್ತ ಮೊದಲ ಸಣ್ಣ ಕತೆಗಳ ಮೊದಲ ಸಂಕಲನವೆನ್ನಬಹುದು". 1900 ರಿಂದ ಈಚೆಗೆ ಸಣ್ಣ ಕತೆ ಎಂಬ

**(ಹರಿಕೃಷ್ಣ ಭರಣ್ಯ, 1990, ಪುಟ 68)**

ಸಾಹಿತ್ಯ ಪ್ರಕಾರ ಕನ್ನಡದಲ್ಲಿ ಮೂಡಿ ಬಂದಿದೆ. ಪಾಶ್ಚಾತ್ಯ ಸಾಹಿತ್ಯದ ಪ್ರಭಾವ ಸಣ್ಣ ಕತೆ ಮೂಡಿ ಬರಲು ಕಾರಣ ಎನ್ನಬಹುದು. 1900ರಲ್ಲಿ ಸುವಾಸಿನಿ ಮಾಸಪತ್ರಿಕೆಯಲ್ಲಿ ಪಂಜೆ ಮಂಗೇಶರಾಯರು ರಚಿಸಿದ "ನನ್ನ ಚಿಕ್ಕ ತಾಯಿ"ಯು ಹೊಸಗನ್ನಡದ ಮೊದಲ ಸಣ್ಣ ಕತೆಯಾಗಿದೆ. ಪ್ರಾರಂಭದ ಕತೆಗಾರರಲ್ಲಿ ಪಂಜೆಯವರು, ಎಂ.ಎನ್.ಕಾಮತರು, ಕೆರೂರು ವಾಸುದೇವಾಚಾರ್ಯರು ಪ್ರಮುಖರು. ಸಣ್ಣಕತೆಗೆ ಒಂದು ಸ್ವರೂಪವನ್ನು ನೀಡಿ, ಅದನ್ನು ಗಂಭೀರವಾದ ಜೀವನ ಚಿಂತನೆಯ ಮಾಧ್ಯಮವನ್ನಾಗಿಸಿ ಭಾಷೆಯನ್ನು ಅದಕ್ಕೆ ಹದಗೊಳಿಸಿದವರೆಂದರೆ ಮಾಸ್ತಿ ವೆಂಕಟೇಶ ಅಯ್ಯಂಗಾರ್‌ರವರು. ಎಂ.ಎನ್. ಕಾಮತರು "ಅಂದಿನ ಆಲೂರು" ಎಂಬ ಕಥಾ ಸಂಕಲನವನ್ನು ಪ್ರಕಟಿಸಿದ್ದಾರೆ. ಮಾಸ್ತಿಯವರ "ಕೆಲವು ಸಣ್ಣಕತೆಗಳು" 1920ರಲ್ಲಿ ಪ್ರಕಟಗೊಂಡಿದೆ. ಸುಮಾರು ಅರವತ್ತು ವರ್ಷಗಳಲ್ಲಿ ಮಾಸ್ತಿ ಎಪ್ಪತ್ತೈದು ಕತೆಗಳನ್ನು ಬರೆದಿದ್ದಾರೆ. "ಬಾಳಿನಲ್ಲಿರುವ ಸೌಂದರ್ಯ, ಮನುಷ್ಯನಲ್ಲಿ ಪ್ರಕಟವಾಗಬಹುದಾದ ಹಿರಿಮೆ ಇವನ್ನು ಪ್ರತಿಬಿಂಬಿಸಿ ಓದುಗರ ಅನುಕಂಪವನ್ನು ಎಚ್ಚರಿಸುವ ಮಾಧ್ಯಮವನ್ನಾಗಿ ಅನೇಕರು ಸಣ್ಣಕತೆಯನ್ನು ಬಳಸಿದರು".

**(ಶೇಷಗಿರಿ ರಾವ್ ಎಲ್. ಎಸ್. 1999, ಪುಟ 175)**

ಗೊರೂರು ರಾಮಸ್ವಾಮಿ ಅಯ್ಯಂಗಾರ್ ಮತ್ತು ಬಾಗಲೋಡಿ ದೇವರಾಜ್ ಕತೆಗಳಲ್ಲಿ ಹಳ್ಳಿಯ ಜೀವನವನ್ನು ಚಿತ್ರಿಸಿದರು. ಅ.ನ.ಕೃಷ್ಣರಾಯರು ಪ್ರಗತಿಶೀಲ ದೃಷ್ಟಿಯನ್ನು ಹಬ್ಬಿಸುವುದಕ್ಕಾಗಿ ಅನೇಕ ಕತೆಗಳನ್ನು ಬರೆದರು. ಚದುರಂಗ, ಎಸ್. ಅನಂತನಾರಾಯಣ, ಶಿವೇಶ್ವರ ದೊಡ್ಡಮನಿ ಮೊದಲಾದವರು ಪ್ರಗತಿಶೀಲ ಮಾರ್ಗದಲ್ಲಿ

ಉತ್ತಮ ಕತೆಗಳನ್ನು ಬರೆದರು. ತ.ರಾ.ಸು. ಬರೆದ '0–0=0', ರಾಜಲಕ್ಷ್ಮಿ ಎನ್. ರಾವ್ ಬರೆದ 'ಆವೇ ಮರೀಯಾ', ರಾಮಚಂದ್ರ ಶರ್ಮರ 'ಸೆರಗಿನ ಕೆಂಡ', ಕೆ.ಸದಾಶಿವರ 'ನಲ್ಲಿಯಲ್ಲಿ ನೀರು ಬಂದಿತು' ಪ್ರಾರಂಭದ ನವ್ಯ ಕತೆಗಳು. ನವ್ಯ ಕತೆಗಳು ಮನುಷ್ಯನ ಮನಸ್ಸಿನ ಮತ್ತು ಅನುಭವದ ವಿಶ್ಲೇಷಣೆ ನಡೆಸುತ್ತವೆ. ಧ್ವನಿ, ಪ್ರತಿಮೆ ಮತ್ತು ಸಂಕೇತಗಳ ಮೂಲಕ ಅನುಭವಕ್ಕೆ ಮಾತಿನ ಶರೀರ ಕೊಡಲು ಪ್ರಯತ್ನಿಸಿದೆ. ಲಂಕೇಶ್, ಶಾಂತಿನಾಥ ದೇಸಾಯಿ, ಗಿರಡ್ಡಿ ಗೋವಿಂದರಾಜರು, ಯಶವಂತ ಚಿತ್ತಾಲರು, ವೀರಭದ್ರ, ಶ್ರೀಕೃಷ್ಣ ಆಲನಹಳ್ಳಿ, ಉತ್ತಮ ಕಥೆಗಾರರು. ನವ್ಯಕತೆ ಬಹುಮಟ್ಟಿಗೆ ವೈಯಕ್ತಿಕವಾಗಿದ್ದು, ದುರ್ಬಲ ನಾಯಕನಿರುತ್ತಾನೆ. ಹಾಸ್ಯದ ಕತೆಗಳನ್ನು ಅನೇಕರು ಬರೆದಿದ್ದಾರೆ. ಬೀಚಿಯವರ ಕತೆಗಳಲ್ಲಿ ವಿಡಂಬನೆಯಿದೆ.

ಕೆ.ಟಿ.ಗಟ್ಟಿಯವರು ಮನುಷ್ಯನ ವಾಸನೆ (1986), ನೀಲಿ ಗುಲಾಬಿ ಮತ್ತು ಇತರ ಕತೆಗಳು (1995), ಭೂಗತ ಮತ್ತು ಇತರ ಕತೆಗಳು (2001) ಮತ್ತು ವಿಶ್ವಸುಂದರಿ (2007) ಎಂಬ ನಾಲ್ಕು ಕಥಾ ಸಂಕಲನಗಳನ್ನು ಪ್ರಕಟಿಸಿದ್ದಾರೆ. "ಕೆ.ಟಿ. ಗಟ್ಟಿಯವರ ಮೊದಲ ಮೂರು ಸಂಕಲನಗಳಲ್ಲಿ ವ್ಯಕ್ತಿ ಮತ್ತು ಸಮಾಜ – ಈ ಎರಡೂ ನೆಲೆಗಳಲ್ಲಿ ಬದುಕಿನ ಬಗ್ಗೆ ಚಿಂತನೆ ನಡೆಸಿ, ಸಮಾಜದ ಚಿಂತನರಾಹಿತ್ಯ ಮತ್ತು ಬದುಕಿನ ಅರ್ಥರಾಹಿತ್ಯಗಳನ್ನು ಅರಿಯುವ ಆನಂದವನ್ನು ನಾಲ್ಕನೆಯ ಸಂಕಲನದಲ್ಲಿ ತೋರಿಸಿಕೊಟ್ಟಿದ್ದಾರೆ".

**(ಶ್ರೀಧರ ಎಚ್.ಜಿ, (ಸಂ), 2009, ಪುಟ 47)**

ಸುಮತೀಂದ್ರ ನಾಡಿಗರು ಕೆ.ಟಿ.ಗಟ್ಟಿಯವರ 'ನೀಲಿ ಗುಲಾಬಿ' ಕಥಾ ಸಂಕಲನಕ್ಕೆ ಬರೆದ ಮುನ್ನುಡಿಯಲ್ಲಿ ಅವರ ಕತೆಗಳ ಬಗ್ಗೆ ಬೆಳಕು ಚೆಲ್ಲುತ್ತಾರೆ. ಅವರು ಹೇಳುವಂತೆ "ಕೆ.ಟಿ.ಗಟ್ಟಿ ಆಕರ್ಷಕವಾಗಿ ಕತೆ ಹೇಳುತ್ತಾರೆ. ಭ್ರಾಮಕತೆ, ಸಾಂಕೇತಿಕತೆ, ಕಾಲ್ಪನಿಕತೆ, ವಾಸ್ತವಿಕತೆಗಳನ್ನು ವಸ್ತುವಿನ ನಿರೂಪಣೆಗೆ ತಕ್ಕ ಹಾಗೆ ಬಳಸುತ್ತಾರೆ. ಕತೆಯನ್ನು ಎಷ್ಟು ಬೇಕೋ ಅಷ್ಟು ಬೆಳೆಸುತ್ತಾರೆ. ಕೆ.ಟಿ.ಗಟ್ಟಿಯವರ ಕತೆಗಳಲ್ಲಿ ಕಾಣುವ ಬದುಕಿನ ಪ್ರವಾಹ ಆಕರ್ಷಕವಾಗಿ ಕಾಣುತ್ತದೆ ಮತ್ತು ಆ ಪ್ರವಾಹದಲ್ಲಿ ಸಿಕ್ಕಿಕೊಂಡವರ ನೋವು ನಮ್ಮನ್ನೂ ತಟ್ಟುತ್ತದೆ."

**(ಗಟ್ಟಿ ಕೆ.ಟಿ. ನೀಲಿ ಗುಲಾಬಿ, ಸುಮತೀಂದ್ರನಾಡಿಗರ ಬೆನ್ನುಡಿ 1995)**

ಈ ದೇಶದಲ್ಲಿ ಹಣದಿಂದ ಯಾವುದನ್ನು ಕೂಡಾ ಪಡೆಯಬಹುದು ಎನ್ನುವ ಸಾಮಾಜಿಕ ಪ್ರಜ್ಞೆ ಇವರ ಕತೆಗಳಲ್ಲಿ ಕಾಣಿಸಿಕೊಳ್ಳುತ್ತದೆ. ಬದುಕಿನ ಅರ್ಥದ ಕುರಿತಾದ ಅಸ್ತಿತ್ವವಾದಿ ಪ್ರಶ್ನೆಯನ್ನು ಅವರ ಕತೆಗಳು ಎತ್ತುತ್ತವೆ. 'ಮನುಷ್ಯ ವಾಸನೆ' ಸಂಕಲನದ

ಪ್ರತಿನಿಧಿ ಪಾತ್ರಗಳು ಯುವಕ ಯುವತಿಯರು. 'ನೀಲಿ ಗುಲಾಬಿ'ಯ ಪಾತ್ರಗಳು ನಡುವಯಸ್ಸಿನ ವಿವಾಹಿತರು. 'ಭೂಗತ'ದಲ್ಲಿ ಬರುವ ಪಾತ್ರಗಳು ಇಳಿವಯಸ್ಸಿನವರದು. ಹೀಗೆ ಇವರ ಕತಾ ಸಂಕಲನಗಳಲ್ಲಿ ಕತೆಗಳು ವ್ಯಕ್ತಿಗಳ ಮೂಲಕ ಸಮಾಜದಲ್ಲಿ ಆಗುವ ಬೆಳವಣಿಗೆಗಳನ್ನು ಓದುಗರಿಗೆ ತೋರಿಸಿಕೊಡುತ್ತವೆ. ಸಮಾಜದ ತಾರತಮ್ಯಕ್ಕೆ ಹಣವೇ ಕಾರಣ ಎಂಬುದನ್ನು ಕತೆಗಳು ಸ್ಪಷ್ಟಪಡಿಸುತ್ತವೆ.

## ೫.೧: ಮನುಷ್ಯನ ವಾಸನೆ

'ಮನುಷ್ಯನ ವಾಸನೆ' ಕಥಾಸಂಕಲನದಲ್ಲಿ ಒಟ್ಟು 20 ಕತೆಗಳಿವೆ. ಇದು ಕೆ.ಟಿ. ಗಟ್ಟಿಯವರ ಮೊದಲ ಸಂಕಲನ. ಇದು 1986ರಲ್ಲಿ ಪ್ರಕಟಗೊಂಡಿತು. ಆದರೆ ಇದರಲ್ಲಿರುವ ಕತೆಗಳು ಸುಧಾ, ಮಯೂರ, ಕಸ್ತೂರಿ, ಮಲ್ಲಿಗೆ, ತರಂಗ, ತುಷಾರ, ಪ್ರಜಾವಾಣಿ, ಉದಯವಾಣಿ ಪತ್ರಿಕೆಗಳಲ್ಲಿ ಮೊದಲೇ ಪ್ರಕಟಗೊಂಡಿದ್ದವು. ಇಲ್ಲಿಯ ಕತೆಗಳನ್ನು ಅವರು ನವ್ಯದ ಸಂದರ್ಭದಲ್ಲಿ ಬರೆದಿದ್ದರು. ನವ್ಯದ ಕತೆಗಳು ಸುಲಭವಾಗಿ ಅರ್ಥವಾಗುವಂತಹವುಗಳು. ನವ್ಯದ ಉತ್ತಮವಾದ ಅಂಶಗಳನ್ನು ಸ್ವೀಕರಿಸಿಕೊಂಡ ಗಟ್ಟಿಯವರು ಸಾಮಾಜಿಕ ಪ್ರಜ್ಞೆಯನ್ನು ಅಸ್ತಿತ್ವವಾದೀ ಪ್ರಶ್ನೆಗಳ ಜೊತೆ ಒಟ್ಟು ಸೇರಿಸಿ ಕತೆ ಬರೆಯಲು ತೊಡಗಿದರು. ಈ ಸಂಕಲನದಲ್ಲಿರುವ ಕತೆಗಳೆಂದರೆ – ಮೌಲ್ಯಗಳು, ಸವೆತ, ಚಿತ್ತ, ಕೈ, ಜೊಲಿಂಪೆ, ಕಾರಣ, ಆದಾನ, ಅಜೇಯ, ಹೆಸರಿಲ್ಲದವರು, ಒಂದಾಣೆ, ಸ್ವಸ್ಥ, ತರಗೆಲೆ ಮತ್ತು ನೀರು, ಸೆಳೆತ, ತೀರ್ಪು, ದೇವರು ಇದ್ದಾನೆ, ಒಂದೇ ಒಂದು ಪ್ರಶ್ನೆ, ಒಬ್ಬಳು ಪುಟ್ಟ ಹುಡುಗಿಯ ಸಾವು, ಭೂತದ ಮನೆ, ಜೋಯಿ ಕುಟ್ಟಿಯ ಹೆಂಡತಿ, ಮನುಷ್ಯನ ವಾಸನೆ.

'ಮೌಲ್ಯಗಳು' ಕತೆಯ ಮುಖ್ಯ ಪಾತ್ರ ಬಿ.ಎಸ್ಸಿ. ಮುಗಿಸಿ ಉದ್ಯೋಗದ ಹುಡುಕಾಟದಲ್ಲಿರುವ ಯುವಕನದು. ಮೌಲ್ಯಗಳನ್ನೂ ನಂಬಿಕೊಂಡು ಬದುಕುವವನು ಹೇಗೆ ದುಸ್ಥಿತಿಗೆ ಒಳಗಾಗುತ್ತಾನೆ ಎಂಬುದನ್ನು ಹೇಳುತ್ತದೆ. ಬಿ.ಎಸ್ಸಿ. ಪದವಿ ಶಿಕ್ಷಣವನ್ನು ಉತ್ತಮ ಅಂಕ ಪಡೆದು ತೇರ್ಗಡೆಯಾದ ಬಡ ಪ್ರಾಮಾಣಿಕ ಯುವಕನೊಬ್ಬ ಕೆಲಸಕ್ಕಾಗಿ ಪಡುವ ಪಾಡನ್ನು ಕತೆ ಹೇಳುತ್ತದೆ. ತಾಯಿಯ ಸೂಚನೆಯಂತೆ ಮಾವನ ಬಳಿಗೆ ಉದ್ಯೋಗ ಅರಸುತ್ತಾ ಹೋದ ಯುವಕ ಮಾವನಿಂದ ಉದ್ಯೋಗದ ಭರವಸೆಯನ್ನು ಪಡೆಯುತ್ತಾನೆ. ಅವನ ಪತ್ರಕ್ಕಾಗಿ ಕಾಯುತ್ತಾನೆ. ಸ್ನೇಹಿತ ಶ್ರೀಧರನೂ ಉದ್ಯೋಗದ ಭರವಸೆ ನೀಡುತ್ತಾನೆ. ಭರವಸೆಗಳು ಭರವಸೆಗಳಾಗಿಯೇ ಉಳಿದಾಗ ನಿರಾಶೆಗೊಳಗಾಗುತ್ತಾನೆ. ರಾತ್ರಿ ತನ್ನ ಮಾವನ ಕೋಣೆಯಲ್ಲಿರುವ ಜೆಸ್ಸಿಕಳನ್ನು ಕಂಡು

ಮಾವ ಆಕೆಗೆ ತನ್ನ ಆಫೀಸಿನಲ್ಲೇ ಉದ್ಯೋಗ ನೀಡಿದ ಹಿಂದಿನ ವಿಚಾರವನ್ನು ಕಂಡು ಭ್ರಮನಿರಸನಗೊಳ್ಳುತ್ತಾನೆ. ಮಾವನ ಮಗಳು ರೇಖಾಳನ್ನು ಪ್ರೇಮಿಸುತ್ತಾನೆ. ಆಕೆ ತನ್ನ ಸ್ನೇಹಿತ ಶ್ರೀಧರನಿಗೆ ಮೈಯೊಪ್ಪಿಸಿ ಕೆಲಸ ಗಿಟ್ಟಿಸಿಕೊಂಡಾಗ ತಾನು ಯಾವ ಪ್ರತಿರೋಧವನ್ನು ತೋರಲಾಗದೇ ಅಸಹಾಯಕನಾಗುತ್ತಾನೆ. ಸ್ನೇಹಿತ, ಬಂಧುತ್ವದ ನಂಬಿಕೆ ಮೊದಲಾದ ಮೌಲ್ಯಗಳು ಅಪಮೌಲ್ಯಗೊಳ್ಳುತ್ತಿರುವುದನ್ನೂ ಕತೆ ಮೌನವಾಗಿಯೇ ವಿರೋಧಿಸುತ್ತದೆ.

'ಸವೆತ' ಬಸ್ಸಿನಲ್ಲಿ ಪ್ರಯಾಣಿಸುವ ದುಡಿಯುವ ಹೆಣ್ಣಿನ ಕಷ್ಟಗಳನ್ನು ತಿಳಿಸುತ್ತದೆ. ಬಸ್ಸು ಮಾಲೀಕರ, ಕಂಡಕ್ಟರರ, ಡ್ರೈವರರ ಹಣದ ದಾಹ, ಅದಕ್ಕೆ ಬಲಿಯಾಗುವ ಪ್ರಯಾಣಿಕರ ವೇದನೆಯನ್ನು ತಿಳಿಸುತ್ತದೆ. ಹೆಣ್ಣಿನ ನೋವಿಗೆ ಕೊನೆಯಿಲ್ಲ. "ಆಫೀಸು ಕುರ್ಚಿಯಲ್ಲಿ ಕುಳಿತುಕೊಂಡಾಗ ಅವಳಿಗೆ ಅನಿಸುತ್ತದೆ – ಈ ಆಫೀಸಿನ ಮೇಜು, ಕುರ್ಚಿ, ಕಪಾಟು, ಕಾರಕೂನರು, ಆಫೀಸರುಗಳು ಎಲ್ಲಾವೂ ನನ್ನ ಮೇಲೆ ಆಕ್ರಮಣ, ಬಲಾತ್ಕಾರ ನಡೆಸುತ್ತಿವೆ. ಇದರ ಭಾರದಿಂದ ನಾನು ತಪ್ಪಿಸಿಕೊಳ್ಳುವಂತಿಲ್ಲ. ಓ ವ್ಯವಸ್ಥೆಯೇ! ಇದು ಹೇಗೆ ಹುಟ್ಟಿಕೊಂಡಿತು? ಈ ವ್ಯವಸ್ಥೆಗೆ ಬೇಕಾಗಿ ಜನನವಾಯಿತೇ?"

**(ಮನುಷ್ಯನ ವಾಸನೆ, 1986, ಪುಟ 27)**

ಎಂದು ಯೋಚಿಸುತ್ತಾಳೆ. ಬಸ್ಸಿನ ಜನಗಳ ಮಧ್ಯೆಯೂ, ಮಾನಸಿಕವಾಗಿಯೂ ಒತ್ತಡಕ್ಕೆ ಒಳಗಾಗುತ್ತಾಳೆ. ಇಲ್ಲಿ ಸ್ತ್ರೀಶೋಷಣೆಯ ವಿರುದ್ಧದ ಧ್ವನಿಯಿದೆ.

'ಬೆತ್ತ' ಕತೆಯ ನಾಯಕ ಅಪ್ಪನ ಬಗೆಗಿನ ಮಾನಸಿಕ ಭಯದಿಂದಾಗಿ ಯಾವ ಹೆಣ್ಣಿನೊಂದಿಗೂ ಸಂಬಂಧ ಹೊಂದಲಾರದ ಉದ್ಯೋಗಸ್ಥ ಯುವಕ. ಈತನ ತಂದೆಗೆ ಪಾರ್ಶ್ವವಾಯು ಆಗುತ್ತದೆ. ಅನಿವಾರ್ಯವಾಗಿ ತಂದೆ ಮಾಡುತ್ತಿದ್ದ ದೇವರ ಪೂಜೆಯ ಜವಾಬ್ದಾರಿಯೂ ಬರುತ್ತದೆ. ಆತನಿಗೆ ಹದಿನೈದು ವರ್ಷವಾಗಿದ್ದಾಗ ಪಕ್ಕದ ಮನೆಯ ಹುಡುಗಿಯನ್ನೂ ಅಪ್ಪಿಕೊಂಡಿದ್ದ. ವಿಷಯ ತಿಳಿದ ತಂದೆ ಬೆತ್ತದಿಂದ ಬಾರಿಸಿದ್ದರು. ಈ ಮಾನಸಿಕ ಆಘಾತದಿಂದಾಗಿ ಆತನಿಗೆ ಯಾವ ಹೆಂಗಸರೊಂದಿಗೂ ಸಂಪರ್ಕ ಇಟ್ಟುಕೊಳ್ಳಲಾಗುವುದಿಲ್ಲ. ಕುಮುದಾ, ಶೈಲಾ, ಸೀತಾ ಹೀಗೆ ಅವನಲ್ಲಿ ಬಯಕೆಗಳೇನೋ ಮೂಡುತ್ತದೆ. ತಾನು ಕುಮುದಾಳನ್ನು ಪ್ರೀತಿಸಿದ ವಿಷಯ ತಿಳಿದು ಅದನ್ನು ವಿರೋಧಿಸಿದ ತಂದೆ ಕೆಲಸದಾಕೆಯೊಂದಿಗೆ ಸಂಬಂಧವಿರಿಸಿಕೊಂಡಾಗ ಸಿಟ್ಟುಗೊಳ್ಳುತ್ತಾನೆ. ತಾನು ಮದುವೆಯಾಗಬಯಸಿದ ಸೀತಾ ಕಾಯಿಲೆ ಬಿದ್ದಿದ್ದ ಮಾವನೊಂದಿಗೆ ಸಂಬಂಧ ವಿರಿಸಿದ್ದನ್ನು ಕಂಡು ತಬ್ಬಿಬ್ಬುಗೊಳ್ಳುತ್ತಾನೆ.

'ಜೊಲಿಂಪೆ' ಕತೆಯ ನಾಯಕ ತನ್ನ ತಂದೆಯ ಜೊತೆಗೆ ಹಳ್ಳಿಯ ಹಳೆಯ ಮನೆಯೊಂದರಲ್ಲಿ ವಾಸಿಸಲು ಬಂದ ಎಸ್ಸೆಸ್ಸೆಲ್ಸಿ ಫೈಲಾದ ಮಾನು ಎಂಬ ಯುವಕ. ಸೈನ್ಯದಲಿದ್ದು ನಿವೃತ್ತಿಯಾಗಿ ಬಂದ ತಂದೆ ಮಗನಿಗಾಗಿ ನಾಗೂರು ಎಂಬ ಹಳ್ಳಿಯಲ್ಲಿ ಹತ್ತೆಕರೆ ಭೂಮಿ ಖರೀದಿಸಿದ್ದರು. ಮಗನಿಗೆ ಮದುವೆಯನ್ನೂ ಮಾಡಿಸಿದ್ದರು. ಪದವೀಧರೆಯಾದ ಮಗನ ಹೆಂಡತಿ ಯಾವುದರಲ್ಲೂ ಸಮಾಧಾನ ಕಾಣದೆ ತವರಿಗೆ ಹೊರಟು ಹೋಗಿದ್ದಳು. ಮಾನುವಿಗೆ ಪಟ್ಟಣದಲ್ಲಿರಲು ಇಷ್ಟವಿತ್ತು. ಅದರ ಹಿಂದೆ ಪತ್ನಿಯ ಒತ್ತಾಯವೂ ಇತ್ತು. ಮೈಸೂರಿನ ಪತ್ನಿಯ ಮನೆಗೆ ಹೋದ ಆತನಿಗೆ ತನ್ನ ಪತ್ನಿ ಹಾಗೂ ಅವಳ ತಂಗಿಯರು ಲಲಿತೆಯ ಅತ್ತೆಯ ಮಗನೊಂದಿಗೆ ವರ್ತಿಸುತ್ತಿದ್ದ ರೀತಿ ಸರಿಕಾಣಲಿಲ್ಲ. ವಿಧವೆಯಾದ ಹೆಣ್ಣಿನ ಜೊತೆ ಸಂಬಂಧ ಬೆಳೆಸಲು ನಿಶ್ಚಯಿಸಿದ ನಾಯಕನಿಗೆ ಆತನ ಪತ್ನಿಯ ಆಗಮನ ಆಶ್ಚರ್ಯ ತರುತ್ತದೆ. ಇಲ್ಲಿ ನಾಯಕ ತನ್ನ ದೌರ್ಬಲ್ಯವನ್ನೂ ಮೀರಿ ನಿಲ್ಲುತ್ತಾನೆ. ಆತನ ವರ್ತನೆಯಲ್ಲಿ ತನಗಾದ ಅನ್ಯಾಯದ ವಿರುದ್ಧದ ಪ್ರತಿಭಟನೆಯಿದೆ.

'ಕಾರಣ' ಕತೆಯ ನಾಯಕ ಎಂ.ಎಸ್ಸಿ. ಮುಗಿಸಿ ಕೆಲಸಕ್ಕೆ ಸೇರಲು ಪಟ್ಟಣಕ್ಕೆ ಹೋಗುವ ಯುವಕ. ಸಾವಿರದಿನ್ನೂರು ರೂಪಾಯಿಯ ಉದ್ಯೋಗಕ್ಕೆ ಸೇರಲು ಮಹಾನಗರಕ್ಕೆ ಬಂದ ಆತನಿಗೆ ಅವನ ಆಪ್ತಮಿತ್ರ ಶ್ರೀಮಂತ ಜಯಕರ ತನ್ನ ಮನೆಗೆ ಆಹ್ವಾನಿಸುತ್ತಾನೆ. ಅಲ್ಲಿನ ವೈಭವ, ಶ್ರೀಮಂತಿಕೆ, ಮಹಾನಗರದ ಜನರ ಓಡಾಟವನ್ನು ಕಂಡ ಕಥಾನಾಯಕನಿಗೆ ಅವರೆಲ್ಲ ಬಿಲಗಳ ಮಾನವ ಅಥವಾ ಅಮಾನವ ರೂಪಗಳಾಗಿ ತೋರಿದರು. ಎಲ್ಲವನ್ನು ಯೋಚಿಸುತ್ತಿದ್ದಾಗ ಬಾಲ್ಕನಿಯಿಂದ ಹಾರಿ ಪ್ರಾಣ ಬಿಡಬೇಕು ಅನ್ನಿಸುತ್ತದೆ. ಎಲ್ಲರೂ ಕುಡಿದು ಮಜಾಮಾಡುತ್ತಿರುವಾಗ ತಾನು ಬೇರೆ ಆಗಲಾರೆ ಎಂದು ನಿರ್ಧರಿಸಿ ಜಯಕರ ತಂದ ಬಾಟ್ಲಿಯಲ್ಲಿರುವ ಮದ್ಯವನ್ನು ಸೇವಿಸಿ ಗಟ್ಟಿಯಾಗಿ ನಗುತ್ತಾನೆ.

'ಆದಾನ'ದ ನಾಯಕ ಸಂಸಾರದ ಜವಾಬ್ದಾರಿ ಹೊತ್ತುಕೊಳ್ಳಬೇಕಾಗಿ ಬಂದಾಗಿ ಪ್ರಿಯತಮೆಯಿಂದ ದೂರವಾಗಿಬಿಟ್ಟಿರುವ ಯುವಕ. ತನ್ನ ಅಣ್ಣ, ಅತ್ತಿಗೆ ಅಪಘಾತದಲ್ಲಿ ಸತ್ತಾಗ ಅವರ ಮಕ್ಕಳ ಜವಾಬ್ದಾರಿ, ವಿದ್ಯಾಭ್ಯಾಸವನ್ನು ತಾನೇ ತಂದೆಯಾಗಿ ನಿಂತು ನಿರ್ವಹಿಸುತ್ತಾನೆ. ಇದಕ್ಕಾಗಿ ತನ್ನ ಪ್ರಿಯತಮೆಯೊಂದಿಗೆ ತಾವು ಮದುವೆಯಾಗುವ ಅವಧಿಯನ್ನು ಎರಡು ವರ್ಷ ಮುಂದಕ್ಕೆ ಹಾಕುವುದಾಗಿ ತಿಳಿಸುತ್ತಾನೆ. ಆದರೆ ಆಕೆ ಇದನ್ನು ವಿರೋಧಿಸುತ್ತಾಳೆ. ನಾಯಕ ಮಕ್ಕಳಿಗೋಸ್ಕರ ಯಾವ ತ್ಯಾಗಕ್ಕೂ ಸಿದ್ಧನಾಗುತ್ತಾನೆ. ಪ್ರೇಯಸಿ ವತ್ಸಲಳನ್ನು ಕರೆತರಲು ನಿರ್ಧರಿಸಿ, ಖಾಯಿಲೆ ಬಿದ್ದಿದ್ದ

ಗೆಳೆಯನನ್ನು ನೋಡಲು ಟ್ರೈನಿನಲ್ಲಿ ಪ್ರಯಾಣಿಸುವ ಸಂದರ್ಭದಲ್ಲಿ ಸಿಕ್ಕಿದ ಮುದುಕಿಯ ಪರಿಚಯವಾಗಿ ಅವಳ ಮನೆಗೆ ಹೋಗುತ್ತಾನೆ. ಅಲ್ಲಿ ಮುದುಕಿಯ ಸತ್ತ ಮಗನ ಹೆಂಡತಿ ಮಕ್ಕಳನ್ನು ನೋಡಿ ತನ್ನ ಅಣ್ಣನ ಮಕ್ಕಳ ನೆನಪಾಗಿ ಆದಿನ ರಾತ್ರಿಯೇ ಊರಿಗೆ ಹಿಂದಿರುಗುತ್ತಾನೆ.

'ಹೆಸರಿಲ್ಲದವರು' ಇಪ್ಪತ್ತೆರಡರ ವಿವಾಹಿತೆ ಯುವತಿಯ ಸುತ್ತ ಕತೆ ಚಲಿಸುತ್ತದೆ. ಗಂಡನ, ಗಂಡಸಿನ, ಮನೋರಂಜನೆಯೆದುರು ಹೆಣ್ಣು ತನ್ನ ಅಸ್ತಿತ್ವವನ್ನು ಕಳೆದುಕೊಂಡು ಬಳಲುವ ಚಿತ್ರಣ ಇಲ್ಲಿದೆ.

'ಒಂದಾಣೆ' ಕತೆಯ ನಾಯಕ ಇಪ್ಪತ್ತೇಳರ ಹರೆಯದ ಅಧ್ಯಾಪಕ. ಸಣ್ಣ ವಯಸ್ಸಿನಲ್ಲಿ ಅತ್ತಾಗ ಕೆನ್ನೆಸವರಿದ ಹುಡುಗಿಯನ್ನು ಈಗ ಹನ್ನೆರಡು ವರ್ಷದ ಬಳಿಕ ನೋಡಿದಾಗ, ವಸಂತಿ ಎಂದು ಕರೆದಾಗ ಆಕೆ ಗುರುತು ಸಿಕ್ಕಿದರೂ ಅಪರಿಚಿತಳಂತೆ ಕಾಣುತ್ತಾಳೆ. ಆಕೆ ಚಿಕ್ಕವಳಾಗಿದ್ದಾಗ ಕಾಲೇಜು ಡೇ ಗೆ ಎರಡನೇ ತರಗತಿಯ ಮಕ್ಕಳಿಗೆ ಹಾಕಿದ ಒಂದಾಣೆ ವಂತಿಗೆಯನ್ನು ಈ ದಿನವೇ ಕೊಡಬೇಕೆಂದು ವಸಂತಿ ಹಟ ಹಿಡಿದುದಕ್ಕೆ ಅಪ್ಪ ಬೆತ್ತದಲ್ಲಿ ಬಲ ಅಂಗೈಗೆ ಬರೆಯೆಳೆದಿದ್ದ. ಆಕೆಯನ್ನು ಸಮಾಧಾನ ಪಡಿಸಿದ ಮೇಷ್ಟ್ರು ಒಂದಾಣೆಯನ್ನು ತಾವೇ ನೀಡಿದ್ದರು. ಈಗ ಅದು ಭಾರೀ ನಷ್ಟ ಅನಿಸಿತು. ಮರುಕ್ಷಣದಲ್ಲಿ ಆ ಒಂದಾಣೆಯನ್ನು ಮರೆಯಬೇಕು ಅನ್ನಿಸಿತು. ಪವಿತ್ರವಾದ ಕಣ್ಣುಗಳಿಂದ ಆಕೆಯನ್ನು ನೋಡಿದ ತಾನು ಹೆಡ್ಡ ಅನ್ನಿಸುತ್ತದೆ. ತಾನು ಅವಳನ್ನು ಕಾಮುಕನಂತೆ ನೋಡಬೇಕಾಗಿತ್ತು, ಆ ಸೌಂದರ್ಯವನ್ನು ಹಸಿದ ಕಣ್ಣುಗಳಿಂದ ತಿನ್ನಬೇಕಾಗಿತ್ತು, ಪ್ರಕೃತಿಯ ಸೇಡಾಗಬೇಕಾಗಿತ್ತು ಅನ್ನಿಸುತ್ತದೆ. ತನ್ನ ದೇಹ ಸೌಂದರ್ಯಕ್ಕೆ ಅಸ್ಪೃಶ್ಯತೆಯ ಮಸುಕು ಇತ್ತು ಎಂದೆನಿಸುತ್ತದೆ. ಆದರೆ ವಸಂತಿಯ ಗಂಡ ಸತ್ತು ವಿಧವೆಯಾಗಿ ಐದು ಮಕ್ಕಳ ತಾಯಿಯಾಗಿ “ಮೇಷ್ಟ್ರೆ ವಿಮಲ ತುಂಬಾ ಪುಕ್ಕಲು! ಶಾಲೆ ಎಂದರೆ ಏನೋ ಹೆದರಿಕೆ! ಸ್ವಲ್ಪ ಜಾಗ್ರತೆಯಾಗಿ ನೋಡಿಕೊಳ್ಳಿ” ಎಂದಾಗ ಯಾವುದೂ ಅಸ್ಪೃಶ್ಯವೆನಿಸುವುದಿಲ್ಲ. ಹೀಗೆ ಕತೆ ಕೊನೆಗೊಳ್ಳುತ್ತದೆ.

'ಸ್ವಸ್ಥ' ಕತೆಯ ನಾಯಕ ಎಂ.ಇ. ಯಲ್ಲಿ ರ್‍ಯಾಂಕ್ ಪಡೆದು ಪಿಹೆಚ್.ಡಿ. ಮಾಡುತ್ತಿದ್ದ ಯುವಕ. ಲಕ್ಷಾಧೀಶ ಡಾಕ್ಟರರೊಬ್ಬರ ಮಗಳೊಡನೆ ಮದುವೆ ನಿಶ್ಚಯವಾದಂದಿನಿಂದ ಮಂಕಾಗಿ ಬಿಟ್ಟಿದ್ದ. ಕಡಲ ದಂಡೆಯಲ್ಲಿ ಕುಳಿತು ರಾತ್ರಿಯವರೆಗೂ ತೆರೆಗಳನ್ನೇ ನೋಡುತ್ತಿದ್ದ. ತನ್ನ ರೂಮಿನಿಂದ ಎದ್ದು ತೆರೆಗಳ ಆಟ ನಿಲ್ಲಿಸುತ್ತೇನೆಂದು ಸಮುದ್ರಕ್ಕೆ ಹಾರಲೂ ಹೋಗುತ್ತಾನೆ. ವಿಷಯ ತಿಳಿದ ಡಾಕ್ಟರರ

ಮಗಳು ಶಂಕರನನ್ನು ಮದುವೆಯಾಗಲು ನಿರಾಕರಿಸುತ್ತಾಳೆ. ಶಂಕರ ಮನೆ ಸೇರುತ್ತಾನೆ. ಬಡ ಹುಡುಗಿಯನ್ನು ಮದುವೆಯಾದ ಶಂಕರ ಜಮೀನು, ಗದ್ದೆ ನೋಡಿ ಕೊಳ್ಳತೊಡಗುತ್ತಾನೆ. ಆತನಲ್ಲೀಗ ಮಾನಸಿಕ ಅಸ್ವಸ್ಥ್ಯದ ಕುರುಹುಗಳು ಕಾಣಿಸುವುದಿಲ್ಲ. ಆತನಿಗೆ ಇಬ್ಬರು ಮಕ್ಕಳಿದ್ದಾರೆ. ಈಗ ಅವನ ತಲೆಯೊಳಗೆ ತೆರೆಗಳು ಮೊರೆಯುವುದಿಲ್ಲ.

'ತರಗೆಲೆ ಮತ್ತು ನೀರು' ಕತೆಯಲ್ಲಿ ಅಸ್ಪೃಶ್ಯತೆಯ ವಿರುದ್ಧ ಧ್ವನಿಯಿರುವುದನ್ನು ಕಾಣಬಹುದು. ತರಗೆಲೆಗಳನ್ನು ಗುಡಿಸಿ ಅದರಿಂದಲೇ ಅಡುಗೆ ಮಾಡುವ ಬಡವಳಾದ ವಿಧವೆ ಜಾನಕಿಯನ್ನು ಎಲ್ಲರೂ ತರಗೆಲೆ ಎಂದೇ ಕರೆಯುತ್ತಿದ್ದರು. ಕೀಳು ಜಾತಿಯ ಅವಳನ್ನು ಮಡಿವಂತರು ಮನೆಗೆಲಸಕ್ಕೆ ಕರೆಯುತ್ತಿರಲಿಲ್ಲ ಅವಳಿಗಿದ್ದ ಒಂದು ಗಂಡು ಒಂದು ಹೆಣ್ಣು ಮಗುವಿನ ಜೊತೆಗೆ ಅವಳ ಮನೆ ಮುಂದಿದ್ದ ತೆಂಗಿನ ಮರ ಮೂರನೇ ಮಗುವಾಗಿತ್ತು. ಊರಿನಲ್ಲಿ ನೀರಿನ ಕೊರತೆಯಿರುವುದರಿಂದ ಆಕೆ ಕೆಲವೊಮ್ಮೆ ರಾಘವೇಂದ್ರರಾಯರ ಬಾವಿಗೆ ನೀರಿಗಾಗಿ ಹೋಗುತ್ತಿದ್ದಳು. ಅಲ್ಲಿ ಅವಳು ಬಾವಿಯನ್ನು ಮುಟ್ಟುವಂತಿರಲಿಲ್ಲ ಕೆಲಸದಾಳುಗಳು ನೀರು ಸೇದಿ ಹಾಕುತ್ತಿದ್ದರು. ಕಾಲಾಂತರದಲ್ಲಿ ಅವಳ ಮಗ ನಾಗೇಂದ್ರ ವಿದೇಶದಿಂದ ಹಿಂತಿರುಗಿ ಮನೆ ಕಟ್ಟಿಸಿ ಬಾವಿ ತೋಡಿಸುತ್ತಾನೆ. ಊರಲ್ಲೆಲ್ಲಾ ನೀರಿಲ್ಲದಿದ್ದರೂ ಆತನ ಬಾವಿಯಲ್ಲಿ ನೀರು ಸಿಗುತ್ತದೆ. ಆ ಸಂದರ್ಭದಲ್ಲಿ ನೀರಿಗಾಗಿ ರಾಘವೇಂದ್ರರಾಯರ ಮನೆ ಕೆಲಸದಾಕೆ ಚಿನ್ನು ಬರುತ್ತಾಳೆ. ಈಗ ಆಕೆಯನ್ನು ಜಾನಕಿಯಕ್ಕ ಎಂದು ಜನ ಕರೆಯುತ್ತಾರೆ. ಹಣ ಬಂದಾಗ ಜನರಿಂದ ಗೌರವವೂ ಸಿಗುತ್ತದೆ.

'ಸೆಳೆತ' ಕತೆಯು ಬ್ರಾಹ್ಮಣನೊಬ್ಬ ಶೂದ್ರನ ಮನೆಗೆ ಬಂದು ಆತನ ಆಹಾರ ಕ್ರಮಕ್ಕೆ ಮೆಚ್ಚಿ, ಆತನ ಮನೆಯಲ್ಲಿ ಮೀನು ತಿಂದು ಅದರ ಸೆಳೆತಕ್ಕೊಳಗಾಗಿ ಬ್ರಾಹ್ಮಣ್ಯವನ್ನು ಮರೆಯುವ ವಿಚಾರವನ್ನು ತಿಳಿಸುತ್ತದೆ.

'ತೀರ್ಪು' ಕತೆಯ ಸೋಮನಾಥರಾಯರು ಡಿಸ್ಟ್ರಿಕ್ಟ್ ಸೆಷನ್ಸ್ ಜಡ್ಜ್. ಕೋರ್ಟಿನಲ್ಲಿ ತಾನು ಇತರರಿಗೆ ಶಿಕ್ಷೆ ವಿಧಿಸುವ ಅಧಿಕಾರ ಪಡೆದೂ ಮನೆಯಲ್ಲಿರುವ ಮಗನಿಂದಾಗಿ ಮುಖಭಂಗ ಅನುಭವಿಸಬೇಕಾಗುತ್ತದೆ. ಮೇಸ್ಟರಿಗೆ ಹೊಡೆದು ಮಗನನ್ನು ಶಾಲೆಯಿಂದ ಸಸ್ಪೆಂಡ್ ಮಾಡಿದ ಸಂದರ್ಭದಲ್ಲಿ ತನ್ನ ಮಗನನ್ನು ತಿದ್ದಲು ಅಸಹಾಯಕರಾಗುತ್ತಾರೆ.

'ದೇವರು ಇದ್ದಾನೆ' ಕತೆಯ ನಾಯಕ ಉದ್ಯೋಗಸ್ಥ ಯುವಕ ಪ್ರತೀ ದಿನ ದೇವಸ್ಥಾನಕ್ಕೆ ಹೋಗುತ್ತಾನೆ. ಆಫೀಸ್‌ನಲ್ಲಿ ಲಂಚ ತೆಗೆದುಕೊಳ್ಳುತ್ತಾನೆ. ಹೆಂಡತಿಯೊಂದಿಗೆ ಹೋಗಿ ವಸ್ತುಗಳನ್ನು ಖರೀದಿಸುತ್ತಾನೆ. ಹಿಂತಿರುಗುವ ಸಂದರ್ಭದಲ್ಲಿ ನಡೆದ ರಿಕ್ಷಾ ಅಪಘಾತದಲ್ಲಿ ತರಚಿದ ಗಾಯವಷ್ಟೇ ಆದಾಗ ದೇವರಿದ್ದಾನೆ ಎನ್ನುತ್ತಾನೆ. ತಾನು ಖರೀದಿಸಿದ ನೆಕ್ಲೇಸ್‌ನೊಂದಿಗೆ ತನ್ನದಲ್ಲದ ಇನ್ನೊಬ್ಬರ ಪರ್ಸ್‌ನೊಳಗಿದ್ದ ನೆಕ್ಲೇಸ್ ತನ್ನ ಕೈಸೇರಿದಾಗಲೂ ದೇವರ ನೆನಪಾಗುತ್ತದೆ. ಇಲ್ಲಿ ಯಾಂತ್ರಿಕವಾಗಿ ದೇವರನ್ನು ನಂಬುವವನೊಬ್ಬ ಆಕಸ್ಮಿಕವಾಗಿ ಸಮಸ್ಯೆಯಿಂದ ಪಾರಾದಾಗ ದೇವರ ಇರುವಿಕೆಯನ್ನು ಒಪ್ಪಿಕೊಳ್ಳುವ ವಿಪರ್ಯಾಸದ ಚಿತ್ರಣವಿದೆ.

'ಒಂದೇ ಒಂದು ಪ್ರಶ್ನೆ'ಯ ನಾಯಕಿ ಅನಾಥವಾಗಿ ಬೆಳೆದ ಬೇರೆ ಜಾತಿಯ ಯುವಕ ಉಮಾಶಂಕರನನ್ನು ಪ್ರೀತಿಸುತ್ತಾಳೆ. ಆಕೆಯ ಮನೆಯವರು ಇದಕ್ಕೆ ವಿರೋಧ ವ್ಯಕ್ತಪಡಿಸುತ್ತಾರೆ. ಆಕೆಗೆ ಬೇರೆ ಮದುವೆ ಮಾಡಿಸುತ್ತಾರೆ. ಗಂಡ ಸತ್ಯಮೂರ್ತಿ ಪ್ರೀತಿಯಿಂದ ನೋಡಿಕೊಳ್ಳುತ್ತಾನೆ. ಆಕೆಗೆ ಉಮಾಶಂಕರನ ಮೇಲೆ ಪ್ರೀತಿ ಇನ್ನೂ ಇದೆ. ಆತ ಬಂದರೆ ಆತನೊಡನೆ ಹೋಗಲು ಸಿದ್ಧಳಿದ್ದಾಳೆ. ಮದುವೆಯಾದ ನಂತರವೂ ಆತನೊಡನೆ ಎರಡು ದಿನವಿದ್ದು ಬರುತ್ತಾಳೆ. ಆಕೆಯಲ್ಲಿದ್ದುದು ಕಾಮವೇ? ಪ್ರೇಮವೇ? ಎನ್ನುವ ಪ್ರಶ್ನೆಯೊಂದಿಗೆ ಕತೆ ಕೊನೆಗೊಳ್ಳುತ್ತದೆ.

'ಒಬ್ಬಳು ಪುಟ್ಟ ಹುಡುಗಿಯ ಸಾವು' ಕತೆಯಲ್ಲಿ ಮೂವತ್ತೈದು ವರ್ಷಗಳ ಹಿಂದೆ ತಾನು ಜೀವಿಸಿದ್ದ ಮನೆಯಲ್ಲಿ ಆಗ ಐದು ವರ್ಷದವಳಾಗಿದ್ದ ಸ್ನೇಹ ಎಂಬವಳ ನೆನಪಿನೊಂದಿಗೆ ಬಂದ ಕಥಾ ನಾಯಕನಿಗೆ ಸ್ನೇಹಳನ್ನು ನೋಡಿದಾಗ ಬಹಳಷ್ಟು ವ್ಯತ್ಯಾಸ ಕಾಣಿಸುತ್ತದೆ. ಆಕೆಗೆ ತನ್ನ ನೆನಪೇ ಇರಲಿಲ್ಲ. ವಾಸ್ತವವೆಂದರೇನು? ಭ್ರಮೆ ಎಂದರೇನು? ಯಾವುದು ಸತ್ಯ? ಯಾವುದು ಸುಂದರ? ಜೀವಂತವಾಗಿ ಇರುವುದೆಂದರೇನು? ಸಾವು ಎಂದರೇನು? ನನ್ನ ಮುದ್ದು ಸ್ನೇಹ ಸತ್ತು ಹೋದುದು ಹೇಗೆ? ಎಂಬ ಪ್ರಶ್ನೆಗಳು ಕಾಡುತ್ತವೆ.

'ಭೂತದ ಮನೆ' ಎಂದೇ ರಾಮಕೃಷ್ಣ ಎಡವನ ಮನೆ ಊರಲ್ಲೆಲ್ಲಾ ಗುರುತಿಸಲ್ಪಡುತ್ತಿತ್ತು. ಸುತ್ತಮುತ್ತಲ ಗ್ರಾಮಗಳ ಎಡವ ಕುಟುಂಬಗಳಿಗೆ ಆ ಮನೆಯ ಭೂತ ಭೈರವನೇ ಆರಾಧ್ಯ ದೈವ. ಏನಾದರೂ ಅನಾಹುತವಾದರೆ ಅದಕ್ಕೆ ಭೂತವೇ ಕಾರಣವೆನ್ನುವ ನಂಬಿಕೆ. ಮಕ್ಕಳಾಗದಿದ್ದಾಗ ಭೂತವನ್ನು ಬೇಡಿ ಮಕ್ಕಳನ್ನು ಪಡೆಯುತ್ತಾರೆ. ರಾಮಕೃಷ್ಣನಿಗೆ ಆರಂಭದಿಂದಲೂ ಭೂತದ ಮೇಲೆ ಅಷ್ಟಾಗಿ

ನಂಬಿಕೆಯಿರುವುದಿಲ್ಲ. ಒಂದು ದಿನ ಕುಡಿದು ಭೂತಕ್ಕೆ ಉರಿಸಿದ ದೀಪವನ್ನು ಕಾಲಲ್ಲಿ ಒದೆಯುತ್ತಾನೆ. ಆಕಸ್ಮಾತ್ತಾಗಿ ಬಾವಿಯಿಂದ ನೀರು ಸೇದುತ್ತಿದ್ದಾಗ ರಾಟೆಯ ಅಡ್ಡಮರ ತುಂಡಾಗಿ ಬಾವಿಗೆ ಬಿದ್ದು ಸಾಯುತ್ತಾನೆ. ಮನೆಯವರೆಲ್ಲ ಇದಕ್ಕೆ ಭೂತದ ಕೋಪವೇ ಕಾರಣ ಎಂದು ನಂಬುತ್ತಾರೆ. ಈ ಕತೆಯಲ್ಲಿ ಜನರಲ್ಲಿರುವ ಮೂಢನಂಬಿಕೆಯ ಬಗೆಗಿನ ಚಿಂತನೆಯಿದೆ.

'ಜೋಯಿಕುಟ್ಟಿಯ ಹೆಂಡತಿ' ಯಾರು ಹೇಗಿದ್ದಾಳೆ ಎಂಬ ಕುತೂಹಲದೊಂದಿಗೆ 'ಜೋಯಿಕುಟ್ಟಿಯ ಹೆಂಡತಿ' ಎಂಬ ಕತೆ ಆರಂಭವಾಗುತ್ತದೆ. ಲೈಬ್ರೇರಿಯನ್ ಆಗಿರುವ ಜೋಯಿ ಕುಟ್ಟಿ ತನ್ನ ಹೆಂಡತಿ ಊರಿನಲ್ಲಿ ಎಂ.ಎಸ್ಸಿ. ಮಾಡುತ್ತಿದ್ದಾಳೆ ಎಂಬ ಸುದ್ದಿ ಹಬ್ಬಿಸುತ್ತಾನೆ. ಆಕೆಯಿಂದ ಆತನಿಗೆ ವಾರಕ್ಕೊಂದು ಪತ್ರ ಬರುತ್ತದೆ. ಪತ್ನಿ ಮನೆಗೆ ಬಂದ ನಂತರ ಅನೇಕ ಸಮಯ ಜೋಯಿ ಕುಟ್ಟಿಯ ಮನೆಯ ಕಿಟಕಿ ಬಾಗಿಲುಗಳು ತೆರೆಯುವುದಿಲ್ಲ. ಆಕೆ ಕಾಲೇಜಿನಲ್ಲಿ ಟೈಪಿಸ್ಟ್ ಕೆಲಸಕ್ಕೆ ಸೇರಿಕೊಳ್ಳುತ್ತಾಳೆ. ಆದರೂ ಕೊನೆಗೂ ಊರಿನ ಹೆಂಗಸರಿಗೆ ಜೋಯಿಕುಟ್ಟಿಯ ಹೆಂಡತಿಯ ಮುಖವನ್ನೂ ಸರಿಯಾಗಿ ನೋಡಲಾಗುವುದಿಲ್ಲ. ಹೀಗೆ ಕತೆ ಕುತೂಹಲದೊಂದಿಗೆ ಕೊನೆಗೊಳ್ಳುತ್ತದೆ.

'ಮನುಷ್ಯನ ವಾಸನೆ' ಕತೆಯ ನಾಯಕ ಅಪ್ಪಣ್ಣ ಸಣ್ಣ ಕಳ್ಳತನ ನಡೆಸುತ್ತಿದ್ದು, ಮದುವೆಯಾಗಿ ಐದು ಮಕ್ಕಳ ತಂದೆಯೂ ಆಗಿದ್ದ. ಆತ ಇದ್ದಕ್ಕಿದ್ದಂತೆ ಸನ್ಯಾಸಿಯಾಗುತ್ತಾನೆ. ಆತ ಅಪ್ಪು ಸ್ವಾಮಿಯಾಗುತ್ತಾನೆ. ಜನರು ಆತನನ್ನು ಗೌರವಿಸುತ್ತಾರೆ. ಅವನು ತನ್ನ ಹೆಂಡತಿ ಮಕ್ಕಳನ್ನು ಆಶ್ರಮದೊಳಗೆ ಬರಗೊಡುತ್ತಿರಲಿಲ್ಲ. ಹೆಂಡತಿ ಸಾವಿತ್ರಿ ಗಂಡನಿಗೆ ಅನುಕೂಲವಾಗಲೆಂದು ತನ್ನ ಸಂಬಂಧಿಯಾದ ಬಡ ಹುಡುಗಿಯನ್ನು ಗಂಡನ ಸೇವೆಗೆ ನೇಮಿಸುತ್ತಾಳೆ. ಅಪ್ಪು ಸ್ವಾಮಿ ಆಕೆಯೊಂದಿಗೆ ಸಂಸಾರಿಯಂತೆ ಇರುವುದು ಊರ ಜನರಿಗೆ ತಿಳಿದು ಆ ಹುಡುಗಿಯನ್ನು ದೂರದೂರಿಗೆ ಕಳುಹಿಸುತ್ತಾರೆ. ಕಾಯಿಲೆಯಾಗಿ ಮಲಗಿದಾಗ ಹೆಂಡತಿ ಸಾವಿತ್ರಿ ಬಂದು ಗಂಡನ ಸೇವೆ ಮಾಡುತ್ತಾಳೆ. ಹೆಂಡತಿಯನ್ನು ತನ್ನ ಆಶ್ರಮಕ್ಕೆ ಬರಬಾರದೆಂದು ಹೇಳಿ ದೂರ ಹೋದ ಹುಡುಗಿಯನ್ನು ಹುಡುಕಿ ಕರೆತರಬೇಕು, ಅವಳು ಸಿಗದಿದ್ದರೆ ಅವಳ ಅಕ್ಕನ ಮಗಳನ್ನಾದರೂ ಕಳುಹಿಸುವಂತೆ ಹೇಳುತ್ತಾನೆ.

ಇವರ ಈ ಸಂಕಲನದ ಹೆಚ್ಚಿನ ಕತೆಗಳಂತೆ ಇಲ್ಲಿಯೂ ಲೈಂಗಿಕತೆಯೇ 'ಮನುಷ್ಯನ ವಾಸನೆ'ಯ ಪ್ರತಿನಿಧಿಯಾಗಿದೆ ಎನ್ನಬಹುದು. 'ಮನುಷ್ಯ ವಾಸನೆ'

ಸಂಕಲನದಲ್ಲಿ ಸಹಜವಾದ ಭಾವನೆಗಳನ್ನು ಚಿತ್ರಿಸಲಾಗಿದೆ. ಇಲ್ಲಿ ಪ್ರತಿರೋಧದ ಛಾಯೆ ಕಂಡು ಬರುವುದು ಕಡಿಮೆ.

## ೫.೨: ನೀಲಿ ಗುಲಾಬಿ ಮತ್ತು ಇತರ ಕತೆಗಳು

"ನೀಲಿ ಗುಲಾಬಿ ಮತ್ತು ಇತರ ಕತೆಗಳು" ಸಂಕಲನದಲ್ಲಿ ಹನ್ನೊಂದು ಕತೆಗಳಿವೆ. ನೀಲಿ ಗುಲಾಬಿ, ತಾತ್ಕಾಲಿಕ, ದೇವರು ದಯಾಮಯ, ಯಾರದೂ ಅಲ್ಲದ ಕತೆ, ಸವೆದ ದಾರಿ, ಪ್ರೀತಿ, ರಸಗುಲ್ಲಾ, ಕತೆ ಒಂದು ಹೂವು, ಪೃಥ್ವಿ, ರಂಗಿನಾಟ ಇವು ಇಲ್ಲಿರುವ ಕತೆಗಳು. " ಈ ಕತೆಗಳ ನಾಯಕರು ವಿವಾಹಿತರು ಮತ್ತು ವಿವಾಹೇತರ ಸಂಬಂಧದ ಬಗ್ಗೆ ಎಲ್ಲೋ ಒಂದು ಆಸಕ್ತಿಯನ್ನು ಬೆಳೆಸಿಕೊಳ್ಳುತ್ತಿರುವವರು. ಅಥವಾ ವೈವಾಹಿಕ ಜೀವನದ ಬಗ್ಗೆ ಅಸಮಾಧಾನ ಹೊಂದಿರುವವರು. ವರ್ಗ ತಾರತಮ್ಯವನ್ನು ಹೇಳುವ, ಶ್ರೀಮಂತ ವರ್ಗದ ಹೆಂಗಸರು ಸಾಮಾನ್ಯ ಮನುಷ್ಯರಿಗಿಂತ ತಾವು ಮೇಲ್ಪಟ್ಟವರು ಅಂತ ಭಾವಿಸಿಕೊಳ್ಳುವ ಕತೆಗಳೂ ಇವೆ". ಈ ಕತೆಗಳು ಮೊದಲು ಸುಧಾ, ತರಂಗ,

**(ಶ್ರೀಧರ ಹೆಚ್.ಜಿ.(ಸಂ), 2009. ಪುಟ 51)**

ಉದಯವಾಣಿ, ಲಂಕೇಶ್ ಪತ್ರಿಕೆ, ಪ್ರಜಾವಾಣಿ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

'ನೀಲಿ ಗುಲಾಬಿ' ಕತೆಯ ನಾಯಕ ಮನೆ ಮನೆಗೆ ಪೇಪರ್ ಹಾಕುತ್ತಾ ಎಂ.ಎ. ಓದುತ್ತಿರುವ ಯುವಕ. ಪೇಪರ್ ಹಾಕುತ್ತಿದ್ದ ಒಂದು ಮನೆಯ 'ನೀಲಿ ಗುಲಾಬಿ' ಹೂ ಕಂಡು ಆಕರ್ಷಿತನಾದ. ಆ ಮನೆಯೊಡತಿಗೂ ನೀಲಿ ಬಣ್ಣವೆಂದರೆ ಪ್ರೀತಿ. ಆಕೆ ಯುವಕನೊಂದಿಗೆ ಅವನ ಸಾಧನೆಯ ಬಗ್ಗೆ ಮೆಚ್ಚುಗೆ ವ್ಯಕ್ತಪಡಿಸುತ್ತಾಳೆ. ಕಾಫಿಯ ಆಹ್ವಾನ ನೀಡುತ್ತಾಳೆ. ಆದರೆ ಆತನಿಗೆ ಹಣದ ಅಗತ್ಯವಿತ್ತು. "ಜನ ಕಾಫಿ, ಚಾ ವನ್ನೇನೋ ನೀಡಬಹುದು ಆದರೆ ಚೆಲ್ಲುವಷ್ಟು ಹಣವಿದ್ದರೂ ಕೊಡಲಾರರು"

**(ಗಟ್ಟಿ.ಕೆ.ಟಿ, ನೀಲಿ ಗುಲಾಬಿ, 1995 ಪುಟ 15)**

ಎಂದು ಯೋಚಿಸುತ್ತಾನೆ. ಆತ ಎಂ.ಎ. ಮುಗಿಸಿ ಬಂದ ನಂತರ ಒಮ್ಮೆ ಪೇಪರು ಹಾಕಲಾರಂಭಿಸಿದಾಗ ಮನೆಯೊಡತಿ ಆತನನ್ನು ಕರೆದು ವಿಚಾರಿಸುತ್ತಾಳೆ. ಇಲ್ಲಿನ ನಾಯಕನ ಪ್ರೀತಿಯ ನಿರೀಕ್ಷೆ ಆತನ ಪಾತ್ರದುದ್ದಕ್ಕೂ ಕಂಡುಬರುತ್ತದೆ.

ತನಗೆ ಉಪನ್ಯಾಸಕ ಕೆಲಸ ದೊರೆತು ತನ್ನ ಕನಸಿನ ಹೂತೋಟದ ನಿರ್ಮಾಣ ಮಾಡುತ್ತಿದ್ದಾಗ ನೀಲಿ ಗುಲಾಬಿಯ ನೆನಪಾಗಿ ಅದರ ಒಂದು ಗೆಲ್ಲು ತರಲು ತಾನು ಹಿಂದೆ ಹೋಗಿದ್ದ ಭಾರತಿಯ ಮನೆಗೆ ಹೋಗುತ್ತಾನೆ. ಆದರೆ ಆಕೆ ಕೊಡಲು

ನಿರಾಕರಿಸುತ್ತಾಳೆ. ನಾನು ಪೇಪರಿನ ಹುಡುಗನೆಂಬುದನ್ನು ಮರೆತದ್ದು ನನ್ನ ತಪ್ಪು ಎಂದು ಯೋಚಿಸುತ್ತಾನೆ.

'ತಾತ್ಕಾಲಿಕ' ಕತೆಯ ನಾಯಕ ಒಬ್ಬ ತಾತ್ಕಾಲಿಕ ಉಪನ್ಯಾಸಕ. ಆತ ಕತೆಗಾರನೂ ಹೌದು. ಆತ ಬರೆದ ಮೊದಲ ಕತೆ ಆತನ ಜೀವನದ ಕತೆಯೇ ಆಗಿತ್ತು. ಅಲ್ಲಿ ತನ್ನ ಮನಸ್ಸಿನ ಭಾವನೆಗಳನ್ನು ಹೇಳಿಕೊಂಡಿದ್ದ. ಇದು ಆ ಕಾಲೇಜಿನ ಚೇರ್‌ಮೆನ್‌ರ ಮನಸ್ಸಿಗೆ ಹಿಡಿಸುವುದಿಲ್ಲ. ವಿದ್ಯಾರ್ಥಿನಿಯಾಗಿದ್ದ ಚೇರ್‌ಮೆನ್‌ನ ಮಗಳು ಆತನ ಕತೆಯಿಂದ ಸ್ಫೂರ್ತಿ ಹೊಂದಿ ತಾನೂ ಕತೆ ಬರೆಯುತ್ತಾಳೆ. ಅಲ್ಲಿ ತನ್ನ ಭಾವನೆಗಳನ್ನು ತೋಡಿಕೊಳ್ಳುತ್ತಾಳೆ. ಇದರಿಂದಾಗಿ ಚೇರ್‌ಮೆನ್‌ರ ಪ್ರತಿರೋಧಕ್ಕೆ ಒಳಗಾಗಿ ನಾಯಕ ತನ್ನ ಕೆಲಸ ಕಳೆದುಕೊಳ್ಳುತ್ತಾನೆ.

'ದೇವರು ದಯಾಮಯ' ಕತೆಯಲ್ಲಿ ಚಿಕ್ಕಮಂಗಳೂರಿನ ಮನಮೋಹನ ಶೆಟ್ಟಿ ಎಂಬ ಕಾಫಿ ಪ್ಲಾಂಟರ್‌ರದು ಮುಖ್ಯಪಾತ್ರ. ಬೆಂಗಳೂರಿಗೆ ಬಂದ ಶೆಟ್ಟರು ಸುವರ್ಣಲೇಖ ಎಂಬ ಚಲನಚಿತ್ರ ನಟಿಯೊಂದಿಗೆ ಲೈಂಗಿಕ ಸಂಬಂಧ ಹೊಂದುತ್ತಾರೆ. ಇದರಿಂದಾಗಿ ಅನಾರೋಗ್ಯಕ್ಕೂ ತುತ್ತಾಗುತ್ತಾರೆ. ನಟಿಗೆ ಒಂದು ರಾತ್ರಿಗೆ ಐದು ಸಾವಿರ ಕೊಡುತ್ತಾರೆ. ಆದರೆ ತಮ್ಮ ಕೆಲಸದವರಿಗೆ ಎರಡು ರೂಪಾಯಿ ಸಂಬಳ ಏರಿಸುವುದಿಲ್ಲ. ದೇವರ ಅಸ್ತಿತ್ವದ ಬಗ್ಗೆ ನಂಬಿಕೆಯಿರುವ ಶೆಟ್ಟರು ನಟಿಯೊಂದಿಗಿನ ಸಂಬಂಧವನ್ನು ಮುಂದುವರಿಸುತ್ತಾರೆ. ಇದನ್ನು ಗಮನಿಸಿದ ನಿರೂಪಕನಾದ ಡಾಕ್ಟರ್ ಯೋಚಿಸುತ್ತಾನೆ– "ಶೆಟ್ಟರು ಮೃತ್ಯುದೇವತೆಯನ್ನೂ ಜಯಿಸಿಬಿಟ್ಟಿದ್ದಾರೆ ಶಾಂತಾ. ಕಿಚನ್ ಗಾರ್ಡನ್ ಬೇಕೆಂಬ ಆಸೆಯನ್ನು ಪೂರೈಸಲಾರದೆ ಹೋದೀತು ಆದರೆ ಮೃತ್ಯು ದೇವತೆಯನ್ನು ಬಂಧನದಲ್ಲಿರಿಸಲು ಸಾಧ್ಯ."

**(ಅದೇ, ಪುಟ 50)**

'ಯಾರದೂ ಅಲ್ಲದ ಕತೆ' ಕಾಲೇಜು ಹುಡುಗಿಯರು ಕಾಣೆಯಾಗುವ ಹಿನ್ನೆಲೆಯಲ್ಲಿ ರಚಿತವಾದ ಕತೆ. ಕಸ್ತೂರಬಾ ಕಾಲೇಜಿನ ಹುಡುಗಿಯರು ಆ ಊರಿನ ಕಡಲ ಕಿನಾರೆಯಲ್ಲಿ ಆಗಾಗ ಹೆಣವಾಗಿ ಸಿಗುತ್ತಿರುತ್ತಾರೆ. ಆರಂಭದಲ್ಲಿ ಪತ್ರಿಕೆಗಳಲ್ಲಿ ಸುದ್ದಿಯಾಗಿ ಜನರ ಕುತೂಹಲ ಕೆರಳಿಸುವ ಈ ಪ್ರಕರಣಗಳು ನಂತರ ತಣ್ಣಗಾಗಿ ಬಿಡುತ್ತವೆ. ಪತ್ರಿಕೆಯಲ್ಲಿ ಈ ಸುದ್ದಿಗಳ ಮೊಳೆ ಜೋಡಿಸುವ ಕೆಲಸ ಮಾಡುವ ನಿರೂಪಕ ಹೇಳುವಂತೆ "ಶ್ರೀಮಂತ ಹುಡುಗರು ಬಡ ಹುಡುಗಿಯರನ್ನು ಕೊಂದಾಗ ಹೀಗೇ ಆಗುವುದು ಎಂದು ನಿರಾಶಾವಾದಿಗಳು ಮತ್ತು ಅಸ್ತಿತ್ವವಾದಿಗಳು ಒಟ್ಟಿಗೇ

ಗೊಣಗಿದರು. ಆಶಾವಾದಿಗಳಾದ ಇಬ್ಬರು ಪೋಲೀಸ್ ಅಧಿಕಾರಿಗಳು ನಾಲ್ಕೈದು ಲಕ್ಷ ಜೇಬಿಗೆ ಇಳಿಸಿ ಕೇಸು ಕೋರ್ಟು ಸೇರುವ ಮೊದಲೇ ವರ್ಗ ಪಡೆದುಕೊಂಡು ಬೇರೆ ಊರಿಗೆ ಹೋದರು. ಬೇರೆ ಕೆಲವರು ಅರ್ಧ ಮನೆಗಳನ್ನು ಪೂರ್ತಿ ಮಾಡಿಕೊಂಡರು. ಸಮುದ್ರ ಕಿನಾರೆಯಲ್ಲಿ ಅಡ್ಡಾಡುತ್ತಿದ್ದ ನಲ್ವತ್ತೈದು ವರ್ಷ ವಯಸ್ಸಿನ ಒಬ್ಬ ಸೋಮಾರಿ ಬೆಸ್ತನಿಗೆ ಕೂಡಾ ಹತ್ತು ಸಾವಿರ ಸಿಕ್ಕಿತು." ಈ ಮಾತುಗಳಲ್ಲಿ ಸಮಾಜದಲ್ಲಿ ಶ್ರೀಮಂತರು

**(ಅದೇ, ಪುಟ 53)**

ಬಡವರ ಮೇಲೆ ನಡೆಸುವ ದೌರ್ಜನ್ಯದ ಬಗ್ಗೆ ನಿರೂಪಕನಲ್ಲಿ ಪ್ರತಿರೋಧ ವ್ಯಕ್ತವಾಗಿರುವುದನ್ನು ಗಮನಿಸಬಹುದು.

'ಸವೆದ ದಾರಿ' ಕತೆ ಆರಂಭವಾಗುವುದು ಬಾಗಿಲು ತಟ್ಟುವ ಶಬ್ದದಿಂದ. ವಿವಾಹಿತ ಹೆಂಗಸೊಬ್ಬಳು ಲೇಖಕರ ಬಳಿಗೆ ಬಂದು ತನ್ನ ಮಗ ಬಯ್ಯುತ್ತಾನೆ, ಹೆಣ್ಣುಮಕ್ಕಳು ಕೂಡಾ ನಾಲ್ಕು ದಿನ ಇದ್ದು ಹೋಗಲು ಹೇಳುವುದಿಲ್ಲ. ಗಂಡ ಹೊಡೆಯುತ್ತಾರೆ ಎನ್ನುವ ಸಮಸ್ಯೆಯನ್ನು ಹೇಳಿಕೊಳ್ಳುತ್ತಾಳೆ. ಅದಕ್ಕೆ ಪರಿಹಾರವನ್ನು ಲೇಖಕರಲ್ಲಿ ಕೇಳುತ್ತಾಳೆ. ಬಾಡಿಗೆ ಮನೆಯಲ್ಲಿ ವಾಸವಾಗಿದ್ದ ಲೇಖಕರ ಸಮಸ್ಯೆಯನ್ನು ಆಲಿಸುತ್ತಾಳೆ. ಪರಿಸ್ಥಿತಿಗೆ ಹೊಂದಿಕೊಂಡು ಬದುಕುವ ತನ್ನ ಬದುಕನ್ನು ಅವರು ತಿಳಿಸುತ್ತಾರೆ. "ಲೇಖಕ ಸಮಾಜದ ಮುಖ ಸೊಟ್ಟಗಿರೋದನ್ನು ನೋಡಿ ನಗ್ತಾನೆ. ಆ ಹುಡುಗೀರು, ಅಂದ್ರೆ ಸಮಾಜ ಲೇಖಕನ ಬದುಕು ಸೊಟ್ಟಗಿರೋದನ್ನ ನೋಡಿ ನಗ್ತದೆ. ಅದ್ರಲ್ಲಿ ಅವರಿಗೆ ಖುಷಿ ಸಿಗುತ್ತೆ. ಸಮಸ್ಯೆಗೆ ಪರಿಹಾರವಿಲ್ಲವೆಂದು ಪರಿಹಾರಕ್ಕಾಗಿ ನಾವು ಮಾಡುವ ಪರದಾಟವನ್ನೇ ಗಾಲಿಗಳನ್ನಾಗಿ ಮಾಡಿಕೊಂಡು ತಮ್ಮ ಬಾಳಿನ ರಥವನ್ನು ಓಡಿಸ್ತಾರೆ ನೋಡಿ ಅದು ಶೋಷಣೆ. ಪ್ರತಿಯೊಂದು ಸಮಸ್ಯೆಗೆ ಒಂದು ಪರಿಹಾರ ಇದೆ. ಇದು ಬರಿ ಮಾತಲ್ಲ. ಖಂಡಿತ ಇದೆ. ಆದರೆ ಪರದಾಟ ಆರಂಭಿಸಿದ ಕೂಡಲೇ ನಾವು ಶೋಷಣೆಗೊಳಗಾಗ್ತೇವೆ. ನಿಮ್ಮ ಸಮಸ್ಯೆಗೆ ನೀವೇ ಪರಿಹಾರ ಕಂಡುಕೊಳ್ಳಬಲ್ಲಿರಿ. ಯೋಚಿಸಿ ಪರಿಹಾರ ಖಂಡಿತ ಇದೆ" ಎನ್ನುತ್ತಾರೆ.

**(ಅದೇ, ಪುಟ 72)**

'ಪ್ರೀತಿ' ಕತೆಯಲ್ಲಿ ಅನಂತ ಮೇಷ್ಟ್ರು ಮತ್ತು ಕವಿತಾ ಟೀಚರು ಪ್ರೀತಿಸುತ್ತಾರೆ. ಈ ಸುದ್ದಿ ಶಾಲೆಯ ವಿದ್ಯಾರ್ಥಿಗಳಿಗೆ ತಿಳಿಯುತ್ತದೆ. ವಿದ್ಯಾರ್ಥಿಗಳಿಗೆ ಇದು ಕುತೂಹಲದ ವಿಷಯವಾಗುತ್ತದೆ. ವಿದ್ಯಾರ್ಥಿಗಳಾದ ಶಂಕರ, ಆನಂದ, ರವಿ, ನಾಗೇಶ ಪ್ರೀತಿಯ ಬಗ್ಗೆ ಚರ್ಚಿಸುತ್ತಾರೆ. ನಿರೂಪಕನಾದ ವಿದ್ಯಾರ್ಥಿ ಯೋಚಿಸುತ್ತಾನೆ "ಜಗಳ ಹಗಲು,

ಅಪ್ಪಿಕೊಳ್ಳುವುದು ಕತ್ತಲೆಯಲ್ಲಿ. ಯಾಕೆ? ಬಹುಶಃ ಪ್ರೀತಿ ಅನ್ನುವುದನ್ನು ಕತ್ತಲಲ್ಲೇ ಮಾಡ್ಬೇಕೂಂತ ಕಾಣುತ್ತೆ."

**(ಅದೇ, ಪುಟ 76)**

ಶಂಕರ ಈ ವಿಚಾರವನ್ನು ತರಗತಿಯ ಬೋರ್ಡಿನಲ್ಲಿ ಬರೆಯುತ್ತಾನೆ. ಶಾಲೆಯ ಗೋಡೆಯ ಮೇಲೆ ಈ ವಿಚಾರವನ್ನು ಯಾರೋ ಬಹಳ ಕೆಟ್ಟದಾಗಿ ಬರೆದಿರುತ್ತಾರೆ. "ಪ್ರೀತಿಯೆಂದರೆ ಕೆಟ್ಟ ವಿಚಾರವೆ? ಪ್ರೀತಿಯೆಂಬುದನ್ನು ಯಾರಿಗೂ ಕಾಣದ ಹಾಗೆ ಗುಟ್ಟಾಗಿ ಕತ್ತಲೆಯಲ್ಲಿ ಮಾಡುವ ಕಾರಣದಿಂದಲೇ ಅದು ಕೆಟ್ಟದು ಅನಿಸಿಕೊಂಡಿರಬಹುದೆ?" ಎಂದು ನಿರೂಪಕ ಯೋಚಿಸುತ್ತಾನೆ. ಇದರಿಂದ ನೊಂದ ಟೀಚರು ಆತ್ಮಹತ್ಯೆ ಮಾಡಿಕೊಳ್ಳುತ್ತಾರೆ. ಪ್ರೀತಿಯೆಂದರೆ ನಿಜವಾಗಿ ಏನು ಎಂದು ನಿರೂಪಕ ಚಿಂತಿಸುತ್ತಾನೆ.

'ರಸಗುಲ್ಲಾ' ಕತೆಯ ನಿರೂಪಕನಾದ ಕಾಲೇಜು ಪ್ರೊಫೆಸರ್ ತನ್ನ ನೆರೆಮನೆಯ ಶ್ರೀಮಂತಳಾದ ಮಾನಸಳ ಕೋರಿಕೆಯಂತೆ ಬೆಂಗಳೂರಿನ ಅವಳ ತಂಗಿಗೆ ಪಾರ್ಸೆಲ್ ಕೊಂಡೊಯ್ಯುತ್ತಾನೆ. ಅವಳ ತಂಗಿಯೂ ನಯವಾಗಿ ಮಾತನಾಡಿ ತನ್ನ ಅಕ್ಕನಿಗೊಂದು ಪಾರ್ಸೆಲ್ ಕಳುಹಿಸುತ್ತಾಳೆ. ಆಕೆ ತನ್ನ ಅಕ್ಕನಿಗೆ ನೀಡಿದ ಪತ್ರವನ್ನು ಆಕಸ್ಮಾತ್ತಾಗಿ ಓದಿದ ನಿರೂಪಕನಿಗೆ ಆ ಶ್ರೀಮಂತ ಹೆಣ್ಣು ತನ್ನ ಬಗ್ಗೆ ನಿಕೃಷ್ಟ ಭಾವನೆ ಇಟ್ಟುಕೊಂಡಿರುವ ವಿಚಾರ ತಿಳಿಯುತ್ತದೆ. ಇನ್ನೊಮ್ಮೆ ಆಕೆ ಈ ರೀತಿ ನೀಡಿದರೆ ವಿನಯಪೂರ್ವಕವಾಗಿ ಅದನ್ನು ತಿರಸ್ಕರಿಸಿ ತನ್ನ ಪತ್ನಿಯನ್ನು ಪ್ರೀತಿಸುವ ನಿರ್ಧಾರ ಮಾಡುತ್ತಾನೆ.

'ಕತೆ ಒಂದು ಹೂವು' ಕತೆಯ ನಾಯಕಿ ವಿವಾಹಿತೆ. ತನ್ನ ಗಂಡ ತನ್ನನ್ನು ಒಂಟಿಯಾಗಿ ಬಿಟ್ಟು ಉದ್ಯೋಗದ ಕಾರ್ಯದಲ್ಲಿ ಬೇರೆ ಊರಿಗೆ ಹೋದಾಗ ಆಕೆಗೆ ಒಂಟಿತನ ಕಾಡುತ್ತದೆ. ಆಕಸ್ಮಿಕವಾಗಿ ಮನೆಗೆ ಬಂದ ಗಂಡನ ಗೆಳೆಯ ಆಕೆಯನ್ನು ದೂರದ ತವರು ಮನೆಗೆ ತಾನು ಕಾರಿನಲ್ಲಿ ಕರೆದೊಯ್ಯುತ್ತಾನೆ. ಆಕೆ ಆತನೊಂದಿಗೆ ಲೈಂಗಿಕವಲ್ಲದ ಸ್ನೇಹವನ್ನು ಬಯಸುತ್ತಾಳೆ. ದಾರಿಯಲ್ಲಿ ಸಿಕ್ಕಿದ ಕಡಲ ತಡಿಯ ಪ್ರವಾಸಿ ತಾಣದಲ್ಲಿ ಅವರು ಒಂದು ದಿನ ಕಳೆಯುತ್ತಾರೆ.

'ಪೃಥ್ವಿ' ಕತೆಯ ದೀಪಕ್ ಕಂಪೆನಿಯೊಂದರ ಎಂ.ಡಿ. ಶ್ರೀಮಂತಳಾದ ಸೀಮಾಳನ್ನು ಇಪ್ಪತ್ತೈದು ಲಕ್ಷ ವರದಕ್ಷಿಣೆ ಪಡೆದು ಮದುವೆಯಾಗುತ್ತಾನೆ. ತನ್ನ ಹೆಂಡತಿಗೆ ಬೇರೊಬ್ಬನಿಂದ ಮಗುವಾಯಿತೆಂದು ಭಾವಿಸಿ ಆತ್ಮಹತ್ಯೆ ಮಾಡಿಕೊಳ್ಳುತ್ತಾನೆ.

ಅವನ ಶ್ರೀಮಂತ ಹೆಂಡತಿ ತನ್ನ ಮನೆಯ ಎದುರು ಗೂಡಂಗಡಿ ನಡೆಸುತ್ತಿದ್ದ ಕಪ್ಪು ಬಣ್ಣದ ಕ್ರೀಡಾಪಟುವಾಗಿ ಸಾಧನೆ ಮಾಡಿದ ಪೃಥ್ವಿಯ ಬಗ್ಗೆ ವ್ಯಾಮೋಹಗೊಳ್ಳುತ್ತಾಳೆ. ಪತ್ರಿಕೆಗಳಲ್ಲಿ ಬಂದ ಆತನ ಸಾಧನೆಗಳ ವರದಿಯನ್ನು ಸಂಗ್ರಹಿಸಿಡುತ್ತಾಳೆ. ದೀಪಕ್‌ನನ್ನು ಮದುವೆಯಾದ ನಂತರ ಒಮ್ಮೆ ಪ್ರಥ್ವಿಯನ್ನು ತನ್ನ ಮನೆಗೂ ಆಹ್ವಾನಿಸುತ್ತಾಳೆ. ಆಕೆಗೆ ಹುಟ್ಟಿದ ಮಗು ಪೃಥ್ವಿಯಂತೆ ಕಪ್ಪಾಗಿತ್ತು. ಗಂಡನಿಗೆ ತಾನು ಸಂಗ್ರಹಿಸಿದ ವರದಿಗಳ ಸಂಗ್ರಹವನ್ನು ತೋರಿಸುತ್ತಾಳೆ. ಪೃಥ್ವಿಯ ಬಗ್ಗೆ ವ್ಯಾಮೋಹ ಆಕೆಗಿದ್ದುದರಿಂದ ಕಪ್ಪು ಮಗು ಹುಟ್ಟಿತೆಂಬ ಸೂಚನೆ ಕತೆಯಲ್ಲಿದೆ. ನಿರೂಪಕರೊಂದಿಗೆ ಆಕೆ ಹೀಗೆ ಹೇಳುತ್ತಾಳೆ– "ದೀಪಕ್ ನನ್ನ ಗಂಡನಾಗಿದ್ದ ನಿಜ. ನಾನು ಅವನ ಹೆಂಡತಿಯಾಗಿದ್ದುದೂ ಹೌದು. ಆದರೆ ನಾನು ಪೃಥ್ವಿಯನ್ನು ಬಿಟ್ಟು ಒಂದು ಕ್ಷಣವೂ ಇರಲಿಲ್ಲ. ಇನ್ನೂ ಇರಲಾರೆ. ಆತ್ಮಹತ್ಯೆ ಒಬ್ಬ ಮನುಷ್ಯನ ಸ್ವಂತ ನಿರ್ಧಾರ. ಒಬ್ಬ ಮನುಷ್ಯನ ಸಾವು ಅವನ ಸ್ವಂತ ಸಾವು. ಅದು ನಿಮಗೆ ಸಂಬಂಧಿಸಿದೆ ಎಂದು ಭಾವಿಸಿದರೆ ಸಂಬಂಧವಿದೆ. ಹಾಗೆ ಭಾವಿಸದಿದ್ದರೆ ಇಲ್ಲ."

**(ಅದೇ, ಪುಟ 127)**

'ಮಳೆ' ಕತೆ ಆರಂಭವಾಗುವುದು ದಿಢೀರನೆ ಸುರಿಯುವ ಮಳೆಯ ಮೂಲಕ. ಮಳೆಯಿಂದ ರಕ್ಷಣೆ ಪಡೆಯಲು ಅಂಗಡಿಯ ಜಗಲಿಯಲ್ಲಿ ನಿಂತ ಕಾಲೇಜಿನ ಅಧ್ಯಾಪಕ ಹಾಗೂ ಟ್ರಾವೆಲ್ಸ್ ಏಜನ್ಸಿಯಲ್ಲಿ ಕೆಲಸ ಮಾಡುವ ಗೃಹಿಣಿಯ ಮಧ್ಯೆ ಪರಿಚಯ ಉಂಟಾಗುತ್ತದೆ. ಅವರಿಬ್ಬರು ವಿವಾಹಿತರಾಗಿದ್ದರೂ ಪರಸ್ಪರ ಅವಿವಾಹಿತರೆಂದೇ ಪರಿಚಯ ಮಾಡಿಕೊಳ್ಳುತ್ತಾರೆ. ಬಸ್ಸು ಹಾಗು ಆಟೋ ಸಿಗದಿದ್ದಾಗ ಅವರಿಬ್ಬರೂ ನಡೆದುಕೊಂಡು ಹೋಗಲು ನಿರ್ಧರಿಸುತ್ತಾರೆ. ಸ್ವಲ್ಪ ದೂರ ನಡೆದ ಬಳಿಕ ಮತ್ತೆ ಮಳೆ ಆರಂಭವಾಗುತ್ತದೆ. ಸಭಾಭವನದ ಒಳಗೆ ನುಗ್ಗಿದ ಅವರು ಪರಸ್ಪರ ಕೈ ಹಿಡಿದುಕೊಂಡು ನಾಟಕ ನೋಡುತ್ತಾರೆ. ನಾಟಕ ಮುಗಿದೊಡನೆ ಅವರಿಬ್ಬರೂ ಹೊರಗೆ ಬರುತ್ತಾರೆ. ಆಕೆಯ ಗಂಡ ಆಕೆಯನ್ನು ಹುಡುಕಿಕೊಂಡು ಬಂದು ಕಾರಿನಲ್ಲಿ ಆಕೆಯನ್ನು ಕರೆದೊಯ್ಯುತ್ತಾನೆ. ಹೀಗೆ ಕತೆ ಕೊನೆಗೊಳ್ಳುತ್ತದೆ. ಆಧುನಿಕರ ಮನೋಸ್ಥಿತಿಯನ್ನು ಕತೆ ಧ್ವನಿಸುತ್ತದೆ.

"ರಂಗಿನಾಟ" ಕತೆಯ ನಾಯಕ ಮೋಹನರಾಯ. ಆತ ನಿವೃತ್ತ ಅಕೌಂಟೆಂಟ್ ಆತನಿಗೆ ಪತ್ತೆದಾರಿ ಕಾದಂಬರಿ ಓದುವ ಅಭ್ಯಾಸ. ಬದುಕಿನಲ್ಲಿ ಏನಾದರೂ ಥ್ರಿಲ್ ಬೇಕು ಎಂದು ಹಂಬಲಿಸುವಾತ. ಅದಕ್ಕಾಗಿ ಮೊಮ್ಮಗನೊಂದಿಗೆ ಚೆಸ್ ಆಡುತ್ತಾನೆ. ಕೋಣೆಯೊಂದನ್ನು ಬಾಡಿಗೆಗೆ ಪಡೆದು ಲೆಕ್ಕಪತ್ರ ತಯಾರಿಸಿಕೊಡಲಾಗುವುದು ಎಂದು

ಬೋರ್ಡ್ ಹಾಕಿ ಕುಳಿತುಕೊಳ್ಳುತ್ತಾನೆ. ಅದನ್ನು ನೋಡಿ ಬಂದ ಶ್ರೀಮಂತೆ ವಿಧವೆಯೊಬ್ಬಳು ತನ್ನ ಮನೆಗೆ ಬಂದು ಲೆಕ್ಕಪತ್ರ ಪರಿಶೀಲಿಸುವಂತೆ ಕೇಳಿಕೊಳ್ಳುತ್ತಾಳೆ. ತಾನು ಪ್ರತಿ ದಿನ ಆಕೆಯ ಮನೆಗೆ ಹೋಗುತ್ತಿರುವುದನ್ನು ತಪ್ಪಾಗಿ ಅರ್ಥೈಸಿಕೊಂಡ ಮನೆಯವರು ಅಲ್ಲಿಗೆ ಹೋಗುವುದನ್ನು ವಿರೋಧಿಸುತ್ತಾರೆ. ಆದರೆ ಮೋಹನರಾಯ ಏನೂ ಮಾತನಾಡದೇ ಸುಮ್ಮನಿರುತ್ತಾನೆ. ಆತನಿಗೆ ಅದು ಒಂದು ರೀತಿಯ ಥ್ರಿಲ್ ನೀಡುತ್ತಿರುತ್ತದೆ. ಈ ಕತೆಯ ಮೂಲಕ ವೃದ್ಧರ ಮನಸ್ಸಿನ ಆಸೆ, ಅಪೇಕ್ಷೆಗಳನ್ನು, ಅದರ ಬಗ್ಗೆ ಕಿರಿಯ ತಲೆಮಾರಿನ ಉಪೇಕ್ಷೆಯನ್ನು ತೆರೆದಿಡುವ ಪ್ರಯತ್ನವನ್ನು ಕತೆಗಾರರು ಮಾಡುತ್ತಾರೆ.

'ನೀಲಿ ಗುಲಾಬಿ' ಕಥಾ ಸಂಕಲನಕ್ಕೆ ಬೆನ್ನುಡಿಯನ್ನು ಬರೆಯುತ್ತಾ ಸುಮತೀಂದ್ರ ನಾಡಿಗರು "ನೀಲಿ ಗುಲಾಬಿ ಎನ್ನುವ ಕತೆಯಲ್ಲಿ ಕನಸು ಮತ್ತು ವಾಸ್ತವವನ್ನು ಬೆರಸುವ ರೀತಿ, 'ಸವೆದ ದಾರಿ' ಕತೆಯಲ್ಲಿ ಕತೆಗಾರನನ್ನು ಸಂಧಿಸುವ ಒಂದು ಪಾತ್ರದ ಮೂಲಕ ಕತೆಗಾರನನ್ನೇ ವಿಮರ್ಶೆಗೆ ಒಡ್ಡಿಕೊಳ್ಳುವ ರೀತಿ, 'ರಸಗುಲ್ಲಾ' ಕತೆಯಲ್ಲಿ ಕೊಡುವ ಅನಿರೀಕ್ಷಿತ ತಿರುವು, 'ಕತೆ ಒಂದು ಹೂವು' ಕತೆಯ ಕೊನೆಯಲ್ಲಿ ಆ ಕತೆಯನ್ನು ಆರಂಭ ಮಾಡುವ ವಿಶೇಷ, 'ರಂಗಿನಾಟ'ದಲ್ಲಿ ಸಾಂಕೇತಿಕತೆಗೆ ಜಿಗಿಯುತ್ತ ಬೆರಗುಗೊಳಿಸುವಿಕೆ ಮೊದಲಾದ ಕಥನ ವೈವಿಧ್ಯ ಸಾಮಾನ್ಯ ಓದುಗರಿಗೆ ಸಂತೋಷ ಕೊಡುತ್ತದೆ, ಈ ಕತೆಗಳ ತಾಂತ್ರಿಕ ಪ್ರಯೋಗಗಳು ವಿಮರ್ಶಕರಿಗೆ ಅಭ್ಯಾಸಕ್ಕೂ ಯೋಗ್ಯವಾಗಿವೆ. ಇವರ ಕತೆಗಳಲ್ಲಿ ಅಪೂರ್ವ ಸುಂದರಿಯರು ಸಿಗುತ್ತಾರೆ. ಅವರ ಆಕರ್ಷಣೆಯಲ್ಲಿ ಜರ್ಝರಿತರಾದವರು ಸಿಗುತ್ತಾರೆ. ಹಾಗೆಯೇ ಚೈತನ್ಯ ಪಡೆಯುವವರೂ ಕಾಣುತ್ತಾರೆ. ಸಾವಿನ ಅರಿವನ್ನು ಮಡಿಲಲ್ಲಿ ಕಟ್ಟಿಕೊಂಡವರು, ಇಳಿವಯಸ್ಸಿನ ಸಮಸ್ಯೆಗಳನ್ನು ಎದುರಿಸುವವರು, ಸಾಮಾಜಿಕ ಪ್ರಶ್ನೆಗಳನ್ನು ಕೇಳುವವರು, ಬದುಕನ್ನು ಮತ್ತು ಪ್ರೀತಿಯನ್ನು ಅರ್ಥಮಾಡಿಕೊಳ್ಳಲಿಕ್ಕೆ ಹೊರಟವರು ಮೊದಲಾದ ಪಾತ್ರಗಳು ನಮ್ಮನ್ನು ಗಂಭೀರವಾದ ಚಿಂತನೆಯಲ್ಲೂ ತೊಡಗಿಸುತ್ತವೆ" ಎನ್ನುತ್ತಾರೆ.

**(ಅದೇ, ಬೆನ್ನುಡಿ)**

## ೫.೩: ಭೂಗತ ಮತ್ತು ಇತರ ಕತೆಗಳು

ಕೆ.ಟಿ.ಗಟ್ಟಿಯವರ 'ಭೂಗತ ಮತ್ತು ಇತರ ಕತೆಗಳು' ಸಂಕಲನದಲ್ಲಿ ಒಟ್ಟು ಹದಿಮೂರು ಕತೆಗಳಿವೆ. ಅವುಗಳೆಂದರೆ 'ಕತೆಯಿಂದ ಬಂದವನು', 'ಬಂಡೆ', 'ಪ್ರವಾಹ', 'ಸಮಕೋಣದ ಮೂಲೆ', 'ಯೇತಿ', 'ನೀಲಿ ನೊಣಗಳು', 'ರೋಗಿ', 'ಪ್ರಾರ್ಥನೆ

ಕೇಳಿಸಲಿಲ್ಲವೆ?', 'ಕೂರ್ಮಾವತಾರ', 'ಕತ್ತಲೆಯ ನಂತರ', 'ಹೆರಿಗೆ', 'ಲೋಹ ಚುಂಬಕ ಚಿಕಿತ್ಸೆ', 'ಭೂಗತ'. 2001ರಲ್ಲಿ ಪ್ರಕಟವಾದ ಈ ಸಂಕಲನದ ಕತೆಗಳು ಪ್ರಜಾವಾಣಿ, ಉದಯವಾಣಿ, ಮುಂಬಯಿವಾಣಿ, ಸುಧಾ, ಮಯೂರ, ತುಷಾರ, ಮತ್ತು ಕಸ್ತೂರಿ ನಿಯತಕಾಲಿಕಗಳಲ್ಲಿ ಮೊದಲೇ ಪ್ರಕಟಗೊಂಡಿದ್ದವು.

'ಕತೆಯಿಂದ ಬಂದವನು' ಕತೆಯ ಪ್ರೊಫೆಸರ್ ರಾಜಾರಾಮರಾಯರು ಮೂರು ಹೆಣ್ಣು ಮಕ್ಕಳ ತಂದೆ. ಕಷ್ಟಪಟ್ಟು ಓದುತ್ತಿರುವ ರಾಜನಿಗೆ ತನ್ನ ಮನೆಯ ಹೊರಗಿನ ಕೋಣೆಯೊಂದರಲ್ಲಿ ಆಶ್ರಯ ನೀಡುತ್ತಾರೆ. ಆತ ಎಂ.ಎ. ಮುಗಿಸಿದ ನಂತರ ಕಾಲೇಜಿನಲ್ಲಿ ಕೆಲಸವನ್ನು ಕೊಡಿಸುತ್ತಾರೆ. ತನ್ನ ಮಗಳನ್ನು ಆತನಿಗೆ ಕೊಟ್ಟು ಮದುವೆಯನ್ನೂ ಮಾಡಿಸುತ್ತಾರೆ. ರಾಜಾರಾಮರಾಯರು ಬದುಕಿನ ವಾಸ್ತವಗಳನ್ನು ಯುವಕನಾದ ರಾಜನಿಗೆ ಉಪದೇಶಿಸುತ್ತಾರೆ. ರಾಜ ಆಡುವ ಮಾತುಗಳಲ್ಲಿ ಸಮಾಜದ ಮೇಲ್ವವರ್ಗದ ವ್ಯಕ್ತಿಗಳ ಅಟ್ಟಹಾಸದ ವಿರುದ್ಧ ಪ್ರತಿರೋಧದ ಧೋರಣೆಯನ್ನು ಗುರುತಿಸಬಹುದು. ತನ್ನ ಊರಿನ ಜನರ ಬಗ್ಗೆ ಮಾತನಾಡುತ್ತಾ "ಎಲ್ಲರೂ ನಿರ್ನಾಮ ಹೊಂದಿದ್ದಾರೆ ಕಣೊ. ಪಟೇಲರು ಪರಂಧಾಮವನ್ನೈದಿದ್ದಾರೆ. ಶಾನುಭೋಗರು ನೆಲವನ್ನಪ್ಪಿದ್ದಾರೆ. ಉಗ್ರಾಣಿ ಸಹ ಗೊಟಕ್ಕೆಂದಿದ್ದಾನೆ. ದೇವಸ್ಥಾನದ ಹಳೇ ಪೂಜಾರಿ ದೈವಾಧೀನನಾಗಿದ್ದಾನೆ. ಅವನ ಪೋಲಿಯೋ ಪೀಡಿತ ಮಗ ಪರಲೋಕಕ್ಕೆ ಹೋಗಿದ್ದಾನೆ. ದವಾಖಾನೆಯ ವೈದ್ಯ ಮಹಾಶಯರು ಯಾವುದೋ ಆಕ್ಸಿಡೆಂಟಿನಲ್ಲಿ ತೀರಿಕೊಂಡಿದ್ದಾರೆ. ಎಲಿಮೆಂಟರಿ ಶಾಲೆಯ ರಿಟೈರ್ಡ್ ಹೆಡ್ಮಾಷ್ಟ್ರು ನಿನ್ನೆಯಷ್ಟೇ ಕೊನೆಯುಸಿರೆಳೆದ್ರು. ಅವರ ಮಠದ ಗುರುಗಳು ಕೂಡಾ ಲಿಂಗೈಕ್ಯವೋ ಯೋನ್ಯೈಕ್ಯವೋ ಆದ್ರು. ಶಾನುಭೋಗರ ಹಳೇ ಸೂಳೆ ವಯಸ್ಸಾಗಿ ಸತ್ಲು. ಹೊಸ ಸೂಳೆ ರೋಗ ಬಂದು ಸತ್ಲು". ಇವರೆಲ್ಲ ಜೀವದಲ್ಲಿರುವಾಗ ನನಗೆ ನಗಲು ಆಗಲಿಲ್ಲ.

**(ಭೂಗತ 2001, ಪುಟ 24)**

ಈಗ್ಲಾದ್ರೂ ನಗ್ಬೇಕು. ಎಂದು ರಾಜ ನಗುತ್ತಾನೆ.

'ಬಂಡೆ' ಕತೆಯಲ್ಲಿ ಪ್ರೊಫೆಸರ್ ನಿರಂಜನದಾಸರು ಮೂರು ಮಕ್ಕಳ ತಂದೆ. ಮಕ್ಕಳಿಗೆ ಮದುವೆಯಾಗಿ ಬೇರೆ ಬೇರೆ ಕಡೆಗಳಲ್ಲಿದ್ದಾರೆ. ತನ್ನ ಪತ್ನಿಯೊಂದಿಗೆ ಸಮುದ್ರ ಕಿನಾರೆಯ ಮನೆಯಲ್ಲಿ ವಾಸಿಸುವ ನಿರಂಜನರಾಯರು ಎಪ್ಪತ್ತು ವರ್ಷ ದಾಟಿದವರು. ತಮ್ಮ ಬದುಕಿಗೆ ಅರ್ಥವಿಲ್ಲ ಇನ್ನು ಸಾಯುವುದೇ ಒಳ್ಳೆಯದು ಎಂದು ತನ್ನ ಹೆಂಡತಿಯೊಂದಿಗೆ ಆಗಾಗ ಚರ್ಚಿಸುತ್ತಿರುತ್ತಾರೆ. ಸಮುದ್ರದ ದಡದ ಬಂಡೆಯನ್ನೇರಲು ಸಾಧ್ಯವಾಗುವುದಿಲ್ಲ. ಒಂದು ದಿನ ಅವರ ಪತ್ನಿ ತಣ್ಣಗೆ ಸತ್ತು ಹೋಗುತ್ತಾಳೆ. ಇಂದಿನ

ದಿನಗಳಲ್ಲಿ ಕೊನೆಗಾಲದಲ್ಲಿ ಮಕ್ಕಳಿಂದ ದೂರವಾಗಿ ಬದುಕುವ ತಂದೆ ತಾಯಿಯ ಬದುಕನ್ನು ಕತೆ ಧ್ವನಿಸುತ್ತದೆ.

'ಪ್ರವಾಹ' ಕತೆಯಲ್ಲಿ ಮಳೆಯಿಂದ ರಕ್ಷಣೆ ಪಡೆಯಲು ಮನೆಯೊಂದಕ್ಕೆ ನುಗ್ಗಿದ ಪ್ರೊಫೆಸರ್ ಶಿವಸ್ವಾಮಿಗೆ ಆ ಮನೆಯಲ್ಲಿದ್ದ ಅಚಲ ಎಂಬಾಕೆಯೊಂದಿಗೆ ಪ್ರೀತಿ ಮೂಡುತ್ತದೆ. ಸಹೋದ್ಯೋಗಿಯೊಬ್ಬಳ ಮಗಳ ಮದುವೆಗೆ ಆಗಮಿಸಿದ ಶಿವಸ್ವಾಮಿಗೆ ಅಚಲಳನ್ನೊಮ್ಮೆ ಭೇಟಿಯಾಗಬೇಕೆನಿಸುತ್ತದೆ. ನಲವತ್ತು ವರ್ಷಗಳ ಬಳಿಕ ಅವಳನ್ನೊಮ್ಮೆ ಕಾಣಬೇಕೆಂದು ಹೋಗುತ್ತಾನೆ. ಆಕೆ ಜೀವನದಲ್ಲಿ ಏನನ್ನೂ ಬಯಸದೆ ಮೊಮ್ಮಕ್ಕಳನ್ನು ಕೂಡಾ ಪಡೆದುಕೊಂಡು ನೆಮ್ಮದಿಯಿಂದಿದ್ದಾಳೆ. ನಾಯಕನಾದ ಶಿವಸ್ವಾಮಿ ತನ್ನ ಹೃದಯದಲ್ಲಿ ಆಕೆಯನ್ನು ಶಾಶ್ವತವಾಗಿ ಹಿಡಿದಿಟ್ಟುಕೊಂಡು ಮದುವೆಯಾಗದೆ ಸಾಯುತ್ತಾನೆ. ನಿಜವಾದ ಬದುಕಿನ ಕುರಿತ ಪ್ರಶ್ನೆಯನ್ನು ಕತೆ ಪ್ರಶ್ನಿಸುತ್ತದೆ.

'ಸಮಕೋಣದ ಮೂಲೆ' ಕತೆಯಲ್ಲಿ ಊರಿನ ಮಠದ ಸ್ವಾಮಿ ಸಾಯುವ ಸಂದರ್ಭದಲ್ಲಿ ಜಯರಾಮ ಎಂಬ ತರುಣನಿಗೆ ಪಟ್ಟ ಕಟ್ಟುವ ತಯಾರಿ ನಡೆಯುತ್ತದೆ. ತನ್ನ ದೊಡ್ಡಪ್ಪನಾದ ಚಿದಾನಂದ ತೀರ್ಥ ಸ್ವಾಮಿಯ ಉತ್ತಾರಾಧಿಕಾರಿಯಾಗುವುದು ಆತನಿಗೆ ಇಷ್ಟವಿರುವುದಿಲ್ಲ. ತಂದೆ ಒತ್ತಾಯ ಮಾಡುತ್ತಾನೆ. ಆಗ ಜಯರಾಮ ಬಚ್ಚಲು ಕೋಣೆಯ ಹಿಂದಿನ ಬಾಗಿಲಿನಿಂದ ಪಲಾಯನಗೈಯುತ್ತಾನೆ. ಅಧಿಕಾರ ತಮ್ಮೊಳಗೇ ಇರಬೇಕೆಂದು ಜಯರಾಮನ ತಮ್ಮನ ಇಷ್ಟಕ್ಕೆ ವಿರುದ್ಧವಾಗಿ ಅವನಿಗೆ ಮಠದ ಸ್ವಾಮಿಯ ಪಟ್ಟ ಕಟ್ಟಲಾಗುತ್ತದೆ. ತಾನು ಅದರಿಂದ ಹೊರಬರಲು ಪಲಾಯನಗೈಯಲು ಜಯರಾಮನ ಸಹಾಯವನ್ನು ಕೇಳುತ್ತಾನೆ. ಅದರಂತೆ ಒಂದು ರಾತ್ರಿ ಜಯರಾಮ ಹಿತ್ತಲಿನ ಬಾಗಿಲಿನಿಂದ ಬರುತ್ತಾನೆ. ಆದರೆ ಕೃಷ್ಣ ತಾನು ಮಠದ ಸ್ವಾಮಿಯಾಗಿಯೇ ಮುಂದುವರಿಯುವ ತನ್ನ ಅಪೇಕ್ಷೆಯನ್ನು ತಿಳಿಸುತ್ತಾನೆ. ಮಠಗಳಲ್ಲಿ ನಡೆಯುತ್ತಿದ್ದ ದುರಾಡಳಿತ, ಅವ್ಯವಹಾರಗಳನ್ನೂ ಕಥೆ ಬಯಲು ಮಾಡುತ್ತದೆ. "ಹದಿನೈದನೇ ವರ್ಷ ವಯಸ್ಸಿನಲ್ಲಿ ಕಾಟಾಪುರದ ಮಠದ ಸ್ವಾಮಿಯಾದ ಚಿದಾನಂದನ ಐವತ್ತು ವರ್ಷದ ಸಾಧನೆಗಳು ಮಾತ್ರ ಗಮನಾರ್ಹ. ಮಠದ ವತಿಯಿಂದ ಒಂದು ಎಲಿಮೆಂಟರಿ ಶಾಲೆ ನಡೆಯುತ್ತಿತ್ತು. ಅದರ ಒಬ್ಬಿಬ್ಬರು ಬಡ ಅಧ್ಯಾಪಿಕೆಯರು ಮತ್ತು ಒಬ್ಬಿಬ್ಬರು ಬಡ ಹುಡುಗಿಯರು ಸಾಕಾಗುವುದಿಲ್ಲವೆಂದು ಪ್ರಯತ್ನಿಸಿ ಹೈಸ್ಕೂಲು ಮಾಡಿದ. ಅದರಲ್ಲೂ ಸಿಕ್ಕಿದ್ದು ಒಬ್ಬಳು ಅಧ್ಯಾಪಿಕೆ ಮತ್ತು ಒಬ್ಬಿಬ್ಬರು ಅಂದವಿಲ್ಲದ ಬಡ ಹುಡುಗಿಯರು ಮಾತ್ರ. ಕಾಲೇಜು ಮಾಡಲೆ ಎಂದು ಯೋಚಿಸಿದ. ಕಾಲೇಜು ಮಾಡಿದರೆ ಊರು ಬದಲಾಗಿ ಬಿಡುತ್ತದೆ, ಮತ್ತೆ ಯಾರೂ ಸಿಗಲಿಕ್ಕಿಲ್ಲವೆನಿಸಿ ಕಾಲೇಜು ಬೇಡವೆಂದು ನಿರ್ಧರಿಸಿ,

ಹೊಲಿಗೆ ತರಬೇತಿ ಕೇಂದ್ರ, ಟೈಪ್‌ರೈಟಿಂಗ್ ಸ್ಕೂಲ್ ಇತ್ಯಾದಿಗಳನ್ನು ಸ್ಥಾಪಿಸಿದ. ಯಥೇಚ್ಛವಾಗಿ ಹದನಾಗಿ ಬೆಳೆದ ಹುಡುಗಿಯರು ಸಿಕ್ಕಿದರು. ಕಾಲ ಸರಿದದ್ದೇ ತಿಳಿಯಲಿಲ್ಲ ಚಿದಾನಂದ ಸ್ವಾಮಿಗೆ", "ಎಲ್ಲಾ ಮಠಗಳ ಸ್ವಾಮೀಜಿಯ ಬಚ್ಚಲಿಗೆ ಎರಡು ಬಾಗಿಲುಗಳಿರುತ್ತವೆ". ಈ ಮಾತುಗಳು ಮಠಗಳಲ್ಲಿನ ಸ್ವಾಮಿಗಳ ಅವ್ಯವಹಾರಗಳ
**(ಅದೇ, ಪುಟ 61, 67)**
ವಿರುದ್ಧ ಧ್ವನಿಯೆತ್ತುತ್ತವೆ.

'ಯೇತಿ' ಕತೆಯಲ್ಲಿಯ ನಾರಾಯಣ ಬ್ಯಾಂಕ್ ಒಂದರ ಮ್ಯಾನೇಜರ್. ಬ್ಯಾಂಕಿನ ಹಣವನ್ನು ತನ್ನ ಮನೆ ಕಟ್ಟಲು ಬಳಸಿಕೊಂಡಿದ್ದ. ಹೆಂಡತಿಯ ಒತ್ತಾಯಕ್ಕೆ ಕಟ್ಟು ಬಿದ್ದು ಮನೆ ಕಟ್ಟಿಸಿದ್ದ. ತನ್ನ ಅವ್ಯವಹಾರ ಬ್ಯಾಂಕಿನವರಿಗೆ ಗೊತ್ತಾಗಿತ್ತು. ತಾನು ಹಣವನ್ನು ಬ್ಯಾಂಕಿಗೆ ಕಟ್ಟಬೇಕಾಗಿತ್ತು. ದಿಕ್ಕು ತೋಚದ ಆತ ಆತ್ಮಹತ್ಯೆ ಮಾಡಿಕೊಳ್ಳಬೇಕೆಂದು ಯೋಚಿಸಿ ರೈಲು ಹತ್ತಿ ಯಾವುದೋ ಒಂದು ಊರಿಗೆ ತಲುಪುತ್ತಾನೆ. ಅಲ್ಲಿ ಮುದುಕಿಯೊಬ್ಬಳು ಆತನನ್ನು ತನ್ನ ಪರಿಚಯದ ನಾಣಿಯೆಂದು ಹೇಳಿಕೊಂಡು ತನ್ನ ಮನೆಗೆ ಕರೆದೊಯ್ಯುತ್ತಾಳೆ. ತನ್ನ ಮಗಳನ್ನು ಮದುವೆಯಾಗಬೇಕೆಂದೂ ಕೇಳಿಕೊಳ್ಳುತ್ತಾಳೆ. ಆದಿನ ರಾತ್ರಿ ಮುದುಕಿ ಮನೆಯಲ್ಲಿಯೇ ಮಲಗಲು ಹೇಳುತ್ತಾಳೆ. ಆ ಸಂದರ್ಭದಲ್ಲಿ ನಾರಾಯಣನಿಗೆ ತನ್ನ ಹೆಂಡತಿ, ತನ್ನ ಸಂಸಾರದ ಯೋಚನೆ ಬರುತ್ತದೆ. ಮುದುಕಿಯಲ್ಲಿರುವ ಹಣವನ್ನು ದೋಚುವ ಯೋಚನೆ ಮಾಡುತ್ತಾನೆ. ಆದರೆ ಆದಿನ ರಾತ್ರಿ ಮನೆಯ ಹೊರಗೆ ಯಾವುದೋ ಜನರ ಗುಂಪು ಕಾಣಿಸುತ್ತದೆ. ಬೆಳಗಾಗಿ ಎದ್ದು ನೋಡಿದಾಗ ಮನೆಯಲ್ಲಿ ಯಾರೂ ಇರಲಿಲ್ಲ. ತನ್ನ ಉಡುಪೂ ಮಾಯವಾಗಿತ್ತು. ಮರುದಿನ ರಾತ್ರಿ ಧೈರ್ಯಮಾಡಿ ಮನೆಯಿಂದ ಹೊರಗೆ ಬರುತ್ತಾನೆ. ಜನರ ಗುಂಪಿನಲ್ಲಿ ಸೇರಿಕೊಳ್ಳುತ್ತಾನೆ. ತಾನು ಇದ್ದರೂ ಇಲ್ಲವೆನ್ನುವ ಅರಿವು ಅವನಿಗಾಗುತ್ತದೆ. ಕಡಲ ಶಬ್ದ ಮಾತ್ರ ಅವನಿಗೆ ಕೇಳಿಸುತ್ತಿರುತ್ತದೆ. ಇದು ಕಲ್ಪನಾ ಲೋಕದಲ್ಲಿ ವಿಹರಿಸುವಂತೆ ಮಾಡುವ ಕತೆ.

'ನೀಲಿ ನೊಣಗಳು' ಕತೆ ಆನಂದಪುರದ ಮಕ್ಕಳ ಮೇಲೆ ದಾಳಿ ನಡೆಸಿ ಕೊಲ್ಲುವ ನೀಲಿ ನೊಣಗಳ ಬೀಭತ್ಸ ಚಿತ್ರವನ್ನು ನೀಡುತ್ತದೆ. ಆ ಊರಿನ ಪ್ರತಿಷ್ಠಿತ ವ್ಯಕ್ತಿಗಳ ಮಕ್ಕಳನ್ನೂ ಅದು ಸುಮ್ಮನೆ ಬಿಡುವುದಿಲ್ಲ.

'ರೋಗಿ' ಡಾಕ್ಟರೊಬ್ಬ ರೋಗಿಯಾದ ಕತೆ. ಡಾಕ್ಟರಿಗೆ ಆವರಿಸಿದ ವಿಚಿತ್ರ ರೋಗದಿಂದಾಗಿ ಗಂಟಲಲ್ಲಿ ನೋವು ಉಂಟಾಗಿ ಏನೂ ಮಾಡಲಾಗದೆ

ಅಸಹಾಯಕನಾಗುತ್ತಾನೆ. ಎಷ್ಟು ಚಿಕಿತ್ಸೆ ನಡೆಸಿದರೂ ಗುಣವಾಗದಿದ್ದಾಗ ಕಾಡಿನಲ್ಲಿ ವಾಸ ಮಾಡುವವರಲ್ಲಿಗೆ ಹೋಗುತ್ತಾನೆ. ಅವರ ಔಷಧಿ ಫಲ ನೀಡುತ್ತದೆ. ಮನೆಗೆ ಬಂದ ಡಾಕ್ಟರ್ ನರಹರಿ ಕುಪ್ಪಿನನಿಗೆ ತುಂಬಾ ಹಸಿವಾಗುತ್ತದೆ. ಆದರೆ ಆಹಾರ ನುಂಗಿದಾಗ ಗಂಟಲಲ್ಲಿ ಇಳಿಯುವುದಿಲ್ಲ.

'ಪ್ರಾರ್ಥನೆ ಕೇಳಿಸುವುದಿಲ್ಲವೆ'? ಉದಯಪುರದ ಇಸ್ಟ್ ಪಕ್ಷದ ಮೂರು ಮಂದಿ ಯುವಕರು ಕಲ್ಯಾಣಿ ಎಂಬಾಕೆಯನ್ನು ಬಲಾತ್ಕಾರ ಮಾಡುತ್ತಾರೆ. ಅದಕ್ಕಾಗಿ ಅವರಿಗೆ ಜೈಲು ಶಿಕ್ಷೆಯೂ ಆಗುತ್ತದೆ. ಶಿಕ್ಷೆ ಮುಗಿಸಿ ಊರಿಗೆ ಬರುತ್ತಿರುವ ಅವರನ್ನು ಪಕ್ಷದವರು ಆನೆಗಳ ಮೇಲೆ ಕುಳ್ಳಿರಿಸಿ ಮೆರವಣಿಗೆ ನಡೆಸುತ್ತಾರೆ. ಕಲ್ಯಾಣಿಯ ತಾಯಿ, ಹಾಗೂ ಉಳಿದಿಬ್ಬರು ಮಕ್ಕಳು ಯಾವುದೇ ಪ್ರತಿರೋಧ ವ್ಯಕ್ತಪಡಿಸಲು ಅಸಹಾಯಕರಾಗಿ ಆತ್ಮಹತ್ಯೆ ಮಾಡಿಕೊಳ್ಳಲು ನಿರ್ಧರಿಸುತ್ತಾರೆ. ಆದಿನ ಸುರಿದ ಜಡಿಮಳೆಯಿಂದಾಗಿ ಊರಿನ ಆಣೆಕಟ್ಟು ಒಡೆಯುತ್ತದೆ. ಊರು ನೀರಿನಲ್ಲಿ ಮುಳುಗುತ್ತದೆ. ಕೆಲವು ಜನರು ಊರ ದೇವಾಲಯದಲ್ಲಿ ಆಶ್ರಯ ಪಡೆಯುತ್ತಾರೆ. ಆದರೆ ಅದೂ ಕೂಡಾ ಕುಸಿಯುತ್ತದೆ. ಯುವಕರು ಏರಿ ಬಂದ ಆನೆಯೂ ಮುಳುಗುತ್ತದೆ.

'ಕೂರ್ಮಾವತಾರ' ಕತೆಯಲ್ಲಿನ ಗೋವಿಂದಯ್ಯ ಹೋಟೆಲ್ ಉದ್ದಿಮೆ ಆರಂಭಿಸಿ ಅದರಲ್ಲಿ ಯಶಸ್ಸನ್ನು ಗಳಿಸಿ ಸಾಕಷ್ಟು ಸಂಪಾದಿಸುತ್ತಾನೆ. ಆದರೆ ಯಾವುದೋ ಕಾರಣದಿಂದ ಆತನ ವ್ಯವಹಾರ ಕುಸಿಯುತ್ತದೆ. ಹೆಂಡತಿ ಮಕ್ಕಳಿಂದ ಉಪೇಕ್ಷೆಗೆ ಗುರಿಯಾಗುತ್ತಾನೆ. ಮನೆಬಿಟ್ಟು ಭಿಕ್ಷೆ ಬೇಡುತ್ತಾ ದಿನ ಕಳೆಯುತ್ತಾನೆ. ಈ ಸಂದರ್ಭದಲ್ಲಿ ವೃದ್ಧ ಭಿಕ್ಷುಕಿಯೊಬ್ಬಳ ಪರಿಚಯವಾಗುತ್ತದೆ. ಆಕೆಯ ರೋಗಗ್ರಸ್ತ ಮಗನನ್ನು ಗೋವಿಂದಯ್ಯ ಊರಿನ ಗುಡಿಯ ಬಳಿ ಭಿಕ್ಷೆ ಬೇಡಲು ಇರಿಸುತ್ತಾನೆ. ಮತ್ತೊಮ್ಮೆ ಆತನಿಗೆ ಕಾವಿ ಬಟ್ಟೆ ತೊಡಿಸಿ ಕೂರ್ಮನಾರಾಯಣನೆಂದು ಹೆಸರಿಸಿ ಗುಡಿಯೊಂದರ ಜಗುಲಿಯಲ್ಲಿ ಮಲಗಿಸುತ್ತಾನೆ. ಆತ ಕೂರ್ಮನಾರಾಯಣ ಸ್ವಾಮಿಯಾಗುತ್ತಾನೆ. ತಾನು ಮತ್ತೆ ಹೋಟೆಲ್ ಸ್ಥಾಪಿಸಿ ಲಾಭಗಳಿಸುತ್ತಾನೆ. ತನ್ನ ಹೆಂಡತಿ ಮಕ್ಕಳು ತನ್ನ ಬಳಿಗೆ ಬಂದಾಗ ಅವರೊಂದಿಗೆ ಕೇವಲ ವ್ಯಾವಹಾರಿಕವಾಗಿ ನಡೆದುಕೊಳ್ಳುವುದರ ಮೂಲಕ ಪ್ರತಿರೋಧ ತೋರುತ್ತಾನೆ.

'ಕತ್ತಲೆಯ ನಂತರ' ಕತೆಯ ನಾಯಕ ಪುರುಷೋತ್ತಮ ಕನಸುಗಾರ. ತಂದೆ ತಾಯಿಯರನ್ನು ಕಳಕೊಂಡ ಆತ ಲಾಟರಿ ಟಿಕೇಟು ಖರೀದಿಸುವುದರ ಮೂಲಕ ತನ್ನ ಕನಸನ್ನು ನನಸುಗೊಳಿಸುವ ಪ್ರಯತ್ನ ನಡೆಸುತ್ತಾನೆ. ಲಾಟರಿಯಲ್ಲಿ ಐದು ಸಾವಿರ

ರೂಪಾಯಿ ಬಂದಾಗ ಸಂತೋಷ ಪಡಬೇಕೆಂದು ಹೋಟೆಲ್ ಒಂದರಲ್ಲಿ ಸುಂದರವಾದ ರೂಂ ಮಾಡುತ್ತಾನೆ. ತನ್ನ ಮನಸ್ಸಿಗೆ ಅನಿಸಿದ್ದನ್ನು ಮಾಡುತ್ತಾನೆ, ತಿನ್ನುತ್ತಾನೆ. ತಾನು ಕೆಲಸ ಮಾಡುವ ಅಂಗಡಿಯ ಮಾಲೀಕ ತಾನು ಸುಳ್ಳು ಹೇಳಿ ರಜೆ ಮಾಡಿರುವ ವಿಚಾರದ ಬಗ್ಗೆ ತಿಳಿದು ಸಿಟ್ಟುಗೊಂಡಾಗ ಆತನೊಂದಿಗೆ ತೀಕ್ಷ್ಣವಾಗಿಯೇ ಪ್ರತಿಕ್ರಯಿಸುತ್ತಾನೆ. ಮಾಲೀಕ ಸಿಟ್ಟಿನಿಂದ ಕೆನ್ನೆಗೆ ಬಾರಿಸಿದಾಗ ತಾನೂ ನಾಲ್ಕೇಟು ಬಾರಿಸುತ್ತಾನೆ.

'ಹೆರಿಗೆ' ಕಥೆಯ ನಾಯಕಿ ಚಂದ್ರಾಳ ಗಂಡ ಮದುವೆಯಾಗಿ ಬಂದು ವಾರದೊಳಗೆ ಅವಳನ್ನು ಬಿಟ್ಟು ಹೋಗಿದ್ದ. ಆಕೆಗೆ ಮಕ್ಕಳನ್ನು ಪಡೆಯುವ ಆಸೆ. ಆದರೆ ಆಕೆಯ ಗರ್ಭಪಾತ್ರೆ ಛಿದ್ರವಾಗಿತ್ತು. ಹದಿಮೂರು ವರ್ಷಗಳ ಬಳಿಕ ಆಕೆ ತನ್ನ ಗುಡಿಸಲಿನ ಪಕ್ಕದಲ್ಲಿ ಕುಳಿತಿದ್ದ ಹತ್ತು ಹನ್ನೆರಡು ವಯಸ್ಸಿನ ಹುಡುಗನೊಬ್ಬನನ್ನು ನೋಡುತ್ತಾಳೆ. ಆತ ತನಗೆ ಅನಾಥಾಶ್ರಮದಲ್ಲಿ ನೀಡುವ ಹಿಂಸೆ ತಾಳಲಾರದೆ ಅಲ್ಲಿಂದ ಓಡಿ ಬಂದಿದ್ದ. ಆತನಿಗೆ ಆಕೆ ಆಶ್ರಯ ನೀಡುವ ಬಗ್ಗೆ ತಿಳಿಸುತ್ತಾಳೆ. ಆತನನ್ನು ಎಳೆದುಕೊಂಡು ಹೋದಾಗ ಪೋಲೀಸರಿಗೆ ತನ್ನನ್ನು ತಾನು ಒಪ್ಪಿಸಿಕೊಂಡು ಅವನನ್ನು ಬಿಡಿಸಿಕೊಂಡು ಬಂದಳು. ತನ್ನ ಮನೆಗೆ ಕರೆದುಕೊಂಡು ಬಂದು ಬೆಳಗ್ಗೆ ಆತನ ಕೈಗೆ ಐನೂರರ ನೋಟುಗಳನ್ನು ಕೊಟ್ಟು ಬೇರೆ ಊರಿಗೆ ಹೋಗುವಂತೆ ತಿಳಿಸುತ್ತಾಳೆ. ನನ್ನಂಥ ಹೆಂಗಸಿನ ಹತ್ರ ಹೋಗ್ಬೇಡ ಎನ್ನುತ್ತಾಳೆ. ಆದಿನ ಬೆಳಗ್ಗೆ ಆಕೆಗೆ ಅಸಾಧ್ಯವಾದ ನೋವು ಕಾಣಿಸಿಕೊಂಡಿತ್ತು. ಹುಡುಗನನ್ನು ಕಳುಹಿಸಿದ ನಂತರ ಅವಳಲ್ಲಿ ಏನೋ ಒಂದು ರೀತಿಯ ತೃಪ್ತಿ ನೆಲೆಸಿತ್ತು. ಅಕ್ಕಪಕ್ಕದವರು ಯಾರಾದರೂ ಬರಬಹುದೆಂದು ನಿರೀಕ್ಷೆಯಿಂದ ಮಲಗಿಕೊಳ್ಳುತ್ತಾಳೆ. ಕಥಾನಾಯಕಿ ಚಂದ್ರಾ ಗಂಡ ಬಿಟ್ಟ ನಂತರ ವೇಶ್ಯೆಯಾದವಳು. ಸಮಾಜದ ಶೋಷಣೆಗೆ ಅವಳು ರೂಪಕದಂತಿದ್ದಾಳೆ.

'ಲೋಹ ಚುಂಬಕ ಚಿಕಿತ್ಸೆ'ಯ ಗುರುದತ್ತರಾವು ಪ್ರಾಮಾಣಿಕ ಸರಕಾರಿ ಅಧಿಕಾರಿ. ತನ್ನ ಕೆಲಸವನ್ನು ಅತ್ಯಂತ ಶ್ರದ್ಧೆಯಿಂದ ಮಾಡುವ ಮನುಷ್ಯ. ಮಗ ಅಮೇರಿಕಕ್ಕೆ ಹೋಗುವ ನಿರ್ಧಾರ ಮಾಡಿದಾಗ ದುಃಖಿತನಾಗುತ್ತಾನೆ. ಆದರೆ ಮಗ ಅಶೋಕನಿಗೆ ಅಮೇರಿಕಕ್ಕೆ ಹೋಗುವ ಅದಮ್ಯವಾದ ಆಸೆ. ಗುರುದತ್ತರಾವರಿಗೆ ಮೊದಲು ತನ್ನ ಸುತ್ತಮುತ್ತಲಿನವರೆಲ್ಲಾ ತನ್ನನ್ನು ಕಂಡು ಅಪಹಾಸ್ಯದ ನಗು ಬೀರುವಂತೆ ಭಾಸವಾಗುತ್ತದೆ. ತನ್ನ ಸ್ನೇಹಿತನ ಮನೆಗೆ ಹೋಗಿ ಅಲ್ಲಿ ತನ್ನ ಮಗನ ಪಾಸ್ ಪೋರ್ಟ್‌ಗಾಗಿ ಸಹಾಯ ಮಾಡುವಂತೆ ತಿಳಿಸಿದಾಗ ಆತ ನಿರಾಕರಿಸುತ್ತಾನೆ. ಈ ಮಧ್ಯೆ ಆತ ಆಸ್ಪತ್ರೆ ಸೇರುತ್ತಾನೆ. ಅಲ್ಲಿ ವೈದ್ಯರು ಲೋಹ ಚುಂಬಕ ಚಿಕಿತ್ಸೆಗೆ ಒಳಗಾಗುವಂತೆ ತಿಳಿಸುತ್ತಾರೆ.

ಗುರುದತ್ತರಾಯ ಕೊನೆಗೆ ತನ್ನ ಸ್ವಭಾವದಲ್ಲಿ ಬದಲಾವಣೆ ತಂದುಕೊಳ್ಳುತ್ತಾನೆ. ಟ್ರಾವೆಲ್ಸ್ ಏಜೆಂಟನಿಗೆ ಹೆಚ್ಚು ಹಣ ನೀಡಿ ಪಾಸ್ ಪೋರ್ಟ್ ಪಡೆಯುವಂತೆ ಮಗನಿಗೆ ಸೂಚಿಸುತ್ತಾನೆ. ತನ್ನ ಕಛೇರಿಗೆ ಬರುತ್ತಿದ್ದ ಕಾಂಟ್ರಾಕ್ಟ್‌ದಾರ ನೊಬ್ಬನೊಂದಿಗೆ ತನ್ನ ಮಗನನ್ನು ಅಮೇರಿಕಕ್ಕೆ ಕಳುಹಿಸಲು ಬೇಕಾದ ವಿಮಾನದ ಟಿಕೇಟು ಕೊಡುವಂತೆ ಕೇಳಿಕೊಳ್ಳುತ್ತಾನೆ. ಈಗ ಆತನಿಗೆ ತನ್ನನ್ನು ಕಂಡು ಜನ ಅಪಹಾಸ್ಯ ಮಾಡುವಂತೆ ಅನಿಸುವುದಿಲ್ಲ. ಲೋಹ ಚುಂಬಕ ಚಿಕಿತ್ಸೆಯ ಅಗತ್ಯ ಕಾಣಿಸುವುದಿಲ್ಲ. ವ್ಯವಸ್ಥೆಯ ವಿರುದ್ಧ ಪ್ರತಿಭಟಿಸದೆ ಅನಿವಾರ್ಯವಾಗಿ ಅದಕ್ಕೆ ಒಗ್ಗಿಕೊಳ್ಳಬೇಕಾದ ಅನಿವಾರ್ಯತೆಯನ್ನು ಕತೆ ತಿಳಿಸುತ್ತದೆ. ಸಮಾಜದ ಭ್ರಷ್ಟತೆ ಇಲ್ಲಿ ಚಿತ್ರಿತವಾಗಿದೆ.

'ಭೂಗತ' ಕಥೆಯಲ್ಲಿ ನಿರೂಪಕನಿಗೆ ಆತನ ಬಾಲ್ಯದ ಗೆಳೆಯ ಶ್ಯಾಮಸುಂದರ ಕುಡಿದು ರಸ್ತೆಯಲ್ಲಿ ಬಿದ್ದಿರುವ ಸ್ಥಿತಿಯಲ್ಲಿ ಸಿಗುತ್ತಾನೆ. ಶಾಮಸುಂದರ ಕೆಲವು ವರ್ಷಗಳ ಕಾಲ ಬೇರೆ ಬೇರೆ ಊರುಗಳಲ್ಲಿ, ಸಿನಿಮಾ ಪತ್ರಿಕೆಯಲ್ಲಿ ಕೆಲಸ ಮಾಡಿ ತನ್ನ ಊರಿಗೆ ಮರಳಿದ್ದ. ಅಲ್ಲಿ ನಡೆಯುತ್ತಿದ್ದ ಭ್ರಷ್ಟ ರಾಜಕೀಯ, ಆಡಳಿತ ವ್ಯವಸ್ಥೆಯನ್ನು ಕಂಡು ಅದರ ವಿರುದ್ಧ ಲೇಖನವೊಂದನ್ನು ಬರೆಯುತ್ತಾನೆ. ಅದರ ಪ್ರಕಟಣೆಗಾಗಿ ಪತ್ರಿಕೆಯಲ್ಲಿ ಕೆಲಸ ಮಾಡುತ್ತಿದ್ದ ನಿರೂಪಕರ ಬಳಿಗೆ ಬರುತ್ತಾನೆ. "ನನಗಿದರಿಂದ ಹೆಸರು, ಹಣ ಇತ್ಯಾದಿ ಏನೂ ಬೇಕಾಗಿಲ್ಲ. ಅವರು ನಡೆಸ್ತಿರೋ ಭ್ರಷ್ಟಾಚಾರ ಬಯಲಾಗ್ಬೇಕು. ಜನರು ಅದನ್ನು ಚರ್ಚಿಸುವಂತಾಗಬೇಕು. ಜನರಿಗೆ ಪ್ರತಿಭಟಿಸುವ ಧೈರ್ಯ ಬರಬೇಕು."

**(ಅದೇ, ಪುಟ 222)**

ಎನ್ನುತ್ತಾನೆ. ನಿರೂಪಕರೊಂದಿಗೆ ಐದು ಸಾವಿರ ಸಾಲ ಪಡೆದುಕೊಳ್ಳುತ್ತಾನೆ. ಅವರ ಕಛೇರಿಯಲ್ಲಿ ಐದು ತಿಂಗಳು ಕೆಲಸ ಮಾಡಿ ಹೇಳದೆ ಕೇಳದೆ ಕೆಲಸ ಬಿಟ್ಟು ಹೋಗುತ್ತಾನೆ. ಮೂರು ವರ್ಷದ ನಂತರ ಕುಡಿದು ದಾರಿಯಲ್ಲಿ ಬಿದ್ದ ಸ್ಥಿತಿಯಲ್ಲಿ ಕಾಣಸಿಗುತ್ತಾನೆ. ಆಗ ಆತ ಇಂದ್ರಜಾಲದ ನವ ಮಾಂತ್ರಿಕ ಇಸ್ಪೀಟೆಲೆಗಳ ಅಪೂರ್ವ ಜಾದೂಗಾರ ಪ್ರೊ. ಶ್ಯಾಮಸುಂದರ್ ಆಗಿದ್ದ. ತನ್ನ ಕೈ ಚಳಕ ವಿಫಲಗೊಂಡಾಗ ಮತ್ತೆ ತಲೆ ಮರೆಸಿಕೊಳ್ಳುತ್ತಾನೆ. ಮತ್ತೊಂದು ದಿನ ಪ್ರತ್ಯಕ್ಷನಾಗಿ ನಿರೂಪಕನ ಮನೆಯ ಪುರಾತನವಾದ ಶಾರದೆಯ ಮೂರ್ತಿಯೊಂದಿಗೆ ಪರಾರಿಯಾಗುತ್ತಾನೆ.

ಈ ಸಂಕಲನದ ಕತೆಗಳಲ್ಲಿ ಪ್ರತಿರೋಧದ ನೆಲೆಗಳನ್ನು ಗುರುತಿಸುವುದು ಸಾಧ್ಯವಿಲ್ಲವಾದರೂ ಕೆಲವು ಕತೆಗಳಲ್ಲಿ ಆ ನೆರಳುಗಳಿರುವುದನ್ನು ಕಂಡುಕೊಳ್ಳ ಬಹುದಾಗಿದೆ. ಕತೆಗಳಲ್ಲಿ ಸಮಾಜದ ವಿಡಂಬನೆಯಿದೆ. 'ಪ್ರವಾಹ ಕತೆ ನಿಜವಾದ ಬದುಕಿನ ಕುರಿತಾದ ಪ್ರಶ್ನೆಯನ್ನು ಎತ್ತುತ್ತದೆ. 'ಹೆರಿಗೆ' ಕತೆಯ ಚಂದ್ರ ಸಮಾಜದ

ಶೋಷಣೆಗೆ ರೂಪಕವಾಗಿದ್ದಾಳೆ. 'ಲೋಹ ಚುಂಬಕ ಚಿಕಿತ್ಸೆಯಲ್ಲಿ ಸಮಾಜದ ಭ್ರಷ್ಟತೆಯ ಚಿತ್ರಣವಿದೆ. 'ಯೇತಿ' ಅಸಂಗತ ತಂತ್ರದ ಮೂಲಕ ಅರ್ಥಹೀನ ಬದುಕನ್ನು ಬಿಂಬಿಸುತ್ತದೆ. 'ನೀಲಿ ನೊಣಗಳು' ಭ್ರಷ್ಟ ಅಧಿಕಾರಿಗಳ ಕ್ರೌರ್ಯವನ್ನೂ, ಅದಕ್ಕೆ ಬಲಿಯಾಗುವ ಅಮಾಯಕರ ಸ್ಥಿತಿಯನ್ನೂ ತಿಳಿಸುತ್ತದೆ. ಡಾ. ಬಿ. ಜನಾರ್ದನ್ ಭಟ್ ತಿಳಿಸುವಂತೆ 'ಭೂಗತ' ಸಂಕಲನದ ವೈಶಿಷ್ಟ್ಯವೇನೆಂದರೆ "ಕತೆಗಾರರು ತಮ್ಮ ಮೊದಲಿನ ಸಂಕಲನದ ಕತೆಗಳ ಮಾದರಿಗೂ ಮರು ಭೇಟಿ ನೀಡಿರುವುದು. ಉದಾಹರಣೆಗೆ 'ಕತ್ತಲೆಯ ನಂತರ' ಕತೆಯ ನಾಯಕ ಪುರುಷೋತ್ತಮ ಅವಿವಾಹಿತ. ಸುಖ ಅಂದರೆ ಏನು ಎಂದು ಅರಿಯಲು ತನ್ನ ಜೀವಮಾನದ ಉಳಿತಾಯವನ್ನೆಲ್ಲ ಎರಡು ದಿನ ಪಂಚತಾರಾ ಹೋಟೆಲೊಂದರಲ್ಲಿ ಉಳಿದು, ಪಂಚಾತಾರಾ ವೇಶ್ಯೆಯ ಸಂಸರ್ಗ ಮಾಡಿ ಕಳೆದು ಮತ್ತೆ ಬೀದಿಗೆ ಬರುತ್ತಾನೆ. ಇದು ಗಟ್ಟಿಯವರ ಮೊದಲನೆಯ ಸಂಕಲನದ ಮಾದರಿಯೇ ಆದರೂ ನಾಯಕನ ಮನೋಭಾವದಲ್ಲಿ ಗಣನೀಯವಾದ ಬದಲಾವಣೆ ಆಗಿದೆ. ಅವನು ವರ್ಗತಾರತಮ್ಯ ಮತ್ತು ಹಣದಿಂದ ಒದಗುವ ಸುಖದ ನ್ಯಾಯಾನ್ಯಾಯಗಳ ಬಗೆಗೆ ತಲೆಕೆಡಿಸಿಕೊಂಡಿಲ್ಲ. ಅದನ್ನೊಮ್ಮೆ ಪಡೆದು ತಿರಸ್ಕರಿಸಿ ಮನಸ್ಸಿನೊಳಗೆ ಹಳೆ ಹೇಳಿಕೆಯನ್ನು ತೊಳೆದು ಶುದ್ಧ ಮಾಡಿಕೊಳ್ಳುವ ಕ್ರಿಯೆಯಾಗಿ ನಾಯಕನ ವರ್ತನೆಯನ್ನು ಕಾಣಬಹುದು."

**(ಡಾ. ಶ್ರೀಧರ ಹೆಚ್.ಜಿ.(ಸಂ), 2009, ಪುಟ 54)**

## ೫.೪: ವಿಶ್ವ ಸುಂದರಿ

2006 ರಲ್ಲಿ ಪ್ರಕಟವಾದ ವಿಶ್ವಸುಂದರಿ ಕಥಾ ಸಂಕಲನದಲ್ಲಿ 'ದಯವಿಟ್ಟು ಕ್ಷಮಿಸಿ', "ಪದ್ಮನಾಭ ಹೊಳ್ಳರ ಜನ್ಮಕುಂಡಲಿ', 'ನನ್ನ ಸಾವಿಗೆ ನಾನೇ ಹೊಣೆ', 'ಮುಖದೊಳಗಿನ ಮುಖ', 'ಒಂದು ಬುಟ್ಟಿ ಸೇಬು', ಮರವೇರಿದ ಸುಂದರಿ', 'ಅನಿಕೇತನ', 'ಕೃಷ್ಣ ಭಟ್', 'ಕರಡಿ ಗಣಪತಿಯ ಮಹಿಮೆ', 'ಸುಂದ್ರಾಪುರದ ಸೂಳೆಯರು', 'ವಾಲ್ಮೀಕಿ ನಾರಾಯಣ', 'ಅನಾಮಧೇಯ', 'ಸ್ಥಿರ ಸೂರ್ಯ', 'ಸೋಲೆಂಬ ಗೆಲುವು', 'ಫಿಶ್ವಸುಂದರಿ', ಮತ್ತು 'ಕುಸುಮ ಬಾಣ' ಎಂಬ ಕತೆಗಳಿವೆ.

ಕೆ.ಟಿ.ಗಟ್ಟಿಯವರು ಈ ಕಥಾ ಸಂಕಲನದಲ್ಲಿ ಸಮಾಜದ ಅನೇಕ ಒಳನೋಟ ಗಳನ್ನು ನೀಡಿದ್ದಾರೆ. 'ಪದ್ಮನಾಭ ಹೊಳ್ಳರ ಜನ್ಮ ಕುಂಡಲಿ', 'ಕರಡಿ ಗಣಪತಿಯ ಮಹಿಮೆ', 'ನನ್ನ ಸಾವಿಗೆ ನಾನೇ ಹೊಣೆ', 'ಸ್ಥಿರ ಸೂರ್ಯ', 'ಅನಾಮಧೇಯ' ಮುಂತಾದ ಕತೆಗಳು ನಮ್ಮ ಸಮಾಜದ ಒಳ ವ್ಯವಸ್ಥೆಯ ಬಗ್ಗೆ ಅರಿವನ್ನು ನೀಡಿ,

ಅರಿವಿನ ಆನಂದವನ್ನು ಓದುಗರಿಗೆ ನೀಡುತ್ತವೆ. ಈ ಒಳ ವ್ಯವಸ್ಥೆಯನ್ನು 'ಸಾಮಾಜಿಕ ರಾಜಕೀಯ' ಎಂದು ಕರೆಯಬಹುದು. ಈ ರಾಜಕೀಯದಲ್ಲಿ ಕೆಲವರು ಸಮಾಜದ ಆಗುಹೋಗುಗಳನ್ನು ನಿಯಂತ್ರಿಸುತ್ತಾರೆ. ಇಂತಹ ಸಮಾಜವನ್ನು ನಿಯಂತ್ರಿಸುವ ಶಕ್ತಿ ಯಾರಿಗೆ ಯಾವ ಕಾರಣದಿಂದ ಒದಗುತ್ತದೆಂದು ಹೇಳುವಂತಿಲ್ಲ. ಉದಾಹರಣೆಗೆ ವಿಶ್ವಸುಂದರಿಗೆ ಅದು ಕೇವಲ ಸೌಂದರ್ಯದಿಂದ ಒದಗಬಹುದು. ಕೆಲವರಿಗೆ ಮಕ್ಕಳು ಅಮೇರಿಕದಲ್ಲಿರುವುದರಿಂದ ಒದಗಬಹುದು. ಇನ್ನೂ ಕೆಲವರು ಹೊಸ ದೇವರನ್ನೇ ಸೃಷ್ಟಿಸಿ ('ಭೂಗತ' ಸಂಕಲನದಲ್ಲಿ ಒಬ್ಬ ಕೂರ್ಮನಾರಾಯಣ ದೇವರನ್ನು ಸೃಷ್ಟಿಸಿದರೆ ಈ ಸಂಕಲನದಲ್ಲೊಬ್ಬ ಪ್ರೊಫೆಸರ್ ಕರಡಿ ಗಣಪತಿಯನ್ನು ಸೃಷ್ಟಿಸುತ್ತಾನೆ.) ಜನರನ್ನು ತಮಗೆ ಬೇಕಾದಂತೆ ಕುಣಿಸುತ್ತಾರೆ. ಈ ಒಳವ್ಯವಸ್ಥೆ ಎಷ್ಟು ಸಂಗತವಾಗಿದೆಯೆಂದರೆ ಅದನ್ನು ಸರಿಯಾಗಿ ಗುರುತಿಸಿ ಸ್ಪಷ್ಟವಾಗಿ ತೋರಿಸಿಕೊಟ್ಟರೆ ಜನರಿಗೆ ನಗು ಬರುತ್ತದೆ. ತಾವೆಲ್ಲರೂ ಈ ವ್ಯವಸ್ಥೆಯ ಭಾಗವಾಗಿದ್ದು, ಅದನ್ನು ಪೋಷಿಸುವವರಾಗಿದ್ದೂ ಜನ ವಿಸ್ಮಿತರಾಗುತ್ತಾರೆ. ಈ ವಿದ್ಯಮಾನಕ್ಕೆ ಒಂದು ರೂಪಕವಾಗಿ, ಈ ಸಂಕಲನದ ಮಹತ್ವದ ಕತೆಯಾದ 'ನನ್ನ ಸಾವಿಗೆ ನಾನೇ ಹೊಣೆ' ಕತೆಯನ್ನು ಗಮನಿಸಬಹುದು."

**(ಅದೇ, 2009, ಪುಟ 56)**

ಡಾ. ಕೆ. ಮಹಾಲಿಂಗ ಭಟ್ಟರು ತಮ್ಮ ಲೇಖನವೊಂದರಲ್ಲಿ ಕೆ.ಟಿ.ಗಟ್ಟಿಯವರ ಕತೆಗಳ ಬಗ್ಗೆ ಹೀಗೆ ಹೇಳುತ್ತಾರೆ. "ಸಣ್ಣ ಕತೆಯ 'ರೂಪವೇ ಗಟ್ಟಿಯವರ ಕತೆಗಳನ್ನು ಅವರ ಕಾದಂಬರಿಗಳಿಗಿಂತ ಭಿನ್ನ ಒಳಸೊಗಡಲ್ಲಿ ಇರಿಸಿತೆಂಬುದು ವಿಚಿತ್ರವಾದರೂ ಸತ್ಯ. ಅದು ಹೇಗೆಂದರೆ ಸಣ್ಣ ಕತೆಯ ಗಾತ್ರದ ಸಣ್ಣತನವೇ ಕಾರಣವಾಗಿಬಿಟ್ಟು ಯಾವ ವೈಚಾರಿಕ ಚರ್ಚೆಯ 'ತೆರಪು'ಗಳಿಗೂ ಈ ಇಕ್ಕಟ್ಟಿನ ಅಡಕ ಸ್ಥಿತಿಯಲ್ಲಿ ಅವಕಾಶವಿರದು. ಕಾದಂಬರಿಗಳಂತೆಯೇ ಹಲವು ದಶಕಗಳ ಒಡನಾಟದ ಸೃಷ್ಟಿಗಳು – ಇಲ್ಲಿಯ ಸಣ್ಣಕತೆಗಳು. ಪತ್ರಿಕೆಗಳಲ್ಲಿ ಪ್ರಕಟವಾಗಿ ಸಮುದಾಯದ ಜೊತೆಗೆ ತಕ್ಷಣದ ಮಲಕಾನು ಸಂಧಾನ ಸಾಧ್ಯವಾಗುವ ಒಲವು ಈ ಕತೆಗಳಿಗೆ ಸಹಜ. ಆಶಯ, ವಿನ್ಯಾಸಕ್ರಮ, ಪಾತ್ರ ರೂಪಕಗಳ ಸೃಷ್ಟಿ ಮತ್ತು ಬಳಕೆಗಳಲ್ಲಿ ವಿವಿಧ ಕನ್ನಡ ಕಥಾ ಧೋರಣೆಗಳು ಮತ್ತು ವಿಶ್ವಕಥಾ ದಾರಿಗಳಿಂದಲೂ ಪ್ರೇರಣೆ – ಪ್ರಭಾವಗಳನ್ನು ಇಲ್ಲಿ ಸೂಚ್ಯವಾಗಿ ಕಾಣಲು ಬರುತ್ತದಾದರೂ, ಸರಳವಾಗಿದ್ದೇ ತಕ್ಷಣದ ಪರಿಣಾಮ ಬಲಗಳುಳ್ಳ ಈ ದಾರಿ ಗಟ್ಟಿಯವರದ್ದೇ ಆಗಿದೆ. ಸಂಕೀರ್ಣ ಹೆಣಿಕೆಗಳ ಬದಲಿಗೆ ಪುಟ್ಟ ಭಾವಕೋಶವೊಂದನ್ನು ಕತೆಯಾಗಿ ಬೆಳೆಸಿದ್ದರ ಫಲಿತಾಂಶವೇ ಇವುಗಳಲ್ಲಿ ಬಹಳ. ಆರಂಭದ ಕತೆಗಳಲ್ಲಿ ನವ್ಯರಿಗೆ ಸಹಜವಾದ ಸುತ್ತಲಿನ ವ್ಯವಸ್ಥೆಯ ಜೊತೆ ಬಿರುಕು ಉಳ್ಳ ನಾಯಕ ನಾಯಕಿಯರು, ಮಂಡನೆಯಾಗುವ ಪ್ರಬಲ ಭಾವಕ್ಕೆ ಪೂರಕವಾಗಿ ಪ್ರತಿಮೆಗಳ ಬಳಕೆ

ಇತ್ಯಾದಿಗಳೂ ಇವೆ. ಮುಂದಿನ ಕತೆಗಳಲ್ಲಿ ಇವನ್ನು ಬಿಟ್ಟು ರಂಜನೆಯ ಗುಣ, ಮನುಷ್ಯನ ಸ್ವರೂಪದ ಬಗೆಗಿನ ನಿಗೂಢತೆ, ಸಂಬಂಧಗಳು ಅಚ್ಚರಿದಾಯಕವಾಗಿ ಬದಲುವ ಬಗೆ ಇಂತಹ ಸಂಗತಿಗಳ ಕಡೆ ಕತೆಗಾರ ಹೊರಳಿಕೊಳ್ಳುತ್ತಾರೆ." "ಅಧಿಕಾರಾರೂಢ 'ಸಂಸ್ಥೆ'ಗಳ ಮೇಲೆ, ಯಜಮಾನ್ಯ ಸ್ವಭಾವದ ವಿವಿಧ ಸಾಮಾಜಿಕ 'ಸಂಕಥನ'ಗಳ ಬಗೆಗೆ ವ್ಯಂಗ್ಯದ ಓರೆಕಣ್ಣು, ವಿಷಮತೆಗಳ ಜೊತೆಗೂ ಬಾಳುವ ಧೈರ್ಯದ ಚೇತನಗಳ ಚಿತ್ರಣ – ಇತ್ಯಾದಿಗಳೆಲ್ಲಾ ವಿಶಾಲ ತಳಹದಿಯ ಮಾನವತೆಯ ನಂಬುಗೆಯನ್ನಿರಿಸಿಕೊಂಡೇ ಗಟ್ಟಿಯವರ ಕತೆಗಳಲ್ಲಿ ಬಾಳುತ್ತವೆ. ವಿಶಿಷ್ಟ ಫ್ಯಾಂಟಸಿಗಳ ಬಳಕೆಯೂ ಸೇರಿ ವಿವಿಧ ಪ್ರಯೋಗಶೀಲತೆ – ವಸ್ತು ವೈವಿಧ್ಯಗಳನ್ನು – ತನ್ನ ಮೂರು ಕಥಾಸಂಕಲನಗಳ ಕತೆಗಳಲ್ಲಿ ಗಟ್ಟಿ ಹೊಂದುತ್ತಾರೆ. ಕನ್ನಡದ ರೂಢಿಯ ವಿಮರ್ಶೆಯ ಉಪಕರಣಗಳು ಇವರ ಕಾದಂಬರಿಗಳನ್ನು ಸುಲಭವಾಗಿ ಒಡೆದು ಕಡೆಯಬಲ್ಲವು; ಆದರೆ ಹಲವು ವಿಶಿಷ್ಟ ಕತೆಗಳು ಈ ಸಿದ್ಧ ವಿಮರ್ಶಾ ನೋಟಗಳಿಗೂ ಮೆಚ್ಚುಗೆ ತರಬಲ್ಲವು. ಹೀಗಿದ್ದರೂ ಕನ್ನಡದ ಕತೆಗಾರರಲ್ಲೊಬ್ಬರು ಎಂದು ಗಟ್ಟಿಯವರನ್ನು ಈ ನೋಟಗಳು ಬಲವಾಗಿ ಗುರುತಿಸಿದ್ದೇ ಕಡಿಮೆ".

**(ಅದೇ, ಪುಟ 256)**

****************

## ಅಧ್ಯಾಯ–೬: ಕೆ.ಟಿ.ಗಟ್ಟಿಯವರ ನಾಟಕಗಳು

೬.೧: ನಾಟ್ಕ

೬.೨: ಕೆಂಪು ಕಾಗೆ

೬.೩: ಸತ್ಯಕ್ಕೇ ಜಯ

೬.೪: ನಗರ ಪರ್ವ

೬.೫: ಕುರುಡರು

೬.೬: ಬೊಂಬೆಯಾಟ

೬.೭: ಭಿನ್ನಮತ

೬.೮: ಹೂವು ಅಲ್ಲ, ಗೊಬ್ರ

೬.೯: ಏಕೋ ಉಪಾಧ್ಯಾಯ

೬.೧೦: ಟಿಕೇಟು ಸಿಕ್ಕಿತು

೬.೧೧: ಒಂದು ಗೋವಿನ ಕಥೆ

೬.೧೨: ಮಾಯಾಮೃಗ

೬.೧೩: ಆಕಾಶ ಕೆಳಗೆ ಬಿತ್ತು

೬.೧೪: ತ್ರಿಶಂಕು ಮತ್ತು ಇತರರು

೬.೧೫: ಓಂ ತಾರ ತೂರಿ ಸ್ವಾಹಾ

# ಅಧ್ಯಾಯ-೬

# ಕೆ.ಟಿ.ಗಟ್ಟಿಯವರ ನಾಟಕಗಳು

" 'ನಾಟಕ' ಎಂಬ ಪದ ನಟ್ ಎಂಬ ಧಾತುವಿನಿಂದ ಬಂದುದೆಂದೂ ನಟ್ ಎಂಬುದು ನೃತ್ಯ ಎಂಬುದರ ಪ್ರಕೃತ ರೂಪವೆಂದು ಹೇಳುತ್ತಾರೆ." ನಾಟಕವೆನ್ನುವ ಪದ

**(ಹರಿಕೃಷ್ಣ ಭರಣ್ಯ, 1990, ಪುಟ 75)**

ಕನ್ನಡದಲ್ಲಿಯೂ ಸಂಸ್ಕೃತದ ಅರ್ಥವ್ಯಾಪ್ತಿಯನ್ನು ಹೊಂದಿದೆ. ಕನ್ನಡದಲ್ಲಿ ನಾಟಕವೆನ್ನುವ ಪದ ಕ್ರಿ.ಶ.997ರ ಕಾಲದಲ್ಲಿ ಬಂದ ಅಜಿತ ಪುರಾಣದಲ್ಲಿಯೇ ಕಂಡುಬರುತ್ತದೆ. ನಾಟಕವು ದೃಶ್ಯ ಕಾವ್ಯವೂ ಹೌದು, ಶ್ರವ್ಯ ಕಾವ್ಯವೂ ಹೌದು. ನಾಟಕವನ್ನು ರಂಗಭೂಮಿಯಲ್ಲಿ ನೋಡಿ ರಸಾನುಭವ ಹೊಂದಬಹುದು. ಅಲ್ಲದೆ ನಾಟಕ ಕೃತಿಯನ್ನು ಓದಿಯೂ ರಸಾಸ್ವಾದನೆ ಮಾಡಬಹುದು.

"ಗದ್ಯ ಅಥವಾ ಪದ್ಯದಲ್ಲಿ ನಟನೆ ಮತ್ತು ಮಾತುಗಳಿಂದ ರಂಗಸ್ಥಳದ ಮೇಲೆ ಪಾತ್ರಗಳನ್ನು ಪ್ರತಿನಿಧಿಸುತ್ತಾ ಕತೆಯನ್ನು ಹೇಳುತ್ತಾ ಹೋಗುವ ಕಲೆ ಎಂದು ಪಿ.ವಿ. ಶಾಸ್ತ್ರಿಯವರು ನಿರ್ವಚಿಸಿದ್ದಾರೆ. ನಾಟಕದಲ್ಲಿ ಭಾಷೆಯೇ ಮುಖ್ಯವಾಗಿದೆ. ಅದು ಅನುಕರಣ ಕಲೆ. ಭಾಷೆ, ಕತೆ, ಅಭಿನಯ, ನಿರ್ದೇಶನ, ರಂಗಸಜ್ಜಿಕೆ, ಸಂಗೀತ, ಚಿತ್ರಕಲೆ, ನೃತ್ಯ ಈ ಎಲ್ಲಾ ಒಂದು ಹಂತದಲ್ಲಿ, ಮಟ್ಟದಲ್ಲಿ ನಾಟಕ ಸಮಾವೇಶಗೊಳ್ಳುತ್ತದೆ" ಎಂದು ನಾಟಕದ ಘಟಕಗಳನ್ನು ವಿವರಿಸಿದ್ದಾರೆ.

**(ಅದೇ, ಪುಟ 77)**

ನಾಟಕದ ಸಂಭಾಷಣೆಯಿಂದಲೇ ಸನ್ನಿವೇಶ, ಪಾತ್ರ ಪೋಷಣೆ, ರಸಾಭಿವ್ಯಕ್ತಿ ಆಗುತ್ತದೆ. ಇಲ್ಲಿ ಸಂಭಾಷಣೆಯೇ ಮುಖ್ಯ. ಇದು ಮುಖ್ಯವಾಗಿ ಕಣ್ಣಿನ ಮೂಲಕ ತನ್ನ ಪರಿಣಾಮವನ್ನು ಸಾಧಿಸುತ್ತದೆ. ಸು.ಕ್ರಿ.ಶ.1680ರ ಸಮಯದಲ್ಲಿ ರಚಿಸಲಾದ ಸಿಂಗರಾರ್ಯನ "ಮಿತ್ರವಿಂದಾ ಗೋವಿಂದ" ಕನ್ನಡದ ಪ್ರಥಮ ನಾಟಕ. ಇದು ಶ್ರೀಹರ್ಷನು ಸಂಸ್ಕೃತದಲ್ಲಿ ರಚಿಸಿದ ರತ್ನಾವಲಿ ನಾಟಕದ ಅನುವಾದ. ಸಂಸ್ಕೃತದ ನಾಟಕಗಳು 1869ರ ನಂತರ ಕನ್ನಡಕ್ಕೆ ಅನುವಾದಗೊಳ್ಳಲಾರಂಭಿಸಿದವು. ಆಧುನಿಕ ಕನ್ನಡದ ಆರಂಭದ ವರ್ಷಗಳಲ್ಲಿ ಅನುವಾದಗಳು, ಭಾಷಾಂತರಗಳು ರೂಪಾಂತರಗಳು ಹೆಚ್ಚು ಸಂಖ್ಯೆಯಲ್ಲಿ ರಚನೆಗೊಂಡವು. ಬಸಪ್ಪ ಶಾಸ್ತ್ರಿಗಳು ಆರು ಸಂಸ್ಕೃತ ನಾಟಕಗಳನ್ನು ಅನುವಾದಿಸಿದರು. ಅಳಸಿಂಗಚಾರ್ಯರು ಭಾಸನ ಎರಡು ನಾಟಕಗಳನ್ನು ಅನುವಾದಿಸಿದರು. 1887ರಲ್ಲಿ ಸೂರಿ ವೆಂಕಟರಮಣ ಶಾಸ್ತ್ರೀಯವರಿಂದ ರಚನೆಗೊಂಡ "ಇಗ್ಗಪ್ಪ ಹೆಗ್ಗಡೆಯ ವಿವಾಹ

ಪ್ರಹಸನ" ಕನ್ನಡದ ಮೊದಲ ಸ್ವತಂತ್ರ ಸಾಮಾಜಿಕ ನಾಟಕ. ಎಂ.ಎಲ್. ಶ್ರೀಕಂಠೇಶಗೌಡ, ಗುಂಡೋಕೃಷ್ಣ ಚುರಮುರಿ, ಡಿ.ವಿ.ಜಿ., ಎಸ್.ಜಿ.ಶಾಸ್ತ್ರಿ ನಾಟಕಗಳನ್ನು ಕನ್ನಡಕ್ಕೆ ಅನುವಾದಿಸಿದರು. ಆರಂಭದ ವರ್ಷಗಳಲ್ಲಿ ನಾಟಕದಲ್ಲಿ ನಟನೇ ಪ್ರಧಾನ.

"19ನೇ ಶತಮಾನದ ಕೊನೆಗೆ ಮುಂಬಯಿಯಿಂದ 'ಬಾಲಿವಾಲಾ' ಎಂಬ ಪಾರ್ಸಿ ನಾಟಕ ತಂಡ ಬೆಂಗಳೂರಿಗೆ ಬಂದು ಕೆಲ ನಾಟಕಗಳನ್ನು ಪ್ರದರ್ಶಿಸಿ ಜನತೆಯನ್ನು ಬಹುವಾಗಿ ಆಕರ್ಷಿಸಿತು. ಇದರಿಂದ ಪ್ರಭಾವಿತರಾದ ನಮ್ಮ ಜನ ನಾಟಕ ಸಂಘಗಳನ್ನು ಸ್ಥಾಪಿಸಲು ಮುಂದಾದರು. ಕಲಾಭಿಮಾನಿಗಳಾದ ಜಯಚಾಮರಾಜ ಒಡೆಯರ ಸಹಾಯದಿಂದ "ಶ್ರೀ ಜಯ ಚಾಮರಾಜೇಂದ್ರ ನಾಟಕ ಸಭೆ" ಯನ್ನು 1879ರಲ್ಲಿ ಸ್ಥಾಪಿಸಿದರು. ಆಗ ಕಾಳಿದಾಸ, ಷೇಕ್ಸ್‌ಪಿಯರ್‌ರ ನಾಟಕಗಳನ್ನು ರಂಗ ಪ್ರೇಮಿಗಳು ಪ್ರದರ್ಶನದ ಉದ್ದೇಶದಿಂದಲೇ ಕನ್ನಡಕ್ಕೆ ತಂದರು. ಈ ರೀತಿ ನಾಟಕ ನಮ್ಮಲ್ಲಿ ಒಂದು ಸಾಹಿತ್ಯ ಪ್ರಕಾರವಾಗಿ ಬೆಳೆದು ಬರದೆ ರಂಗ ಪ್ರಕಾರವಾಗಿ ಬೆಳೆದು ಬಂದಿದೆ. ಇದಕ್ಕೆ ಜೀವ ತುಂಬಿಸಿದುದು ವೃತ್ತಿ ರಂಗಭೂಮಿಯ ಕಂಪನಿ ನಾಟಕಗಳೇ"

**(ಬಿರಾಧಾರ ಎಂ.ಜಿ. (ಸಂ) 1988)**

ಬಿ.ಎಂ.ಶ್ರೀಕಂಠಯ್ಯ, ಕೈಲಾಸಂ, ಶ್ರೀರಂಗ, ಪರ್ವತವಾಣಿ (ಪಿ.ನರಸಿಂಗ ರಾವ್), ಗಿರೀಶ್ ಕಾರ್ನಾಡ್, ಜೆ.ಬಿ. ಜೋಶಿ, ಪಿ. ಲಂಕೇಶ್, ಪು.ತಿ.ನ., ಪೂರ್ಣಚಂದ್ರ ತೇಜಸ್ವಿ, ಕೆ.ವಿ.ಸುಬ್ಬಣ್ಣ, ಕೀರ್ತಿನಾಥ ಕುರ್ತಕೋಟಿ ಮುಂತಾದವರು ಕನ್ನಡದಲ್ಲಿ ಉತ್ತಮ ನಾಟಕಗಳನ್ನು ರಚಿಸಿದರು. ಇವರ ನಾಟಕಗಳಲ್ಲಿ ಹಲವು ರಂಗದ ಮೇಲೆಯೂ ಯಶಸ್ವೀ ಪ್ರಯೋಗಗಳನ್ನು ಕಂಡಿವೆ.

ಕೆ.ಟಿ.ಗಟ್ಟಿಯವರು ಕಾದಂಬರಿಕಾರರಾಗಿ ಹೆಸರು ಮಾಡಿದಷ್ಟು ನಾಟಕಕಾರರಾಗಿ ಹೆಸರು ಗಳಿಸಲಿಲ್ಲವಾದರೂ ಅವರು ಇಪ್ಪತ್ತೈದರಷ್ಟು ನಾಟಕಗಳನ್ನು ರಚಿಸಿದ್ದಾರೆ, ಪ್ರಕಟಿಸಿದ್ದಾರೆ. ಇವುಗಳಲ್ಲಿ ವಿಡಂಬನೆಯಿದೆ, ಫ್ಯಾಂಟಸಿಯಿದೆ. ಅನುವಾದ ನಾಟಕಗಳು, ಮಕ್ಕಳ ನಾಟಕಗಳು ಸೇರಿವೆ. ಗಟ್ಟಿಯವರು ರಂಗನಾಟಕಗಳನ್ನು ಹಾಗು ರೇಡಿಯೋ ನಾಟಕಗಳನ್ನು ಬರೆದಿದ್ದಾರೆ. ಇವರು ಬರೆದ ನಾಟಕಗಳೆಂದರೆ – ಮಾಯಾಮೃಗ, ಸತ್ಯಕ್ಕೆ ಜಯ, ಕುರುಡರು, ಒಂದು ಗೋವಿನ ಕಥೆ, ಭಿನ್ನಮತ, ಹೂವು ಅಲ್ಲ ಗೊಬ್ರ, ಅದಲು ಬದಲು, ಏಕೋ ಉಪಾಧ್ಯಾಯ, ಪ್ರೇಮಾರಂಭ, ಟಿಕೇಟು ಸಿಕ್ಕಿತು, ಕವಿ ಸಮಯ, ಈ ದೇಶಕ್ಕೆ ಭವಿಷ್ಯ ಇದೆ!, ಕಾಕಾಯಣ, ಕತೆ ಇನ್ನೂ ಇದೆ, ಅನುಭವದಡುಗೆಯ ಮಾಡಿ, ಓಂ ತಾರಾ ತೂರಿ ಸ್ವಾಹಾ, ಆಕಾಶ ಕೆಳಗೆ ಬಿತ್ತು, ತ್ರಿಶಂಕು ಮತ್ತು ಇತರರು, ಸುಪರ್‌ಮ್ಯಾನ್, ಜುಜುಬಿ ದೇವ್ರ ಜುಗಾರಿ ಆಟ, ಪರಕಾಯ ಪ್ರವೇಶ, ನಗರ ಪರ್ವ,

ಬೊಂಬೆಯಾಟ, ನಾಟ್ಕ ಮತ್ತು ಕೆಂಪುಕಾಗೆ. ಈ ನಾಟಕಗಳಲ್ಲಿ ಕೆಲವು ಒಂದುಗಂಟೆ ಒಂದೂವರೆಗಂಟೆ, ಅರ್ಧಗಂಟೆಯ ನಾಟಕಗಳು ಸೇರಿವೆ. ಇವುಗಳಲ್ಲಿ ಕುರುಡರು, ಸತ್ಯಕ್ಕೆ ಜಯ, ಒಂದು ಗೋವಿನ ಕತೆ, ಮಾಯಾಮೃಗ, ಪ್ರೇಮಾರಂಭ, ಕಾಕಾಯಣ, ಕವಿಸಮಯ ಮುಂತಾದವುಗಳು ಬಾನುಲಿ ನಾಟಕಗಳಾಗಿಯೇ ರೂಪು ತಳೆದವುಗಳು. ಇವರ 'ಬೊಂಬೆಯಾಟ' ನಾಟಕವು 1992ರಲ್ಲಿ ಮೈಸೂರಿನ 'ಸಮತೆಂತೋ' ಸಂಸ್ಥೆಯು ಏರ್ಪಡಿಸಿದ ರಾಷ್ಟ್ರ ಮಟ್ಟದ ನಾಟಕ ರಚನಾ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಗಳಿಸಿರುತ್ತದೆ.

ಇವರ ನಾಟಕಗಳು ರಾಜಕೀಯ ವ್ಯವಸ್ಥೆಯ ನಾಡಾವಳಿಗಳನ್ನು, ಸಂಪ್ರದಾಯ, ಮೂಲಭೂತವಾದಿ ಗುಣಗಳನ್ನೂ, ಭಾರತದ ನಗರ ಜೀವನದ ಕ್ರೌರ್ಯವನ್ನು, ಪ್ರಗತಿಯ ಹೆಸರಿನಲ್ಲಿ ಪ್ರಕೃತಿ ಸಂಪತ್ತನ್ನು ಹಾಳುಮಾಡುವ ಮಾನವನ ಸ್ವಾರ್ಥ ಚಿಂತನೆಯನ್ನು ವಿರೋಧಿಸುತ್ತವೆ. ನಾಟಕಗಳಲ್ಲಿ ಪ್ರಚಲಿತ ವಿಷಯಗಳು ಚರ್ಚೆಗೆ ಒಳಗಾಗಿವೆ. ಇವರು ಪ್ರಸಾರ ನಾಟಕಕ್ಕೆ ಒಂದು ಗಂಟೆ ಮತ್ತು ಅರ್ಧಗಂಟೆ ಸಮಯದ ಮಿತಿ ಹಾಕಿಕೊಂಡಿದ್ದಾರೆ.

## ೬.೧: ನಾಟ್ಕ

1987 ರಲ್ಲಿ ಪ್ರಕಟಗೊಂಡ ಕೆ.ಟಿ.ಗಟ್ಟಿಯವರ ನಾಟಕ 'ನಾಟ್ಕ' ಒಂದು ಸಾಮಾಜಿಕ–ರಾಜಕೀಯ ನಾಟಕ. ನಾಟಕ ಸಂಪ್ರದಾಯದಂತೆ ಮೊದಲು ಸೂತ್ರಧಾರನೊಬ್ಬ ಪ್ರವೇಶಿಸುತ್ತಾನೆ. ಪಾತ್ರಗಳನ್ನು ಪರಿಚಯಿಸುತ್ತಾನೆ. ಪಾರ್ಕ್ ಒಂದರಲ್ಲಿ ಗೌತಮ ಮತ್ತು ಪತ್ನಿ ಸೀತಾ ಮಾತನಾಡುತ್ತಿರುತ್ತಾರೆ. ಯಾರೋ ದಾಂಡಿಗರು ಬಂದು ಸೀತಾಳನ್ನು ಅಪಹರಿಸಿಕೊಂಡು ಹೋಗುತ್ತಾರೆ. ಪೋಲೀಸರಲ್ಲಿಗೆ ದೂರು ನೀಡಲು ಹೋದ ಸಂದರ್ಭದಲ್ಲಿ ಅವರ ದರ್ಪದ ಮಾತುಗಳನ್ನು ಕೇಳಬೇಕಾಗಿ ಬರುತ್ತದೆ. ಗೂಂಡಾಗಳಿಂದ ಅತ್ಯಾಚಾರಕ್ಕೊಳಗಾದ ಸೀತಾಳನ್ನು ಪೋಲೀಸರು ಎಳೆದುಕೊಂಡು ಬಂದು ಕೂಡಿ ಹಾಕಿದ್ದರು. ಗೌತಮ ನಿಜ ವಿಚಾರ ತಿಳಿಸಿದಾಗಲೂ ಪೋಲೀಸರು ಒಪ್ಪುವುದಿಲ್ಲ. ಆಕೆಯ ಮೇಲೆ ಕೇಸು ಹಾಕಿ ಕಳುಹಿಸುತ್ತಾರೆ. ಗೌತಮ ಹೇಳುವಂತೆ ಪೋಲೀಸರಿಗೆ ಪರಿಚಯವಿರುವುದು. "ಮಂತ್ರಿಗಳದಲ್ಲ, ಎಂಪೀ ಎಮ್ಮೆಲ್ಲೇಗಳದ್ದು, ಪುಡಾರಿಗಳದ್ದು, ಕಳ್ಳರು, ಕುಡುಕ್ರು ಮತ್ತು ಜುಗಾರಿಕೋರರದ್ದು ..." ಗೌತಮನಲ್ಲಿ

**(ಗಟ್ಟಿ ಕೆ.ಟಿ, ನಾಟ್ಕ, 1987, ಪುಟ 15)**

ವ್ಯವಸ್ಥೆಯ ವಿರುದ್ಧ ಪ್ರತಿರೋಧ ಭುಗಿಲೇಳುತ್ತದೆ.

"ನಾನು ಬೊಬ್ಬಿಡಬೇಕು, ಚೀರಬೇಕು! ನಾನು ನನ್ನ ನೋವನ್ನು ಯಾತನೆಯನ್ನು ಶಬ್ದವಾಗಿಸಬೇಕು! ಎಲ್ಲರಿಗೂ ಹೇಳಬೇಕು! ನಾನು ನನ್ನ ಮೇಲೆ ಆದ ಬಲಾತ್ಕಾರದ ಕತೆಯನ್ನು, ಶೋಷಣೆಯ ಕತೆಯನ್ನು ಲೋಕಕ್ಕೆ ಹೇಳಬೇಕು!" ಎಂದು ಯೋಚಿಸುತ್ತಾನೆ.

**(ಅದೇ, ಪುಟ 17)**

ಚುನಾವಣೆ ಬಂದಾಗ ಮಂತ್ರಿ ಊರಿನ ಶ್ರೀಮಂತರ ಬಳಿ ಪಾರ್ಟಿ ಫಂಡ್ ಹೆಸರಿನಲ್ಲಿ ಹಣದ ಸುಲಿಗೆ ನಡೆಸುತ್ತಾನೆ. ಹಣ ಕೊಡದಿದ್ದವರ ಮೇಲೆ ಪೋಲೀಸ್ ರೈಡ್ ಮಾಡುವ ಬಗ್ಗೆ ಯೋಚಿಸುತ್ತಾನೆ. ಊರಿಗೆ ವಿದ್ಯೆ ಕಲಿಸಿ ಒಳ್ಳೆಯದು ಮಾಡುವವರನ್ನು ಊರಿನಿಂದಲೇ ಓಡಿಸುವಂತೆ ಹೇಳುತ್ತಾನೆ. ಹಳ್ಳಿಯ ಯುವಕರು ಪಟ್ಟಣದಲ್ಲಿ ಉದ್ಯೋಗ ಬಯಸುತ್ತಾರೆ. ಹಿರಿಯರು ಸರ್ಕಾರಿ ಸಾಲಕ್ಕಾಗಿ ಹಾತೊರೆಯುತ್ತಾರೆ. ಸೀತಾ ಮತ್ತು ಗೌತಮರು ಹಳ್ಳಿಯ ಜನರಿಗೆ ಅಕ್ಷರ ಕಲಿಸುತ್ತಾರೆ. ಆದರೆ ಗೌತಮ ಸೀತಾರ ಮೇಲೆ ನಡೆದ ಗೂಂಡಾಗಳ ದಾಳಿಯಿಂದಾಗಿ ಗೌತಮ ಸಾಯುತ್ತಾನೆ. "ಈ ದುಷ್ಟ ವ್ಯವಸ್ಥೆ ಯಾಕೆ ಮುಂದುವರಿದಿದೆ? ಹೇಳಿ, ಈ ಗೂಂಡಾಗಳು ಎಲ್ಲಿಂದ ಬರ್ತಾರೆ? ಒಳ್ಳೇದನ್ನು ನಾಶ ಮಾಡುವ ರಾಕ್ಷಸೀ ಪ್ರವೃತ್ತಿ ಎಲ್ಲಿಂದ ಬರ್ತದೆ" ಎಂಬ ಸೀತಾಳ ಪ್ರಶ್ನೆಯೊಂದಿಗೆ ನಾಟಕ ಕೊನೆಗೊಳ್ಳುತ್ತದೆ.

ಇಲ್ಲಿ ನಾಟಕದೊಳಗಿನ ನಾಟಕದ ತಂತ್ರಗಾರಿಕೆಯಿದೆ. ಈ ನಾಟಕದ ಮೂಲಕ ಗಟ್ಟಿಯವರು ಮುಗ್ಧರನ್ನೂ, ಅಮಾಯಕರನ್ನೂ, ನಿರುದ್ಯೋಗಿಗಳನ್ನು ಬಳಸಿಕೊಂಡು ರಾಜಕಾರಣಿಗಳು ಮೆರೆಯುವ ದುಷ್ಟ ರಾಜಕೀಯ ವ್ಯವಸ್ಥೆಯನ್ನು, ಪೋಲೀಸರ ದೌರ್ಜನ್ಯವನ್ನು ವಿರೋಧಿಸುತ್ತಾರೆ.

ನಾಟಕಕ್ಕೆ ಬೆನ್ನುಡಿಯನ್ನು ಬರೆದ ಜಯರಾಮ ಕಾರಂತರು "ನಮಗೋ ನಮ್ಮವರೆನಿಸಿಕೊಂಡವರಿಗೊ ನಿತ್ಯ ನಿತ್ಯ ನಡೆಸುವ ಅನ್ಯಾಯ–ಅದನ್ನು ಪ್ರಶ್ನಿಸಲಾಗದಂಥ ಉಸಿರುಗಟ್ಟಿಸುವ ವಾತಾವರಣ ನಿರ್ಮಿತವಾಗಿ ಹೋಗಿದೆ. ಅದು ಒಬ್ಬ ಶಿಕ್ಷಿತ, ಅಶಿಕ್ಷಿತ ಮಹಿಳೆಯ ಮೇಲಿನ ಅತ್ಯಾಚಾರವಿರಬಹುದು; ಶಿಕ್ಷಿತ ಯುವಕನ ಆತ್ಮವಿಶ್ವಾಸವನ್ನು ಕಮರಿಸುವ ಇನ್ನಾವುದೋ ಉಡಾಫೆಯಾಗಿರಬಹುದು; ಮುಗ್ಧ ಪ್ರಜೆಗಳನ್ನು ಪ್ರಾಣಿಗಳೋಪಾದಿಯಲ್ಲಿ ಕಾಣುವ ಪಶುಮಾನಸ ರಾಜಕೀಯ ಮದಾರಿಗಳ ಡೊಂಬರಾಟವಾಗಿರಬಹುದು. ಸೃಜನಾತ್ಮಕ ವ್ಯವಹಾರಗಳನ್ನು ಘಾತಿಸುವ ವ್ಯವಸ್ಥೆಯ ಹೊಡೆತವಾಗಿರಬಹುದು. ಇಲ್ಲಿ ನಾವು ಮಾಡಬೇಕಾದ್ದು ಏನು; ಈ ಎಲ್ಲ ಗೊಂದಲ ಗಲಾಟೆಗಳ ಮೂಲ ಯಾವುದು; ಇದನ್ನು ಮೆಟ್ಟಬೇಕಾದವರು ಯಾರು? ಇಂಥ ಪ್ರಶ್ನೆಗಳನ್ನು ಎಸೆಯುತ್ತ ನಮಗೆ ಹೆಚ್ಚಿನದನ್ನು ಕಲಿಸಿಕೊಡುತ್ತದೆ. ಈ ನಾಟ್ಕ" ಎನ್ನುತ್ತಾರೆ.

**(ಅದೇ, ಬೆನ್ನುಡಿ.)**

## ೬.೨: ಕೆಂಪು ಕಾಗೆ

ಕೆ.ಟಿ.ಗಟ್ಟಿಯವರ 'ಕೆಂಪುಕಾಗೆ' 1988ರಲ್ಲಿ ಪ್ರಕಟಗೊಂಡ ನಾಟಕ ಕೃತಿ. ಸಾಹಿತ್ಯದ ಕೆಲಸವನ್ನು ವಿವೇಚನೆಯಿಲ್ಲದೆ ಸ್ವಾರ್ಥ ಸಾಧನೆಗಾಗಿ ಪ್ರಶ್ನಿಸುವ ರಾಜಕಾರಣ ವ್ಯವಸ್ಥೆಯನ್ನು ನಾಟಕ ವಿಡಂಬಿಸುತ್ತದೆ.

ಪೋಲೀಸರಿಬ್ಬರು ಪುಸ್ತಕದ ಅಂಗಡಿಗೆ ಬಂದು 'ಕೆಂಪು ಕಾಗೆ' ನಾಟಕವಿದೆಯೇ ಎಂದು ವಿಚಾರಿಸುತ್ತಾರೆ. ಪುಸ್ತಕದ ಅಂಗಡಿ ಟೋಪಿಯ ಅಂಗಡಿಯೂ ಆಗಿತ್ತು. ಕೆಂಪು ಕಾಗೆಯನ್ನು ಪೋಲೀಸರು ಸೀಜ್ ಮಾಡುವ ಬಗ್ಗೆ ತಿಳಿಸುತ್ತಾರೆ. ಲಾಯರೊಬ್ಬ ಬಂದು ಪುಸ್ತಕದ ಪ್ರತಿ ಕೇಳಿ ಕೊಂಡುಕೊಳ್ಳುವಾಗ ಪೋಲೀಸರು ತಡೆಯುತ್ತಾರೆ. ಅದೇ ಸಂದರ್ಭದಲ್ಲಿ ಅಲ್ಲಿಗೆ ಬಂದ ಗಿರಾಕಿಯೊಬ್ಬನು 'ಕೆಂಪು ಕಾಗೆ' ನಾಟಕ ಬರೆದ ಕುಮಾರಸ್ವಾಮಿಯವರಿಗೆ ಜ್ಞಾನಪೀಠ ಪ್ರಶಸ್ತಿ ಬಂದ ಸುದ್ದಿ ತಿಳಿಸುತ್ತಾನೆ. ಅಲ್ಲಿಗೆ ಬಂದ ಪುಡಾರಿಯೊಬ್ಬ ಕುಮಾರಸ್ವಾಮಿಯವರನ್ನು ಬೆಂಗಳೂರಿನ ಮುಖ್ಯ ಮಂತ್ರಿಯವರ ಬಳಿಗೆ ಕೂಡಲೇ ಕರೆದುಕೊಂಡು ಬರಬೇಕು ಎಂಬ ಆದೇಶದ ಬಗ್ಗೆ ತಿಳಿಸುತ್ತಾನೆ. ದಲಿತ ಸಂಘದ ಯುವಕರು ಅವರನ್ನು ಸನ್ಮಾನಿಸಲು ಬಯಸಿ ಬರುತ್ತಾರೆ. ದಲಿತ ಯುವಕನೊಬ್ಬ ಪುಡಾರಿಯೊಂದಿಗೆ "ಅವರ 'ಕೆಂಪು ಕಾಗೆ' ಯಾರ ಕತೆ ಅಂತ ಗೊತ್ತೇನು? ನಮ್ ಕತೆ, ನಮ್ ಹುಟ್ಟಿನ್ ಕತೆ, ನಮ್ ಸಾವಿನ ಕತೆ. ಮತ್ತ ನಮ್ ಮರು ಹುಟ್ಟಿನ್ ಕತೆ.  ನಮ್ ಈ ಚೆಂದದ್ ಭೂಮೀನ್ನ ಪೋಲೀಸ್ ದೇಶ ಮಾಡಿರೋ ಈ ಕಚಡಾ ಸರಕಾರ ಅದರ್ಮ್ಯಾಗೆ ಬ್ಯಾನ್ ಹಾಕಿದ್ಯಂತೆ! ಆದ್ರ ನಾವದನ್ನು ಆಡೇ ಆಡ್ತೀವಿ.  ನಿಮ್ ನಗರದ್ ಮಹಲಿನ್ಯಾಗ, ಮಂದಿರದ್ಯಾಗ ಬ್ಯಾಡ ಗಲ್ಲಿ ಗಲ್ಲಿಗಳಲ್ಲಿ ಆಡ್ತೀವಿ. ಯಾರ್ ತಡೀತಾರ ಅಂತ ನೋಡನ". ಎನ್ನುತ್ತಾನೆ. ಆದರೆ 'ಕೆಂಪು ಕಾಗೆ'ಯ

**(ಕೆಂಪು ಕಾಗೆ, 1988,  ಪುಟ 31)**

ಲೇಖಕ ಸಾವನ್ನಪ್ಪಿರುತ್ತಾನೆ.  ಪೂಜಾರಿ ಕನಿಕರದ ಮಾತುಗಳನ್ನಾಡುತ್ತಾನೆ.  ಅಂಗಡಿಯ ಹುಡುಗ ಈಗೇನ್ಮಾಡ್ತೀರಿ? ಮೊದಲು ಸನ್ಮಾನ ಮುಗಿಸಿ ಆ ಮೇಲೆ ಅರೆಸ್ಟ್ ಮಾಡ್ತೀರಾ? ಅಥ್ವಾ ಮೊದಲು ಅರೆಸ್ಟ್ ಮಾಡಿ ಆ ಮೇಲೆ ಸನ್ಮಾನ ಮಾಡ್ತೀರಾ ಎಂದು ಎಲ್ಲರೂ ತಬ್ಬಿ ಬ್ಬಾಗುವಂತೆ ನುಡಿಯುತ್ತಾನೆ.

'ಕೆಂಪು ಕಾಗೆ' ನಾಟಕ ಪುಸ್ತಕದ ಲೇಖಕ ಕುಮಾರ ಸ್ವಾಮಿಯವರ ಮಾತುಗಳಲ್ಲೇ ವ್ಯವಸ್ಥೆಯ ಬಗ್ಗೆ ಪ್ರತಿರೋಧವಿದೆ. ಅವರು ತಮ್ಮ ಕೃತಿಯಲ್ಲಿ "ಮಕ್ಕಳಾ ಹೀಂಗ ಮಾತಾಡ್ರಿ, ನಿಮ್ ಹೊಟ್ಟೀ ಭಾಷೆ ಆಡ್ರಿ. ಈ ಕಚ್‌ಡಾ ಜನಗ್ಳ ಖೊಟ್ಟಿ ಪರ್ದೇಸಿ

ಭಾಷಾ ಆಡ್‌ಬ್ಯಾಡ್ರಿ. ನಿಮ್ ದನಿ ನಾಲಿಗೀ ಮೇಲಿಂದ ಅಲ್ಲ, ಎದೀಂದ ಬರ್ಲಿ. ನಿಮ್ ತಲೀಮ್ಯಾಲ ಕುಂತ್ಕೊಂಡು ಮಜಾ ಮಾಡೋ ಜನಗಳನ್ನು ಕಾಲ್ಕೆಳ್ಗೆ ಹಾಕಿ ತುಳೀರಿ. ಆ ಮ್ಯಾಲ ಅವ್ರಿಗೆ ನಿಮ್ ಭಾಷಾ ಹೇಳ್ಕೊಡ್ರಿ" ಎಂದು ಹೇಳುತ್ತಾರೆ. ಅವರು ಸಾಯುವ

**(ಅದೇ, ಪುಟ 31)**

ಸಂದರ್ಭದಲ್ಲಿ "ಒಂದು ರಾಜಕೀಯದ ನಾಯಿ ಕೂಡಾ ಸತ್ರೆ ರಜಾ ಸಾರೋ ಈ ದೇಶ್ದಲ್ಲಿ ನಾನು ಸತ್ರೆ ಅಂಗ್ಡಿ ಕೂಡಾ ಮುಚ್ಚೂಡ್ದು" ಎಂದು ಹೇಳುತ್ತಾರೆ.

ಕೆ.ಟಿ.ಗಟ್ಟಿಯವರ 'ಕೆಂಪು ಕಾಗೆ' ಯಲ್ಲಿ ಅಸಂಗತ ಮಾದರಿಯ ಸಂಭಾಷಣೆಗಳು ಕಾಣುತ್ತವೆ. ಸಂಪ್ರದಾಯ, ಮೂಲಭೂತವಾದಿ ವಿಚಾರಗಳನ್ನು ಪ್ರಶ್ನಿಸುವ ನೆಲೆಯಲ್ಲಿ ರಚನೆಗೊಂಡ 'ಕೆಂಪುಕಾಗೆ' ಕೃತಿಯನ್ನು ಮುಟ್ಟುಗೋಲು ಹಾಕುವ ವ್ಯವಸ್ಥೆಯನ್ನು ನಾಟಕ ಪ್ರಶ್ನಿಸುತ್ತದೆ. 'ಕೆಂಪುಕಾಗೆ' ಕೃತಿಯನ್ನು ಪೋಲೀಸರು ವಶಪಡಿಸಿಕೊಳ್ಳುವ ಚಿತ್ರಣ ಒಂದು ಕಡೆ ತೋರಿಬಂದರೆ ಅದೇ ಕೃತಿ ಅಧಿಕ ಸಂಖ್ಯೆಯಲ್ಲಿ ಮಾರಾಟವಾಗುತ್ತಿರುವ ಚಿತ್ರಣವು ಇನ್ನೊಂದೆಡೆಯಲ್ಲಿ ಕಾಣಿಸಿಕೊಳ್ಳುತ್ತದೆ. ಕೃತಿಕಾರರನ್ನು ಬಂಧಿಸಲು ಕಾಯುತ್ತಿರುವ ಪೋಲೀಸರೊಂದಿಗೆ ಕೃತಿಕಾರನನ್ನು ಸನ್ಮಾನಿಸಲು ಕಾಯುತ್ತಿರುವ ರಾಜಕೀಯ ಪುಡಾರಿ ಕಾಣಿಸಿಕೊಳ್ಳುತ್ತಾನೆ. ಈ ಎಲ್ಲಾ ಕಾರ್ಯಗಳ ಹಿಂದೆ ರಾಜಕೀಯ ಸ್ವಾರ್ಥ ಇರುವುದು ಕಂಡುಬರುತ್ತದೆ. ರಾಜಕೀಯ ವ್ಯವಸ್ಥೆಯು ತನ್ನ ಹಿತಾಸಕ್ತಿಗಳನ್ನು ಕಾಪಾಡಿಕೊಳ್ಳುವುದಕ್ಕಾಗಿ ಸಾಹಿತ್ಯದಿಂದ ಉಂಟಾಗುವ ಗೊಂದಲಗಳನ್ನು ಮುಚ್ಚಿ ಹಾಕಲು ದಬ್ಬಾಳಿಕೆಯ ನೀತಿಯನ್ನು ಪ್ರದರ್ಶಿಸುತ್ತದೆ. ವ್ಯವಸ್ಥೆಯ ವಿರುದ್ಧ ಸಾಹಿತ್ಯದ ಮೂಲಕ ಧ್ವನಿಯೆತ್ತುವ ಸಾಹಿತಿಗೆ ಉಂಟಾಗುವ ದುಸ್ಥಿತಿಯನ್ನು ನಾಟಕ ಸಂಕೇತಿಸುತ್ತದೆ. ಡಾ.ನಾ.ದಾಮೋದರ ಶೆಟ್ಟಿಯವರು ಕೆಂಪುಕಾಗೆ ನಾಟಕದ ಬಗ್ಗೆ ಹೀಗೆ ಹೇಳಿದ್ದಾರೆ. "ಅಂಗಡಿಯಲ್ಲಿ ಕೆಂಪು ಕಾಗೆಯನ್ನು ಸೀಸ್ ಮಾಡುವುದಕ್ಕೆ ಬಂದ ಪೋಲೀಸರಲ್ಲಿ ಆ ಕುರಿತಾದ ಬಿರುಸು ಇಲ್ಲದಿರುವುದು, ಅಂಗಡಿಯ ಹುಡುಗ ಅಸಂಬದ್ಧ ಎನ್ನಿಸಬಹುದಾದ ಮಾತುಗಳನ್ನು ನಿರಂತರ ಆಡುತ್ತಾ ಮುಖ್ಯ ವಸ್ತುವಿನ ಕಡೆಗೆ ಗಮನವನ್ನು ವಿಮುಖ ಮಾಡುವುದು, ಪುಸ್ತಕದ ಅಂಗಡಿಯಲ್ಲಿ ಟೋಪಿ ಮಾರುವುದರ ಮೂಲಕ ಸಾಂಕೇತಿಕ ಅರ್ಥವನ್ನು ಕಂಡುಕೊಳ್ಳುವುದು ನಾಟಕದ ದುರ್ಬಲ ಕೊಂಡಿಗಳಾದರೆ ಅಂಗಡಿಯಾತನ ಹೆಂಡತಿಯ ತೆರೆಮರೆಯ ಓಡಾಟ, ನಾಟಕದ ಮಧ್ಯದಲ್ಲಿ ಹುಡುಗ ಕೆಂಪು ಕಾಗೆಯ ಕುರಿತಾದ ವಿಮರ್ಶೆ ಓದುತ್ತಿದ್ದಂತೆಯೇ ಆ ನಾಟಕವೇ ಝುಗ್ಗನೆ ವೇದಿಕೆಯಲ್ಲಿ ಅನಾವರಣಗೊಳ್ಳುವುದು, ಅಗರಬತ್ತಿ ಮಡಕೆಗಳನ್ನು ಒಬ್ಬಾತ ತೆಗೆದುಕೊಂಡು ಬರುವುದು – ಮುಂತಾದವು ನಾಟಕವನ್ನು

ಮಾರ್ಮಿಕ ಸ್ತರಕ್ಕೆ ಕೊಂಡೊಯ್ಯುವುದು. ಸಂಭಾಷಣೆಯಲ್ಲಿ ನಾಟಕಕಾರರು ಒಂದು ಬಗೆಯ ಅಸಂಗತ ಎನ್ನಬಹುದಾದ (?) ಶೈಲಿಯೊಂದಿಗೆ ಕಸರತ್ತು ಮಾಡಿದ್ದು ಕೃತಿಯ ಮಟ್ಟವನ್ನು ವಿಶಿಷ್ಟ ನೆಲೆಗೆ ಏರಿಸಿದೆ. ತುಸು ಮೊಟಕು ಮಾಡುವ ಸ್ವಾತಂತ್ರ್ಯ ಹಾಗೂ ಸಮರ್ಥ ನಿರ್ದೇಶಕನೊಬ್ಬನ ನಿರ್ದೇಶನ- ಸಾಧ್ಯವಾದರೆ ಕೆಂಪು ಕಾಗೆ ಎಡಪಂಥೀಯ ಚಿಂತಕರ ನಡುವೆ ಹಾಗೂ ಗಂಭೀರ ಪ್ರೇಕ್ಷಕರ ನಡುವೆ ಢಾಳಾದ ಪರಿಣಾಮ ತಂದೊಡ್ಡಬಲ್ಲ ನಾಟಕವಿದು" ಎನ್ನುತ್ತಾರೆ.

**(ಶ್ರೀಧರ ಎಚ್.ಜಿ.(ಸಂ) 2009, ಪುಟ 85)**

## ೬.೩: ಸತ್ಯಕ್ಕೇ ಜಯ

ಕೆ.ಟಿ.ಗಟ್ಟಿಯವರ 'ಸತ್ಯಕ್ಕೇ ಜಯ' ನಾಟಕ ಸತ್ಯವನ್ನು ಗೆಲ್ಲಿಸಿದಾತನೇ ಸಾವಿಗೆ ಶರಣಾಗುವ ದುರಂತದ ಕತೆಯನ್ನು ಹೇಳುತ್ತದೆ.

ಟಯರು ಕಂಪನಿಯೊಂದರಲ್ಲಿ ಪ್ರಾಮಾಣಿಕವಾಗಿ ದುಡಿದು ನಿವೃತ್ತನಾದ ನೌಕರ ದಯಾನಂದರಾಯನಿಗೆ ಮಾಲೀಕನಿಂದ ಸಿಗಬೇಕಾಗಿದ್ದ ಹಣ ಸಿಗುವುದಿಲ್ಲ. ವಿಚಾರಿಸಿದಾಗ "ಎಲ್ರೂ ಹಣ ಹೊಡ್ಕೊಂಡಿದ್ದಾರೆ. ಎಲ್ರೂ ಕಳ್ರು. ನೀನು ಕೂಡಾ ನಂಗೆ ಗೊತ್ತಿಲ್ದೆ ಟಯರು ಮಾರಿ ಬೇಕಾದಷ್ಟು ಮಾಡಿಬರಬಹುದು". ಎಂಬ ಉತ್ತರ ಮಾಲೀಕ ನಿಂದ ಸಿಗುತ್ತದೆ. ಈ ವಿಚಾರವನ್ನು ತಿಳಿದ ನೌಕರನ ಮಕ್ಕಳು 'ಇಂಥೋರನ್ನ ಪಬ್ಲಿಕ್ ಪ್ಲೇಸ್‌ನಲ್ಲಿ ನಿಲ್ಲಿಸಿ ಶೂಟ್ ಮಾಡ್ಬೇಕು! ತಲೆ ಕಡಿಬೇಕು ಇಂಥವ್ರದ್ದು !' ಎಂದು ಸಿಟ್ಟುಗೊಳ್ಳುತ್ತಾರೆ.

ಒಂದು ದಿನ ಬೆಳಗ್ಗೆ ಬೇಗನೇ ಎದ್ದು ಮಾಲೀಕ ಹೀರಾಲಾಲನ ಮನೆಗೆ ಹೋದ ನೌಕರ ಅವನನ್ನು ಚೂರಿಯಿಂದ ಇರಿದು ಸಾಯಿಸುತ್ತಾನೆ. ತಾನು ಪೋಲಿಸರ ಬಳಿ ಹೋಗಿ ತಪ್ಪು ಒಪ್ಪಿಕೊಳ್ಳುವುದಾಗಿಯೂ ತಿಳಿಸುತ್ತಾನೆ. ವಕೀಲರೊಂದಿಗೂ ಹಾಗೆಯೇ ಹೇಳುತ್ತಾನೆ. ಆದರೆ ಆದಿನ ಬೆಳಗ್ಗೆ ಮಾಲೀಕನ ಮನೆಗೆ ಹೋಗಿದ್ದ ತೋಟದ ಕೆಲಸಗಾರ ಚಿನ್ನಪ್ಪನನ್ನು ಕೊಲೆಗಾರನೆಂಬ ಸಂದೇಹದಿಂದ ಪೋಲೀಸರು ಬಂಧಿಸುತ್ತಾರೆ. ಕೊಲೆ ಮಾಡಿದಾತನನ್ನು ಮನೆಯವರೆಲ್ಲ ಮನೆಯೊಳಗೇ ಕೂಡಿ ಹಾಕುತ್ತಾರೆ.

ಕೋರ್ಟಿನಲ್ಲಿ ತೋಟದ ಕೆಲಸಗಾರ ಚಿನ್ನಪ್ಪನನ್ನು ಆರೋಪಿಯನ್ನಾಗಿ ನಿಲ್ಲಿಸಿ ನ್ಯಾಯ ತೀರ್ಮಾನ ನಡೆಯುತ್ತಿರುತ್ತದೆ. ಅಲ್ಲಿಗೆ ಓಡಿಕೊಂಡು ಬಂದ ಕೊಲೆಗಾರ

ದಯಾನಂದರಾಯ ನ್ಯಾಯಧೀಶರೊಂದಿಗೆ ತಾನೇ ಕೊಲೆಗಾರನೆಂದು ತಿಳಿಸುತ್ತಾನೆ. ತನಗೆ ಕೂಡಲೇ ಶಿಕ್ಷೆ ನೀಡುವಂತೆಯೂ ತಿಳಿಸುತ್ತಾನೆ. ಆದರೆ ನ್ಯಾಯಾಧೀಶರು ಸಾಕ್ಷಿಯಿಲ್ಲದೆ ತೀರ್ಪು ನೀಡಲು ಸಾಧ್ಯವಿಲ್ಲ. ಮನುಷ್ಯನಿಗೆ ತಾಳ್ಮೆ ಮುಖ್ಯ ಎನ್ನುತ್ತಾನೆ. ಆಗ ದಯಾನಂದರಾಯ "ಹೌದು ತಾಳ್ಮೆ ಮುಖ್ಯ ಯಾರಿಗೆ? ಮನುಷ್ಯನಿಗೆ. ಬದುಕುತ್ತಿರುವ ಮನುಷ್ಯನಿಗೆ. ಸತ್ತವನಿಗೆ ತಾಳ್ಮೆ ಬೇಕಾಗಿಲ್ಲ. ಸಾಯುತ್ತಿರುವವನಿಗೆ ತಾಳ್ಮೆ ಬೇಕಾಗಿಲ್ಲ. ಸಾವಿಗೆ ತಾಳ್ಮೆಯಿಲ್ಲ. ಸತ್ಯಕ್ಕೆ ಯಾಕೆ ತಾಳ್ಮೆ? ನಾನು ತಾಳುತ್ತಿದ್ದರೆ ನಾನು ನಂಬಿದ ಸತ್ಯಕ್ಕೆ ಜಯವಾಗುತ್ತಿರಲಿಲ್ಲ. ನೀವು ತಾಳಬಹುದು. ಮಾನ್ಯ ನ್ಯಾಯಧೀಶರೆ, ಬೇಕಾದಷ್ಟು ತಾಳಬಹುದು. ನೀವು ನಂಬಿರುವ ಸತ್ಯಕ್ಕೆ ಜಯವಾಗುವವರೆಗೆ ತಾಳಬಹುದು" ಎನ್ನುತ್ತಾನೆ. ಹೀಗೆ ನಾಟಕ ಕೊನೆಗೊಳ್ಳುತ್ತದೆ.

**(ಗಟ್ಟಿ ಕೆ.ಟಿ, ಸತ್ಯಕ್ಕೆ ಜಯ, ಪುಟ 52)**

ನಾಟಕಕಾರರು ತೀರ್ಪು ಏನಾಗಿರಬಹುದು ಎಂಬುದನ್ನು ಓದುಗರಿಗೇ ಬಿಟ್ಟಿದ್ದಾರೆ. ಕೊಲೆಗಾರನಾದ ದಯಾನಂದರಾಯ ತಾನು ನಂಬಿಕೊಂಡು ಬಂದಿರುವ ಆದರ್ಶಕ್ಕೆ ಬೆಲೆ ಕೊಡುತ್ತಾನೆ. ನಿರಪರಾಧಿಗೆ ಶಿಕ್ಷೆಯಾಗಬಾರದು. ಅಪರಾಧಿ ಶಿಕ್ಷೆಯಿಂದ ತಪ್ಪಿಸಿಕೊಳ್ಳಬಾರದು ಎಂಬ ನಿಲುವು ಆತನದು. ಅದಕ್ಕೆ ಬದ್ಧನಾಗಿ ಆತ ನಡೆದುಕೊಳ್ಳುತ್ತಾನೆ, ತನ್ನ ಆದರ್ಶವನ್ನು ಮೆರೆಯುತ್ತಾನೆ. ಆದರೆ ಮೋಸಗಾರಿಕೆಯ ಬಗ್ಗೆ ಆತನಿಗೆ ವಿರೋಧವಿದೆ. ಆ ಪ್ರತಿರೋಧ ಎಷ್ಟು ತೀಕ್ಷ್ಣವಾಗಿರುತ್ತದೆಂದರೆ ಆತ ತನ್ನ ಒಡೆಯನನ್ನೇ ಕೊಲೆ ಮಾಡಲೂ ಹೇಸುವುದಿಲ್ಲ. ಆತನಿಗೆ ತನ್ನ ಕೃತ್ಯದಿಂದಾಗಿ ಸಮಾಜ ಕಂಟಕವೊಂದು ನಿವಾರಣೆಯಾಯಿತೆಂಬ ಸಮಾಧಾನವಿದೆ. ಹಾಗಾಗಿ ಸತ್ಯವನ್ನು ಗೆಲ್ಲಿಸಿ ತಾನು ಸಾವಿಗೆ ಶರಣಾಗುತ್ತಾನೆ.

## ೬.೪: ನಗರ ಪರ್ವ

ಕೆ.ಟಿ.ಗಟ್ಟಿಯವರ ನಾಟಕ 'ನಗರಪರ್ವ' 1992ರಲ್ಲಿ ಬಿಡುಗಡೆಯಾಯಿತು. 1989ರಲ್ಲಿ ಇವರು ಈ ನಾಟಕವನ್ನೂ ಬರೆದಿರುವರು. ಸಮಾಜ ಜೀವನದ ಸ್ವಾರ್ಥ, ಭ್ರಷ್ಟತೆ, ಮೌಲ್ಯರಹಿತ ಬದುಕನ್ನು ನಾಟಕವು ತಿಳಿಸುತ್ತಾ ಅದರ ವಿರುದ್ಧ ಧ್ವನಿಯೆತ್ತುತ್ತದೆ. ನಗರದ ಬೇರೆ ಬೇರೆ ವಲಯಗಳಲ್ಲಿ ಮನುಷ್ಯ ಎದುರಿಸುವ ಹಲವಾರು ಸಮಸ್ಯೆಗಳನ್ನು ಈ ಕೃತಿ ಶೋಧಿಸುತ್ತದೆ.

ನಗರಪದ ಅಕಾಡೆಮಿಯ ಅಧ್ಯಕ್ಷ ಬರೆದ ನಾಟಕ 'ನಗರಪರ್ವ' ಆಡುವುದಕ್ಕೆ ಇಪ್ಪತ್ತು ಸಾವಿರ ಸ್ಯಾಂಕ್ಷನ್ ಆಗಿದೆ ಎಂಬ ಸುದ್ದಿ ತಿಳಿದು ಆಫೀಸಿನವರಿಗೆಲ್ಲ ಕಾಫಿ ಕುಡಿಸುತ್ತಾನೆ. ತನ್ನ ಮನೆಯವರೇ ನಾಟಕದಲ್ಲಿ ಪಾತ್ರ ವಹಿಸುತ್ತಾರೆಂದೂ ತಿಳಿಸುತ್ತಾನೆ. ಮೊಮ್ಮಗಳು ಪಿಂಕಿಯನ್ನು ಪಾತ್ರ ಮಾಡುವಂತೆ ಒತ್ತಾಯಿಸುತ್ತಾನೆ. ಪಿಂಕಿಯ ತಂದೆ ಅಜಯ ಕುಡಿದುಕೊಂಡು ಮನೆಗೆ ಬರುತ್ತಾನೆ. ಆತ ಮತ್ತು ಆತನ ಹೆಂಡತಿ ವಿಜಯಪ್ರದ ನಾಟಕದ ರಿಹರ್ಸಲ್ ನಡೆಸುವ ಬಗ್ಗೆ ಯೋಚಿಸುತ್ತಾರೆ. ವಿಜಯಪ್ರದ ಕೋಪದಿಂದ ತನ್ನ ತಂದೆಯ ಮನೆಗೆ ಹೋಗುತ್ತಾಳೆ. ರಾಜ್ಯೋತ್ಸವದ ಸಂದರ್ಭದಲ್ಲಿ ಹಣ ತಿಂದು ಹಾಕಿದವರ ಪಟ್ಟಿ ಪತ್ರಿಕೆಯೊಂದರಲ್ಲಿ ಬರುತ್ತದೆ. ಅದರಲ್ಲಿ ಅಧ್ಯಕ್ಷರ ಹೆಸರೂ ಇರುತ್ತದೆ. ಇದನ್ನವರು ಒಪ್ಪಿಕೊಳ್ಳಲು ಸಿದ್ಧರಿರುವುದಿಲ್ಲ. ನಾಟಕದ ದಿನ ಪಿಂಕಿ ಕಾಣೆಯಾಗುತ್ತಾಳೆ.

ನಾಟಕದ ಪುರುಷ ಪಾತ್ರ ವಿಧವೆಯೊಂದಿಗೆ ಸಂಬಂಧ ಹೊಂದಲು ಬಯಸುತ್ತಾನೆ. ಅದಕ್ಕಾಗಿ ಆತ ತನ್ನ ಹೆಂಡತಿಗೆ ಡೈವೋರ್ಸ್ ಕೊಡುತ್ತಾನೆ. ರಿಹರ್ಸಲ್ ಮಧ್ಯದಲ್ಲಿ ಅಜಯನ ಗೆಳತಿ ಅಜಯನನ್ನು ಕರೆದುಕೊಂಡು ಹೋಗಲು ಬರುತ್ತಾಳೆ. ಹೆಂಡತಿಯ ವಿರೋಧದ ನಡುವೆಯೇ ಅಜಯ ತೆರಳುತ್ತಾನೆ. ಅಜಯ ಮಗಳೊಂದಿಗೆ ರಿಹರ್ಸಲ್ ನಡೆಸುತ್ತಾನೆ. ನಾಟಕದ ಪಾತ್ರಗಳ ಸಂಭಾಷಣೆಯಿಂದಾಗಿ ಪಿಂಕಿಯನ್ನು ಅನೇಕ ಪ್ರಶ್ನೆಗಳು ಕಾಡುತ್ತವೆ. ತಂದೆಯಿಂದ ಅವುಗಳಿಗೆ ಸಮರ್ಪಕವಾದ ಉತ್ತರ ಲಭಿಸುವುದಿಲ್ಲ. ಪರೀಕ್ಷೆಯಲ್ಲಿ ನಾಲ್ಕನೇ ರ್‍ಯಾಂಕ್ ಬಂದಾಗ ತಾಯಿ ಚೆನ್ನಾಗಿ ಬೈಯುತ್ತಾಳೆ. ಮಗಳ ವಿಷಯವಾಗಿ ಅಜಯ್ ಹಾಗೂ ವಿಜಯಪ್ರದಳ ಮಧ್ಯೆ ವಾಗ್ವಾದ ನಡೆಯುತ್ತದೆ. ಮಗು ಕಾಣೆಯಾದಾಗ ಮನೆಯವರೆಲ್ಲ ಸೇರಿ ಹುಡುಕುತ್ತಾರೆ. ಪಾರ್ಕಿನ ಹತ್ತಿರವಿರುವ ಬಾವಿಯಲ್ಲಿ ಮಗುವಿನ ಹೆಣ ತೇಲುತ್ತಿರುವ ವಿಚಾರವನ್ನು ಪೋಲೀಸರು ತಿಳಿಸುತ್ತಾರೆ. ಅದು ಪಿಂಕಿಯದೆಂದು ತಿಳಿದ ಮನೆಯವರು ಆಘಾತಕ್ಕೊಳಗಾಗುತ್ತಾರೆ. ನಾಟಕ ಪ್ರದರ್ಶನ ರದ್ದಾದ ಸುದ್ದಿಯನ್ನು ಅಧ್ಯಕ್ಷ ಸಭೆಗೆ ತಿಳಿಸುತ್ತಿದ್ದಂತೆ ಸಭೆಯ ಮುಂದಿನ ಸಾಲಿನಿಂದ ಪಿಂಕಿ ಓಡಿಕೊಂಡು ರಂಗದ ಮೇಲೆ ಬರುತ್ತಾಳೆ.

ನಗರ ಜೀವನದ ನಾಗಾಲೋಟದ ಬದುಕಿನಿಂದಾಗಿ ಹಾಗೂ ಯಾಂತ್ರಿಕ ದಾಂಪತ್ಯದಿಂದಾಗಿ ಎಳೆಯ ಮಕ್ಕಳ ಮನಸ್ಸಿನ ಮೇಲಾಗುವ ಕೆಟ್ಟ ಪರಿಣಾಮವನ್ನು ನಾಟಕ ಧ್ವನಿಸುತ್ತದೆ. ನಾಟಕಕ್ಕೆ ಬೆನ್ನುಡಿಯನ್ನು ಬರೆದ 'ಸಾವುಜಿರೆ' ಯವರು ನಾಟಕದ ಬಗ್ಗೆ ಹೀಗೆ ಹೇಳುತ್ತಾರೆ. "ಸ್ವಾತಂತ್ರ್ಯೋತ್ತರ ನಗರ ಕೇಂದ್ರೀಕೃತ ಪ್ರಜಾಸತ್ತಾತ್ಮಕ ಭಾರತದ ನಗರ ಜೀವನದ ಸುಂದರ ಮುಖವಾಡದ ಹಿಂದೆ ರೂಢವಾಗಿರುವ ಸ್ವಾರ್ಥ, ಭ್ರಷ್ಟತೆ,

ಸಮಯಸಾಧಕತನ ಮತ್ತು ಮೌಲ್ಯವಿಹೀನ ಜೀವನ ಶೈಲಿಯ ವಿವಿಧ ಆಯಾಮಗಳನ್ನು ಪರಿಚಯಿಸುವ ಪ್ರಭಾವಶಾಲಿ ನಾಟಕ –'ನಗರ ಪರ್ವ'. ಇಂದಿನ ಸತ್ತೆಯ ಚೌಕಟ್ಟಿನಲ್ಲಿ ಸಾಹಿತ್ಯ, ಕಲೆ, ಸಂಸ್ಕೃತಿಗಳ ಉದ್ಧಾರಕ್ಕೆಂದು ಹುಟ್ಟಿಕೊಂಡ ಅಕಾಡೆಮಿಗಳಲ್ಲಿ ಪಟ್ಟಭದ್ರ ಹಿತಾಸಕ್ತಿಗಳೇ ಭದ್ರವಾಗಿ ಬೇರು ಬಿಟ್ಟು, ತಮ್ಮ ವೈಯಕ್ತಿಕ ಪ್ರತಿಷ್ಠೆ, ವೈಭವಾಡಂಬರಗಳನ್ನು ಮೆರೆಸುವ ಸ್ವಾರ್ಥದ ಸಾಧನಗಳನ್ನಾಗಿ ಮಾಡಿಕೊಂಡಿವೆ ಎಂಬುದನ್ನು ನಾಟಕಕಾರರು ವ್ಯಂಗ್ಯವಾಗಿ ಚುಚ್ಚಿ ತೋರಿಸುತ್ತಾರೆ. ಅಜಯ–ಜಯಪ್ರದಾ ಜೋಡಿಯ ನಿಜ ಜೀವನ ದಾಂಪತ್ಯ ಮತ್ತು 'ನಾಟಕ'ದೊಳಗಿನ ದಾಂಪತ್ಯ ಚಿತ್ರಣ ಇಂದಿನ ನಾಗರಿಕ ಜೀವನದಲ್ಲಿ ಸ್ತ್ರೀ ಪುರುಷ ಸಂಬಂಧ ಎಷ್ಟೊಂದು ನೀರಸ ಹಾಗೂ ಯಾಂತ್ರಿಕವಾಗಿದೆಯೆಂಬುದನ್ನು ನಿರೂಪಿಸುತ್ತದೆ. ಇಂಥ ದಾಂಪತ್ಯದ ಬಿರುಕಿನಲ್ಲಿ ಸಿಲುಕಿ ನಲುಗುವ ಕಿರು ಗುಲಾಬಿಯಂಥ ಪಾತ್ರ 'ಪಿಂಕಿ'. ಮಕ್ಕಳ ರ್‍ಯಾಂಕಿಗಾಗಿ ಪರದಾಟ ನಡೆಸುವ ಕಾನ್ವೆಂಟ್ ಮಕ್ಕಳ ತಾಯಂದಿರ ಯಥಾರ್ಥ ಚಿತ್ರ" ಎನ್ನುತ್ತಾರೆ.

**(ನಗರಪರ್ವ, 1992, ಬೆನ್ನುಡಿ)**

## ೬.೫: ಕುರುಡರು

'ಕುರುಡರು' ನಾಟಕವನ್ನು ಕೆ.ಟಿ.ಗಟ್ಟಿಯವರು 1990ರಲ್ಲಿ ರಚಿಸಿದರು. ಇದು 1992ರಲ್ಲಿ ಪ್ರಥಮ ಮುದ್ರಣವನ್ನು ಕಂಡಿತು. ಈ ನಾಟಕವು ಮಂಗಳೂರು ಆಕಾಶವಾಣಿ ಕೇಂದ್ರದಿಂದಲೂ ಪ್ರಸಾರಗೊಂಡಿರುತ್ತದೆ.

ಬಂಗಾರಯ್ಯ ತನ್ನ ಸ್ನೇಹಿತನ ಹುಡುಕಾಟದಲ್ಲಿ ತೊಡಗುತ್ತಾನೆ. ಆತನಿಗೆ ಸ್ನೇಹಿತನ ಹೆಸರು ಮರೆತಿರುತ್ತದೆ. ಆ ಸಂದರ್ಭದಲ್ಲಿ ತನ್ನದೇ ವಯಸ್ಸಿನ ವ್ಯಕ್ತಿಯೊಬ್ಬ ಸಿಕ್ಕುತ್ತಾನೆ. ಅವರಿಬ್ಬರ ಮಧ್ಯೆ ಮಾತುಕತೆ ನಡೆಯುತ್ತದೆ. ಆತ ತನ್ನ ಮಕ್ಕಳ ಕತೆ ಹೇಳುತ್ತಾನೆ. ಅವರ ಪ್ರೇಮ ವಿವಾಹದಿಂದಾಗಿ ಮೂವರು ಸೊಸೆಯರ ಬಾಣಂತನ ದಿಂದಾಗಿ ತಾನು ಸೋತು ಹೋಗಿದ್ದೇನೆ ಎನ್ನುತ್ತಾನೆ. ಅಲ್ಲದೆ ಆ ಹುಡುಗಿಯರ ಅಪ್ಪ ಅಮ್ಮಂದಿರಿಗೆ ವರದಕ್ಷಿಣೆ ಕಾಟ ಇಲ್ಲ. ಬಾಣಂತನ ಕಾಟ ಇಲ್ಲ. ದೀಪಾವಳಿಗೆ ಅಳಿಯಂದಿರಿಗೆ ಬಿಸಿ ನೀರು ಕಾಯಿಸ್ಬೇಕಾಗಿಲ್ಲ ಎನ್ನುತ್ತಾನೆ. ಅಲ್ಲಿಗೆ ಬಂದ ಇನ್ನೊಬ್ಬ ವ್ಯಕ್ತಿಯೊಂದಿಗೆ ಬಂಗಾರಯ್ಯ ಕನ್ನಡಕದ ಅಂಗಡಿಯ ಬಗ್ಗೆ ವಿಚಾರಿಸಿ ಅಲ್ಲಿಗೆ ತೆರಳುತ್ತಾನೆ. ಪೋಲೀಸರು ಆತನನ್ನು ಹಿಂಬಾಲಿಸುತ್ತಾರೆ.

ಅದೇ ಸಂದರ್ಭದಲ್ಲಿ ಕನ್ನಡಕದ ಅಂಗಡಿಗೆ ಹೋದ ತನ್ನ ತಂದೆಯನ್ನು ಯುವತಿಯೊಬ್ಬಳು ಹುಡುಕುತ್ತಾ ಬರುತ್ತಾಳೆ. ಅವಳಿಗೆ ಬಂಗಾರಯ್ಯನ ಮಗ ಸಿಗುತ್ತಾನೆ. ಆಕೆ ತನ್ನ ಅಪ್ಪನ ಬಗ್ಗೆ ಹೇಳಿದ ಚಹರೆ ಆತನ ಅಪ್ಪನದೇ ಆಗಿರುತ್ತದೆ. ಆತನೂ ತನ್ನ ತಂದೆಯನ್ನು ಹುಡುಕುತ್ತಿರುತ್ತಾನೆ. ಇಬ್ಬರೂ ಕನ್ನಡಕ ಅಂಗಡಿಯ ಬಳಿಗೆ ಬರುತ್ತಾರೆ. ಕನ್ನಡಕದ ಅಂಗಡಿಯ ಉದ್ಘಾಟನಾ ಸಮಾರಂಭದ ಚೀಫ್ ಗೆಸ್ಟ್ ಜಗಳೂರು ಮಠದ ಜಗದ್ಗುರು ತನ್ನನ್ನು ತಾನು ದೇವರಿಗಿಂತಲೂ ಮೇಲು ಎನ್ನುತ್ತಾನೆ. ಕನ್ನಡಕದ ಧರಿಸಿದ ಮೇಲೆ ಕೂಡಾ ಪ್ರಪಂಚವನ್ನು ಧಾರ್ಮಿಕ ದೃಷ್ಟಿಯಿಂದ ನೋಡಲು ಸಾಧ್ಯವಾಗುತ್ತದೆ ಎನ್ನುತ್ತಾನೆ. ಬಂಗಾರಯ್ಯ ಸ್ವಾಮೀಜಿಯಿಂದ ಉಚಿತವಾಗಿ ಕನ್ನಡಕ ಪಡೆಯುತ್ತಾನೆ. ಬಂಗಾರಯ್ಯ ಮತ್ತು ಮಗ ಅಕ್ಷರ ಎದುರು ಬದುರು ಬರುತ್ತಾರೆ. ಕನ್ನಡಕ ಧರಿಸಿರುವುದರಿಂದಾಗಿ ಅವರಿಗೆ ಪರಸ್ಪರ ಗುರುತು ಸಿಗುವುದಿಲ್ಲ. ಬಂಗಾರಯ್ಯನಿಗೆ ಕಳ್ಳ ಹಾಗೂ ಪೋಲೀಸರು ಎದುರಾಗುತ್ತಾರೆ.

ಎರಡನೇ ಬಾರಿಗೆ ಯುವತಿ ಕನ್ನಡಕ ಹಾಕಿಕೊಂಡು ಯುವಕನನ್ನು ಭೇಟಿಯಾದಾಗ ಅವನ ಗುರುತು ಒಮ್ಮೆಗೆ ಸಿಗುವುದಿಲ್ಲ. ಮಾತನಾಡುತ್ತಾ ಅವರಿಬ್ಬರೂ ಹತ್ತಿರವಾಗುತ್ತಾರೆ. ಆದರೆ ಅಗಲುವಿಕೆಯ ಅನಿವಾರ್ಯತೆಯ ದುಃಖದಿಂದ ಅವರಿಬ್ಬರೂ ಹಿಂತಿರುಗುತ್ತಾರೆ.

ನಾಟಕದಲ್ಲಿ ಕಾಣಿಸಿಕೊಳ್ಳುವ ತಂಪು ಕನ್ನಡಕ 'ಸಂಕೇತ'ವಾಗಿ ಮಾತ್ರ ಕಂಡುಬರುತ್ತದೆ. ತಂಪು ಕನ್ನಡಕ ಧರಿಸಿದಾಗ ನೈಜತೆಗೆ ಕತ್ತಲು ಕವಿಯುತ್ತದೆ. ವ್ಯಕ್ತಿ ವ್ಯಕ್ತಿಯನ್ನು ಗುರುತಿಸಲು ವಿಫಲನಾಗುತ್ತಾನೆ. ಅನ್ಯತನ ತುಂಬಿಕೊಳ್ಳುತ್ತದೆ. ಹಾಗಾಗಿ ಕನ್ನಡಕ ಧರಿಸಿದವರು ಕುರುಡರಾಗುತ್ತಾರೆ. ಕನ್ನಡಕ ಅಂಧತ್ವದ ಸಂಕೇತವಾಗಿ ಚಿತ್ರಿತವಾಗಿದೆ. ಡಾ.ನಾ. ದಾಮೋದರ ಶೆಟ್ಟಿಯವರು ನಾಟಕದ ಬೆನ್ನುಡಿಯಲ್ಲಿ ಹೀಗೆ ಹೇಳುತ್ತಾರೆ, "ತನ್ನತನವನ್ನು ಬದಿಗೊತ್ತಿ ಅನ್ಯತನದೊಳಗೆ ಪರಕಾಯ ಪ್ರವೇಶ ಮಾಡಿದ ಮಂದಿಯ ಅನುಭವ "ಕುರುಡರು" ನಾಟಕದಲ್ಲಿ ಬಿಂಬಿತವಾಗುತ್ತದೆ. ನಾಟಕದ ಕೊನೆಯಲ್ಲಿ ಸೂತ್ರಧಾರ ಹೇಳುವ "ನಾವು ನಟರು ನಾಟಕದ ಕೊನೆಯಲ್ಲಿ ನಮ್ಮ ಬಣ್ಣವನ್ನು ಕಳಚ್ತೀವಿ. ನೀವು ನಿಮ್ಮ ಪ್ರೇಕ್ಷಕ ಪಾತ್ರವನ್ನು ಕಳಚಿ, ಮೊದಲಿನ ಮನುಷ್ಯರಾಗ್ತೀರಿ ಎಂಬ ಮಾತು ಇಡಿಯ ನಾಟಕದ ಜೀವಸತ್ವ"

**(ಕುರುಡರು, 1992, ಬೆನ್ನುಡಿ)**

## ೬.೬: ಬೊಂಬೆಯಾಟ

ಕೆ.ಟಿ.ಗಟ್ಟಿಯವರ ನಾಟಕ 'ಬೊಂಬೆಯಾಟ' 1992ರಲ್ಲಿ ಮುದ್ರಣ ಕಂಡಿತು. ಇದು ಸಾಮಾಜಿಕ – ಐತಿಹಾಸಿಕ – ರಾಜಕೀಯ ನಾಟಕ. ಸಮಕಾಲೀನ ಸಮಾಜದ ವ್ಯವಸ್ಥೆಯನ್ನು ನಾಟಕವು ಪರಿಣಾಮಕಾರಿಯಾಗಿ ತೋರಿಸಿ ಕೊಡುತ್ತದೆ. ಮೈಸೂರಿನ 'ಸಮತೆಂತೊ' 1992ರಲ್ಲಿ ಏರ್ಪಡಿಸಿದ್ದ ನಾಟಕ ರಚನಾ ಸ್ಪರ್ಧೆಯಲ್ಲಿ ಈ ನಾಟಕವು ಪ್ರಥಮ ಬಹುಮಾನ ಗಳಿಸಿದೆ.

"ಮನುಷ್ಯ ಒಂಟಿಯಾಗಿಯೇ ಬರುತ್ತಾನೆ. ಒಂಟಿಯಾಗಿಯೇ ಹೋಗುತ್ತಾನೆ. ಈ ನಡುವೆ ಅವನಿಗೆ ಎಲ್ಲರೂ ಬೇಕು. ಹೆಂಡತಿ, ಮಕ್ಕಳು, ಬಂಧು ಬಳಗ, ಅವರು ಇವರು, ಮನುಷ್ಯನು ಏನೂ ತರುವುದಿಲ್ಲ, ಏನೂ ಕೊಂಡು ಹೋಗುವುದಿಲ್ಲ. ಆದರೆ ಅವನಿಗೆ ಎಲ್ಲವೂ ಬೇಕು". ಎಂಬ ನಾಟಕಕಾರನ ಮಾತಿನೊಂದಿಗೆ ನಾಟಕ ಆರಂಭವಾಗುತ್ತದೆ.

**(ಬೊಂಬೆಯಾಟ, 1992 ಪುಟ 1)**

ಇತಿಹಾಸದ ಬಾಗಿಲನ್ನು ತೆರೆದು ನೋಡಿದರೆ ಅಲ್ಲಿ ಲಂಚ, ಭ್ರಷ್ಟಾಚಾರ, ಅನ್ಯಾಯ, ಅತ್ಯಾಚಾರ, ವಂಚನೆ, ಶೋಷಣೆ, ಬಂಡಾಯ ಎಲ್ಲವೂ ಇದೆ. ಭಯೋತ್ಪಾದಕರು, ಉಗ್ರಗಾಮಿಗಳು, ನೀಚ ರಾಜಕಾರಣಿಗಳು ಸುರರು ಅಸುರರು ಎಲ್ಲಾ ಅಲ್ಲಿದ್ದಾರೆ. ಅಲ್ಲಿಲ್ಲದ್ದು ಇಲ್ಲಿಲ್ಲ. ಆದುದರಿಂದ ಅದೇ ಸಾರ್ವಕಾಲಿಕ ಸತ್ಯ. ಎಂಬ ಸೂತ್ರಧಾರನ ಮಾತುಗಳು ನಾಟಕದ ಆಂತರ್ಯವನ್ನು ಬಿಚ್ಚಿಡುತ್ತವೆ.

ರಾಜನನ್ನು ಕಾಣಲು ಹೋದ ನಾಟಕಕಾರನೊಂದಿಗೆ ದ್ವಾರಪಾಲಕರು ರಾಜನ ಬಗ್ಗೆ ಹೊಗಳುತ್ತಾರೆ. ರಾಜನು ತನ್ನ ವಂಶಚರಿತ್ರೆಯುಳ್ಳ ನಾಟಕವೊಂದನ್ನು ರಚಿಸಲು ಹೇಳುತ್ತಾನೆ. ಹಾಗಾಗಿ ನರ್ಮ ಸಚಿವ ಆತನಿಗೆ ಸಾಮ್ರಾಜ್ಯದ ಇತಿಹಾಸ, ವರ್ತಮಾನವನ್ನು ತಿಳಿಸುತ್ತಾನೆ. ಹಿಂದೆ ಮುತ್ತು ರತ್ನಗಳಿಂದ ಅರಮನೆ ಶೋಭಿಸುತ್ತಿದ್ದ ವಿಚಾರ ತಿಳಿಸುತ್ತಾನೆ. ಆತ ತೋರಿಸಿದ ಮೂರನೆಯ ಗವಾಕ್ಷಿಯಲ್ಲಿ ಕೇವಲ ಶೋಕಗಾನ ಹೊರ ಹೊರ ಹೊಮ್ಮುತ್ತಿತ್ತು. ಅವು ಆತ್ಮ ವಿಹಾರಗಳಾಗಿರುತ್ತವೆ. ಅಂದರೆ ಹಿಂದಿನವರ ಸಮಾಧಿಗಳು. ನಾಟಕ ಬರೆಯುತ್ತಿರುವ ನಾಟಕಕಾರನ ಬಳಿಗೆ ಬಂದ ರಾಣಿ ನಾಟಕದಲ್ಲಿ ಬರುವ ರಾಣಿಯ ಪಾತ್ರಕ್ಕೆ ಅವಳ ಅಂತರಾಳದ ಭಾವನೆಗಳಿಗೆ ಅಭಿವ್ಯಕ್ತಿ ನೀಡುವಂತೆ ತಿಳಿಸುತ್ತಾಳೆ. ಆಕೆ ಆತನೊಂದಿಗೆ "ನೀವು ಮಹಾರಾಣಿಯನ್ನು ವೈಭವೀಕರಿಸುತ್ತೀರಿ. ಹೂವಿನ ಹಾಸಿಗೆಯಲ್ಲಿ ಹೊರಳಾಡುವ ದೇವತೆಯಂತೆ ಚಿತ್ರಿಸುತ್ತೀರಿ! ನಿಜವಾಗಿ ಅವಳಿರುವುದು ನರಕದಲ್ಲಿ ! ಅವಳಿಗೆ ಅರಮನೆ ಬೇಡ. ತನ್ನನ್ನು

ಪ್ರೀತಿಸಬಲ್ಲ ಹೃದಯವಿರುವವನೊಬ್ಬನೊಡನೆ ಹರಕು ಗುಡಿಸಲಲ್ಲಿ ಮಲಗಲು ಅವಳು ಕಾತರಿಸುತ್ತಾಳೆ. ಅವಳಿಗೆ ಮಹಾರಾಜ ಬೇಡ, ಗಂಡಸಾಗಿರುವ ಬರೀ ಒಬ್ಬ ಸೈನಿಕ ಸಾಕು". ಎನ್ನುತ್ತಾಳೆ. ಅಲ್ಲಿಗೆ ಆಗಮಿಸಿದ ರಾಜಕುಮಾರಿ "ನಾನು ಏನನ್ನೂ ಬರೆಯಲಿಲ್ಲ.

**(ಅದೇ, ಪುಟ 27)**

ಪರೀಕ್ಷೆಗಳಿಗೆ ಹೋಗಲಿಲ್ಲ. ಎಲ್ಲವನ್ನೂ ಅಪ್ಪಾಜಿಯೇ ಮಾಡಿಸಿದರು. ಅಪ್ಪಾಜಿಗೆ ಗೌರವ ಪದವಿ, ಅಮ್ಮನಿಗೆ ಗೌರವ ಪದವಿ, ನನಗೆ ನಿಜವಾದ ಪದವಿ! ಮಹಾಮಂತ್ರಿಗೆ ಅತಳ ರತ್ನ ಪ್ರಶಸ್ತಿ, ಮಂತ್ರಿ ಕುಮಾರನಿಗೆ ಅತಳ ಚಕ್ರ ! ಎಲ್ಲಾ ಅಪ್ಪಾಜಿಯೇ ತೀರ್ಮಾನಿಸ್ತಾರೆ, ನನ್ನ ಮದುವೆಯ ಏರ್ಪಾಡು ಕೂಡಾ ಮಾಡಿದ್ದಾರೆ. ಮಹಾ ಮಂತ್ರಿಯ ಮಗನನ್ನು ನಾನು ಮದುವೆಯಾಗಬೇಕು ಎಂದು ತೀರ್ಮಾನವಾಗಿದೆ. ಆದರೆ ನಾನು ಯಾರಾದರೂ ಕೈ ಕಾಲು ಮುರಿದ ಸೈನಿಕನನ್ನಾದಾರೂ ಮದುವೆಯಾಗುತ್ತೇನೆ, ಆದರೆ ಮಂತ್ರಿಯ ಮಗನನ್ನು ಮದುವೆಯಾಗುದಿಲ್ಲ." ಎನ್ನುತ್ತಾಳೆ.

**(ಅದೇ, ಪುಟ 30)**

ರಾಜಕುಮಾರನ ಪಾತ್ರವನ್ನು ನೀವೇ ಮಾಡಿ. ರಾಜಕುಮಾರಿ ನಿಮ್ಮನ್ನೇ ವರಿಸುವಳು, ನಾನು ನಿನ್ನನ್ನು ಪ್ರೀತಿಸುತ್ತೇನೆ ಎನ್ನುತ್ತಾಳೆ. ಅಲ್ಲಿಗೆ ಬಂದ ಮಂತ್ರಿ ಕುಮಾರ ಆಕೆಗೆ ಖಳನಾಯಕನಾಗಿ ಕಾಣುತ್ತಾನೆ. ಬಾಗಿಲು ಕಾಯುವವರು ಮಂತ್ರಿಯ ಪಾತ್ರವನ್ನು ಬಯಸುತ್ತಾರೆ.

ರಾಜಕುಮಾರಿಯನ್ನು ಪ್ರೀತಿಸುವ ಪ್ರಯತ್ನ ಮಾಡಿದನೆಂಬ ಕಾರಣಕ್ಕಾಗಿ ನಾಟಕಕಾರನನ್ನು ಗೃಹ ಬಂಧನದಲ್ಲಿರಿಸಲಾಗುತ್ತದೆ. ರಾಜಕುಮಾರಿ ತಾನು ಆ ಕಲಾವಿದನನ್ನು ಪ್ರೀತಿಸುವುದಾಗಿ ರಾಜನೊಂದಿಗೆ ಹೇಳುತ್ತಾನೆ. ಅದನ್ನು ರಾಜ ವಿರೋಧಿಸುತ್ತಾನೆ. ರಾಜಕುಮಾರಿಯನ್ನು ರಾಜ ಬಂಧನದಲ್ಲಿರಿಸಿದುದನ್ನು ಮಹಾರಾಣಿ ವಿರೋಧಿಸುತ್ತಾಳೆ. ನಿಮ್ಮ ರಾಜಕಾರಣದಲ್ಲಿ ಸ್ವಾತಂತ್ರ್ಯಕ್ಕಿಂತ ಬಂಧನವೇ ಮುಖ್ಯ. ಹೆಣ್ಣನ್ನು ಮತ್ತು ನದಿಯನ್ನು ಬಂಧನದಲ್ಲಿಡಲು ಸಾಧ್ಯವಿಲ್ಲ ಎನ್ನುತ್ತಾಳೆ.

ನಾಟಕಕಾರನನ್ನು ಹುಡುಕಿಕೊಂಡು ಸೂತ್ರಧಾರ ಅರಮನೆಯೊಳಗೆ ಬರುತ್ತಾನೆ. ಅಲ್ಲಿ ರಾಜನ ಸೂಚನೆಯಂತೆ – ಕಲಾವಿದನೊಂದಿಗೆ ಮದುವೆ ಮಾಡಿಸದಿದ್ದರೆ ಆತ್ಮಹತ್ಯೆ ಮಾಡಿಕೊಳ್ಳುತ್ತೇನೆಂದು ಮುಷ್ಠಿಯಲ್ಲಿ ವಜ್ರವನ್ನು ಹಿಡಿದು ಕುಳಿತಿರುವ ರಾಜಕುಮಾರಿಯ ಮನಸ್ಸನ್ನು ಪರಿವರ್ತಿಸುವ ಪ್ರಯತ್ನ ನಡೆಸಲು ತೆರಳುತ್ತಾನೆ. ಆದರೆ ರಾಜಕುಮಾರಿ ಸೂತ್ರಧಾರನನ್ನೇ ಪ್ರೀತಿಸುತ್ತಾಳೆ. ತಾವಿಬ್ಬರೂ ಈ ರಾಜ್ಯಬಿಟ್ಟು ಓಡಿ ಹೋಗುವ ಉಪಾಯ ಸೂಚಿಸುತ್ತಾಳೆ. ಅದರಂತೆ ಅವರು ಓಡಿ ಹೋಗುತ್ತಾರೆ. ಅವರನ್ನು

ಹುಡುಕಿಕೊಂಡು ಬಂದ ಮಂತ್ರಿಕುಮಾರನೊಂದಿಗೆ ನಕ್ಷತ್ರಗಳು ತುಂಬಿರುವ ಆಕಾಶವನ್ನು ನೋಡಬೇಕೆಂದು ಅಪೇಕ್ಷಿಸಿದುದರಿಂದ ನಾನು ಈಕೆಯನ್ನೂ ಕರೆದುಕೊಂಡು ಬಂದಿರುವುದಾಗಿ ತಿಳಿಸುತ್ತಾನೆ. ಆದರೆ ರಾಜಕುಮಾರಿ ಸೂತ್ರಧಾರನನ್ನೇ ವರಿಸುವುದಾಗಿ ಹೇಳುತ್ತಾಳೆ. ಮಂತ್ರಿಕುಮಾರ ರಾಜಕುಮಾರಿಯನ್ನು ಎಳೆದೊಯ್ಯುವ ಸಂದರ್ಭದಲ್ಲಿ ಸೂತ್ರಧಾರ ಆತನನ್ನು ಖಡ್ಗದಿಂದ ತಿವಿಯುತ್ತಾನೆ. ಮಹಾರಾಜನ ಹತ್ಯೆಯಾಗುತ್ತದೆ. ಮಹಾಮಂತ್ರಿ ರಾಜ್ಯಾಧಿಕಾರ ವಹಿಸಿಕೊಳ್ಳುತ್ತಾನೆ. ದ್ವಾರಪಾಲಕ ಹೇಳುವಂತೆ ಅದು ಸಾರ್ವಕಾಲಿಕ ಸತ್ಯ. "ಎರಡು ಸಾವಿರ ವರ್ಷದ ಹಿಂದಿನ ನಾಯಿಯ ಮುಂದೆ ಮಾಂಸದ ತುಂಡು ಎಸೆದಾಗ ಆ ನಾಯಿ ಏನು ಮಾಡಿತೋ ಈವತ್ತಿನ ನಾಯಿ ಕೂಡಾ ಅದನ್ನೇ ಮಾಡುತ್ತದೆ. ಇದು ಸಿದ್ಧಾಂತ. ರಾಜಕೀಯ ಸಿದ್ಧಾಂತ".

**(ಅದೇ ಪುಟ 64)**

ನಾಟಕಕಾರನಿಗೆ ರಾಜಕುಮಾರಿಯ ಬಳಿಯಲ್ಲಿದ್ದ ಗೊಂಬೆ ಸಿಗುತ್ತದೆ. ಅದನ್ನು ಹಿಡಿದುಕೊಂಡು ಓಡುವಾಗ ಅವನ ಕೈಯಲ್ಲಿದ್ದ ನಾಟಕದ ಹಸ್ತಪ್ರತಿ ಕೆಳಗೆ ಬೀಳುತ್ತದೆ. ಅದು ರಾಜಕುಮಾರಿಗೆ ಮತ್ತು ಸೂತ್ರಧಾರನಿಗೆ ಸಿಗುತ್ತದೆ. ರಾಜಕುಮಾರಿಗೆ ಮರದಲ್ಲಿ ಜೋಲಾಡುವ ಮನುಷ್ಯನ ಆಕೃತಿ ಕಾಣಿಸುತ್ತದೆ. ಹಗ್ಗದ ಇನ್ನೊಂದು ತುದಿಯಲ್ಲಿ ಅವಳ ಗೊಂಬೆಯಿರುತ್ತದೆ. ಹೀಗೆ ವರ್ತಮಾನದ ಸಾಂಸಾರಿಕ ಜಗತ್ತಿನಿಂದ ಇತಿಹಾಸದೆಡೆಗೆ ನಾಟಕ ಸಾಗುತ್ತದೆ.

ಬದುಕಿನ ವಿವಿಧ ಹಂತಗಳಲ್ಲಿ ಹೆಣ್ಣಿನ ಬದುಕನ್ನು ಚಿತ್ರಿಸುತ್ತಾ ಅದಕ್ಕೆ ಗಂಡು ನೀಡುವ ಪ್ರತಿಕ್ರಿಯೆಗಳನ್ನು ನಾಟಕ ಮೂಡಿಸುತ್ತದೆ. ರಾಜಕುಮಾರಿಯ ಬೊಂಬೆ, ಹುಲಿಯ ಗರ್ಜನೆ ಮತ್ತು ಸಮಾಧಿಯಿಂದ ಹೊರಬರುತ್ತಿರುವ ಶಬ್ದಗಳು ನಾಟಕವನ್ನು ಮತ್ತಷ್ಟು ನಿಗೂಢ ಹಾಗೂ ಸಾಂಕೇತಿಕತೆಯೆಡೆಗೆ ಕೊಂಡೊಯ್ಯುತ್ತವೆ. ಹೆಣ್ಣು ಸ್ವಾತಂತ್ರ್ಯವನ್ನು ಕಳೆದುಕೊಂಡು ತಾನೊಂದು ಬೊಂಬೆಯಾಗಿ ಬದುಕಬೇಕಾದ ಪರಿಸ್ಥಿತಿಯ ಕುರಿತು ನಾಟಕ ದೃಷ್ಟಿ ಹರಿಸುತ್ತದೆ. ರಾಜಕೀಯ ವ್ಯವಸ್ಥೆಯೊಳಗೆ ರಾಣಿ, ರಾಜಕುಮಾರಿಯರ ಸ್ಥಿತಿಯನ್ನು ಈ ನಾಟಕ ವಿಶ್ಲೇಷಿಸುತ್ತದೆ. ಅಧಿಕಾರಶಾಹಿಗಳು ಅನೇಕ ಶತಮಾನಗಳಿಂದಲೂ ಜನ ಸಾಮಾನ್ಯರನ್ನು ತಮ್ಮ ಕೈಗೊಂಬೆಯನ್ನಾಗಿ ಮಾಡಿಕೊಂಡು ಬಂಧನದಲ್ಲಿರಿಸಿಕೊಂಡಿದ್ದಾರೆ. ಇದನ್ನು ತಿಳಿದುಕೊಂಡು ವರ್ತಮಾನಕಾಲದಲ್ಲಿ ಜನಸಾಮಾನ್ಯ ತನ್ನ ಹಳೆಯ ದೇಹವನ್ನು ತ್ಯಜಿಸಿ ಹೊಸ ದೇಹವನ್ನು ಧರಿಸಿಕೊಂಡು ಬರಬೇಕಾದ ಅನಿವಾರ್ಯತೆಯಿದೆ ಎಂಬುದನ್ನು ನಾಟಕ ಪ್ರತಿಪಾದಿಸುತ್ತದೆ. ನಾಟಕಕ್ಕೆ ಬೆನ್ನುಡಿಯನ್ನು ಬರೆದ ಚದುರಂಗರು ನಾಟಕದ ಬಗ್ಗೆ

ಹೀಗೆ ತಮ್ಮ ವಿಚಾರಗಳನ್ನು ತಿಳಿಸುತ್ತಾರೆ. "ಇಂದಿನ ವ್ಯವಸ್ಥೆಯನ್ನು ಪರಿಣಾಮಕಾರಿಯಾಗಿ ಬಿಂಬಿಸುವ, ಪ್ರತಿಬಿಂಬಿಸುವ ನಾಟಕ. ರಾಜಕೀಯವಾಗಿ, ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಇದರ ಹಿಡಿತ ತುಂಬ ಪ್ರಬಲ. "ಇದು ಭೂಮಿಯಲ್ಲಿ ಭೂತಳ!" ಇದನ್ನು ಬದಲಿಸುವ ಯಾವ ಕ್ರಾಂತಿಯೂ ಇಲ್ಲಿ ನಡೆದಂತೆ ಕಾಣುತ್ತಿಲ್ಲ. "ಇಲ್ಲಿ ಭೂಮಿ ಕಂಪಿಸುವುದಿಲ್ಲ." ತನ್ನ ಸುತ್ತ ಬಲವಾದ ಕೋಟೆಯನ್ನು ಈ ವ್ಯವಸ್ಥೆ ಕಟ್ಟಿಕೊಂಡಿದೆ. ಇದರೊಳಗೆ ಇರುವವರೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಬಂಧಿಗಳೇ. ಈ ಕೋಟೆಯೊಳಗೆ ಬರುವವರ, ಹೊರಗೆ ಹೊಗುವವರ ಮೇಲೆ ಗುಪ್ತಚಾರ ದಳ ಸದಾ ಕಣ್ಣಿಟ್ಟಿರುತ್ತದೆ. ಇಲ್ಲಿನ ರಾಜರು ಅಂದರೆ ಪಟ್ಟಭದ್ರರು. ಎರಡೂವರೆ ಸಾವಿರ ವರ್ಷಗಳಿಂದ ಸತತವಾಗಿ, ಪಾರಂಪರಿಕವಾಗಿ ಆಳುತ್ತಾ ಬಂದಿದ್ದಾರೆ. "ನಾವು ಹಳೆಯ ದೇಹಗಳನ್ನು ತೊರೆದು, ಹೊಸ ದೇಹಗಳನ್ನು ಧರಿಸಿ, ಹಳೆಯ ಹೆಸರುಗಳನ್ನು ಬಿಟ್ಟು, ಹೊಸ ಹೆಸರುಗಳನ್ನು ತೊಟ್ಟು ಬರುತ್ತೇವೆ." ಇಲ್ಲಿ ಆತ್ಮವನ್ನು ಕುರಿತಾದ ಚಿಂತನೆಗಳು, ದರ್ಶನಗಳು "ಆತ್ಮ ವಿಹಾರಿಗಳು" ಎಂಬ ಹೆಸರಿನಲ್ಲಿ ಸಮಾಧಿಯಾಗಿವೆ. ಈ ವ್ಯವಸ್ಥೆಯಲ್ಲಿ ಉಸಿರಾಡುವ ವ್ಯಕ್ತಿಗಳು ಬೊಂಬೆಗಳಂತೆ ಕಾಣುತ್ತಾರೆ. ಇಲ್ಲಿ ಯಾರೂ ಮನುಷ್ಯರಂತೆ ಜೀವಿಸಲು ಸಾಧ್ಯವಿಲ್ಲ. ಇಲ್ಲಿಯ ಜನ "ಹಸಿವಿಲ್ಲದೇನೆ......ಹೃದಯಗಳನ್ನು ತಿನ್ನುತ್ತಾರೆ......ಕನಸುಗಳನ್ನೂ ತಿನ್ನುತ್ತಾರೆ." ನಾಟಕದ ಉದ್ದಕ್ಕೂ ಮೇಲಿಂದ ಮೇಲೆ ಬರುವ ಹುಲಿಯ ಗರ್ಜನೆ, ಎಲ್ಲರನ್ನೂ ಭಯದ ಮೂಲಕ ಹತೋಟಿಯಲ್ಲಿಡುವ ಹುನ್ನಾರವಾಗಿ ಕಾಣಿಸುತ್ತದೆ. ಇಲ್ಲಿ ಆಕಾಶವೇ ಇಲ್ಲ. ಪ್ರಕೃತಿ ನಾಪತ್ತೆ. ಇಲ್ಲಿ ಉಸಿರುಗಟ್ಟುವ ಮೌನ, "ಸಮಾಧಿ ಸಂಗೀತ". ಇಲ್ಲಿಯ ಸಂಗೀತ ಶತ ಶತಮಾನಗಳ ಗಾನ. ಲಹರಿ ತಿರುಗಿದಾಗ ಡಿಸ್ಕೋ ಸಂಗೀತದೊಡನೆ ಬೆರೆಯುವುದೂ ಉಂಟು. ಮೃತ್ಯು ನೃತ್ಯವೂ ಇಲ್ಲದಿಲ್ಲ. ಸ್ವಾತಂತ್ರ್ಯವಿಲ್ಲದೆ ನರಳುವವರು ಇಲ್ಲಿ ವಿಶೇಷವಾಗಿ ಹೆಂಗಸರೇ. ಮಹಾರಾಣಿ ಮತ್ತು ರಾಜಕುಮಾರಿಯಂಥವರ ಮೂಲಕ 'ಇತಿಹಾಸದ ನಿಟ್ಟುಸಿರು ಇಲ್ಲಿ ಕೇಳಿಸುತ್ತಲೇ ಇರುತ್ತದೆ. ಇಲ್ಲಿಯ ಜನ ಮಹತ್ವಾಕಾಂಕ್ಷಿಗಳಲ್ಲ. "ಯಾರೇ ಅಳಲಿ, ನಾವು ಹೀಗೇ ಇರುತ್ತೇವೆ" ಎಂದು ಹೇಳುವವರು..... ಇಲ್ಲಿಯ ನಾಟಕಕಾರರಿಗೆ ಬಡ ಜನತೆಯನ್ನು ತಮ್ಮ ನಾಟಕದಲ್ಲಿ ರಕ್ತ ಮಾಂಸಗಳಿರುವ ಮನುಷ್ಯರನ್ನಾಗಿ ಮಾಡುವ ಹೆಮ್ಮೆ. ಆದರೆ ಅದೇ ಬಡಜನತೆಯ ಕಷ್ಟಗಳ ಬಗ್ಗೆ ಎಲ್ಲಿಲ್ಲದ ತಿರಸ್ಕಾರ, ಕ್ರೋಧ, ಯಾಕೆಂದರೆ ಈ ಬಡ ಜನರು ತಮ್ಮ ಹಸಿವಿಗೆ "ಭೂಮಂಡಲವನ್ನೇ ಸುಡುವ ಅಪೇಕ್ಷೆಯುಳ್ಳವರು"..... ಇಲ್ಲಿ ಒಬ್ಬರು ಇನ್ನೊಬ್ಬರ ಕೈಗೊಂಬೆ ಆಗುತ್ತಾರೆ. ರಾಜಕುಮಾರಿ ಸೂತ್ರಧಾರನನ್ನು ಕೂಡಿದ ಬಳಿಕ ತನ್ನಲ್ಲಿ ಇದುವರೆಗೂ ಇದ್ದ ಮುಗ್ಧತೆಯನ್ನು ಕಳೆದುಕೊಂಡು ಸೂತ್ರಧಾರನ ಕೈಗೊಂಬೆಯಾಗುತ್ತಾಳೆ. ಇಲ್ಲಿ ಕಳೆದುಕೊಂಡ ಗೊಂಬೆಗಾಗಿ, ಮುಗ್ಧತೆಗಾಗಿ

ರಾಜಕುಮಾರಿ ಹಪಹಪಿಸುವುದು, ಮುಗ್ಧತೆಯನ್ನು ಕಳೆದುಕೊಂಡ ಸರ್ವರನ್ನು ಸಂಕೇತಿಸುತ್ತದೆ. ರಾಜಕುಮಾರಿ, ಮರದಿಂದ ಜೋತಾಡುವ ಮನುಷ್ಯನ ಆಕೃತಿ ಕಂಡು ಚೀರುತ್ತಾಳೆ. ಅದನ್ನು ಕಂಡಿರದ ಸೂತ್ರಧಾರ ಅವಳು ಚೀರಿದ್ದಕ್ಕೆ ಕಾರಣ ಕೇಳಿದಾಗ ಅವಳು "ನನ್ನ.ನನ್ನ. ನನ್ನಗೊಂಬೆ" ಎಂದು ಸಂಕಟಪಡುತ್ತಾಳೆ. ಸೂತ್ರಧಾರ "ಎಲ್ಲಿದೆ" ಎಂದು ಕೇಳುತ್ತಾನೆ. "ಅಲ್ಲಿ, ಹಗ್ಗದ ಇನ್ನೊಂದು ತುದಿಯಲ್ಲಿ!" ಎಂದು ಜೋತಾಡುವ ಆಕೃತಿಯನ್ನು ತೋರಿಸುತ್ತಾಳೆ!. ಇದು ಅವಳ ಗೊಂಬೆ ಅಂದರೆ ಅವಳ ಇನ್ನೊಬ್ಬ ಪ್ರೇಮಿ, ನಾಟಕಕಾರ ಅಂದರೆ ಅವಳು ಕಳೆದುಕೊಂಡ ಮುಗ್ಧತೆ, ತನ್ನ ಸಾಫಲ್ಯ ಕಳೆದುಕೊಂಡು ದೂರದಲ್ಲಿ ಹೆಣವಾಗಿ ತೂಗಾಡುತ್ತಿರುವಂತೆ ಭಾಸವಾಗುತ್ತದೆ!. ಈ ನಾಟಕದಲ್ಲಿ ನಮ್ಮನ್ನು ಎದುರಾಗುವ ವ್ಯಕ್ತಿಗಳೆಲ್ಲರೂ ಒಂದಲ್ಲ ಒಂದು ಅರ್ಥದಲ್ಲಿ ಗೊಂಬೆಗಳೇ. ಇಲ್ಲಿ ನಡೆಯುವುದೆಲ್ಲವೂ ಗೊಂಬೆಯಾಟವೇ! ನಮ್ಮ ಬದುಕಿನ ಹಾಗೆ!"

**(ಅದೇ, ಚೆನ್ನುಡಿ)**

## ೬.೭: ಭಿನ್ನಮತ

ಕೆ.ಟಿ.ಗಟ್ಟಿಯವರ ಭಿನ್ನಮತ ನಾಟಕವು 1997ರಲ್ಲಿ ರಚನೆಗೊಂಡಿತು. ಗುಂಪುಗಾರಿಕೆಯ ರಾಜಕಾರಣದ ಚಿತ್ರಣದೊಂದಿಗೆ ನಾಟಕ ಆರಂಭವಾಗುತ್ತದೆ. ಗಂಗಾ ರಾಮಪ್ಪನನ್ನು ಬೆಂಬಲಿಸಿ ಅನೇಕ ಭಿನ್ನಮತೀಯರು ಆತನ ಮನೆಗೆ ಬರುತ್ತಾರೆ. ಆತನನ್ನು ತಮ್ಮ ನಾಯಕನೆಂದು ಹೇಳುತ್ತಾರೆ. ಕೆಲವರಿಗೆ ತಮಗೆ ರಾಜಕೀಯದಲ್ಲಿ ಯಾವ ಸ್ಥಾನಮಾನವನ್ನು ನೀಡಲಿಲ್ಲವೆಂಬ ಅಸಮಾಧಾನ. ಒಬ್ಬ ತನಗೆ ಮಂತ್ರಿ ಪದವಿ ಸಿಗದಿದ್ದುದಕ್ಕೆ ಕಾರಣ ತಿಳಿಸುತ್ತಾನೆ-"ನಾನು ಹುಟ್ಟಿ ಬೆಳೆದದ್ದು ಅನಾಥಾಶ್ರಮದಲ್ಲಿ. ಅಪ್ಪ ಇಲ್ಲ, ಅಮ್ಮ ಇಲ್ಲ; ಜಾತಿ ಇಲ್ಲ, ಧರ್ಮ ಇಲ್ಲ. ಯಾವ ಜಾತಿಯವ್ನು ಯಾವ ಕೋಮಿನವ್ನು ಅಂತ ನಂಗೆ ಮಂತ್ರಿ ಪದವಿ ಕೊಡ್ತಾರೆ ಸಾರ್. ರಾಜಕೀಯದಲ್ಲಿ ಅಪ್ಪ ಅಮ್ಮ ಬೇಕಂತಿಲ್ಲ. ಅಕ್ಷರ ಕಲ್ತಿರ್ದಿದ್ರೂ ಆಗುತ್ತೆ. ಕೊನೇ ಪಕ್ಷ ಒಂದು ಜಾತಿ ಬೇಕಲ್ಲ ಸಾರ್. ನನ್ನದು ಯಾವ ಜಾತಿ ಸಾರ್" ಎಂದು ಅಳುತ್ತಾನೆ. ಎಲ್ಲರೂ ತಮಗೆ ಮಂತ್ರಿ

**(ಗಟ್ಟಿ ಕೆ.ಟಿ, ಎಂಟು ನಾಟಕಗಳು, 2001, ಪುಟ 13)**

ಪದವಿ ನೀಡಬೇಕು ಎನ್ನುತ್ತಾರೆ. ಅದಕ್ಕೆ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಒಟ್ಟಿಗೆ ಇದ್ದು ತುಂಬಾ ತೊಂದರೆಯಾಗಿದೆ. ಕನ್ನಡ ಬೇರೆ, ಸಂಸ್ಕೃತಿ ಬೇರೆ ಆದ್ರೆ ಒಂಥರಾ ಚೆನ್ನಾಗಿರುತ್ತೆ ಎಂಬ ಸಲಹೆಯೂ ಬರುತ್ತದೆ. ಹಾಗೆಯೇ ಕೃಷಿ ಬೇರೆ ಪಶುಸಂಗೋಪನೆ ಬೇರೆ, ಶರಾಬಿಗೊಂದು, ನರ್ಸರಿ ಶಿಕ್ಷಣಕ್ಕೊಂದು, ವೈದ್ಯಕೀಯ ಶಿಕ್ಷಣಕ್ಕೊಂದು, ಇಂಜಿನಿಯರಿಂಗ್ ಶಿಕ್ಷಣಕ್ಕೊಂದು ಹೀಗೆ ನೂರ ಹದಿನಾರು ಖಾತೆ ಪಟ್ಟಿಮಾಡಿ

ಕೊಡುವುದಾಗಿ ಹೇಳುತ್ತಾರೆ. ಕೊನೆಗೆ ಎಲ್ಲರಿಗೂ ಮಂತ್ರಿ ಪದವಿ ಸಿಗುವುದು ಅಸಾಧ್ಯವೆಂದು ತೋರಿದಾಗ ಮತ್ತೆ ಅವರಲ್ಲೇ ಎರಡು ಗುಂಪುಗಳಾಗುತ್ತವೆ. ಅಧಿಕಾರಕ್ಕಾಗಿ ಅವರು ಏನು ಮಾಡಲೂ ಸಿದ್ಧ. ಗಂಗಾರಾಯಪ್ಪನ ಪತ್ನಿ ಕಾವೇರಿ ಹೇಳುವಂತೆ "ಚಾಂಡಾಲರು ಬಾತುರೂಮ್ ಕಕ್ಕಸುಗಳಲ್ಲಿ ಕೂಡ ತುಂಬ್ಕೊಂಡಿದ್ದಾರೆ. ಸದ್ಯ ಸೊಸೆ ಹೆರಿಗೆಗೆ ಹೋದದ್ರಿಂದಾಯ್ತು. ಇಲ್ದಿದ್ರೆ ಈ ಚಾಂಡಾಲರು ಹೆರಲಿಕ್ಕೂ ಜಾಗ ಬಿಡ್ತಿರ್ಲಿಲ್ಲ." ಅಧಿಕಾರ ಸಿಗುವುದಾದರೆ ಅವರು ಸಕ್ಕರೆಗೆ ಇರುವೆ ಮುತ್ತಿಕೊಂಡಂತೆ

**(ಅದೇ, ಪುಟ 17)**

ಮುತ್ತಿಕೊಳ್ಳುತ್ತಾರೆ. ಗಂಗಾರಾಮಪ್ಪ ಹೇಳುತ್ತಾನೆ "ಕೆಲವರು ಹುಟ್ಟಿನಿಂದ್ಲೇ ಭ್ರಷ್ಟರಾಗಿರ್ತಾರೆ. ಕೆಲವರನ್ನು ಭ್ರಷ್ಟತೆ ಆಮೇಲೆ ಬಂದು ಮುತ್ತಿಕೊಳ್ಳುತ್ತದೆ. ಕೆಲವ್ರಿಗೆ ಭ್ರಷ್ಟರಾಗಲು ಅವಕಾಶವೇ ಸಿಗುವುದಿಲ್ಲ. ಅವಕಾಶ ಸಿಕ್ರೆ ಅವ್ರೂ ಭ್ರಷ್ಟರು. ಅವಕಾಶ ಸಿಗುವುದಿಲ್ಲ ಆದ್ದರಿಂದ ಅವ್ರು ಒಳ್ಳೆಯವರು".

ಹೀಗೆ ನಾಟಕ ರಾಜಕಾರಣದ ಮುಖವಾಡವನ್ನು ಬಯಲು ಮಾಡುತ್ತದೆ. ಇವತ್ತಿನ ರಾಜಕೀಯ ವ್ಯವಸ್ಥೆ, ನಮ್ಮನ್ನು ಆಳುವ ನಾಯಕರ ಸ್ವಾರ್ಥ, ಅಪ್ರಾಮಾಣಿಕ ತನವನ್ನು ವಿರೋಧಿಸುತ್ತದೆ. ಇಲ್ಲಿ ರಾಜಕೀಯ ವ್ಯವಸ್ಥೆಯ ವಿಡಂಬನೆಯಿದೆ.

## ೬.೮: ಹೂವು ಅಲ್ಲ, ಗೊಬ್ರ

ಕೆ.ಟಿ.ಗಟ್ಟಿಯವರ 'ಹೂವು ಅಲ್ಲ, ಗೊಬ್ರ' ನಾಟಕವು 1996ರಲ್ಲಿ ಪ್ರಕಟಗೊಂಡಿತು. ರಾಮಲಿಂಗಪ್ಪ ಬೂದಿಪುರ ಅವರಿಗೆ ಮಂತ್ರಿ ಪದವಿ ಬಂದ ಸಂದರ್ಭದಲ್ಲಿ ಅಭಿನಂದನಾ ಸಮಾರಂಭ ಏರ್ಪಡಿಸಲಾಗಿತ್ತು. ಆ ಸಂದರ್ಭದಲ್ಲಿ ಒಂದು ಲಾರಿ ತುಂಬುವಷ್ಟು ಹಾರಗಳನ್ನು ಜನರು ಅವರಿಗೆ ಹಾಕುತ್ತಾರೆ. ಮನೆ ತುಂಬಾ ಹಾರಗಳ ರಾಶಿ ತುಂಬಿಕೊಳ್ಳುತ್ತದೆ. ಇಷ್ಟರವರೆಗೆ ಜಗತ್ತಿನಲ್ಲಿ ಯಾರಿಗೂ ಇಷ್ಟು ಹೂವಿನ ಹಾರ ಹಾಕಿಲ್ಲವಾದ್ದರಿಂದ ಇದೊಂದು ದಾಖಲೆ. ಆದುದರಿಂದ ಗಿನ್ನೆಸ್ ದಾಖಲೆಯವ್ರು ಬರುತ್ತಾರೆಂದು ಹಾರವನ್ನು ಮನೆಯಲ್ಲೇ ರಾಶಿ ಹಾಕಲಾಗುತ್ತದೆ.

ರಾತ್ರಿ ಹೂವಿನ ಹಾಸಿಗೆಯಲ್ಲಿ ಮಲಗಿದ ಗಂಡ ಹೆಂಡತಿಗೆ ಆ ವಾಸನೆಯಿಂದಾಗಿ ನಿದ್ದೆಯೇ ಬರುವುದಿಲ್ಲ. ರಾಮಲಿಂಗಪ್ಪನಿಗೆ ಪುಷ್ಪ ಕೃಷಿ ಮತ್ತು ಪುಷ್ಪೋದ್ಯಮ ಖಾತೆ ಸಿಗುತ್ತದೆ. ಆತ ನಾಗರಾಜ ಎಂಬವನಿಂದ ಪುಷ್ಪೋದ್ಯಮದ ಮಾಹಿತಿ ಸಂಗ್ರಹಿಸುತ್ತಾನೆ.

ಅಮೇರಿಕದಲ್ಲಿರುವ ಮಗ ಹೂವಿನ ಎಕ್ಸ್‌ಪೋರ್ಟ್ ಇಂಪೋರ್ಟ್ ವ್ಯವಹಾರ ಆರಂಭಿಸುತ್ತಾನೆ.

ಎರಡನೇ ದಿನವೂ ಗಿನ್ನೆಸ್ ದಾಖಲೆಯವರು ಬರದಿದ್ದುದರಿಂದ ಹೂವಿನ ವಾಸನೆ ಹೆಚ್ಚಾಗಿದ್ದುದರಿಂದ ಮನೆಯವರು ನಿದ್ರೆಯಿಲ್ಲದೆ ರಾತ್ರಿ ಕಳೆಯುತ್ತಾರೆ. ಹೆಂಡತಿಗೀಗ ಅದು ಗೊಬ್ಬರದ ವಾಸನೆ ಎನಿಸುತ್ತದೆ. ಮರುದಿನ ಹೆಂಡತಿ ಹೂವನ್ನೆಲ್ಲಾ ಗೊಬ್ಬರವಾಗಿ ಹೂವಿನ ತೋಟಕ್ಕೆ ಹಾಕುತ್ತಾಳೆ, ಹಣ್ಣಿನ ಗಿಡಗಳಿಗೆ ಹಾಕಿಸುತ್ತಾಳೆ. ಮರುದಿನ ರಾಮಲಿಂಗಪ್ಪನವರಿಗೆ ಪುಷ್ಪೋದ್ಯಮ ಖಾತೆಯ ಬದಲು ಗೊಬ್ಬರ ಖಾತೆ ನೀಡಲಾಗುತ್ತದೆ.

ಕೆ.ಟಿ.ಗಟ್ಟಿಯವರು ಈ ನಾಟಕದ ಮೂಲಕ ತಿಳಿಹಾಸ್ಯದೊಂದಿಗೆ ರಾಜಕೀಯ ಸ್ಥಿತ್ಯಂತರಗಳನ್ನು ತಿಳಿಸುತ್ತಾರೆ. ನಮ್ಮ ರಾಜಕೀಯ ವ್ಯವಸ್ಥೆಯನ್ನು ವಿಡಂಬಿಸುತ್ತಾರೆ. ಒಂದು ಸಾಮಾನ್ಯ ಮಂತ್ರಿಯೂ ತನಗೆ ಲಾಭ ತರುವ ಖಾತೆ ಯಾವುದು ಎಂದು ಯೋಚಿಸುತ್ತಾನೆ. ತನ್ನ ಸ್ವಹಿತ ಚಿಂತನೆಯೇ ಆತನಿಗೆ ಮುಖ್ಯವಾಗುತ್ತದೆ. ಪುಷ್ಪೋದ್ಯಮ ಮಂತ್ರಿಯಾಗಿ ನೇಮಕಗೊಳ್ಳುವ ರಾಮಲಿಂಗಪ್ಪ ಮತ್ತು ಹಿರಿಯ ಅಧಿಕಾರಿ ನಾಗರಾಜ ಹೂವುಗಳನ್ನು ವಿದೇಶಗಳಿಗೆ ರಫ್ತು ಮಾಡುವುದರ ಮೂಲಕ ಸರಕಾರದ ಹಣವನ್ನು ದೋಚುವ ಸಂಚು ನಡೆಸುತ್ತಾರೆ. ಇದು ರಾಜಕೀಯ ಮತ್ತು ಆಡಳಿತ ವ್ಯವಸ್ಥೆಯ ಲೋಪದೋಷಗಳನ್ನು ಎತ್ತಿ ತೋರಿಸುತ್ತದೆ.

## ೬.೯: ಏಕೋ ಉಪಾಧ್ಯಾಯ

ಇದು 1998ರಲ್ಲಿ ಪ್ರಕಟಗೊಂಡ ಕೆ.ಟಿ.ಗಟ್ಟಿಯವರ ನಾಟಕ. ಇಂದು ಶಾಲೆಗಳಲ್ಲಿ ನಡೆಯುತ್ತಿರುವ ಅವ್ಯವಹಾರವನ್ನು ನಾಟಕ ಬಯಲು ಮಾಡುತ್ತದೆ. ಶಾಲೆಯ ದಾರಿ ಹುಡುಕುತ್ತಾ ಬಂದ ಸ್ಕೂಲ್ ಇನ್ಸ್‌ಪೆಕ್ಟರಿಗೆ ಆ ಶಾಲೆಯ ರಂಗ ಮೇಷ್ಟ್ರು ಹಾಗೂ ಅವರು ಪಾಠ ಮಾಡುತ್ತಿದ್ದ ಬಗ್ಗೆ ಮರ ಕಡಿಯುವವನ ಮಗನಿಂದ ತಿಳಿಯುತ್ತದೆ. ಮೇಷ್ಟ್ರು ಹಗಲು ಹೊತ್ತಿನಲ್ಲಿ ಶಾಲೆಗೆ ಬರದೆ ರಾತ್ರಿ ಶಾಲೆಗೆ ಹೋಗಿ ಪಾಠ ಮಾಡುತ್ತಿದ್ದರು. ಶಾಲೆಗೆ ಹೋದ ಇನ್ಸ್‌ಪೆಕ್ಟರ್‌ಗೆ ಮಕ್ಕಳ ಲೀಡರ್ ಹಾಜರಿ ಕರೆಯುತ್ತಿದ್ದುದು ಕಾಣುತ್ತದೆ. ಹಗಲು ಮೇಷ್ಟ್ರಿಗೆ ರಜಾ ಎಂಬ ಉತ್ತರ ಮಕ್ಕಳಿಂದ ಬರುತ್ತದೆ. ಅಲ್ಲಿ ಒಂದರಿಂದ ನಾಲ್ಕನೇ ತರಗತಿಯವರೆಗೆ ಒಂದೇ ಪಾಠ ಮಾಡಲಾಗುತ್ತದೆ ಎಂಬ ಉತ್ತರವೂ ಬರುತ್ತದೆ. ಅದೂ ಲೆಕ್ಕ ಮಾತ್ರ ಕಲಿಸುತ್ತಾರೆ. ಎಜುಕೇಶನ್ ಆಫೀಸ್‌ನ ಗುಮಾಸ್ತ ವಿಠಲನೊಂದಿಗೆ ಈ ಬಗ್ಗೆ ವಿಚಾರಿಸಿದಾಗ ಎರಡು ತಿಂಗಳ ಹಿಂದೆ ಸಂಬಳದ ಬಿಲ್ಲು

ತೆಗೆದುಕೊಂಡು ಹೋಗಿರುವ ವಿಚಾರ ತಿಳಿಯುತ್ತದೆ. ವಾಸ್ತವದಲ್ಲಿ ಪಾಂಡುರಂಗ ಮೇಷ್ಟ್ರು ತೀರಿಕೊಂಡಿದ್ದರು. ಮೇಷ್ಟ್ರ ಹೆಂಡತಿ ಗ್ರಾಚ್ಯುಟಿ, ಪಿ.ಎಫ್. ಬಗ್ಗೆ ಆಫೀಸಿಗೆ ವಿಚಾರಿಸಲು ಬಂದಾಗ ಗುಮಾಸ್ತ ವಿಠಲ ಹಾರಿಕೆಯ ಉತ್ತರ ನೀಡುತ್ತಾ ಆಕೆಯನ್ನು ಸಾಗ ಹಾಕಲು ನೋಡುತ್ತಾನೆ. ಆ ಸಮಯಕ್ಕೆ ಅಲ್ಲಿಗೆ ಇನ್ಸ್‌ಪೆಕ್ಟರು ಬರುತ್ತಾರೆ. ವಿಷಯ ಅವರಿಗೂ ತಿಳಿಯುತ್ತದೆ. ತನಿಖೆಗಾಗಿ ಎ.ಇ.ಒ. ಗುಮಾಸ್ತ ವಿಠಲನೊಂದಿಗೆ ರಾತ್ರಿ ಆ ಶಾಲೆಗೆ ತೆರಳುತ್ತಾರೆ. ಗುಮಾಸ್ತ ಕುಶಲನನ್ನು ಜೊತೆ ಕರೆದೊಯ್ಯುತ್ತಾರೆ. ಅದಾಗಲೇ ಶಾಲೆಯಲ್ಲಿ ಪಾಂಡು ಅಥವಾ ರಂಗ ಮೇಷ್ಟ್ರು ಸತ್ತ ಸುದ್ದಿ ಹಬ್ಬಿರುತ್ತದೆ. ಅದನ್ನು ರಂಗ ಮೇಷ್ಟ್ರೇ ಹೇಳಿರುವುದೆಂದು ಮಕ್ಕಳು ಹೇಳುತ್ತಾರೆ. ತೀರಿಕೊಂಡ ಮೇಷ್ಟ್ರ ಹೆಸರಿನಲ್ಲಿ ಹಣ ಪಡೆಯುತ್ತಿದ್ದ ಗುಮಾಸ್ತನ ಬಣ್ಣ ಬಯಲಾಗುತ್ತದೆ.

ನಮ್ಮ ಶಿಕ್ಷಣ ವ್ಯವಸ್ಥೆ ಮತ್ತು ಅಧಿಕಾರಶಾಹಿಗಳ ಭ್ರಷ್ಟಾಚಾರವನ್ನು ನಾಟಕ ವಿಡಂಬಿಸುತ್ತದೆ. ಕೂಲಿಕಾರನೊಬ್ಬನ ಮಕ್ಕಳಿಬ್ಬರು ಒಂದೇ ಚಡ್ಡಿಯನ್ನು ಬೇರೆ ಬೇರೆ ಸಮಯದಲ್ಲಿ ಧರಿಸಿಕೊಂಡು ಶಾಲೆಗೆ ಹೋಗಬೇಕಾಗಿರುವ ಅನಿವಾರ್ಯತೆಯನ್ನು ಹೇಳುತ್ತಾ ನಾಟಕ ಹಳ್ಳಿಯ ಮಕ್ಕಳ ಸ್ಥಿತಿಗತಿಯನ್ನು ತಿಳಿಸುತ್ತಲೇ ಶಿಕ್ಷಣ ಇಲಾಖೆ ಈ ನಿಟ್ಟಿನಲ್ಲೂ ಕೆಲಸ ಮಾಡಬೇಕಾದ ಅನಿವಾರ್ಯತೆಯನ್ನು ಸಾರಿ ಹೇಳುತ್ತದೆ.

## ೬.೧೦: ಟಿಕೇಟು ಸಿಕ್ಕಿತು

ಕೆ.ಟಿ.ಗಟ್ಟಿಯವರ ಟಿಕೇಟು ಸಿಕ್ಕಿತು ನಾಟಕವು 1999ರಲ್ಲಿ ಪ್ರಕಟಗೊಂಡಿತು. ಹಾಸ್ಯ ಸಂಘದ ಸಭೆ ಏರ್ಪಾಡಾಗಿರುತ್ತದೆ. ಅಲ್ಲಿ ಸದಸ್ಯರ ಸಂಖ್ಯೆ ಇತ್ತೀಚೆಗೆ ಇಳಿಮುಖವಾಗುತ್ತಿರುವುದು ಅವರಲ್ಲಿ ಆತಂಕ ಮೂಡಿಸಿದೆ. ಅವರು ಹೇಳುವ ಹಾಸ್ಯದಲ್ಲಿ ಸರ್ಕಾರಿ ಅಧಿಕಾರಿಯ ಮಿದುಳು ಉಪಯೋಗಾನೇ ಆಗಿಲ್ಲದಿರುವುದು, ತನ್ನನ್ನು ಪ್ರೀತಿಸುತ್ತಿಲ್ಲ ಎಂದು ಮನೋವೈದ್ಯ ಚುಂಬಿಸುವುದು ಇತ್ಯಾದಿ ಹಾಸ್ಯಗಳಿರುತ್ತವೆ. ಯಾರೂ ನಗದಿರುವಾಗ 'ನಗೆ ಚಿಲುಮೆ' ಎಂಬ ಹೆಸರಿನಲ್ಲಿ ಸಂಘಕ್ಕೆ ಮರು ನಾಮಕರಣ ಮಾಡಲಾಗುತ್ತದೆ. ಅದರ ಉದ್ಘಾಟನೆಗಾಗಿ ಪದಚ್ಯುತ ಮುಖ್ಯ ಮಂತ್ರಿ ದೇವೇಂದ್ರನವರನ್ನು ಕರೆಯಲಾಗುತ್ತದೆ.

ಸಭೆಯಲ್ಲಿದ್ದ ಓಂಕಾರೇಶ್ವರ ಓತಿಹಳ್ಳಿಗೆ ನಗುತ್ತಾ ನಗುತ್ತಾ ಹೃದಯ ಸ್ತಂಭನ ಆಗುತ್ತದೆ. ಡಾಕ್ಟರು ಅವರಿಗೆ ಶಾಕ್ ಉಂಟಾಗುವ ಸುದ್ದಿಯನ್ನು ಕಿವಿಯಲ್ಲಿ ತಿಳಿಸಲು ಹೇಳುತ್ತಾರೆ. ಕಲ್ಲಬ್ಬೆ ನಿಮ್ಗೆ ಇಲೆಕ್ಷನ್ ಟಿಕೆಟ್ ಸಿಕ್ಕಿದೆ ಎಂಬ ಸುದ್ದಿ ಹೇಳಿದೊಡನೆ

ತಟ್ಟನೆದ್ದು ಕುಳಿತುಕೊಳ್ಳುತ್ತಾನೆ. ಇದು ಸುಳ್ಳು ಎಂದು ಗೊತ್ತಾದಾಗ ಮತ್ತೆ ಶಾಶ್ವತವಾಗಿ ಕುಸಿದು ಬೀಳುತ್ತಾನೆ.

ಮನೆಗೆ ಹೆಣ ತಂದಾಗ ಹೆಂಡತಿಯು ತನ್ನ ಗಂಡ ಮಂತ್ರಿಯಾಗುವ ಕನಸು ನಾಶವಾಯಿತಲ್ಲಾ ಎಂದು ಅಳುತ್ತಾಳೆ. ಮಗನಿಗೆ ತಂದೆಯ ಬ್ಯಾಂಕ್ ಅಕೌಂಟ್ಸ್, ಡಿಪೋಸಿಟ್, ಶೇರ್‌ಗಳ ಬಗ್ಗೆ ಚಿಂತೆ. ಸದಸ್ಯರೆಲ್ಲರೂ ಹೆಣದ ಎದುರು ದುಃಖದಿಂದ ಅವರ ನೆನಪು ಮಾಡಿಕೊಳ್ಳುತ್ತಾರೆ. ಅದೇ ಸಂದರ್ಭದಲ್ಲಿ ಮಗನಿಗೆ ದೆಹಲಿಯಿಂದ ಫೋನ್ ಬರುತ್ತದೆ. ಆತ ಅಪ್ಪನಿಗೆ ಟಿಕೆಟ್ ಸಿಕ್ಕಿದೆ ಎಂಬ ವಿಚಾರ ತಿಳಿಸುತ್ತಾನೆ. ಆಗ ಸತ್ತು ಹೋಗಿದ್ದ ಓಂಕಾರೇಶ್ವರ ತಟ್ಟನೆ ಎದ್ದು ಕುಳಿತುಕೊಳ್ಳುತ್ತಾನೆ. ಫೋನನ್ನು ಆಲಿಸಿದ ಆತ ಸಂತೋಷಗೊಳ್ಳುತ್ತಾನೆ. ಎದ್ದು ಹಾರುತ್ತಾನೆ.

ನಾಟಕದಲ್ಲಿ ರಾಜಕೀಯದ ವಿಡಂಬನೆಯಿದೆ. ನಾಟಕದಲ್ಲಿರುವ ಪಾತ್ರಗಳ ಹೆಸರಿನಲ್ಲೇ ಹಾಸ್ಯವಿದೆ. ರಾಜಕೀಯ ಕ್ಷೇತ್ರದಲ್ಲಿ ರಾಜಕಾರಣಿ ಸತ್ತಿದ್ದರೂ ಟಿಕೆಟ್ ಸಿಕ್ಕಿದರೆ ಎದ್ದು ಬರುತ್ತಾನೆ ಎಂದು ಹೇಳುವುದರ ಮೂಲಕ ನಾಟಕಕಾರರು ರಾಜಕಾರಣಿಗಳ ಮನಃಸ್ಥಿತಿಯನ್ನು ಬಯಲಿಗೆಳೆಯುತ್ತಾರೆ.

## ೬.೧೧: ಒಂದು ಗೋವಿನ ಕಥೆ

ಕೆ.ಟಿ.ಗಟ್ಟಿಯವರ ಒಂದು ಗೋವಿನ ಕಥೆ ನಾಟಕವು 1993ರಲ್ಲಿ ಪ್ರಕಟವಾಯಿತು. ಗೋಪಮ್ಮ ಹಸುವನ್ನು ಕೊಂಡುಕೊಳ್ಳುತ್ತಾಳೆ. ಆದರೆ ಮನೆಯಲ್ಲಿ ಮಕ್ಕಳು ಯಾರೂ ಅದರ ಹಾಲು ಕುಡಿಯುವುದಿಲ್ಲ. "ಈ ಊರಿನ ಜನ ಹಾಲು ಕುಡಿಯೋಲ್ಲ. ಬೀರು ಕುಡೀತಾರೆ, ಸೇಂದಿ ಕುಡೀತಾರೆ. ಒಂದ್ವೇಳೆ ಆ ದುಬಾರಿ ಡಬ್ಬದ ಹಾಲಿನ್ಪುಡಿನಾದ್ರು ತಂದಾರು, ಇಷ್ಟೊಳ್ಳೇ ಹಸುವಿನ ಹಾಲು ಬೇಡ. ಈ ಜನ್ರನ್ನ ನಂಬಿ ಹಸು ಕೊಂಡ್ಕೊಂಡಾಯ್ತು. ಈಗ ಬ್ಯಾಂಕಿನ ಸಾಲ ತುಂಬೋದು ಹ್ಯಾಗೆ ಅಂತ ಚಿಂತೆ ಆಗಿದೆ" ಎಂಬ ಚಿಂತೆ ಆಕೆಗೆ.

**(ಒಂದು ಗೋವಿನ ಕಥೆ, ಪುಟ 55)**

ಹಾಗಾಗಿ ಅವರು ಅದನ್ನು ಮಾರಾಟ ಮಾಡಲು ಯೋಚಿಸುತ್ತಾರೆ. ಗಂಗಯ್ಯ ಆನಂದರಾಯನಿಗೆ ಎರಡು ಸಾವಿರ ರೂಪಾಯಿಗೆ ಹಸುವನ್ನು ಮಾರಾಟ ಮಾಡುತ್ತಾನೆ. ಆದರೆ ಒಂದು ಸಾವಿರ ನೀಡಿ; ಒಂದು ತಿಂಗಳ ಬಳಿಕ ಒಂದು ಸಾವಿರ ಕೊಡಲು ಹಾಗೂ ದಿನಕ್ಕೆರಡು ಲೀಟರ್ ಹಾಲು ಕೊಡುವ ಒಪ್ಪಂದ ನಡೆಯುತ್ತದೆ. ಆದರೆ ನಂತರ

ಕೆಲವು ದಿನಗಳಲ್ಲಿ ಆನಂದರಾಯರಿಗೂ ಅವರ ಪತ್ನಿ ಸುನಂದನಿಗೂ ಜಗಳ ನಡೆಯುತ್ತದೆ. ಅವರಿಬ್ಬರೂ ಬೇರೆ ಬೇರೆಯಾಗಿ ಬಂದು ಒಂದೊಂದು ಸಾವಿರ ನೀಡಿ ತಮಗೆ ಹಸು ನೀಡಬೇಕೆಂದು ಕೇಳಿಕೊಳ್ಳುತ್ತಾರೆ. ಇಬ್ಬರೂ ಗಂಗಯ್ಯನ ಕೈಗೆ ಒಂದೊಂದು ಸಾವಿರ ನೀಡಿ, ಒಂದೇ ಹೊತ್ತಿನಲ್ಲಿ ಹಸುವಿನ ಕೊರಳಿನ ಸುತ್ತ ಕುಣಿಕೆ ಹಾಕುತ್ತಾರೆ. ಇಬ್ಬರೂ ಆಕಡೆ ಈಕಡೆ ಎಳೆಯ ತೊಡಗುತ್ತಾರೆ. ಅಲ್ಲಿಗೆ ಬಂದ ಲಾಯರ್‌ನೊಂದಿಗೆ ತಾವು ಗಂಡ ಹೆಂಡತಿ ಅಲ್ಲ ಡೈವೋರ್ಸ್‌ಗೆ ಅಪ್ಲಿಕೇಶನ್ ಹಾಕಿದ್ದೇವೆ ಎನ್ನುತ್ತಾರೆ. ಅಲ್ಲಿಗೆ ಪೋಲೀಸರು ಆಗಮಿಸುತ್ತಾರೆ. ಹಸುವನ್ನು ಪೋಲೀಸ್ ಸ್ಟೇಷನ್‌ಗೆ ಒಯ್ಯುತ್ತಾರೆ. ಇವರಿಬ್ಬರ ಈ ಕಲಹ ಅವರನ್ನು ಕೋರ್ಟಿನ ಮೆಟ್ಟಿಲೇರಿಸುತ್ತದೆ. ವಾದಗಳು ನಡೆದು ತೀರ್ಪು ಹೊರಬರುವವರೆಗೂ ಹಸುವಿಗೆ ನ್ಯಾಯಾಂಗ ಬಂಧನ ವಿಧಿಸಲಾಗುತ್ತದೆ.

ನ್ಯಾಯಾಧೀಶರ ಮನೆಯಲ್ಲಿ ಹಾಲಿನ ಹೊಳೆಯೇ ಹರಿಯಲಾರಂಭಿಸುತ್ತದೆ. ಹಸುವನ್ನು ನ್ಯಾಯಾಂಗ ಬಂಧನದಲ್ಲಿರಿಸಿದ ಎರಡು ತಿಂಗಳಿನಿಂದ ಅವರ ಮನೆಯಲ್ಲಿ ಹಾಲು ಮೊಸರು ಬೆಣ್ಣೆ ತುಂಬಿ ಹೋಗಿದೆ. ಎಂಟು ತಿಂಗಳಾದ್ರು ಕೇಸು ತೀರ್ಮಾನವಾಗಲಿಲ್ಲ. ಲಾಯರು ಆನಂದರಾಯರೊಂದಿಗೆ ಹಸು ಇಲ್ಲಿಯವರೆಗೆ ನೀಡಿದ ಹಾಲಿನ ಬೆಲೆ ಮೂವತ್ತಾರು ಸಾವಿರ ರೂಪಾಯಿ ಜಡ್ಜರ ಮನೇಲಿ ಹರೀತು ಎಂಬ ಸತ್ಯವನ್ನು ತಿಳಿಸುತ್ತಾನೆ. ಗಂಡ ಹೆಂಡತಿ ಇಬ್ಬರೂ ಒಂದಾಗಿ ಬದುಕುವ ತೀರ್ಮಾನಕ್ಕೆ ಬರುತ್ತಾರೆ. ಹಾಗಾಗಿ ಹಸು ಸುಲಭವಾಗಿ ಅವರಿಗೆ ಸಿಗುತ್ತದೆ. ಆದರೆ ಕೋರ್ಟಿನಲ್ಲಿರಿಸಿದ ಒಂದು ಸಾವಿರ ರೂಪಾಯಿ ಹಸುವಿಗೆ ಹುಲ್ಲು ಹಾಕಿದ ಖರ್ಚಿಗಾಗಿ ಕೋರ್ಟು ವಶಪಡಿಸಿಕೊಳ್ಳುತ್ತದೆ.

ಒಂದು ಮನೆಯೊಳಗಿನ ಜಗಳ ಮತ್ತು ನ್ಯಾಯದಾನದ ವಿಳಂಬದಿಂದಾಗಿ ಮನುಷ್ಯರ ಕೈಯಲ್ಲಿ ಸೊರಗುವ ಮುಗ್ಧ ಹಸುವಿನ ಕಥೆಯನ್ನು ಹೇಳುವ ಈ ನಾಟಕದಲ್ಲಿ ವಿಡಂಬನೆ, ಮಾನವೀಯ ಅಂತಃಕರಣದ ಎಳೆ ಇರುವುದನ್ನು ಕಾಣಬಹುದು. ಮುಗ್ಧ ಹಸುವಿನ ಕತೆ ಬಡ ಮಾನವನ ವ್ಯಥೆಯೂ ಆಗಿದೆ.

### ೬.೧೨: ಮಾಯಾಮೃಗ

1994ರಲ್ಲಿ ರಚನೆಗೊಂಡ ಮಾಯಾಮೃಗ ಕೆ.ಟಿ.ಗಟ್ಟಿಯವರ ಉತ್ತಮ ನಾಟಕಗಳಲ್ಲಿ ಒಂದು. ನಾಟಕದೊಳಗೆ ಅನೇಕ ಸಂಘರ್ಷಗಳಿವೆ. ಆಧುನಿಕ ಬದುಕಿನ

ಅಂಶಗಳಾದ ವಿಜ್ಞಾನ, ತಂತ್ರಜ್ಞಾನ, ಆಸೆ, ಆಕಾಂಕ್ಷೆಗಳು ವ್ಯಕ್ತಿಯ ಮೇಲೆ ಮಾಯಾಮೃಗದಂತೆ ಸವಾರಿ ಮಾಡುತ್ತವೆ. ಇಂತಹ ದುರಂತಗಳನ್ನು ನಾಟಕಕಾರರು ರಂಗಚಿತ್ರಣದ ಮೂಲಕ ಪರಿಣಾಮಕಾರಿಯಾಗಿ ಬಿಂಬಿಸಿದ್ದಾರೆ. ನಾಟಕವು ಆಧುನಿಕ ಬದುಕು ಮನುಷ್ಯನ ಮೇಲೆ ಉಂಟುಮಾಡುವ ಕೆಟ್ಟ ಪರಿಣಾಮಗಳನ್ನು ವಿರೋಧಿಸುತ್ತದೆ.

ಪ್ರೊಫೆಸರ್ ಆಕಾಶ್ ಭಾರೀಗಾತ್ರದ ಮೃಗವೊಂದನ್ನು ಎಳೆದುಕೊಂಡು ಬರುತ್ತಾನೆ. ಆದರೆ ಅದು ಯಾರಿಗೂ ಕಾಣಿಸಿಕೊಳ್ಳುವುದಿಲ್ಲ. ಅದು ವಿಜ್ಞಾನದ ಸೃಷ್ಟಿ. ಆಕಾಶನಿಗೆ ಸಿಕ್ಕಿದ ವ್ಯಕ್ತಿಯೊಬ್ಬ ತಾನು ಆಸ್ಪತ್ರೆಯಲ್ಲಿ ಮಲಗಿದ್ದಾಗ ತನಗೆ ಗೊತ್ತಿಲ್ಲದೆ ದೇಹದ ಅಂಗಾಂಗಗಳನ್ನು ಕಿತ್ತುಕೊಂಡ ವಿಚಾರ ತಿಳಿಸುತ್ತಾನೆ. ಮೃಗ ವ್ಯಕ್ತಿಯ ದೇಹದೊಳಗೆ ಪ್ರವೇಶಿಸಿ ಬಿಡುತ್ತದೆ. ಆಗ ಆತನಿಗೆ ತಾನು ಕಳೆದುಕೊಂಡಿದ್ದ ಅಂಗಾಂಗಗಳೆಲ್ಲ ಮತ್ತೆ ಸೇರಿಕೊಂಡಂತೆ ಅನ್ನಿಸುತ್ತದೆ. ಆತನಿಗೆ ತಾನು ಯಾರೋ ಆಗಿದ್ದೀನಿ ಅಂತ ಅನಿಸುತ್ತದೆ. ಆತನಿಗೆ ಚಕ್ರಭೂಷಣ್ ಎಂದು ನಾಮಕರಣ ಮಾಡಲಾಗುತ್ತದೆ. ಆತ ರೋಗಿಷ್ಟ ವೃದ್ಧನ ಮಗನೊಂದಿಗೆ ಇಪ್ಪತ್ತೈದು ಲಕ್ಷಕ್ಕೆ ಆತನ ಆಸ್ತಿ ಖರೀದಿಸುವುದಾಗಿ ಹೇಳುತ್ತಾನೆ. ಆತ ಹಣದೊಂದಿಗೆ ಮರಳಿದಾಗ ಮುದುಕ ಆತನ ಹೆಂಡತಿ ಮತ್ತು ಮಗನ ಮಧ್ಯೆ ಹಣ ಹಂಚಿಕೊಳ್ಳುವ ವಿಷಯದಲ್ಲಿ ಚರ್ಚೆ ನಡೆಯುತ್ತಿರುತ್ತದೆ.

ಚಕ್ರಭೂಷಣ್ ತಾನು ಆ ಜಾಗದಲ್ಲಿ ಅತೀ ಚಿಕ್ಕ ಶಕ್ತಿಯುತ ಜನರೇಟರ್ ತಯಾರಿಸುವ ಫ್ಯಾಕ್ಟರಿ ಮಾಡುವುದಾಗಿ ತಿಳಿಸುತ್ತಾನೆ. ಅದಕ್ಕಾಗಿ ಕಾಂಗ್ರೆಬೀಜೆಡಿಮೋಕ್ರಸಿ ಎಂಬ ದ್ರವವನ್ನು ಉಪಯೋಗಿಸುವುದಾಗಿಯೂ ತಿಳಿಸುತ್ತಾನೆ. ಶುದ್ಧೀಕರಿಸಿ ತೆಗೆದ ಕಶ್ಮಲವನ್ನು ಸಮುದ್ರ ಕಿನಾರೆಯಿಂದ ಸುಮಾರು ಸಾವಿರ ಮೀಟರ್ ದೂರದಲ್ಲಿ ನೀರಡಿಯಲ್ಲಿ ಬಿಡಲಾಗುತ್ತದೆ ಎನ್ನುತ್ತಾನೆ. ಆತ ಹೇಳುವಂತೆ ಕತ್ತಿನಿಂದ ಕೆಳಗೆ ನಾನು ಏನೇ ಆಗಿದ್ರೂನೂ ಕತ್ತಿನ ಮೇಲೆ ನಾನು ನಾನೇ. ಯುವಕನ ತಮ್ಮ ಅಜಯ ಅಲ್ಲಿ ಕರಾವಳಿಯಲ್ಲಿ ಫ್ಯಾಕ್ಟರಿ ಮಾಡುವುದಕ್ಕೆ ವಿರೋಧ ವ್ಯಕ್ತ ಪಡಿಸುತ್ತಾನೆ. ಆತನನನ್ನು ಪೋಲೀಸರು ಬಂಧಿಸುತ್ತಾರೆ. ಅಚಲ ಈ ವಿಷಯವನ್ನು ಪ್ರೊಫೆಸರ್ ಆಕಾಶ್‌ಗೆ ತಿಳಿಸುತ್ತಾಳೆ. ಆಗ ಪ್ರೊಫೆಸರ್ "ಪಾಪ ಅವ್ನು ಮನುಷ್ಯ ಒಳ್ಳೆಯವನು, ಅವ್ನಲ್ಲಿ ಸೇರ್ಕೊಂಡಿರೋ ಮೃಗ ಅವ್ನಿಂದ ಈ ರೀತಿ ಮಾಡಿಸ್ತಾ ಇದೆ. ಅದನ್ನು ಉಚ್ಚಾಟಿಸಬೇಕು" ಎನ್ನುತ್ತಾನೆ.
**(ಕೆ.ಟಿ ಗಟ್ಟಿಯವರ ಮೂರು ನಾಟಕಗಳು, 2003, ಪುಟ 128)**

ಚಕ್ರಭೂಷಣ್‌ನ ಒಳಗೆ ಮೃಗ ಸೇರಿರುವ ವಿಷಯವನ್ನು ಲಾಯರ್ ಸಚ್ಚಿದಾನಂದ ಒಪ್ಪುವುದಿಲ್ಲ. ಆಕಾಶ್ ಆ ಮೃಗವನ್ನು ಆತನಿಂದ ಬೇರ್ಪಡಿಸುವ ಔಷಧಿ ಕಂಡು ಹಿಡಿಯುತ್ತಾನೆ. ರಜಕೀಥರಮ್‌ಇಂಡಿನಂ ಎಂದು ಅದರ ಹೆಸರು. ಚಕ್ರಭೂಷಣ್ ಅದನ್ನು ಕುಡಿಯುತ್ತಾನೆ. ಆತನೊಳಗಿದ್ದ ಮೃಗ ಹೊರಟು ಹೋಗುತ್ತದೆ. ಆತ ಹಿಂದಿನ ಮನುಷ್ಯನಾಗುತ್ತಾನೆ ಅನ್ನಿಸುತ್ತದೆ. ಆದರೆ ಆತನ ಮಾತು ಕೇಳಿದ ಆಕಾಶ್ ಮೃಗ ಮತ್ತೆ ಸೇರಿಕೊಂಡಿದೆ ಎನ್ನುತ್ತಾನೆ. ಈ ಮಧ್ಯೆ ಚಕ್ರಭೂಷಣ್ ತನ್ನ ಕಾರ್ಯಗಳ ಬಗ್ಗೆ ಪತ್ರಿಕೆಯಲ್ಲಿ ಬರೆಯುತ್ತಿದ್ದ ಅಜಯನಿಗೆ ಆಕ್ಸಿಡೆಂಟ್ ಮಾಡಿಸಿ ಕೊಲ್ಲಿಸುತ್ತಾನೆ. ಆತನಲ್ಲಿದ್ದ ಮೃಗೀಯ ಭಾವನೆ ಆತನಲ್ಲಿ ಈ ಕೆಲಸ ಮಾಡಿಸುತ್ತದೆ. ಆತನನ್ನು ಮೃಗದಿಂದ ಮುಕ್ತಗೊಳಿಸುವ ಪ್ರಯತ್ನ ಪ್ರೊಫೆಸರ್ ಆಕಾಶ್‌ನಿಂದ ಮತ್ತೆ ನಡೆಯುತ್ತದೆ. ಚಕ್ರಭೂಷಣ್ ಪ್ರೊಫೆಸರ್ ಕೊಟ್ಟ ರಾಸಾಯನಿಕವನ್ನು ಕುಡಿಯುತ್ತಾನೆ. ದೇಹ ಸುಟ್ಟಂತೆ ಅನ್ನಿಸುತ್ತದೆ. ನೀರಿಗಾಗಿ ಬೇಡುತ್ತಾನೆ. ಆ ಕ್ಷಣ ಆತನಿಗೆ ನೀರು ನೀಡಿದರೆ ಆತ ಸಾಯುತ್ತಾನೆ ಎಂಬ ಸತ್ಯ ಗೊತ್ತಿದ್ದರೂ ಅಚಲ ಆತನಿಗೆ ನೀರು ನೀಡುತ್ತಾಳೆ. ಇದರಿಂದಾಗಿ ಚಕ್ರಭೂಷಣ್ ಕೆಳಗೆ ಬಿದ್ದು ಬಿಡುತ್ತಾನೆ. ಆದರೆ ಆತನಲ್ಲಿದ್ದ ಮನುಷ್ಯ ಸಾಯುತ್ತಾನೆಯೇ ಹೊರತು ಮೃಗ ಸಾಯುವುದಿಲ್ಲ. ಆತ ಮೃಗದಂತೆ ನಾಲ್ಕು ಕಾಲಿನಲ್ಲಿ ನಡೆಯುತ್ತಾ ಬಾಯಿ ತೆರೆದುಕೊಂಡು ಪ್ರೊಫೆಸರ್ ಮತ್ತು ಅಚಲಾಳ ಬಳಿಗೆ ಬರುತ್ತಾನೆ. ಚತುರ್ವೇದಿ ಮತ್ತು ಅಚಲಾಳನ್ನೂ ಮನೆಯೊಳಗೆ ಹೋಗಿ ಬಾಗಿಲು ಹಾಕಿಕೊಳ್ಳಲು ಹೇಳಿದ ಪ್ರೊಫೆಸರ್ ಆಕಾಶ್ ಮೃಗವನ್ನು ಬಂಧಿಸುವ ಪ್ರಯತ್ನ ಮಾಡುತ್ತಾನೆ. ಆ ಪ್ರಯತ್ನ ಸಫಲವಾಗದೆ ಮೃಗದ ದಾಳಿಗೆ ತುತ್ತಾಗಿ ಸಾಯುತ್ತಾನೆ. ಮೃಗ ಮನೆಯಿಂದ ಹೊರಗೆ ಹೋಗುತ್ತದೆ.

'ಮಾಯಾಮೃಗ' ನಾಟಕವು ಆಧುನಿಕ ಸಮಾಜದ ಪೊಳ್ಳುತನವನ್ನು ಬಹಿರಂಗ ಪಡಿಸುತ್ತದೆ. ನಾಟಕದೊಳಗೆ ಅನೇಕ ಸಂಘರ್ಷಗಳಿವೆ. ಕಾಲ್ಪನಿಕವಾಗಿ ನಾಟಕದ ಕತೆಯನ್ನು, ಪಾತ್ರಗಳನ್ನು ಹೆಣೆಯುತ್ತಾ ಸಮಕಾಲೀನ ಸಮಾಜದ ಮಾನವೀಯತೆಯ ಪ್ರಶ್ನೆಯನ್ನು ಎತ್ತಲಾಗಿದೆ. ಮನುಷ್ಯನೊಳಗೆ ಒಳ್ಳೆಯ ಅಂಶಗಳೆಲ್ಲ ಖಾಲಿಯಾಗಿ ಮೃಗೀಯ ಅಂಶಗಳು ತುಂಬಿಕೊಳುತ್ತಿರುವುದನ್ನೂ ನಾಟಕ ತಿಳಿಸುತ್ತದೆ.

"ಒಬ್ಬ ಕೃತಿಕಾರನ ರಂಗಪ್ರಜ್ಞೆ ಮತ್ತು ನಿರ್ದೇಶಕನ ಕೃತಿ ಪ್ರಜ್ಞೆ ತುಂಬ ಸೃಷ್ಟಿಶೀಲವಾಗಿ ಬೆರೆತುಕೊಳ್ಳಬಹುದಾದ ನಾಟಕ 'ಮಾಯಾಮೃಗ'. ತುಂಬ ಸಮಕಾಲೀನ ವರ್ತಮಾನದ ಜೀವನ ದುರಂತವನ್ನು ನಾಟಕವಾಗಿಸಿದ ಬಗೆ ಅಂಥ

ಕ್ರಿಯಾಶೀಲತೆಯನ್ನೇ ಬಯಸುತ್ತದೆ. ಮಾನವ ಹಿತ ಸಾಧನೆಯ ವಿಜ್ಞಾನ ಅಸಹಾಯಕ ಸ್ಥಿತಿ ತಲುಪುವುದು, ಪ್ರಗತಿ ಪೂರಕ ತಂತ್ರಜ್ಞಾನ ಮಾರಕವಾಗುವುದು, ಇವುಗಳ ನಡುವಿನಲ್ಲಿ ಮನುಷ್ಯ ಸಂಬಂಧ ವಿಕೃತಗೊಳ್ಳುವುದು ರಂಗದ ಅಭಿವ್ಯಕ್ತಿಗೆ ಹೇಗೆ ಒಂದು ಹದದಲ್ಲಿ ಬೇಕೋ ಆ ಹದದಲ್ಲಿ ಪೋಣಿಸಲ್ಪಟ್ಟಿರುವುದು ಈ ಕೃತಿಯಲ್ಲಿ ಅಡಗಿದ ರಂಗಪ್ರಜ್ಞೆಗೆ ಸಾಕ್ಷಿ. ಹದಿನಾಲ್ಕು ದೃಶ್ಯಗಳ ಪರಸ್ಪರ ಹೊಂದಾಣಿಕೆ ಹೇಗಿದೆ ಎಂದರೆ ನಾಟಕದ ವಸ್ತುವನ್ನು ಎಲ್ಲಿಯೂ ರಂಗದ ಆವರಣದಿಂದ ಹೊರಗಿಡದಂತೆ ದೃಶ್ಯಗಳು ಒಂದನ್ನೊಂದು ಹಿಂಬಾಲಿಸಿವೆ. ಪ್ರಾಚೀನ ವೈಜ್ಞಾನಿಕ ಸಾಹಿತ್ಯ ಕೃತಿಗಳಲ್ಲಿ ತುಸು ಅವಾಸ್ತವಿಕ, ಭ್ರಮಾತ್ಮಕ ಎನ್ನಿಸುವಂಥ ವಿಜ್ಞಾನದ ಶೋಧನೆ ಮತ್ತು ಅದರ ಪರಿಣಾಮ ಈ ಕೃತಿಯಲ್ಲಿ ತನ್ನ ಫ್ಯಾಂಟಸಿಯ ಪೊರೆಯನ್ನು ಕಳಚಿಕೊಂಡು ರಂಗಧ್ವನಿಯಾಗಿ ವಿಶ್ವ ದುರಂತದ ಚಿತ್ರಣವಾಗಿದೆ. ಅಥವಾ ನೋಟಕನಲ್ಲಿ ಸ್ಪಂದನವನ್ನುಂಟು ಮಾಡುವ ರೂಪಕ ಶಕ್ತಿಯನ್ನು ಪಡೆದಿದೆ"

**(ಶ್ರೀಧರ ಎಚ್.ಜಿ(ಸಂ), 2009, ಪುಟ 95)**

ಆಸ್ಪತ್ರೆಯಲ್ಲಿ ವೈದ್ಯರ ದೌರ್ಜನ್ಯಕ್ಕೆ ಒಳಗಾದ ವ್ಯಕ್ತಿ ತನ್ನ ಕಿಡ್ನಿ, ಶ್ವಾಸಕೋಶ ಹೃದಯ ಪಿತ್ತಕೋಶವನ್ನು ಕಳೆದುಕೊಳ್ಳುತ್ತಾನೆ. ಇಂತಹ ವ್ಯಕ್ತಿಯ ಮೆದುಳು ಮಾತ್ರವಿರುವ ಖಾಲಿಯಾದ ದೇಹದೊಳಗೆ ಪ್ರವೇಶಿಸಿದ ಪ್ರಾಣಿ ಅವನ ಅಸ್ತಿತ್ವಕ್ಕೆ ಕಾರಣವಾಗುತ್ತದೆ. ವ್ಯಕ್ತಿಯ ಈ ರೀತಿಯ ಅಸ್ತಿತ್ವ ಅಂದರೆ ಪ್ರವೇಶಿಸಿದ ಮೃಗೀಯ ಭಾವನೆ ಎಂಬ ಅಸ್ತಿತ್ವ ಅದು ಇಡೀ ಒಂದು ಜೀವ ಸಂಸ್ಕೃತಿಯ ನಾಶಕ್ಕೆ ಕಾರಣವಾಗುತ್ತದೆ. ತನ್ನ ಅಸ್ತಿತ್ವಕ್ಕೆ ಕಾರಣರಾದವರ ನಾಶಕ್ಕೂ ಅದು ಕಾರಣವಾಗುತ್ತದೆ. ಹೀಗೆ ವಿಜ್ಞಾನ, ತಂತ್ರಜ್ಞಾನ, ವಾಣಿಜ್ಯೀಕರಣ, ಅತಿ ಆಸೆ ಇವುಗಳೆಲ್ಲ ಬದುಕಿನ ಮೇಲೆ ಸವಾರಿ ಮಾಡಿ ಮಾಯಾ ಮೃಗದ ಕಡೆಗೆ ಓಡುವಂತೆ ಮಾಡುವ ಇಂದಿನ ಸಮಾಜದ ದುರಂತವೇ ನಾಟಕಲ್ಲಿ ತುಂಬಿಕೊಂಡಿದೆ. ಇಲ್ಲಿ ದೇಹ ಮತ್ತು ಮಿದುಳಿನ ಸಂಘರ್ಷವಿದೆ.

ಕೆ.ಟಿ.ಗಟ್ಟಿಯವರು ತಮ್ಮ ಬರಹಗಳ ಮೂಲಕ ವಿಜ್ಞಾನದ ಅಪಾಯಗಳ ಬಗ್ಗೆ ತಿಳಿಸುತ್ತಾರೆ. ವಿಜ್ಞಾನವನ್ನು ಬಳಸಿಕೊಳ್ಳುವ ಮನುಷ್ಯ ಅದರ ಅಪಾಯಗಳ ಬಗ್ಗೆ ಯೋಚಿಸುವುದಿಲ್ಲ. ಮನುಷ್ಯ ಸೃಷ್ಟಿಸಿದ ವಿಜ್ಞಾನ ಮುಂದೊಂದು ದಿನ ಮನುಷ್ಯ ಕುಲವನ್ನೇ ನಾಶಮಾಡಬಲ್ಲದು ಎಂಬ ಸಾಂಕೇತಿಕ ಧ್ವನಿ ನಾಟಕದಲ್ಲಿದೆ. ವಿದ್ಯಾವಂತರು, ಬುದ್ಧಿವಂತರು ಎನಿಸಿಕೊಂಡವರು ಪ್ರಗತಿಯ ನೆಪದಲ್ಲಿ ಪ್ರಕೃತಿಯನ್ನು ಹಾಳು ಮಾಡುತ್ತಿರುವ ಬಗ್ಗೆ ಗಟ್ಟಿಯವರ ವಿರೋಧವಿದೆ.

## ೬.೧೩: ಆಕಾಶ ಕೆಳಗೆ ಬಿತ್ತು

ಕೆ.ಟಿ.ಗಟ್ಟಿಯವರ ಆಕಾಶ ಕೆಳಗೆ ಬಿತ್ತು ರಾಜಕೀಯ ವಿಡಂಬನೆಯ ಕುರಿತಾದ ನಾಟಕ. ಸಾಧನಾ ಸಮಾವೇಶ ಮಾಡುವ ಮಂತ್ರಿಗಳ ನಿಜವಾದ ಮುಖವನ್ನು ನಾಟಕ ಪ್ರಕಟಪಡಿಸುತ್ತದೆ. ಭಾರತೀಯ ಸಂಸ್ಕೃತಿಯಲ್ಲಿ ಹೆಣ್ಣಿನ ಬದುಕಿನ ಕುರಿತು ಚಿಂತನೆ ನಡೆಸುತ್ತದೆ.

ಗರುಡ ಪಂಡಿತ ಬೆಳಗ್ಗೆ ಸೂರ್ಯೋದಯದ ಸಂದರ್ಭದಲ್ಲಿ ಏಳುವ ಮೂಲಕ ನಾಟಕ ಆರಂಭಗೊಳ್ಳುತ್ತದೆ. ರಾಜ್ಯದ ಮುಖ್ಯಮಂತ್ರಿ ಕಾಮದೇವ ಗರುಡ ಪಂಡಿತನ ಮೂಲಕ ಆತನ ಆತ್ಮಚರಿತ್ರೆಯನ್ನು ಬರೆಸಿದ್ದಾನೆ. ಅದರ ಬರವಣಿಗೆಗಾಗಿ ಎರಡು ಸಾವಿರ ರೂಪಾಯಿ ಖರ್ಚಾಗಿದೆ. ಒಂದು ಲಕ್ಷ ಕೊಡುವ ಆಶ್ವಾಸನೆ ಸಿಕ್ಕಿದೆ. ಗಂಡ ಬೇರೆ ಹೆಣ್ಣಿನ ಕೈ ಮುಟ್ಟಿದ ಎಂಬ ಕಾರಣದಿಂದಾಗಿ ಗರುಡ ಪಂಡಿತನ ಹೆಂಡತಿ ತವರು ಮನೆಗೆ ಹೋಗುತ್ತಾಳೆ. ಅಂದಿನಿಂದ ಆತ ಮನೆಯ ಕಾಲಿಂಗ್ ಬೆಲ್ ಕಿತ್ತೆಸೆದು ಒಂದು ಗಂಟೆ ತೂಗುಹಾಕಿದ್ದಾನೆ. ಒಮ್ಮೆ ಕಿರುಬ ಜನಾಂಗದ ಬಗ್ಗೆ ಅಧ್ಯಯನ ಮಾಡಲು ಬಂದ ಕೃಪಾಂಕಳಿಗೆ ತನ್ನ ಮನೆಯಲ್ಲೇ ಉಳಿದು ಕೊಳ್ಳುವಂತೆ ಸೂಚಿಸುತ್ತಾನೆ.

ಮುಖ್ಯ ಮಂತ್ರಿ ಕಾಮದೇವ ತನ್ನ ಸಾಧನಾ ಸಮಾವೇಶಕ್ಕಾಗಿ ಸಾವಿರ ಅಡಿ ಎತ್ತರದ ವೇದಿಕೆ ನಿರ್ಮಿಸುತ್ತಾನೆ. ವಿದೇಶದಿಂದ ಬಂದ ಕೃಪಾಂಕಳನ್ನು ನೋಡುವ ಉದ್ದೇಶದಿಂದ ಗರುಡ ಪಂಡಿತನ ಮನೆಗೆ ಬಂದ ಮುಖ್ಯ ಮಂತ್ರಿ ಕಾಮದೇವ ಗರುಡ ಪಂಡಿತನೊಂಗೆ "ಸರ್ಕಾರಿ ಖಜಾನೆ ತಿಪ್ಪಗೊಂಡನ ಹಳ್ಳಿ ಕೆರೆ ಇದ್ದ ಹಾಗೆ ಒಮ್ಮೆ ಖಾಲಿಯಾಗುತ್ತೆ. ಒಮ್ಮೆ ತುಂಬುತ್ತೆ. ಖಾಲಿ ಮಾಡೋದು ನಮ್ಮ ಕರ್ತವ್ಯ. ತುಂಬೋದು ಪ್ರಜೆಗಳ ಧರ್ಮ" ಎನ್ನುತ್ತಾನೆ.

**(ಗಟ್ಟಿಯವರ ಮೂರು ನಾಟಕಗಳು, 2003, ಪುಟ 73)**

ಕೃಪಾಂಕ ಮುಖ್ಯಮಂತ್ರಿಯ ಸಂದರ್ಶನ ನಡೆಸುತ್ತಾಳೆ. ಆಕೆಯ ಪ್ರಶ್ನೆಗೆ ಮುಖ್ಯಮಂತ್ರಿ ಉತ್ತರಿಸುತ್ತಾ ತನ್ನ ಸಾಧನಾ ಸಮಾವೇಶದಿಂದ ನಿರುದ್ಯೋಗ ಮತ್ತು ಬಡತನ ನಿರ್ಮೂಲನೆ ಆಗಿದೆ. ಇದು ಹತ್ತು ಸಾವಿರ ಜನರಿಗೆ ಆರು ತಿಂಗಳ ರೋಜ್‌ಗಾರ್ ಒದಗಿಸಿದೆ. ವೇದಿಕೆಯನ್ನು ಕಟ್ಟಲು ಮೂರು ತಿಂಗಳು, ಬಿಚ್ಚಲು ಮೂರು ತಿಂಗಳು ಎನ್ನುತ್ತಾನೆ. ಧೈರ್ಯ ಅಂದರೆ ಏನು ಎಂದು ಈ ದೇಶದ ರಾಜಕಾರಣಕ್ಕೆ ತೋರಿಸಿ ಕೊಡುವುದಕ್ಕೆ ಈ ಸಾಧನಾ ಸಮಾವೇಶ. ರಾಜಕಾರಣದ

ಬಗ್ಗೆ ಜನರು ನಾನಾ ರೀತಿಯಲ್ಲಿ ಮಾತನಾಡಿಕೋಳ್ಳುತ್ತಾರೆ. "ಈಗ ಎಮ್ಮೆಲ್ಲೇ ಎಂಪಿಗಳು ವೋಟ್ನಲ್ಲಿ ಗೆದ್ದು ಬಂದ್ರೂ ಮೀಟಿಂಗ್ನಾಗೆ ಒಂದ್ಲಕ್ಷದ ಪಟಾಕಿ ಸುಡ್ತಾರೆ".

(ಅದೇ, ಪುಟ 82)

ಅತೀ ಎತ್ತರದ ವೇದಿಕೆಯಲ್ಲಿ ಮುಖ್ಯ ಮಂತ್ರಿ ಭಾಷಣ ಆರಂಭಿಸುತ್ತಾನೆ. ಭಾಷಣ ಆರಂಭವಾದ ಸ್ವಲ್ಪ ಹೊತ್ತಿನಲ್ಲೇ ವೇದಿಕೆ ಕುಸಿಯುತ್ತದೆ. ಜನ ದಿಕ್ಕಾಪಾಲಾಗಿ ಓಡುತ್ತಾರೆ. ಆಕಾಶ ಕೆಳಗೆ ಬಂತೆಂದು ಮಾತನಾಡಿಕೊಳ್ಳುತ್ತಾರೆ. ಒಂದು ಸಾವಿರ ಜನ ವೇದಿಕೆಯ ಕೆಳಗೆ ಸಿಕ್ಕಿಹಾಕಿಕೊಂಡು ಸಾಯುತ್ತಾರೆ.

ಗರುಡ ಪಂಡಿತ ಕೃಪಾಂಕಳೊಂದಿಗೆ ಪ್ರೀತಿಯ ನಿವೇದನೆ ಮಾಡುತ್ತಾನೆ. ಆದರೆ ಅವಳು ಅದನ್ನು ನಿರಾಕರಿಸುತ್ತಾಳೆ. ಕವಿರಾಜ ತನ್ನ ಮನೆಗೆ ಆಹ್ವಾನಿಸುತ್ತಾನೆ. ಆದರೆ ಕೃಪಾಂಕ ತನ್ನ ದೇಶಕ್ಕೆ ಹೋಗ ಬಯಸುತ್ತಾಳೆ. ಮುಖ್ಯ ಮಂತ್ರಿ ಕಾಮದೇವ ಪಂಡಿತ ಗರುಡರಾಯನ ಮನೆಗೆ ಪೋಲೀಸು ವೇಷದಲ್ಲಿ ಆಟೋದಲ್ಲಿ ಬರುತ್ತಾನೆ. ತನ್ನೊಂದಿಗೆ ಪಿಟೀಲನ್ನು ತೆಗೆದುಕೊಂಡು ಬರುತ್ತಾನೆ. ಪಿಟೀಲು ನುಡಿಸುತ್ತಾನೆ. ಈ ಸಂದರ್ಭದಲ್ಲಿ ಅಲ್ಲಿಗೆ ಬಂದ ಗರುಡರಾಯನ ಪತ್ನಿ ಮೂವರಿಗೂ ಬೈಯುತ್ತಾಳೆ. ಮನೆಮುಂದೆ ಕಟ್ಟಿದ್ದ ಗಂಟೆಯನ್ನು ಕಿತ್ತು ತೆಗೆಯುತ್ತಾಳೆ.

ಈ ನಾಟಕ ಸಮಾಜದಲ್ಲಿನ ಮೌಲ್ಯಗಳ ಕುಸಿತವನ್ನು ಬಿಂಬಿಸುತ್ತದೆ. ಆಕಾಶದೆತ್ತರದ ವೇದಿಕೆಯನ್ನು ನಿರ್ಮಿಸಿ ನೂರು ದಿನದ ಅಧಿಕಾರದ ಸಾಧನಾ ಸಮಾವೇಶ ಮಾಡುವ ಮುಖ್ಯ ಮಂತ್ರಿಯ ರಾಜಕೀಯ ಅಟ್ಟಹಾಸ, ಅರ್ಥರಹಿತ ಸಾಧನೆಗಳ ಘೋಷಣೆ, ಪ್ರಶಸ್ತಿಗಳ ಆಮಿಷ, ಹೀಗೆ ಮೌಲ್ಯಗಳ ಕುಸಿತ ನಾಟಕದುದ್ದಕ್ಕೂ ಕಾಣಿಸಿಕೊಳ್ಳುತ್ತದೆ. "ಬಹುಮುಖೀ ಸಂಸ್ಕೃತಿಯ ಹುಡುಕಾಟದಲ್ಲಿ ಅಡಗಿರುವ ಮಾನವೀಯ ಅಂಶಗಳನ್ನೂ ಗುರುತಿಸಲಾಗದ ಚಿಂತನೆಗಳ ಸೋಗು ನಾಟಕಕ್ಕೆ ವಿಶಿಷ್ಟ ಭಾವಧ್ವನಿಯನ್ನು ನೀಡಿದೆ. ತವರಿಗೆ ಹೋದ ಹೆಂಡತಿ ಶ್ರೀದೇವಿ ತನ್ನ ಮೂವರು ಗಂಡು ಮಕ್ಕಳೊಂದಿಗೆ ಕೊನೆಯ ದೃಶ್ಯದಲ್ಲಿ ಧಾವಿಸಿ ಬಂದು ರಾಜಕೀಯ, ಕಾವ್ಯ, ಪತ್ರಿಕೋದ್ಯಮಗಳನ್ನು ಹುಡುಕಾಟದ ವಿಕೃತ ಮುಖಗಳೆಂಬಂತೆ ಹಂಗಿಸಿ ಹೆಂಡತಿ ತವರಿಗೆ ಹೊರಟಾಗ ಗರುಡರಾಯ ವ್ಯವಸ್ಥೆಗೊಳಿಸಿ ವಿವಿಧ ಸ್ತರದ ಕರೆಗಂಟೆಯನ್ನು ಕಿತ್ತೆಸೆದು ಕೊಡುವ ತೀರ್ಪು ಇಡೀ ನಾಟಕಕ್ಕೆ ಒಂದು ರಂಗಭಾಷ್ಯದ ಎತ್ತರವನ್ನು ನೀಡಿದೆ. ಸೂರ್ಯೋದಯದ ಪ್ರಾರಂಭದ ದೃಶ್ಯ – ಗರುಡರಾಯನ ದೀರ್ಘಭ್ರಾಮಕ

ಅತಿರಂಜಿತ ಸ್ವಾಗತ ಸ್ವಗತ – ಕೊನೆಯ ಶ್ರೀದೇವಿ ಬಾರಿಸುವ ಗಂಟೆಯ ನುಡಿತ – ಒಂದು ರಂಗಶಿಲ್ಪದ ಅಪೂರ್ವ ಅಭಿವ್ಯಕ್ತಿ".

**(ಶ್ರೀಧರ ಎಚ್.ಜಿ(ಸಂ) 2009, ಪುಟ 101)**

## ೬.೧೪: ತ್ರಿಶಂಕು ಮತ್ತು ಇತರರು

ಕೆ.ಟಿ.ಗಟ್ಟಿಯವರ 'ತ್ರಿಶಂಕು ಮತ್ತು ಇತರರು' ನಾಟಕದ ವಸ್ತು ಪುರಾಣದಿಂದ ಎತ್ತಿಕೊಂಡಿರುವುದಾಗಿದೆ. ಪುರಾಣ ಮತ್ತು ವರ್ತಮಾನ ಹಾಗೂ ಮಾನವ ಮತ್ತು ದೇವತೆಗಳನ್ನು ನಾಟಕವು ಅರ್ಥಪೂರ್ಣವಾಗಿ ಸಮೀಕರಿಸುತ್ತದೆ.

ಮಗು ಅಳುವ ಧ್ವನಿ ಹಾಗೂ ಕುಟುಂಬ ಯೋಜನೆಯ ಚಿಹ್ನೆಯನ್ನು ತಲೆ ಕೆಳಗೆ ಮಾಡಿ ಹಾಕುವ ಪ್ರಯತ್ನದೊಂದಿಗೆ ನಾಟಕ ಆರಂಭವಾಗುತ್ತದೆ. ತನಗೆ ಪ್ರಸವ ವೇದನೆ ಕಾಣಿಸಿದೊಡನೆ ವಿಶ್ವಾಮಿತ್ರ ಪಲಾಯನವಾಗಿದ್ದಾನೆ ಎಂದು ಮೇನಕೆ ತನ್ನ ಅಸಮಾಧಾನವನ್ನು ಪ್ರಕಟಪಡಿಸುತ್ತಾಳೆ. "ನಾನು ಪ್ರಸವ ವೇದನೆಯಿಂದ ನರಳ್ತಾ ಇರೋವಾಗ ನೀವು ತಪ್ಪಿಸ್ಕೊಂಡ್ರಿ. ಮಗುವಾಗೋವರೆಗೆ ನಿಮ್ಗೆ ನಾನು ಬೇಕಾಯ್ತು. ಆಮೇಲೆ ನನ್ನನ್ನು ಮತ್ತು ಮಗುವನ್ನು ಸಾಕ್ಬೇಕಾಗುತ್ತೆ ಅಂತ ಭಯವಾಯ್ತು ಅಲ್ಲ? ಕಂಡ ಕಂಡವರೊಡನೆ ಜಗಳಾಡ್ಲಿಕ್ಕೆ ನಿಮಗೆ ಭಯ ಇಲ್ಲ. ಆದ್ರೆ ನಿಮ್ಮ ನೂರಾರು ಹೆಂಡತಿಯರನ್ನು ಮತ್ತು ಸಾವಿರಾರು ಮಕ್ಕಳನ್ನು ಕಂಡ್ರೆ ನಿಮ್ಗೆ ಭಯ ಇಲ್ವ? ನಿಮ್ಮ ತಪಸ್ಸು ಅನ್ನೋದು ಒಂದು ಪಲಾಯನೋಪಾಯ ಅಲ್ವ?" ಎಂದು ಮೇನಕೆ

**(ಗಟ್ಟಿ ಕೆ.ಟಿ., ತ್ರಿಶಂಕು ಮತ್ತು ಇತರರು, 2003, ಪುಟ 24)**

ವಿಶ್ವಾಮಿತ್ರನೊಂದಿಗೆ ಪ್ರಶ್ನಿಸುತ್ತಾಳೆ. ಆಕೆ ವಿಶ್ವಾಮಿತ್ರನೊಂದಿಗೆ ಬದುಕುವ ಇಂಗಿತವನ್ನು ವ್ಯಕ್ತಪಡಿಸುತ್ತಾಳೆ. ಆದರೆ ಆತ ಅದನ್ನು ನಿರಾಕರಿಸುತ್ತಾನೆ. ವಿಶ್ವಾಮಿತ್ರನಿಗೆ ತನಗೆ ಹುಟ್ಟಿದ ಮಗು ಗಂಡೋ ಹೆಣ್ಣೋ ಗೊತ್ತಿಲ್ಲ. ಮೇನಕೆಯಿಂದಾಗಿ ಅದು ಹೆಣ್ಣು ಎಂಬ ಸಂಗತಿ ತಿಳಿಯುತ್ತದೆ. ಹದಿನಾರು ವರ್ಷದವರೆಗೆ ಅದನ್ನು ನೋಡಿಕೊಂಡರೆ ಸಾಕು. ಬಳಿಕ ನೀನು ನೋಡ್ಕೊಂಡ ಹಾಗೆ ತನ್ನನ್ನೇ ತಾನು ನೋಡ್ಕೊಳ್ಳುತ್ತೆ ಎಂಬ ವಿಶ್ವಾಮಿತ್ರನ ಮಾತಿಗೆ ಮೇನಕೆ ಸಿಡಿಮಿಡಿಗೊಳ್ಳುತ್ತಾಳೆ. "ಏನಂದ್ರಿ? ನೀಚ ಪುರುಷವಾದಿ ಮುನಿ ಶಿರೋಮಣಿ! ಇದು ನೀವು ಇಡೀ ಸ್ತ್ರೀ ಜಾತಿಗೆ ಮಾಡುವ ಅವಮಾನ! ಹೆಣ್ಣಿನ ಬದುಕಿನ ಆರಂಭ ಮತ್ತು ಅಂತ್ಯ ಹೀಗೆ ಅಂತ ಸಿದ್ಧಾಂತೀಕರಿಸುವ ನೀವು ಪಾಖಂಡಿಗಳು! ನೀವು ಓದಿರೋ ವೇದ ಶಾಸ್ತ್ರ ನೀವು ಮಾಡಿರೋ ಯಜ್ಞ ತಪಸ್ಸು, ನೀವು ಸಂಪಾದಿಸಿರೋ ಬ್ರಾಹ್ಮಣ್ಯ ಎಲ್ಲಾ ಬರೀ ಮೋಸ! ಇದನ್ನೆಲ್ಲಾ ನೀವು

ಮಾಡೋದು ನಮ್ಮಂಥ ಅಮಾಯಕರನ್ನು ಮರಳು ಮಾಡೋಕೆ! ನಿಮ್ಮನ್ನು ನಂಬಬಾರದು! ನೀವು ಎಷ್ಟು ಹೆಣ್ಣುಗಳನ್ನು ಅನಾಥರನ್ನಾಗಿ ಮಾಡಿದಿರಿ! ಎಷ್ಟು ಮಕ್ಕಳು ನೀವು ಅವರ ಅಪ್ಪ ಅಂತ ತಿಳೀದೆ ದಿಕ್ಕಿಲ್ಲದೆ ಅಲೀತಿದ್ದಾರೆ!" ಎನ್ನುತ್ತಾಳೆ.

**(ಅದೇ, ಪುಟ 26)**

ಮೇನಕಾಳನ್ನು ಹುಡುಕಿಕೊಂಡು ಇಂದ್ರ ಅರಣ್ಯಕ್ಕೆ ಬರುತ್ತಾನೆ ಅಲ್ಲಿ ಸಿಕ್ಕಿದ ವಿಶ್ವಾಮಿತ್ರನೊಂದಿಗೆ ವಿಚಾರಿಸಲು ಆತ ತಾನು ಆಕೆಯನ್ನು ಕಂಡಿಲ್ಲವೆಂದು ಹೇಳುತ್ತಾನೆ. ತಾನು ತ್ರಿಶಂಕುವನ್ನು ಹುಡುಕಿಕೊಂಡು ಬಂದಿರುವುದಾಗಿ ತಿಳಿಸುತ್ತಾನೆ. ಅಲ್ಲಿಗೆ ಬಂದ ಊರ್ವಶಿಯನ್ನು ಸ್ವರ್ಗಕ್ಕೆ ಹೋಗುವಂತೆ ಹೇಳುತ್ತಾನೆ. ತನ್ನ ಮಗುವನ್ನು ಸ್ವರ್ಗಕ್ಕೆ ಒಯ್ಯುವ ಇಚ್ಛೆ ವ್ಯಕ್ತಪಡಿಸುತ್ತಾಳೆ. ಅದಕ್ಕೆ ಇಂದ್ರ "ಮಕ್ಕಳಿಗೆ ಸ್ವರ್ಗದಲ್ಲಿ ಸ್ಥಾನವಿಲ್ಲ ಅಂತ ನಿಂಗೆ ಗೊತ್ತು ಅಲ್ಲಿ ಗರ್ಭ ಇಲ್ಲ. ಪ್ರಸವ ಇಲ್ಲ. ಮಕ್ಕಳು ಇಲ್ಲ. ಆದ್ರಿಂದ್ಲೇ ಅದು ಸ್ವರ್ಗ ಅಂತನ್ನಿರೋದು. ಸ್ವರ್ಗ ವಯಸ್ಕರಿಗೆ ಮಾತ್ರ ಅಂತ ನಿಂಗೆ ಗೊತ್ತಿಲ್ವ?" ಎನ್ನುತ್ತಾನೆ.

**(ಅದೇ, ಪುಟ 31)**

ವಿಶ್ವಾಮಿತ್ರನು ಮಗು ನಿನಗೇ ಸೇರಿದ್ದು ಎನ್ನುತ್ತಾನೆ. ಇದರಿಂದ ಕುಪಿತಳಾದ ಊರ್ವಶಿ ಪುರುಷರ ದಬ್ಬಾಳಿಕೆಯ, ಸ್ತ್ರೀ ಕುಲ ತಿರಸ್ಕಾರದ ಬಗ್ಗೆ ಧ್ವನಿಯೆತ್ತುತ್ತಾಳೆ. "ನಿರ್ದಯ ಪುರುಷರೇ! ನಿಮಗೆ ಮಗು ಬೇಡ! ಮಗು ಹೆಣ್ಣಿಗೆ ಸೇರಿದ್ದು!. ಮಗು ಹೆಣ್ಣಾದರೆ ಬೇಡವೇ ಬೇಡ. ಆದರೆ ಅದೇ ಹೆಣ್ಣಿಗೆ ಹದಿನಾರು ತುಂಬಿದೊಡನೆ ನಿಮ್ಮಂಥವನೊಬ್ಬ ಬರ್ತಾನೆ. ಅಲ್ಲಿಯವರೆಗೆ ನಿಮ್ಗೆ ಬೇಡ! ನನ್ನನ್ನು ನನ್ನ ಪಾಡಿಗೆ ಬಿಡಿ. ನಾನು ಈ ಕಾಡಿನಲ್ಲೇ ನನ್ನ ಮಗುವನ್ನು ಸಾಕಿ ಸಲಹಿ ದೊಡ್ಡವಳನ್ನಾಗಿ ಮಾಡ್ತೇನೆ. ಯಾವ ಪುರುಷನಿಗೂ ಮರುಳಾಗದಂತೆ ಮಾಡ್ತೇನೆ". ಎನ್ನುತ್ತಾಳೆ. ಆದರೆ ಇಂದ್ರ ಆಕೆಯನ್ನು ಎಳೆದೊಯ್ಯುತ್ತಾನೆ ಅಸಹಾಯಕಳಾದ ಮೇನಕೆ "ಅಯ್ಯೋ ಪುರುಷರೆ, ನಿಮ್ಗೆ ಹೃದಯ ಇಲ್ವೆ? ಒಂದು ತಾಯಿಯ ಹೃದಯ ನಿಮ್ಗೆ ಅರ್ಥ ಆಗೋಲ್ವೆ? ನಿಮ್ಮನ್ನು ಹೆತ್ತೋಳು ನನ್ನಂಥ ಹೆಣ್ಣಲ್ವೆ? ಹಸಿ ಬಾಣಂತಿಯಾಗಿರೋ ನನ್ನನ್ನು ಯಾಕೆ ಹೀಗೆ ಎಳ್ಕೊಂಡು ಹೋಗ್ತಿದೀರಿ" ಎಂದು ದುಃಖದಿಂದ ಹೇಳುತ್ತಾಳೆ. ಈ ಮಧ್ಯೆ

**(ಅದೇ, ಪುಟ 32)**

ಮೇನಕೆ ಪಾತ್ರಧಾರಿ ಇಂದ್ರನ ಪಾತ್ರ ಮಾಡಿದವನೊಂದಿಗೆ ಓಡಿಹೋಗುತ್ತಾಳೆ. ಪ್ರೇಕ್ಷಕ ನಾಟಕದ ತಂತ್ರವನ್ನು ಕುತಂತ್ರ ಎಂದು ಕರೆಯುತ್ತಾನೆ. ತ್ರಿಶಂಕುವಿಗೆ ನೇತುಹಾಕಿದ ತ್ರಿಕೋಣಾಕೃತಿಯನ್ನು ಕಂಡು ಸಿಟ್ಟುಬರುತ್ತದೆ. ಆತ ವಿಶ್ವಾಮಿತ್ರನ ಪತ್ನಿಯರಿಗೆ ಅವರನ್ನು ಭೇಟಿ ಮಾಡಿಸಲು ಹುಡುಕುತ್ತಿರುತ್ತಾನೆ. ಆದರೆ ವಿಶ್ವಾಮಿತ್ರನು ಸ್ವರ್ಗದಲ್ಲಿ ವಸಿಷ್ಠರೊಡನೆ

ಜಗಳವಾಡುತ್ತಿರುತ್ತಾನೆ. ಹರಿಶ್ಚಂದ್ರ ಎಲ್ಲವನ್ನು ಕಳಕೊಳ್ಳುವಂತೆ ಮಾಡುತ್ತಾನೆ. "ಕೊಲ್ಲಲು ಬಂದವನನ್ನು ರಕ್ಷಿಸಬೇಕು! ಗುರುವಿನ ಹಾದರವನ್ನು ಶಿಷ್ಯ ಮುಚ್ಚಬೇಕು. ಮುಚ್ಚಲು ಸಾಧ್ಯವಾಗದಿದ್ದರೆ ಮೆಚ್ಚಬೇಕು" ಎಂಬುದನ್ನು ಸೂತ್ರಧಾರ ಪರಧರ್ಮ ಎನ್ನುತ್ತಾನೆ.

**(ಅದೇ, ಪುಟ 46)**

ಮಗುವನ್ನು ಸಾಕಲಿರುವ ಕಣ್ವ ಮಹರ್ಷಿಗಳ ಆಗಮನದ ನಿರೀಕ್ಷೆಯಲ್ಲಿರುವಾಗ ಅಲ್ಲಿಗೆ ಬೃಹಸ್ಪತಿ ಮತ್ತು ಗರ್ಭಿಣಿಯಾದ ಉಚಥ್ಯಮುನಿಯ ಹೆಂಡತಿ ಮಮತ ಬರುತ್ತಾರೆ. ಅವರೂ ತಮ್ಮ ಮಗುವನ್ನು ಕಣ್ವನಿಗೆ ಕೊಡುವ ಆತುರದಲ್ಲಿದ್ದಾರೆ. ಸೂತ್ರಧಾರ ಅವರನ್ನು ಓಡಿಸುತ್ತಾನೆ. ಕಣ್ವ ಬರುವುದಿಲ್ಲ. ಸೂತ್ರಧಾರ ಮೂವರು ಪ್ರೇಕ್ಷಕರೊಂದಿಗೆ, ನೆರೆದಿರುವವರೊಂದಿಗೆ ಮಗುವನ್ನು ತಗೊಳ್ತೀರಾ ಎಂದು ಕೇಳುತ್ತಾನೆ. ಆ ಹೆಣ್ಣು ಮಗುವನ್ನು ಯಾರೂ ತೆಗೆದುಕೊಳ್ಳಬಯಸುವುದಿಲ್ಲ. ಆಗ ಸೂತ್ರಧಾರ "ಎಲ್ಲರದೂ ಇಷ್ಟೆ. ಪ್ರೀತಿ ಇಲ್ಲ. ಪ್ರೀತಿಯ ನಟನೆ ಮಾತ್ರ. ನಾಟಕದ ಒಳಗೆ ನಾಟಕವು ಇಲ್ಲ. ನಿಜದ ಒಳಗೆ ನಿಜವೂ ಇಲ್ಲ. ಎಲ್ಲಾ ನಮ್ಮಂಥವರನ್ನ ಮೋಸದ ಸುಳಿಗೆ ತಳ್ಳುವ ಆಟ! ಈಗ ಕಣ್ವರು ಬಂದರೆ ಮಾತ್ರ ಈ ಸುಳಿಯಿಂದ ಹೊರಬರಲು ಸಾಧ್ಯ. ಕಣ್ವರ್ಷಿ.... ಕಣ್ವರ್ಷಿ..... ಚೆಂಡೆ ಬಾರಿಸಿ ! ಕಣ್ವರ್ಷಿ ಬರಲಿ" ಎನ್ನುತ್ತಾನೆ.

**(ಅದೇ ಪುಟ 50)**

ಜಿ.ಎನ್. ರಂಗನಾಥ ರಾವ್ ನಾಟಕಕ್ಕೆ ಮುನ್ನುಡಿಯನ್ನು ಬರೆಯುತ್ತಾ ನಾಟಕದ ವಿವಿಧ ಕ್ರಿಯೆಗಳ ಬಗ್ಗೆ ತಮ್ಮ ವಿಚಾರಗಳನ್ನು ತಿಳಿಸಿದ್ದಾರೆ. "ತ್ರಿಕೋನವನ್ನು ತಲೆ ಕೆಳಗಾಗಿ ನಿಲ್ಲಿಸುವ, ಮೇಲ್ಮುಖವಾಗಿ ನಿಲ್ಲಿಸುವುದರ ಹಿಂದಿನ ತ್ರಿಶಂಕು ಸ್ಥಿತಿ ಅಥವಾ ಅಧಃಪತನದ ಸಂಕೇತಾರ್ಥದೊಂದಿಗೆ ನಾಟಕ ಒಂದಕ್ಕಿಂತ ಹೆಚ್ಚಿನ ಆಯಾಮವನ್ನು ಪಡೆದುಕೊಳ್ಳುತ್ತದೆ. ಸ್ವರ್ಗ, ತ್ರಿಶಂಕು ಸ್ಥಿತಿ ಮತ್ತು ಭೂಮಿ ಒಳಗೊಂಡಂತೆ ನಾಟಕದ ಮೂಲ ಆಶಯ ದೇವತೆ–ಮಾನವ ಉಭಯತ್ತರ ಕ್ರಿಯೆಗಳಿಗೂ ಮೀಟುಗೋಲಾಗುವ ಅಹಂ ಮತ್ತು ಸ್ವಾರ್ಥ ಕಾಮನೆಗಳೇ ಎಂದು ಬೆರಳು ಮಾಡಿ ಹೇಳುವುದೇ ಆದರೂ ಒಂದೊಂದು ಪಾತ್ರದ ಮಾತಿನಲ್ಲಿ ಅದು ಬೇರೆ ಧ್ವನಿಗಳನ್ನು ಪಡೆದುಕೊಳ್ಳುತ್ತದೆ. ವಿಶ್ವಾಮಿತ್ರ, ತ್ರಿಶಂಕು, ಇಂದ್ರನ ಮಾತುಗಳು ಅವರ ಪೌರಾಣಿಕ ಹಾಗೂ ದೈವಿಕ ವ್ಯಕ್ತಿತ್ವಕ್ಕನುಗುಣವಾಗಿ ಅರ್ಥಸ್ಫುರಿಸುವುದರ ಜೊತೆಗೆ ಸ್ವಾರ್ಥಕಾಮನೆಗಳು, ಮದ–ಮಾತ್ಸರ್ಯಗಳು ಉದ್ದೀಪನಗೊಂಡಾಗ ದೇವರೇನು–ಮಾನವರೇನು; ಎಂಬಂಥ ವಿಡಂಬನೆಯ ಧ್ವನಿಯನ್ನು ಹೊರಡಿಸುತ್ತದೆ. ಇಂದ್ರ – ವಿಶ್ವಾಮಿತ್ರರ ಸಂಭಾಷಣೆಯಲ್ಲಿ ಇದನ್ನು ಗಮನಿಸಬಹುದು. ವಿಶ್ವಾಮಿತ್ರ ಇಂದ್ರನನ್ನು "ನೀನು ಸುಮ್ಮನೆ ಕಾಡಿಗೆ

ಬರೋನಲ್ಲ. ಹತ್ತಿರದಲ್ಲೇ ಯಾವುದಾದ್ರು ಆಶ್ರಮದಲ್ಲಿ ಸಣ್ಣ ವಯಸ್ಸಿನ ಮುನಿಪತ್ನಿಯರು..." ಎಂದು ಛೇಡಿಸುತ್ತಾನೆ. ಇಂದ್ರನೂ, ವಿಶ್ವಾಮಿತ್ರನಿಗೆ "ನೀವು ಪಂಡಿತರು, ಜ್ಞಾನಿಗಳು, ಸ್ತ್ರೀಯರ ಚಲನವಲನ ವಿಚಾರದಲ್ಲಿ ನಿಮ್ಮ ದೃಷ್ಟಿ ನಮ್ಮ ದೃಷ್ಟಿಗಿಂತಲೂ ಚುರುಕು" ಎಂದು ತಿರುಗೇಟು ಕೊಡುತ್ತಾನೆ. ಸೂತ್ರಧಾರ ಮತ್ತು ತ್ರಿಶಂಕುವಿನ ಮಾತುಗಳಲ್ಲಿ, ಅವರಿಬ್ಬರ ಅಸಹಾಯಕತೆಯಲ್ಲಿ, ಸೂತ್ರಧಾರ ವಸಿಷ್ಠರ ಅಂತರಂಗವನ್ನು ಎಳೆ ಎಳೆಯಾಗಿ ಬಿಡಿಸಿಡುವುದರಲ್ಲಿ ಮೂಲಭೂತವಾದ ವ್ಯಕ್ತಿಗತ ಸ್ವಾರ್ಥಕಾಮನೆಗಳು ಹೇಗೆ ಪರಹಿತವನ್ನು ಬಲಿ ತೆಗೆದುಕೊಳ್ಳುತ್ತವೆ, ಎಂಬ ನಿಷ್ಠುರ ಸತ್ಯ ಢಾಳವಾಗಿ ನಮ್ಮೆದುರು ನಿಲ್ಲುತ್ತದೆ. ವಸಿಷ್ಠ ವಿಶ್ವಾಮಿತ್ರರ ನಡುವಣ ಹಗೆತನ, ವಸಿಷ್ಠ ವಿಶ್ವಾಮಿತ್ರರ ದೃಷ್ಟಿಯುದ್ಧ, ಸಶರೀರವಾಗಿ ಸ್ವರ್ಗಕ್ಕೆ ಹೋಗುವ ವಿಶ್ವಾಮಿತ್ರರ ಬಯಕೆ, ಇದಕ್ಕೆ ವಸಿಷ್ಠರ ವಿರೋಧ, ವಸಿಷ್ಠರ ಮೇಲಿನ ಸಿಟ್ಟು ತೀರಿಸಿಕೊಳ್ಳಲು ವಿಶ್ವಾಮಿತ್ರರು ತನ್ನನ್ನು ಬಲಿಪಶು ಮಾಡಿದರು ಎಂಬ ತ್ರಿಶಂಕುವಿನ ತಿಳುವಳಿಕೆ ಇವೆಲ್ಲಾ ಪೌರಾಣಿಕವಾಗಿ, ಐತಿಹಾಸಿಕವಾಗಿ ತೀವ್ರ ಸಂಘರ್ಷಕವಾಗಿ ಬರುವ ನಿರ್ಧಾರಗಳು ಎಂಬುದಕ್ಕೆ ನಾಟಕದಲ್ಲಿ ಸಮರ್ಥನೆ ಸಿಗುವುದಿಲ್ಲವಾದರೂ ಇಂದಿನ ಮಾನವ ಸ್ವಭಾವವನ್ನಂತೂ ಅತ್ಯಂತ ಸಮರ್ಥವಾಗಿ ಧ್ವನಿಸುತ್ತದೆ. ಭೂತದ ನೆರಳು ವರ್ತಮಾನಕ್ಕೆ ಹೇಗೆ ಅನಿವಾರ್ಯವಾಗಿ ಚಾಚುತ್ತದೆ ಎಂಬುದಕ್ಕೆ ಈ ನಾಟಕದ ವಸ್ತು ಹಾಗೂ ತಂತ್ರವೇ ಒಂದು ಪ್ರತ್ಯಕ್ಷ ನಿದರ್ಶನವಾಗಿದೆ. ವಿಪರ್ಯಾಸವೆಂಬಂತೆ ತಾಯಿಯಾದ ನಟಿಯೂ ಮೂಲ ಮಾತೃಕೆ ಮೇನಕೆಯಂತೆ ಕೈ ಕೊಡವಿಕೊಂಡು ಮಾನವೇಂದ್ರನೊಬ್ಬನ ಜೊತೆ ನವಜಾತ ಶಿಶುವನ್ನು ತೊರೆದು ಹೊರಟುಹೋಗುತ್ತಾಳೆ. ಆದರೆ ಈ ನಟಿಗೆ ಅಂಥ ಒತ್ತಡಗಳೇನಿತ್ತೆಂಬುದಕ್ಕೆ ಸ್ವತಃ ಆಕೆಯಾಗಲೀ ಮತ್ತಿತರರಾಗಲೀ ಮಾತನಾಡುವುದಿಲ್ಲ. ಈ ಮೇನಕೆ/ ನಟಿಯಂಥ ಹೆಣ್ಣಿನ ಸ್ಥಿತಿ ಇಂದಿಗೂ ಅದೇ ಎಂಬುದನ್ನು ನಾಟಕದ ಕೊನೆಯಲ್ಲಿ ಆಧುನಿಕ ವೇಷ ಭೂಷಣಗಳಲ್ಲಿ ಬರುವ ಬೃಹಸ್ಪತಿ ಮತ್ತು ಆತನ ಪತ್ನಿ ದೃಷ್ಟಾಂತಗಳಾಗಿ ನಿಲ್ಲುತ್ತಾರೆ. ಆದರೆ ಮಾನವೀಯತೆಗೆ ಗುರಿ ಇಟ್ಟಂತೆ ಬರುವ ಹಸುಳೆಯ ರೋಧನ ಆಕ್ರಂದನಕ್ಕೆ ಪರಿಹಾರ ಕಾಣುವುದಿಲ್ಲ. ಜಗತ್ತೇ ನಾಟಕರಂಗವಾದಾಗ ಸೂತ್ರಧಾರನೇ ಎಲ್ಲದಕ್ಕೂ ಹೊಣೆಯಾಗುತ್ತಾನೆ. ಎಂಬ ಸೃಷ್ಟಿ ಸಿದ್ಧಾಂತವನ್ನು ಒಪ್ಪುವುದು ಬಿಡುವುದರ ಮಾತಿರಲಿ ನಾಟಕ ಮುಂದುವರಿಯಬೇಕಾದ ಅನಿವಾರ್ಯತೆಯನ್ನು ತಳ್ಳಿ ಹಾಕುವ ತಾಕತ್ತು ಪಾತ್ರಧಾರಿಗಳಿಗಂತೂ ಇಲ್ಲ."

**(ಅದೇ, ಮುನ್ನುಡಿ ಪುಟ 7)**

ನಾಟಕದಲ್ಲಿ ತ್ರಿಶಂಕುವಿನ ಅತಂತ್ರಸ್ಥಿತಿಯ ಚಿತ್ರಣವಿದೆ. ಸ್ತ್ರೀಪರ ಧ್ವನಿಗೆ ಪುರಾಣದ ಸ್ಪರ್ಶ ನೀಡಲಾಗಿದೆ. ಸ್ತ್ರೀ ಶೋಷಣೆಯ ವಿರುದ್ಧದ ಧ್ವನಿಯಿದೆ. ಈ

ನಾಟಕದ ಬಗ್ಗೆ ಉದ್ಯಾವರ ಮಾಧವ ಆಚಾರ್ಯರು ಸ್ವಲ್ಪ ಭಿನ್ನ ನಿಲುವನ್ನು ವ್ಯಕ್ತಪಡಿಸುತ್ತಾರೆ. "ವಿಶ್ವಾಮಿತ್ರನ ನಿಜಸಂಸಾರದ ಗೋಳೂ ನಾಟಕದ ಪ್ರಮುಖ ಧ್ವನಿಯಾಗಿ ಸ್ಥಾನ ಪಡೆದಿದೆ ಸರಿ. ಆದರೆ ಸುರುಳಿ ಬಿಚ್ಚುವ ಚಿಂತನೆಗಳೆಲ್ಲ ಪಾತ್ರಗಳ ಖಾಸಗಿ ಚಿಂತನೆಗಳಂತೆ ಉದ್ಗಾರಗೊಂಡಿರುವುದು ಉಳಿದ ನಾಟಕಗಳ ವಸ್ತು-ಚಿಂತನೆ ಸಾಮೀಪ್ಯವನ್ನು ಅಥವಾ ಅನ್ಯೋನ್ಯತೆಯನ್ನು ಈ ನಾಟಕ ಗಳಿಸದಂತೆ ಮಾಡಿದೆ. ನಮ್ಮ ಅನೇಕ ಪುರಾಣಾಂತರ್ಗತ ರಂಗ ಕೃತಿಗಳ ಸಮಸ್ಯೆಗೆ ಗಟ್ಟಿ ಅವರ ಕೃತಿ ಹೊರತಾಗಿಲ್ಲ. ಪುರಾಣ ಮೂಲವೇ ಒಂದು ಸೆಲೆಯ ವಿಡಂಬನೆ ಮತ್ತು ವಿಜೃಂಭಣೆಗಳ ಸಮಾಗಮ. ಅಂದರೆ ಪೌರಾಣಿಕ ಘಟನೆಗಳೇ ವ್ಯಾಖ್ಯಾನವಾಗಿ ವಿಡಂಬನೆಯನ್ನು ಬಿಂಬಿಸುತ್ತವೆ. ಪಾತ್ರಗಳು ಈ ವಿಡಂಬನೆಗೆ ಒಪ್ಪಿಸಿಕೊಳ್ಳುವ, ಸೋಲುವ, ಗೆಲ್ಲುವ-ಎಲ್ಲವನ್ನೂ ಆ ಘಟನೆಗಳನ್ನು ಮತ್ತು ಪಾತ್ರಗಳನ್ನು ವಿಜೃಂಭಿಸುವುದರ ಮೂಲಕ ಪುರಾಣಗಳು ಕಲಾತ್ಮಕಗೊಳಿಸುತ್ತವೆ. ಭಾರತದ ಉದ್ದಗಲಕ್ಕೂ ಮತ್ತು ಭಾರತ ಪ್ರಭಾವ ಬೀರಿದ ಇತರ ಪೂರ್ವದೇಶಗಳಲ್ಲೂ ಸಾಕಷ್ಟು ಹಿಂದಿನಿಂದ ರೂಪುಗೊಂಡ-ಭಿನ್ನ ಪ್ರದರ್ಶನ ಕಲೆಗಳ ಗುಣಲಕ್ಷಣ-ಉದ್ದೇಶಗಳನ್ನು ವಿವೇಚಿಸಿದರೆ ಅದು ಸ್ಪಷ್ಟಗೊಳ್ಳುತ್ತದೆ. ಪುರಾಣಲೋಕ ದಿಂದ ಹೀಗೆ ಒಬ್ಬ ನಾಟಕಕಾರನಿಗೆ ನೀಡಲ್ಪಟ್ಟ ವಸ್ತುವನ್ನು ಯಾವ ಅಳತೆಯಲ್ಲಿ, ದೃಷ್ಟಿಕೋನದಲ್ಲಿ ಮತ್ತು ಉದ್ದೇಶದಿಂದ ಅವನು ದುಡಿಸಿಕೊಳ್ಳುತ್ತಾನೆ ಎನ್ನುವುದೆಲ್ಲ ಆ ಕೃತಿಯ ಸಾರ್ಥಕತೆಯನ್ನು ನಿಗದಿಪಡಿಸುತ್ತದೆ. ಪುರಾಣವೇ ಒಂದು ಸ್ವತಂತ್ರ ನಾಟಕ. ಅದು ದಾಖಲೆಗೊಂಡ ಇತಿಹಾಸವಲ್ಲ. ಪುರಾಣನಿಷ್ಠರಿಂದಲೇ ವ್ಯಾಖ್ಯಾನಗೊಂಡ ರಂಗ ಚಮತ್ಕಾರ. ಒಂದು ರೀತಿಯಲ್ಲಿ ಇದು ಪುರಾಣಾಭಿವ್ಯಕ್ತಿಯ ಕಲಾತ್ಮಕ ಸಾಧನೆ. ಆದುದರಿಂದ ಅಂಥ ವಸ್ತುವನ್ನಾಧರಿಸಿ ಹೊಸ ರಚನೆ ಮಾಡಿ ಬರುವಾಗ ಈ ಸಾಧನೆಯ ಅಪಹರಣ ಅಥವಾ ಸಾಧನೆ ನಷ್ಟಗೊಳ್ಳುವ ಸಂದರ್ಭ ಬರದಂತೆ ನೋಡಿಕೊಳ್ಳುವುದು ಆ ವಸ್ತುವನ್ನವಲಂಬಿಸುವವನ ಹೊಣೆಗಾರಿಕೆಯಾಗುತ್ತದೆ. ಹೀಗೆ ತೀರ್ಮಾನದ ಧಾಟಿಯಲ್ಲಿ ಅವಲೋಕನ-ಲೇಖನ ಸಾಗುವಾಗ ಕೃತಿಕಾರರ ಮೂಲಭೂತ ಸ್ವಾತಂತ್ರ್ಯಕ್ಕೆ, ನಿಲುವಿಗೆ, ಒಂದು ನೆಲೆಯ ಬರಹಗಾರನ ಹಕ್ಕು-ಧೋರಣೆಗೆ ನಾನು ಅಡ್ಡ ಬರುತ್ತಿದ್ದೇನೆ ಎಂಬ ಅರಿವು ನನಗಿದೆ. ಆದರೆ ಗಟ್ಟಿ ಅವರ "ತ್ರಿಶಂಕು..." ನಾಟಕದ ಆಕರ್ಷಕ ರಂಗ ತಿರುವುಗಳು, ಪುರಾಣದ ಸ್ವರೂಪದಲ್ಲೇ ತುಂಬ ಮಾನವೀಯವಾಗಿ ಮಿಂಚಬಹುದಾದ ಭಾಗಗಳು "ಪುರಾಣನಷ್ಟ" ಎಂಬ ನಾನು ಗುರುತಿಸಿದ ಅಂಶದಿಂದಾಗಿ ಸೊರಗಿದವು ಎಂಬ ನನ್ನ ಅನಿಸಿಕೆ ನನ್ನೀ ತೀರ್ಮಾನಕ್ಕೆ ಪ್ರೇರಣೆ" ಎನ್ನುತ್ತಾರೆ.

**(ಶ್ರೀಧರ.ಎಚ್.ಜಿ.(ಸಂ), ಪುಟ 93)**

ಒಟ್ಟಿನಲ್ಲಿ ಕೆ.ಟಿ.ಗಟ್ಟಿಯವರ ಈ ನಾಟಕವು ಪುರಾಣದ ಪಾತ್ರಗಳ ಮೂಲಕ ಸಮಕಾಲೀನ ಸಾಮಾಜಿಕ ನಡವಳಿಕೆಗೆ ಪ್ರತಿರೋಧವನ್ನು ವ್ಯಕ್ತಪಡಿಸುತ್ತದೆ ಎನ್ನಬಹುದು. ಕೆ.ಟಿ.ಗಟ್ಟಿಯವರು ರಾಜಕಾರಣದಲ್ಲಿಯೂ ಬೆರೆತುಕೊಂಡಿರುವ ಜಾತಿ ವ್ಯವಸ್ಥೆಯನ್ನು ವಿರೋಧಿಸುತ್ತಾರೆ.

## ೬.೧೫: ಓಂ ತಾರ ತೂರಿ ಸ್ವಾಹಾ

ಓಂ ತಾರ ತೂರಿ ಸ್ವಾಹಾ 1995ರಲ್ಲಿ ಪ್ರಕಟಗೊಂಡ ಕೆ.ಟಿ.ಗಟ್ಟಿಯವರ ನಾಟಕ. ಕರ್ನಾಟಕದ ಪ್ರಸಿದ್ಧ ರಂಗ ಸಂಸ್ಥೆಯೊಂದು ತನ್ನ ಸುವರ್ಣ ಮಹೋತ್ಸವದ ಸಂದರ್ಭದಲ್ಲಿ ಅಖಿಲ ಭಾರತ ಮಟ್ಟದ ಕನ್ನಡ ನಾಟಕ ರಚನಾ ಸ್ಪರ್ಧೆಯೊಂದನ್ನು ಏರ್ಪಡಿಸಿತ್ತು. ಬೌದ್ಧಿಕ ಕಸರತ್ತಿನ ನಾಟಕಗಳು ಬೇಡ, ಸದಭಿರುಚಿಯ ಪ್ರದರ್ಶನ ಯೋಗ್ಯವಾದ ಕಂಪನಿ ನಾಟಕದ ಸ್ವರೂಪದ ನಾಟಕಗಳಾಗಿರಬೇಕು ಎಂಬುದು ಸ್ಪರ್ಧೆಯ ನಿಯಮವಾಗಿತ್ತು. ಕೆ.ಟಿ.ಗಟ್ಟಿಯವರು ಆ ಹಿನ್ನೆಲೆಯಲ್ಲಿ ಈ ನಾಟಕವನ್ನು ಬರೆದರು. ಇದು 'ರಂಗಭೂಮಿ ಉಡುಪಿ' ಇವರು ತಮ್ಮ ಸಂಸ್ಥೆಯ ತ್ರಿಂಶತಿ ಸವಿ ನೆನಪಿಗಾಗಿ ಏರ್ಪಡಿಸಿದ ಅಖಿಲ ಭಾರತ ಕನ್ನಡ ನಾಟಕ ರಚನಾ ಸ್ಪರ್ಧೆಯಲ್ಲಿ ತೀರ್ಪುಗಾರರ ಮೆಚ್ಚುಗೆಯನ್ನು ಗಳಿಸಿತ್ತು.

ಖಾಲಿ ಕೊಡ ಹೊತ್ತ ಮೂವರು ಹೆಂಗಸರು ಹಾದು ಹೋಗುವ ದೃಶ್ಯದೊಂದಿಗೆ ನಾಟಕ ಸಾಂಕೇತಿಕವಾಗಿ ಆರಂಭವಾಗುತ್ತದೆ. ಬೆಳಗ್ಗೆ ತನ್ನ ಅಂಗಡಿಯ ಬಳಿಗೆ ಬಂದ ಸತ್ಯನಾರಾಯಣ ಸೆಟ್ಟಿಗೆ ತನ್ನ ಅಂಗಡಿಯಲ್ಲಿ ಕಳವಾದ ದೃಶ್ಯ ಕಂಡುಬರುತ್ತದೆ. ಅದು ನ್ಯಾಯಬೆಲೆ ಅಂಗಡಿಯಾಗಿರುತ್ತದೆ. ಕೆಲಸದಾಳು ಶಿವ ಪೋಲೀಸರಿಗೆ ಫೋನು ಮಾಡಿದಾಗ ಪೋಲೀಸರು ತಕ್ಷಣ ಬರ್ತೀವಿ ಎಂದ ವಿಚಾರವನ್ನು ತಿಳಿಸಿದಾಗ ಸೆಟ್ಟಿ ಆಶ್ಚರ್ಯದಿಂದ "ಏನು ತಕ್ಷಣ ಬರ್ತೀವಿ ಅಂದ್ರಾ? ಪೋಲೀಸ್ರು ಹೌದು ತಾನೆ?" ಎಂದು ಪ್ರಶ್ನಿಸುತ್ತಾನೆ. ಕಳವಾದ ಅಕ್ಕಿಯಲ್ಲಿ ಕಲ್ಲು ಮಣ್ಣು ಬೆರೆತಿದ್ದ ವಿಚಾರವನ್ನು ಶಿವ ಪ್ರಸ್ತಾಪಿಸುತ್ತಾನೆ. ಅಂಗಡಿಯ ಬಳಿ ಮಲಗಿದ್ದ ವ್ಯಕ್ತಿಯನ್ನು ಪೋಲೀಸರು ವಿಚಾರಿಸುತ್ತಾರೆ. ನನಗೂ ಕಳ್ಳರಿಗೂ ಯಾವ ಸಂಬಂಧವೂ ಇಲ್ಲ ಎಂದು ಹೇಳಿದ ಆ ವ್ಯಕ್ತಿ ತನ್ನ ಚೀಲದಿಂದ ಹತ್ತು ಸಾವಿರ ನೋಟನ್ನು ತೆಗೆದು ಸತ್ತ ನಾರಾಯಣ ಸೆಟ್ಟಿಗೂ, ನೂರು ರೂಪಾಯಿಯ ಎರಡು ನೋಟನ್ನು ತೆಗೆದು ಇಬ್ಬರು ಪೋಲೀಸರಿಗೂ ಕೊಡುತ್ತಾನೆ. ಪುನಃ ಆ ವ್ಯಕ್ತಿ ಮಲಗುತ್ತಾನೆ. ನಿಜವಾಗಿ ಅಷ್ಟು ಮೌಲ್ಯದ ವಸ್ತು ಕಳವಾಗಿರುವುದಿಲ್ಲ.

ನಗರದಲ್ಲಿ ಮಂಡಲ ಪಂಚಾಯತು ನೀರಿನ ಟಾಂಕಿ ಕಟ್ಟಿಸಿ ನೀರಿಗಾಗಿ ಬೋರ್‌ವೆಲ್ ಕೊರೆಯಲಾರಂಭಿಸುತ್ತದೆ. ಆದರೆ ಎಲ್ಲೂ ನೀರು ಸಿಗುವುದಿಲ್ಲ. ಹಾಗಾಗಿ ಇಂಜಿನಿಯರ್ ವೈಕುಂಠರಾಯ ಬಾವಿ ತೋಡಲು ಆರಂಭಿಸುತ್ತಾನೆ.

ಸತ್ಯನಾರಾಯಣ ಸೆಟ್ಟಿ ವ್ರತ ಮಾಡಲು ಆರಂಭಿಸುತ್ತಾನೆ. ನಾಲ್ಕು ಸಾವಿರದ ವಸ್ತು ಹೋಗಿ ಹತ್ತುಸಾವಿರ ಬಂದುದು ಅದರ ಪ್ರಭಾವದಿಂದಲೇ ಎಂದು ಆತ ನಂಬುತ್ತಾನೆ. ಆದಿ ಮೂಲ ಸ್ವಾಮಿ ಸೆಟ್ಟಿಗೆ ಮಾರ್ಗದರ್ಶನ ನೀಡುತ್ತಿರುತ್ತಾನೆ. ಆ ಸಂದರ್ಭದಲ್ಲಿ ಹಣ ನೀಡಿದ ವ್ಯಕ್ತಿ ಅಲ್ಲಿಗೆ ಆಗಮಿಸುತ್ತಾನೆ. ಬೆಟ್ಟದ ಮೇಲೆ ಕೆರೆ ತೋಡಿಸುವ ತನ್ನ ನಿರ್ಧಾರವನ್ನು ತಿಳಿಸುತ್ತಾನೆ. ಬೆಟ್ಟದ ತುದಿಯ ಗುಡಿಯ ಆವರಣದಲ್ಲಿ ಮಾತ್ರ ನೀರಿದ್ದು ಆದಿ ಮೂಲ ಸ್ವಾಮಿ ಅದನ್ನು ತಾನು ತೋಡಿಸಿದ್ದು ಎನ್ನುತ್ತಾನೆ. ಜನ ನೀರಿಲ್ಲದೆ ಪ್ರಾಣ ಬಿಡುತ್ತಿದ್ದರೂ ಅದನ್ನು ಜನರಿಗೆ ಉಪಯೋಗಿಸಲು ಬಿಟ್ಟರೆ ಒಂದೇ ದಿನದಲ್ಲಿ ಬಾವಿಯ ನೀರು ಖಾಲಿಯಾಗಬಹುದು. ಆಮೇಲೆ ದೇವತಾರ್ಚನೆಗೂ ನೀರಿಲ್ಲ ಎಂದು ಯೋಚಿಸಿ ಅದನ್ನು ನೀರು ಅಂತ ಕರೀಬಾರ್ದು. ಅದು ತೀರ್ಥ ಎನ್ನುತ್ತಾನೆ. ಜನ ನೀರಿಲ್ಲದೆ ಪ್ರಾಣ ಬಿಡೋಲ್ಲ. ಹಣ ಇದ್ರೆ ಎಲ್ಲರಿಗೂ ಪ್ರಾಣ ಇರುತ್ತದೆಂದು ಆತನ ಅಭಿಪ್ರಾಯ. ನಿಜವಾದ ದೈವತ್ವ ಅಡಗಿರುವುದು ಹಣದಲ್ಲೇ ಎನ್ನುತ್ತಾನೆ. ಆತನ ಪ್ರಕಾರ ಉಪಯೋಗಕ್ಕೆ ಬೀಳದ ಹಣ ಕೂಡ ಹಣವೇ ಹೊರತು ಕಲ್ಲಲ್ಲ. ಉಪಯೋಗಕ್ಕೆ ಬರೋ ಒಂದು ಕೋಟಿಯಿಂದ ಸುಖ ಸಿಗ್ತದೆ. ಉಪಯೋಗಕ್ಕೆ ಬೀಳದಿರೋ ಒಂದು ಅಥವಾ ಹತ್ತು, ಅಥವಾ ಇಪ್ಪತ್ತು ಕೋಟಿಯಿಂದ ಸಂತೋಷ ಸಿಗ್ತದೆ.

ಗುಡಿಯ ಬಾವಿಯ ನೀರನ್ನು ಉಪಯೋಗಿಸುವ ಪ್ರಯತ್ನ ಮಾಡಿದ ಅಧಿಕಾರಿಗಳು ತಮ್ಮ ಪ್ರಾಣವನ್ನೇ ಕಳೆದುಕೊಂಡಿರುವ ವಿಚಾರ ತಿಳಿಸುತ್ತಾನೆ. ವ್ಯಕ್ತಿ ಕೋಟಿ ರೂಪಾಯಿ ಖರ್ಚುಮಾಡಿ ಕೆರೆ ತೋಡಿಸುವ ವಿಚಾರ ತಿಳಿಸುತ್ತಾನೆ. ಮಂಡಲ ಪ್ರಧಾನ ಬ್ರಹ್ಮದೇವಪ್ಪನ ಜಾಗದಲ್ಲಿ ಸರಕಾರ ಕೊರೆಸಿದ ಬೋರ್‌ವೆಲ್‌ನಲ್ಲಿ ನೀರು ಸಿಗುತ್ತದೆ. ಬ್ರಹ್ಮದೇವಪ್ಪನವರ ಟಾಂಕಿ ಮೊದಲು ತುಂಬುತ್ತದೆ. ಆ ನೀರಿನಿಂದಾಗಿ ಒಂದು ಲೀಟರ್ ಹಾಲು ಕೊಡುವ ಹಸು ಮೂರು ಲೀಟರ್ ಕೊಡಲಾರಂಭಿಸುತ್ತದೆ. ತೊಂಬತ್ತೈದು ವರ್ಷದ ಮಲಗಿದಲ್ಲೇ ಇದ್ದ ಅಜ್ಜಿ ನೀರು ಕುಡಿದು ಓಡಾಡಲು ಆರಂಭಿಸುತ್ತಾರೆ. ಬ್ರಹ್ಮದೇವಪ್ಪನ ಹೆಂಡತಿಯ ದಮ್ಮು ವಾಸಿಯಾಗುತ್ತದೆ. ಈ ಸುದ್ದಿ ಕೇಳಿ ಹೊರ ಊರಿನಿಂದಲೂ ಜನ ಬರಲಾರಂಭಿಸುತ್ತಾರೆ. ಜನರ ನೂಕು ನುಗ್ಗಲು

ನಿಯಂತ್ರಿಸಲು ನೀರಿಗೆ ಲೀಟರಿಗೆ ಐವತ್ತು ಪೈಸೆ ಇಡಬೇಕಾಗುತ್ತದೆಂದು ಬ್ರಹ್ಮಪ್ಪ ಯೋಚಿಸುತ್ತಾನೆ.

ದಿನಗೂಲಿ ಇಂಜಿನಿಯರ್ ಗುರುದತ್ತ ಕೆರೆ ತೋಡಿಸುವ ಕೆಲಸದವರ ಬಳಿ ಉದ್ಯೋಗ ಕೇಳಿ ಹೋಗಬೇಕೆಂದು ಯೋಚಿಸುತ್ತಾನೆ. ವ್ರತ ಮುಂದುವರಿಸುತ್ತಿದ್ದ ಸೆಟ್ಟಿಗೆ ತಾರಾ ಸಿದ್ಧಿ ಆಗುತ್ತದೆಂದು ಆದಿ ಮೂಲ ಸ್ವಾಮಿ ತಿಳಿಸುತ್ತಾನೆ. ತಪ್ಪು ಹೆಜ್ಜೆ ಇರಿಸಿದರೆ ಕೈ, ಕಾಲು ಯಾವುದೂ ಸ್ವಾಧೀನದಲ್ಲಿ ಇರುವುದಿಲ್ಲ ಎಂದೂ ತಿಳಿಸುತ್ತಾನೆ. ಸೆಟ್ಟಿ ಇಂಜಿನಿಯರ್ ವೈಕುಂಠರಾಯನ ಬಳಿ ಬ್ರಹ್ಮಪ್ಪನ ಜಾಗದ ಬೋರ್‌ವೆಲ್ ಬಗ್ಗೆ ವಿಚಾರಿಸಿದಾಗ ಆತ ಊರಿನ ಟಾಂಕಿಗೆ ನೀರು ಹರಿಸುವುದಿಲ್ಲ. ತನಗೇ ಎಲ್ಲಾ ಬೇಕು, ಖರ್ಚಿನ ಹಣವನ್ನೆಲ್ಲಾ ತಾನೇ ಕೊಡುತ್ತೇನೆಂದು ಹೇಳುತ್ತಾನೆ. ಲೀಟರಿಗೆ ಹತ್ತು ರೂಪಾಯಿ ಸಂಪಾದಿಸುತ್ತಾನೆಂಬ ವಿಷಯ ತಿಳಿಯುತ್ತದೆ.

ವ್ಯಕ್ತಿ ಅಪಾರ ಹಣ ಖರ್ಚು ಮಾಡಿ ಕೆರೆ ತೋಡಿಸುತ್ತಿರುವ ವಿಷಯದ ಬಗ್ಗೆ ಎಮ್ಮೆಲ್ಲೇ ರುದ್ರೇಶಪ್ಪ ಪ್ರಸ್ತಾಪಿಸುತ್ತಾ "ಹಣ ಬರೋ ದಾರಿಗಳಿಗೇನು ನಮ್ಮ ದೇಶದಲ್ಲಿ ಕೊರತೆ ಇದ್ಯೆ? ಕಾಳ ಸಂತೆ ಇದೆ; ಸ್ಮಗ್ಲಿಂಗ್ ಇದೆ; ಕುದುರೆ ರೇಸಿದೆ; ಸಟ್ಟಾ, ಮಟ್ಕಾ, ಮಂಡಿ ಶೇರು ಪೇಟೆ ಇನ್ನೂ ಏನೋನೋ ಇದೆ. ಅಪರೂಪಕ್ಕೆ ಎಲ್ಲಾದರೂ ಅಗೆದಾಗ ನೆಲದಡಿಯಿಂದ ನೀರಿನ ಬದಲು ಚಿನ್ನದ ನಾಣ್ಯಗಳ ಕೊಡ ಮೇಲೆ ಬರೋದೂ ಇದೆ" ಎಂದು ಹಣ ಮಾಡುವ ಅನ್ಯಾಯದ ಮಾರ್ಗಗಳ ಬಗ್ಗೆ ಪ್ರಸ್ತಾಪಿಸುತ್ತಾನೆ.

ಸತ್ಯನಾರಾಯಣ ಸೆಟ್ರ ಮಗಳು ವೇದ ದಿನಗೂಲಿ ಇಂಜಿನಿಯರ್ ಗುರುದತ್ತನನ್ನು ಪ್ರೀತಿಸುತ್ತಿರುತ್ತಾಳೆ. ಸೆಟ್ರಿಗೆ ಹೆದರಿ ಆತ ಹೆಣ್ಣಿನ ವೇಷದಲ್ಲಿ ಬಂದು ಭೇಟಿಯಾಗುತ್ತಿರುತ್ತಾನೆ. ವ್ಯಕ್ತಿ ಗುರುದತ್ತನನ್ನು ತನ್ನ ಕೆರೆಯ ಕೆಲಸಕ್ಕೆ ನೇಮಿಸುತ್ತಾನೆ.

ಸತ್ಯನಾರಾಯಣ ಸೆಟ್ಟಿ 'ಓಂ ತಾರ ತೂರಿ ಸ್ವಾಹಾ' ಎಂಬ ಮಂತ್ರವನ್ನು ಜಪಿಸುತ್ತಾ ಕುಳಿತಿರುತ್ತಾನೆ. ಆತನ ಕಣ್ಣಿಗೆ ಭೀಕರ ಆಕೃತಿಯ ರಾಕ್ಷಸಿ ಕಾಣಿಸುತ್ತಾಳೆ. ಹದಿನೆಂಟರ ಹರೆಯದ ಹೆಣ್ಣು ಕಾಣಿಸಿಕೊಳ್ಳುತ್ತಾಳೆ. ಆಕೆ ತನ್ನನ್ನು ಬರ ಹೇಳಿರುವುದಕ್ಕೆ ಕಾರಣ ಕೇಳುತ್ತಾಳೆ. ನಾನು ಮಾತೆಯಾಗಿ ನಿನ್ನೊಂದಿಗಿರಬೇಕೆ? ಪ್ರೇಯಸಿಯಾಗಿಯೇ? ಎಂದು ಪ್ರಶ್ನಿಸಿದಾಗ ಆ ಸೆಟ್ಟಿ ನೀನು ನನ್ನ ಪ್ರೇಯಸಿಯಾಗಬೇಕು. ಆದರೆ ನಮ್ಮ ನಡುವೆ ಶರೀರ ಸಂಬಂಧವಿರಕೂಡದು ಎನ್ನುತ್ತಾನೆ. ಆತ್ಮ ಸಂಬಂಧದ ಅಪೇಕ್ಷೆಯನ್ನು

ತಿಳಿಸುತ್ತಾನೆ. ನಾನು ಕೇಳಿದಷ್ಟು ಧನ ಕನಕ ನೀಡಬೇಕೆನ್ನುತ್ತಾನೆ. ಆಕೆ ಒಪ್ಪಿಗೆ ನೀಡಿ ಅದೃಶ್ಯಳಾಗುತ್ತಾಳೆ.

ಮಂಡಲ ಪ್ರಧಾನ ಬ್ರಹ್ಮಪ್ಪ ಭಾರೀ ಗಾತ್ರದ ಸೂಟ್ಕೇಸಿನಲ್ಲಿ ಹಣ ಒಡವೆಗಳನ್ನು ತೆಗೆದುಕೊಂಡು ಬಂದು ಸೆಟ್ಟಿಯ ಮನೆಯಲ್ಲಿ ಕೊಟ್ಟು ಜೋಪಾನವಾಗಿ ಕಾಯ್ದಿರಿಸುವಂತೆ ಹೇಳುತ್ತಾನೆ. ಅದನ್ನು ಸ್ವೀಕರಿಸಿದ ಸೆಟ್ಟಿ ಸಂತೋಷದಿಂದ ದೇವಿ ನಿನ್ನ ಕೃಪೆ! ಬ್ರಹ್ಮದೇವಪ್ಪ ವಾಪಸ್ಸು ಬರದಂತೆ ಮಾಡು ಎಂದು ಬೇಡಿಕೊಳ್ಳುತ್ತಾನೆ. 'ಓಂ ತಾರ ತೂರಿ ಸ್ವಾಹಾ' ಎನ್ನುತ್ತಾನೆ. ಗಂಡ ಹೆಂಡತಿ ಇಬ್ಬರೂ ಸೂಟ್ಕೇಸನ್ನು ಬಿಚ್ಚಿ ಕುತೂಹಲದಿಂದ ನೋಡುತ್ತಾರೆ. ಅಲ್ಲಿ ಬಂಗಾರ ಹೊಳೆಯುತ್ತಿರುತ್ತದೆ. ಆದಿ ಮೂಲ ಸ್ವಾಮಿ ವ್ಯಕ್ತಿಯೊಂದಿಗೆ ದೇವಸ್ಥಾನ ಜೀರ್ಣೋದ್ಧಾರ ಮಾಡುವಂತೆ ಕೇಳಿಕೊಳ್ಳುತ್ತಾನೆ. ಆಗ ವ್ಯಕ್ತಿ "ಗುಡಿ ಊರಿನ್ಜನಕ್ಕೆ ನೀರು ಕೊಡ್ತಿತ್ತಾ? ಗುಡೀಲಿರೋ ದೇವ್ರನ್ನ ಪೂಜಿಸೋದಕ್ಕಿಂತ ಕೆರೆಯನ್ನು ಪೂಜಿಸೋದು ಒಳ್ಳೇದು." ಎನ್ನುತ್ತಾನೆ. ದೇವರ ನಂಬಿಕೆ ಬಗ್ಗೆ ಸ್ವಾಮಿ ಕೇಳಿದ ಪ್ರಶ್ನೆಗೆ "ನೀವು ದೇವರನ್ನು ತೋರಿಸಿಕೊಟ್ರೆ, ಅದು ದೇವರು ಹೌದು ಅಂತ ನಂಗೆ ನಂಬಿಕೆ ಆದ್ರೆ ನಂಬ್ತೀನಿ. ನೀವು ನಂಬಿದ್ದೇ ದೇವರು ಅಂತ ಖಾತ್ರಿ ಏನೂ ಇಲ್ಲ. ನಾನು ನಂಬಿದ್ದೂ ದೇವರಾಗಿರ್ಬಹುದು" ಎಂದು ವ್ಯಕ್ತಿ ಉತ್ತರಿಸುತ್ತಾನೆ. ವ್ಯಕ್ತಿಯ ಬಳಿಗೆ ಬಂದ ಎಮ್ಮೆಲ್ಲೇ ರುದ್ರೇಶಪ್ಪ ಆತನಿಗೆ ಕೇಂದ್ರ ಸರಕಾರದ ಭಗೀರಥ ಪ್ರಶಸ್ತಿ ತಮಗೇ ಬರಬೇಕು ಎನ್ನುತ್ತಾನೆ. ಕೆರೆಯನ್ನು ಊರಿಗೆ ಸಮರ್ಪಿಸುವ ದಿನವನ್ನು ವಿಜೃಂಭಣೆಯಿಂದ ಆಚರಿಸಬೇಕು, ನಾವು ಈ ಸಂಪ್ರದಾಯವನ್ನು ಗೌರವಿಸಬೇಕು ಎನ್ನುತ್ತಾನೆ. ವ್ಯಕ್ತಿ ಅದನ್ನು ಒಂದು ದುಷ್ಟ ರಾಜಕೀಯ ಸಂಪ್ರದಾಯ ಎಂದು ವ್ಯಾಖ್ಯಾನಿಸುತ್ತಾನೆ. ಎಮ್ಮೆಲ್ಲೇ ಈ ಸಂದರ್ಭವನ್ನು ಉಪಯೋಗಿಸಿಕೊಂಡು ಚುನಾವಣೆಯಲ್ಲಿ ಗೆಲ್ಲುವ ಸಂಚು ನಡೆಸಿರುತ್ತಾನೆ. ನನಗೆ ಹೆಸರು ಮುಖ್ಯವಲ್ಲ ಕೆರೆಯ ಕೆಲಸ ಊರ ಜನರ ಕೆಲಸ. ಜನರ ಬೆವರ ಹನಿಯೇ ನೀರಾಗಿದೆ ಎಂದು ವ್ಯಕ್ತಿ ತಿಳಿಸುತ್ತಾನೆ.

ಸೆಟ್ಟಿ ತನ್ನ ಬಳಿಗೆ ಬಂದ ಸ್ವಾಮಿಯೊಂದಿಗೆ ತನ್ನ ಬಳಿಯಲ್ಲಿರುವ ಹಣದ ಪೆಟ್ಟಿಗೆಯನ್ನು ಬಟ್ಟೆ ತುಂಬಿರುವ ಪೆಟ್ಟಿಗೆ ಎಂದು ಸುಳ್ಳು ಹೇಳುತ್ತಾನೆ. ಸೆಟ್ಟಿಯ ಮನೆಗೆ ವೇದಲೊಂದಿಗೆ ವೇಷ ಮರೆಸಿ ಬಂದ ಗುರುದತ್ತನಿಗೆ ಮನೆಯಲ್ಲಿರುವ ಸೂಟ್‌ಕೇಸಿನಲ್ಲಿ ಹಣವಿರುವ ಸಂಶಯ ಬರುತ್ತದೆ. ಅವರಿಬ್ಬರು ಆ ಸೂಟ್‌ಕೇಸನ್ನು ರಾತ್ರಿಯ ಹೊತ್ತಿನಲ್ಲಿ ಸೆಟ್ಟಿ ಹಾಗೂ ಅಂತರ್‌ವೇದಿಗೆ ಗೊತ್ತಾಗದಂತೆ ಎತ್ತಿಕೊಂಡು ಹೋಗುತ್ತಾರೆ. ನೇರವಾಗಿ

ವ್ಯಕ್ತಿಯ ಬಳಿಗೆ ಹೋಗಿ ಮಾರ್ಗದರ್ಶನ ಕೇಳುತ್ತಾರೆ. ವ್ಯಕ್ತಿ ಗುರುದತ್ತನೊಂದಿಗೆ ಹಣ ಹಿಂದಿರುಗಿಸಲು ಹೇಳಿ ಅವರಿಗೆ ಮಲಗುವ ವ್ಯವಸ್ಥೆ ಮಾಡಿಸುತ್ತಾನೆ.

ಬೆಳಗಾಗುತ್ತಿದ್ದಂತೆ ಸೆಟ್ಟಿಗೆ ಸೂಟ್‌ಕೇಸ್ ಕಳವಾದ ವಿಚಾರ ತಿಳಿಯುತ್ತದೆ. ಮೊದಲು ಬ್ರಹ್ಮದೇವಪ್ಪನಿಗೆ ವಿಷಯ ತಿಳಿಸಿ ನಂತರ ಪೋಲೀಸರಿಗೆ ತಿಳಿಸಲು ಯೋಚಿಸುತ್ತಾನೆ. ಬ್ರಹ್ಮದೇವಪ್ಪ ತನ್ನ ಹಣ ಕಳವಾದ ವಿಚಾರ ತಿಳಿದು ಸೆಟ್ಟಿಯನ್ನು ಕಳ್ಳ ಎನ್ನುತ್ತಾನೆ. ಅವರಿಬ್ಬರೂ ನಿಜವಾದ ಕಳ್ಳನನ್ನು ಹುಡುಕಲು ಹೊರಡುತ್ತಾರೆ.

ಆದಿಮೂಲ ಸ್ವಾಮಿ ನಿದ್ರಿಸುತ್ತಿದ್ದ ವ್ಯಕ್ತಿಗೆ ಚಾಕುವಿನಿಂದ ಇರಿಯುತ್ತಾನೆ. ಮತ್ತು ಸೂಟ್‌ಕೇಸ್ ಎತ್ತಿಕೊಂಡು ಹೋಗುತ್ತಾನೆ. ವ್ಯಕ್ತಿಯ ಗುಡಿಸಲಿಗೆ ಬಂದ ಮಂಡಲ ಪ್ರಧಾನ ಬ್ರಹ್ಮದೇವಪ್ಪ ಹಾಗೂ ಸೆಟ್ಟಿ ವ್ಯಕ್ತಿ ಸತ್ತು ಬಿದ್ದಿರುವುದನ್ನು ನೋಡುತ್ತಾರೆ. ಸ್ವಲ್ಪ ಹೊತ್ತಿನ ಬಳಿಕ ಅಲ್ಲಿಗೆ ಬಂದ ಗುರುದತ್ತ ವೇದವತಿಯರಿಗೂ ವಿಷಯದ ಅರಿವಾಗುತ್ತದೆ. ಅವರಿಬ್ಬರೂ ಅಲ್ಲಿಂದ ದೂರ ಹೋಗಲು ನಿರ್ಧರಿಸುತ್ತಾರೆ. ವೇದ ಈ ಕತ್ತಲಲ್ಲಿ ಎಲ್ಲಿಗೆ ಹೋಗೋದು ಎಂದು ಪ್ರಶ್ನಿಸುತ್ತಾಳೆ. ಅದಕ್ಕೆ ಗುರುದತ್ತ "ಸಾಧ್ಯವಾದಷ್ಟು ದೂರ ಹೋಗೋಣ ಅಷ್ಟರಲ್ಲಿ ಬೇಳಗಾಗುತ್ತೆ" ಎನ್ನುತ್ತಾನೆ.

**(ಗಟ್ಟಿ ಕೆ.ಟಿ., ಓಂಕಾರ ತೂರಿ ಸ್ವಾಹಾ, 1995, ಪುಟ 57)**

ಈ ಕೃತಿಗೆ ಬೆನ್ನುಡಿಯನ್ನು ಬರೆಯುತ್ತಾ ರಾಮದಾಸರು "ನೆಲದ ಬದುಕಿನಿಂದ ಸ್ಫೂರ್ತವಾದ ಎಲ್ಲ ಕಲೆಗಳಲ್ಲೂ ತರ್ಕವನ್ನು ಮೀರಿ ನಿಲ್ಲುವ, ಅತಾರ್ಕಿಕವಾದ, ನಿಗೂಢವೂ ರಹಸ್ಯಮಯವೂ ಆದ ವಿಚಿತ್ರ ಅನುಭೂತಿಯ ಸ್ಪರ್ಶ ಇರುತ್ತದೆ. ಅದು ತನ್ನ ವಿವಿಧ ಮಗ್ಗುಲುಗಳ ಮೂಲಕ ಬದುಕಿನ ವಾಸ್ತವದ ಪ್ರತಿಮೆಯಾಗಿರುತ್ತದೆ. ಕೆ.ಟಿ.ಗಟ್ಟಿಯವರ "ಓಂ ತಾರ ತೂರಿ ಸ್ವಾಹಾ" ನಾಟಕ ಅಂಥ ಒಂದು ಪ್ರತಿಮೆಯಾಗಿದೆ. ವಿಸ್ಮಯದ ಲಘು ಆಘಾತಗಳನ್ನು ಉದ್ದಕ್ಕೂ ನೀಡುತ್ತಾ ಸಾಗುವ ಇಲ್ಲಿಯ ಕ್ರಿಯೆ ಪ್ರೇಕ್ಷಕರನ್ನು ನಿರಂತರ ಎಚ್ಚರದಲ್ಲಿರಿಸಿ ಆತ್ಮಾವಲೋಕನಕ್ಕೆ ಪ್ರಚೋದನೆ ನೀಡುತ್ತದೆ. ದುರಾಸೆ, ಸ್ವಾರ್ಥ, ಲೋಭ, ವಂಚನೆ, ರಾಜಕಾರಣದ ಸಮಯ ಸಾಧಕತೆಯ ವಾಸ್ತವದ ಆವರಣದಲ್ಲಿ ಅಸಹಾಯಕತೆಯ ಅಳಲು, ಮುಗ್ಧ ಪ್ರೇಮದ ಕಾತರ-ಕಳವಳ- ಇವುಗಳಿಂದ ಪವಾಡಸದೃಶವಾದ ಬಿಡುಗಡೆ ನೀಡುವ, ಲೌಕಿಕದಲ್ಲಿ ಬೇರು ಬಿಟ್ಟ ಅಲೌಕಿಕ ಶಕ್ತಿಯ ಆಶಾಕಿರಣದ ಆವಿರ್ಭಾವ. ಹೆಸರು ಕುಲ ಗೋತ್ರಗಳಿಲ್ಲದ ನಾಡಾಡಿ ವ್ಯಕ್ತಿ ಅಂಥ ಆಶಾಕಿರಣವಾಗಿ ಮೂಡಿ ಬಂದರೂ ಅವನ ಅಪರಿಹಾರ್ಯವಾದ ಅಂತ್ಯವಾಗುವುದು ಅರ್ಥಪೂರ್ಣವಾದ ಹೆಸರುಳ್ಳ ಆದಿಮೂಲ ಸ್ವಾಮಿಯಿಂದ! ಆತ

ನಮ್ಮೆಲ್ಲರ ಹೃದಯವನ್ನಾಳುವ ಆದಿಮೂಲ ಸ್ವಾಮಿಯೋ....! ಮೂಲಭೂತ ಸ್ವಭಾವವೋ! ಪ್ರೇಕ್ಷಕನ ಆಸಕ್ತಿಯನ್ನು ಕೆರಳಿಸುವ; ಜೀವಂತವಾಗಿ ಉಳಿಸುವ ಗುಣದೊಡನೆ ಗಟ್ಟಿಯವರಿಗಿರುವ ಅದ್ಭುತವಾದ ರಂಗಪ್ರಜ್ಞೆಯ ಗಟ್ಟಿತನವೂ ಇದರಲ್ಲಿ ಮೈ ತಾಳಿದೆ" ಎಂದು ಹೇಳುತ್ತಾರೆ.

**(ಅದೇ, ಬೆನ್ನುಡಿ)**

ಡಾ.ನಾ. ದಾಮೋದರ ಶೆಟ್ಟರು ಈ ನಾಟಕ ಬಗ್ಗೆ ಹೀಗೆ ಹೇಳುತ್ತಾರೆ "ಇಲ್ಲಿ ಕಥೆ ಸಾಗುವ ಕ್ರಮ ಕೂಡ ಚೆನ್ನಾಗಿದೆ. ಅದು ವ್ರತದ ಮೂಲಕ ಸಾಗುತ್ತಾ ಪ್ರಣಯದ ಮುಖಗಳನ್ನು ತಿಳಿಸುತ್ತಾ ಸಾಚಾತನದಲ್ಲಿ ಮೆರೆಯುತ್ತ ಚಿನ್ನದ ಗಟ್ಟಿಯ ಮೂಲಕ ಅನುಮಾನಿಸುತ್ತಾ ಕೊಲೆಯ ಪರಿಹಾರವನ್ನು ಕಂಡುಕೊಳ್ಳುತ್ತ ಸಾಗುತ್ತದೆ. ಅಲ್ಲಿಯೇ ಸಂಘರ್ಷಗಳನ್ನು ನಿರ್ಮಿಸಿಕೊಳ್ಳುತ್ತ ದೃಶ್ಯಾತ್ಮಕತೆಗೆ ಅನುವು ಮಾಡಿಕೊಡುತ್ತ, ಚಲಿಸುತ್ತಲೇ ಇರುವ ನಾಟಕ "ಓಂ ತಾರ, ತೂರಿ ಸ್ವಾಹ".

**(ಶ್ರೀಧರ ಎಚ್.ಜಿ.(ಸಂ) ಪುಟ 86)**

ವ್ಯಕ್ತಿಯು ಕುಡಿಯುವ ನೀರಿಗೆ ಸಮಸ್ಯೆಯಾಗಬಾರದು ಎಂಬ ಗುರಿಯಿರಿಸಿಕೊಂಡು ಎಲ್ಲರಿಗೂ ನೀರು ನೀಡಿದಂತಹ ಸರಳ, ಸಜ್ಜನ ವ್ಯಕ್ತಿ ಕೊನೆಯಲ್ಲಿ ಕೊಲೆಯಾಗುತ್ತಾನೆ. ಅದೂ ಸಜ್ಜನರು ಎನಿಸಿಕೊಂಡವರಿಂದಲೇ ಕೊಲೆಯಾಗುವುದು ಒಂದು ವಿಶೇಷ.

ಉದ್ಯಾವರ ಮಾಧವ ಆಚಾರ್ಯರು ಈ ನಾಟಕದ ಬಗ್ಗೆ ತಮ್ಮ ಅಭಿಪ್ರಾಯವನ್ನು ಈ ರೀತಿ ತಿಳಿಸಿದ್ದಾರೆ. "ಸಂಭಾಷಣೆಗಳ ಹೊರಕವಚದಲ್ಲಿ ಹಗುರವಾದ ಲವಲವಿಕೆಯಿಂದ ಸಾಗಲು ಪ್ರಯತ್ನಿಸುವ ಈ ಕೃತಿ ಒಳಗೊಳಗಿನಿಂದ ವಿಶೇಷ ಸಾಮಾಜಿಕ ಹೋರಾಟದ ತುರ್ತು, ಭೀಕರ ವ್ಯಂಗ್ಯ, ದುರಂತಗಳನ್ನು ಮೈಗೂಡಿಸಿಕೊಳ್ಳುತ್ತ ಸುರುಳಿ ಬಿಚ್ಚುವುದು ಉದ್ದೇಶಿತ ಪ್ರಯೋಗ ಸ್ವರೂಪಕ್ಕೆ ತನ್ನನ್ನು ಬಂಧಿಸಿಕೊಳ್ಳುವುದಿಲ್ಲ ಎಂಬುದನ್ನು ನಾನು ಗಮನಿಸುವುದು ಹೀಗೆ ತಾತ್ಕಾಲಿಕ ನಿರ್ಣಯದಿಂದ ಹೊರ ಬಂದು. "ನಿಜವಾದ ಪ್ರೇಮ ಎಂದರೆ ಶಾಶ್ವತ ಕಾಮ" ಎಂಬ ನಾಟಕದ ನಾಯಕ (ಬೆಟ್ಟದ ಮೇಲೆ ಕೆರೆ ತೋಡಿಸುವ, ಹೋರಾಡುವ ಚಿಂತಿಸುವ 'ವ್ಯಕ್ತಿ' ಕಾಮದ ಇನ್ನೊಂದು ಅಮಾನವೀಯ ರೂಪವನ್ನು, ದಾಹವನ್ನು, ಜಾಣತನವನ್ನು ಪ್ರತಿನಿಧಿಸುವ ಎದುರು ಪಾತ್ರ ನಾರಾಯಣ ಸೆಟ್ಟಿಯ ಮಗಳು ವೇದವತಿ ಮತ್ತು ಅವಳನ್ನು ಪ್ರೀತಿಸುವ ಗುರುದತ್ತ ಎಂಬ ದಿನಗೂಲಿ ಇಂಜಿನಿಯರ್– ಅವರಿಗೆ ಪ್ರೇಮದ ದಾರಿ ತೋರಿಸುವ ಸಂದರ್ಭ) ಎಲ್ಲೂ ನಾಟಕವನ್ನು "ಕಂಪೆನಿನಡೆ" ಗೆ ಜೋತು

ಬೀಳದಂತೆ ವ್ಯವಹರಿಸುತ್ತ ನಾಟಕದ ತಾತ್ವಿಕ ದಿಕ್ಕನ್ನು ನಿರ್ದೇಶಿಸುತ್ತ ಬೆಳೆಯುವುದನ್ನು ಗಮನಿಸಲು ಇಂಥ ಸಹೃದಯತನ ಅಗತ್ಯ. ಉಳಿದ ನಾಟಕಗಳಲ್ಲಿ ಲೇಖಕರು ಸಾಧಿಸಿದ ರಂಗಾಭಿವ್ಯಕ್ತಿ ಮತ್ತು ಕಾಲವ್ಯವಸ್ಥೆಯ ಹೊಂದಾಣಿಕೆ "ಓಂತಾರ....." ದಲ್ಲಿ ತಪ್ಪಿ ಹೋಗಿದೆಯಾದರೂ ನಾಟಕವನ್ನು ತಾತ್ವಿಕ ದೃಷ್ಟಿಕೋನದ ಒಂದು ಬದ್ಧ ರಂಗಕೃತಿಯಾಗಿಸುವಲ್ಲಿ ಕಂಡ ಯಶಸ್ಸು ಗಮನಾರ್ಹ".

ಕೆ.ಟಿ.ಗಟ್ಟಿಯವರು ಈ ಕೃತಿಯ ಮೂಲಕ ಮಾನವನ ಮೂಲಭೂತ ಪ್ರವೃತ್ತಿಗಳಾದ ಮೋಸ, ವಂಚನೆ, ದುರಾಸೆ, ಲೋಭ. ಸ್ವಾರ್ಥ ಇವುಗಳನ್ನು ಪ್ರಚೋದಿಸುವ ಧಾರ್ಮಿಕ ಹಾಗೂ ರಾಜಕೀಯ ವ್ಯವಸ್ಥೆಯನ್ನು ವಿರೋಧಿಸುತ್ತಾರೆ ಮಾತ್ರವಲ್ಲ, ಕೆ.ಟಿ.ಗಟ್ಟಿಯವರು ತಮ್ಮ ನಾಟಕಗಳಲ್ಲಿ ನಮ್ಮ ಸುತ್ತ ಮುತ್ತ ನಡೆಯುವ ವಿಚಾರಗಳನ್ನು ಆಯ್ಕೆ ಮಾಡಿಕೊಂಡು ಚರ್ಚಿಸುತ್ತಾರೆ. ಸಮಾಜ ಯಾವ ರೀತಿ ಇರಬೇಕೆಂಬುದನ್ನು ತಮ್ಮ ನಾಟಕಗಳಲ್ಲಿ ಧೈರ್ಯವಾಗಿ ಮಂಡಿಸುತ್ತಾರೆ. ಊರಿಗೆ, ಸಮಾಜಕ್ಕೆ ಒಳ್ಳೆಯದನ್ನು ಮಾಡಬೇಕೆಂದು ಯೋಚಿಸಿ ಬಂದ ವ್ಯಕ್ತಿಯ ಕೊಲೆಯಾಗುವ ಚಿತ್ರಣ ಮನುಷ್ಯನಲ್ಲಿ ಆಳವಾಗಿ ಬೇರೂರಿರುವ ಮೂಲಭೂತವಾದಿತನವನ್ನು ಸೂಚಿಸುತ್ತದೆ. ಇಂತಹ ದುಷ್ಟವ್ಯವಸ್ಥೆಯನ್ನು ವಿರೋಧಿಸಬೇಕೆಂಬ ಪ್ರೇರಣೆಯನ್ನು ಕೃತಿ ಓದುಗರಿಗೆ ನೀಡುತ್ತದೆ.

***************

## ಅಧ್ಯಾಯ–೭: ಕೆ.ಟಿ.ಗಟ್ಟಿಯವರ ಇತರ ಬರಹಗಳು

೭.೧: ಆತ್ಮಚರಿತ್ರೆ 'ತೀರ'

೭.೨: ಪ್ರವಾಸ ಕಥನ–ನಿಸರ್ಗಕನ್ಯೆ ಅಂಡಮಾನ್

೭.೩: ಪ್ರಬಂಧ ಸಾಹಿತ್ಯ

೭.೩.೧: ಮೂರನೆಯ ಧ್ವನಿ (ಸಾಹಿತ್ಯ ಚಿಂತನೆ)

೭.೩.೨: ನಿನ್ನೆ ನಾಳೆಯ ನಡುವೆ (ಸಾಮಾಜಿಕ ಚಿಂತನೆ)

೭.೩.೩: ನಮ್ಮ ಬದುಕಿನ ಪುಟಗಳು ( ವೈಚಾರಿಕ ಲೇಖನ)

# ಅಧ್ಯಾಯ-೭

# ಕೆ.ಟಿ.ಗಟ್ಟಿಯವರ ಇತರ ಬರಹಗಳು

## ೭.೧: ಆತ್ಮಕಥೆ 'ತೀರ'

"ಆತ್ಮ ಚರಿತ್ರೆ ಬರೆಯುವ ರೀತಿ ಪಾಶ್ಚಾತ್ಯರಿಂದ ಕನ್ನಡಕ್ಕೆ ಬಂದಿದೆ. ಇದು ಮುಳ್ಳಿನ ಮಾರ್ಗ. ಆತ್ಮಶ್ಲಾಘನೆ-ಕೀಳರಿಮೆ ಎರಡರ ಲೇಪನವೂ ಇಲ್ಲದಂತೆ ಪ್ರಾಮಾಣಿಕವಾಗಿ ಬರೆಯುವ ಕಷ್ಟ ಒಂದು; ಪ್ರಮಾಣ ಪ್ರಜ್ಞೆಯನ್ನು ಉಳಿಸಿಕೊಂಡು ಇತರರ ದೃಷ್ಟಿಯಿಂದ ಸಮಾಜದ ದೃಷ್ಟಿಯಿಂದ ಯಾವುದು ಅಮುಖ್ಯ ಎಂದು ನಿರ್ಣಯಿಸುವ ಕಷ್ಟ ಇನ್ನೊಂದು; ಕೃತಿಯಲ್ಲಿ ಇತರರಿಗೆ ಅನ್ಯಾಯವಾಗದಂತೆ ನೋಡಿಕೊಳ್ಳುವ ಕಷ್ಟ ಮತ್ತೊಂದು. ಇದೆಲ್ಲದರ ಜೊತೆಗೆ, ಕೃತಿ ಸಾಹಿತ್ಯವಾಗಿರಬೇಕು".

**(ಶೇಷಗಿರಿರಾವ್ ಎಲ್.ಎಸ್, 1999. ಪುಟ 234)**

ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯನ್ನು ಕುರಿತು ಬರೆಯಲಾದ ಬರವಣಿಗೆ ಜೀವನ ಚರಿತ್ರೆಯಾದರೆ, ಒಬ್ಬ ವ್ಯಕ್ತಿ ತನ್ನನ್ನು ಕುರಿತು ತಾನೇ ಬರೆದುದು ಆತ್ಮಚರಿತ್ರೆ. ವ್ಯಕ್ತಿಯೊಬ್ಬ ತಾನು ಜೀವನದಲ್ಲಿ ಕಂಡ ಸ್ವಾರಸ್ಯ, ತಾಳಿದ ನಿಲುವು, ಮಾಡಿದ ಕಾರ್ಯಗಳನ್ನು ಆತ್ಮನಿಷ್ಠವಾಗಿ ಇಲ್ಲಿ ನಿರೂಪಣೆ ಮಾಡಬೇಕಾಗುತ್ತದೆ. ಆತ್ಮಸ್ಥೈರ್ಯ ಮತ್ತು ನೆನಪಿನ ಶಕ್ತಿ ಆತನಿಗೆ ಮುಖ್ಯವಾಗಿ ಬೇಕಾಗುತ್ತದೆ. "ಕನ್ನಡದಲ್ಲಿ ಮೊಟ್ಟಮೊದಲ ಬಾರಿ ಸ್ವತಂತ್ರ ಆತ್ಮಚರಿತ್ರೆ ಬರೆದವರು ಹರ್ಡೇಕರ ಮಂಜಪ್ಪನವರು. ಅವರ "ನನ್ನ ಮೂವತ್ತು ವರುಷಗಳ ಕಾಣಿಕೆ" 1936ರಲ್ಲಿ ಪ್ರಕಟವಾಯಿತು. 5-8-1939ರಲ್ಲಿ ಪ್ರಕಟವಾದ ಜಿ.ಪಿ.ರಾಜರತ್ನಂ ಅವರ 'ಹತ್ತು ವರುಷ' ಕನ್ನಡದಲ್ಲಿ ಬಂದ ಎರಡನೆಯ ಆತ್ಮಚರಿತ್ರೆ" ಎನ್ನುತ್ತಾರೆ. **(ವೀರಣ್ಣ ರಾಜೂರ, ಹಿರೇಮಠ ಬಿ.ಆರ್(ಸಂ), 1996, ಪುಟ 174)**

'ತೀರ' ಎಂಬುದು ಕೆ.ಟಿ.ಗಟ್ಟಿ ಯವರ 273 ಪುಟಗಳ ಒಂದು ವಿಶಿಷ್ಟವಾದ ಆತ್ಮಚರಿತ್ರೆ. 2003ರಲ್ಲಿ ಪ್ರಕಟಣೆಗೊಂಡ ಇದರ ಮುನ್ನುಡಿಯಲ್ಲಿ 'ತೀರ'ವನ್ನು ಕಾದಂಬರಿಯೆಂದು ಪರಿಗಣಿಸಿದರೂ ಆಗಬಹುದು. ಅಥವಾ ಯಾವ ಪ್ರಕಾರಕ್ಕೂ ಸೇರದ ಒಂದು 'ಕಾಲ್ಪನಿಕ' ಎಂದು ಪರಿಗಣಿಸಬಹುದು ಎನ್ನುತ್ತಾರೆ. "ನನ್ನ ಬದುಕಿನಲ್ಲಿ ಕೆಟ್ಟ ಪಾಠಗಳಿಗೆ ಕಾರಣನಾದ ಕೂಡ್ಲಿನ 'ಬೆಳದಿಂಗಳ ರಾಕ್ಷಸ'ನಿಂದ ತೊಡಗಿ, ಉಜಿರೆಯ 'ದೂರ್ವಾಸ'ನ ವರೆಗೆ, ಅವರು ಸತ್ತಿರಲಿ ಬದುಕಿರಲಿ, ನಾನು ಯಾರನ್ನೂ ಕ್ಷಮಿಸಲಾರೆ"

ಎನ್ನುವ ಕೆ.ಟಿ.ಗಟ್ಟಿಯವರು ಅದಕ್ಕೆ ತನ್ನದೇ ಆದ ಸಮರ್ಥನೆಯನ್ನೂ ನೀಡುತ್ತಾರೆ. "ಯಾರದೋ ಪ್ರೀತಿ ನಷ್ಟವಾಗುತ್ತದೆ ಎಂದು 'ಕ್ಷಮಿಸಿದ್ದೇನೆ' ಎಂದು ಹೇಳಿ, ಸುಳ್ಳು ಮಹಾತ್ಮನಾಗುವುದಕ್ಕಿಂತ, ಕ್ಷಮಿಸದೆ ಇರಲಾಗುವಂತೆ ಇದ್ದು, ಬದುಕಲಾಗುವಂತೆ ಬದುಕಿ, ಸಾಯುವ ಕಾಲ ಬಂದಾಗ, 'ನಿಜವಾಗಿಯೂ ಬದುಕಿದೆ' ಎಂಬ ಭಾವದಲ್ಲಿ ಸಾಯುವುದರಲ್ಲಿ ಸುಖವಿದೆ ಎಂದು ಭಾವಿಸುತ್ತೇನೆ." ಎನ್ನುತ್ತಾರೆ.

**(ಗಟ್ಟಿ ಕೆ.ಟಿ. ತೀರ, 2003, ಪುಟ 2)**

ಆತ್ಮಕಥೆ 'ತೀರ'ದಲ್ಲಿ ಇವರು ತಮ್ಮ ನೇರ ನುಡಿಗಳ ಮೂಲಕ ತಮ್ಮ ಬದುಕಿನ ವಾಸ್ತವಗಳನ್ನು ಹೇಳಿದ್ದಾರೆ. 'ತೀರ'ದ ಆರಂಭದಲ್ಲಿಯೇ "ಇದರಲ್ಲಿ ಬರುವ ಪಾತ್ರಗಳೆಲ್ಲ ಕಾಲ್ಪನಿಕ ಎಂದು ತಿಳಿಯಬೇಕು, ಈ ಕಥೆಯಲ್ಲಿನ ಪಾತ್ರಗಳಲ್ಲಿ ಯಾವುದೂ ಜೀವಂತವಲ್ಲ ಎಂದು ಓದುವವರಿಗನಿಸಿದರೆ, ಅನಿಸಿಕೆ ತಪ್ಪೆನ್ನಲಾಗದು. ಜೀವಂತ ಎನಿಸಿದರೆ ಅದು ಕೇವಲ ಆಕಸ್ಮಿಕ" ಎನ್ನುತ್ತಾ ಆತ್ಮಕಥೆಯನ್ನು ಹೇಳಲು ಆರಂಭಿಸುತ್ತಾರೆ. ಮೊದಲು ತನ್ನ ಬಾಲ್ಯದ ಬಡತನದಿಂದ ಕೂಡಿದ ನೆನಪುಗಳನ್ನು ಬಿಚ್ಚಿಡುತ್ತಾರೆ. ಮೊದಲು ಅಧ್ಯಾಪಕನಾಗಿ ಶಾಲೆಗೆ ಸೇರಿದಾಗ ಸುಂದರವಾದ ಹುಡುಗಿಯರು ತನ್ನ ಭುಜದ ಮೇಲಿನ ಶಾಲನ್ನು ಅದರ ಕಸೂತಿ ನೋಡಲು ಕೇಳಿದಾಗ ಅವರು ಹೆದರಿದ್ದು ತನ್ನ ಹರಕು ಭುಜದ ಅಂಗಿಯ ಕಸೂತಿ ಅವರಿಗೆ ತಿಳಿಯುತ್ತದೆ ಎಂಬ ಕಾರಣದಿಂದ. ಆ ಭಯಕ್ಕೆ ಅವರು ನೀಡುವ ಇನ್ನೊಂದು ಕಾರಣ "ಅದು ವಾಸ್ತವದಲ್ಲಿ, ತೀವ್ರವಾದ ಆಕರ್ಷಣೆಯನ್ನು ಪ್ರತಿರೋಧಿಸುವ ಆಂತರಿಕ ಯತ್ನ" ಎಂದು. ಉದ್ಯೋಗ ಮಾಡುತ್ತಲೇ ಅವರು ಓದನ್ನು ಮುಂದುವರಿಸಿದರು. ಈ ಬಗ್ಗೆ ಅವರು "ಓದು ಮತ್ತು ಬರವಣಿಗೆಯಲ್ಲಿ ನನಗೆ ಅಪಾರವಾದ ಆಸಕ್ತಿಯಿದ್ದುದೇನೋ ನಿಜ. ಆದರೆ ಅದು ಒಂದು ರೀತಿಯಲ್ಲಿ ನನ್ನೊಳಗಿದ್ದ ದುಃಖಕ್ಕೊಡ್ಡಿದ ಪ್ರತಿರೋಧವೇ ಆಗಿರಬೇಕು" ಎನ್ನುತ್ತಾರೆ. "ಮನುಷ್ಯ ಸೃಷ್ಟಿಸಿದ ನಾನಾ ಜಾತಿಗಳ ಬಗ್ಗೆ ನನಗೆ

**(ಅದೇ, ಪುಟ 14)**

ದುಃಖವಿದೆ, ಆದರೆ ಅದಕ್ಕೆ ನಾನೇನೂ ಮಾಡಲಾಗದು. ದುಃಖವನ್ನಿಟ್ಟುಕೊಂಡೇ ಸಾಯಬೇಕಾಗಿದೆ" ಎಂದು ಜಾತಿ ವ್ಯವಸ್ಥೆಯ ಕುರಿತು ಹೇಳುತ್ತಾರೆ.

ಮಕ್ಕಳನ್ನು ಅಮಾನವೀಯವಾಗಿ ಶಿಕ್ಷಿಸುವ ಅಧ್ಯಾಪಕರ ಬಗ್ಗೆ ಅವರಿಗೆ ವಿರೋಧವಿದೆ. ಹೆತ್ತವರು ಈ ಬಗ್ಗೆ ವಿಚಾರಿಸಿದರೆ ಆ ವಿದ್ಯಾರ್ಥಿಯನ್ನು ಫೇಲು ಮಾಡಲು ಪ್ರಯತ್ನಿಸುತ್ತಾರೆ ಎನ್ನುತ್ತಾರೆ. ಮಕ್ಕಳನ್ನು ಶಿಕ್ಷಿಸುವ, ಹೆಣ್ಣು ಮಕ್ಕಳ ಮೇಲೆ ಲೈಂಗಿಕ ದೌರ್ಜನ್ಯ ನಡೆಸುವ ಅಧ್ಯಾಪಕನನ್ನು ಅವರು ಬೆಳದಿಂಗಳ ರಾಕ್ಷಸ ಎಂದು

ಹೆಸರಿಸುತ್ತಾರೆ. ತಾವು ಮೇಲು ವರ್ಗದವರೆಂಬ ಭಾವನೆ ಅಥವಾ ಕುಲೀನತೆಯ ವ್ಯಸನ ಸಮಾಜಕ್ಕಂಟಿದ ಒಂದು ಶಾಪ ಎಂದು ಗಟ್ಟಿಯವರ ಭಾವನೆ. ಜಾತಿಯನ್ನು ಬದಲಾಯಿಸಲಿಕ್ಕಾಗುವುದಿಲ್ಲವಾದುದರಿಂದ ಮೇಲು ವರ್ಗದವನಾಗಲು ಸಾಧ್ಯವೇ ಇಲ್ಲ. ಆದರೆ ಇಂಗ್ಲಿಷಿನ ಮೂಲಕ ಮೇಲಿನವನಾಗಿದ್ದೇನೆ ಎಂಬ ಭಾವನೆಯಿಂದಾಗಿ ನವ ಕುಲೀನತೆಯೊಂದು ಸೃಷ್ಟಿಯಾಗಿದೆ. ಕನ್ನಡ ಸಾಹಿತ್ಯ ಚಳುವಳಿಗಳ ಬಗ್ಗೆ ಗಟ್ಟಿಯವರು "ಪ್ರಾಮಾಣಿಕವಾಗಿ ಹೇಳುತ್ತೇನೆ: ನನಗಿವತ್ತಿಗೂ ಜನಪ್ರಿಯ, ಜನಶ್ರೇಷ್ಠ ಅಥವಾ ನವ್ಯ ಬಂಡಾಯ ಮುಂತಾದ ಶಬ್ದಗಳ ಅರ್ಥ ಸ್ಪಷ್ಟವಾಗಿ ಗೊತ್ತಿಲ್ಲ. ಇಂಥ ಶಬ್ದಗಳಿಗೆ ಶಾಶ್ವತವಾದ ಅರ್ಥಗಳಿವೆಯೆ? ಯಾವುದೇ ಒಂದು ಕಾಲದ ಸ್ಥಿತಿಗೆ ಸಂಬಂಧಿಸಿದ ಸತ್ಯ ಸಾರ್ವಕಾಲಿಕವಾಗಲು ಸಾಧ್ಯವೇ? ನಾನು ಸಾರ್ವಕಾಲಿಕ ಸಾಹಿತ್ಯವನ್ನು ಮಾತ್ರ ಸೃಷ್ಟಿಸುತ್ತೇನೆ ಎಂದು ಒಬ್ಬ ಲೇಖಕನಿಂದ ನಿರ್ಧರಿಸಲಾಗುತ್ತದೆಯೇ? ಒಂದು ಕಾಲದ ಸತ್ಯ ಸರ್ವಕಾಲಕ್ಕೂ ಮಾನ್ಯ ಎಂದು ವಾದಿಸುವುದು ಮೂಲಭೂತವಾದ ವೆನಿಸುವುದಿಲ್ಲವೆ? ಈ ಮೌಲೀಕರಣದ ಪ್ರಕಾರ ಏನಾದರೊಂದು ಆಗಬೇಕು ಎಂದು ಪ್ರಯತ್ನಿಸುವ ಮನುಷ್ಯನೊಳಗಿನ ಲೇಖಕ ಉಳಿಯುತ್ತಾನೆಯೆ, ಸತ್ತು ಹೋಗುವುದಿಲ್ಲವೆ?" ಎಂದು ಪ್ರಶ್ನಿಸುತ್ತಾರೆ.

**(ಅದೇ, ಪುಟ 80)**

ಆಗಿನ ಕಾಲದ ಸಾಮಾಜಿಕ ಪರಿಸರವನ್ನು ಕುರಿತು ಹೀಗೆ ಹೇಳುತ್ತಾರೆ. "ಊರಿಗೊಡೆಯರಂತಿರುವ ಶ್ರೀಮಂತನ ಬಡತನ. ಆ ಬಡತನದ ನಿವಾರಣೆಗೆ ವಕ್ಕಲುಗಳ ಗೇಣಿಯ ರಕ್ತ. ರಕ್ತವನ್ನು ಹೀರುತ್ತಾ ವಿಜೃಂಭಿಸುವ ಅವರ ಕಾಮ, ಕ್ರೋಧ, ಮದ, ಮತ್ಸರ. ಇಡೀ ಜಗತ್ತೇ ತನ್ನ ವಕ್ಕಲು ಎಂಬ ಅಹಂಕಾರ. 'ಕಾಲು, ಮುರಿಯುತ್ತೇನೆ, ಕೈ ಮುರಿಯುತ್ತೇನೆ' ಎಂಬ ಮಂತ್ರಗಳು. ಅವರ ದೊಡ್ಡ ಮನೆ, ದೊಡ್ಡ ಕುಟುಂಬದ ಭೂತ ಮತ್ತು ವರ್ತಮಾನದ ಕುರಿತು ಚಿತ್ರ ವಿಚಿತ್ರ ಕಥೆಗಳು. ಅವರ ಜೊತೆಯಲ್ಲಿ ಅವರ ಜೀತದಾಳುಗಳಂತಿರುವ ದೈವ ದೇವರುಗಳು, ಸೂಳೆ ಮನೆಯೇ ದೇವಸ್ಥಾನ, ದೇವಸ್ಥಾನವೇ ಸೂಳೆ ಮನೆ!". ಅವರು ಬರೆದ ಮೊದಲ ಕತೆ 'ಮುಂಗಾರ

**(ಅದೇ, ಪುಟ 87)**

ಮುಗಿಲು' ಪತ್ರಿಕೆಯೊಂದರಲ್ಲಿ ಪ್ರಕಟವಾದಾಗ ಕಹಿಯ ಅನುಭವ ಉಂಟಾಗಿತ್ತು. ಆ ಕತೆಯಲ್ಲಿ ಬರುವ ಶರಾಬು ಮಾರುವವನ ಹೆಸರು ಹಳ್ಳಿಯಲ್ಲಿ ಕಳ್ಳಭಟ್ಟಿ ತಯಾರಿಸಿ ಮಾರುವವನ ಹೆಸರನ್ನು ಹೋಲುತ್ತಿತ್ತು. ಊರಿನ ಶ್ರೀಮಂತ ಭೂಮಾಲಿಕನೊಬ್ಬ ನಿರಕ್ಷರ ಕುಕ್ಷಿಯಾದ ಆತನನ್ನು ಗಟ್ಟಿಯವರ ಮನೆಗೆ ಕಳಿಸಿದ್ದ. ಆತ ಮನೆಗೆ ಬಂದು ನಿನ್ನ ಕೈ ಕತ್ತರಿಸುತ್ತೇನೆಯೆಂದು ಹೇಳಿ ಹೋಗಿದ್ದ.

ಇವರು ಮೊತ್ತ ಮೊದಲು ನೋಡಿದ ಸಿನಿಮಾ 'ರಾಜಾ ಸುಲೋಚನ'. ಮತ ಎಂಬುದು ಒಂದು ಸುಳ್ಳು. ಸತ್ಯ ಹಸಿವೆ ಮಾತ್ರ. ಹಸಿವೆಗಿಂತ ದೊಡ್ಡ ತತ್ವ ಜ್ಞಾನಿ ಬೇರೆ ಇಲ್ಲ. ಮನುಷ್ಯ ಯಾವುದೇ ಮತದವನಾಗಿ ಹುಟ್ಟುವುದಿಲ್ಲ, ಮನುಷ್ಯ ಹುಟ್ಟುವುದು ಹಸಿವೆಯೊಂದಿಗೆ. ಮಗುವಿನ ಮನಸ್ಸಿನಲ್ಲಿ ದೇವರು ಇರುವುದಿಲ್ಲ. ದೇವರನ್ನು ಮತ್ತೆ ತುಂಬಿಸಲಾಗುತ್ತದೆ. ಮಗುವಿನ ಹೊಟ್ಟೆಯಲ್ಲಿ ಎರಡು ಹಸಿವೆಗಳಿರುತ್ತವೆ. ಒಂದು ಅನ್ನದ್ದು, ಇನ್ನೊಂದು ಪ್ರೀತಿಯದ್ದು ಇವೆರಡನ್ನು ಯಾವ ಧರ್ಮವೂ ಕೊಡಲಾರದು. ಯಾವ ಜಗದ್ಗುರುವೂ ಕೊಡಲಾರ ಎನ್ನುವುದು ಗಟ್ಟಿಯವರ ಅಭಿಪ್ರಾಯ. ಇವರಿಗೆ ತನ್ನ ತಾಯಿಯ ಬಗ್ಗೆ ಹೆಮ್ಮೆ ಅಭಿಮಾನ ಬಹಳ.

ಬೇಸಿಕ್ ಟ್ರೈನಿಂಗ್ ಸ್ಕೂಲ್‌ಗೆ ಸೇರಿದ ಆರಂಭದಲ್ಲಿ ಅದು ಜೈಲಿನ ಹಾಗೆ ಕಾಣುತ್ತಿತ್ತು. ಹಾಗಾಗಿ ಅಲ್ಲಿ ಹೇಳದೆ ಮನೆಗೆ ಓಡಿ ಬರುತ್ತಾರೆ. ಮನೆಗೆ ಬಂದ ಮೂರನೆ ದಿನ ಸಾಯಂಕಾಲ ತಂದೆ ಬುದ್ಧಿ ಹೇಳಿ ಹೆಡ್ಮಾಸ್ತರರ ಬಳಿ ಕರೆತರುತ್ತಾರೆ. ಅವರು ಸಮಾಧಾನದಿಂದ ಮಾತನಾಡುತ್ತಾ ನೀವು ಎಂದೇ ಸಂಬೋಧಿಸುತ್ತಿದ್ದುದನ್ನು ಕಂಡು ಆಶ್ಚರ್ಯವಾಯಿತು. "ನಮ್ಮ ಹಳ್ಳಿಯಲ್ಲಿ ಶ್ರೀಮಂತನ ಅಥವಾ ಮೇಲ್ಜಾತಿಯವನ ಮಗು ಸಹ ಪ್ರತಿಯೊಬ್ಬನನ್ನೂ ಏಕವಚನದಲ್ಲೇ ಕರೆಯುತ್ತಿತ್ತು. ಶ್ರೀಮಂತ ಅಥವಾ ಮೇಲ್ಜಾತಿಯವನ ಮನೆಯ ಯಾರೊಬ್ಬನೂ ಇತರರನ್ನು ಗೌರವದಿಂದ ಮಾತಾಡಿಸುವ ಪದ್ಧತಿಯೇ ಇರಲಿಲ್ಲವೆನ್ನಬಹುದು. ಈಗಲೂ ಆ ಸಂಪ್ರದಾಯ ಮುಂದುವರಿದಿದೆ." ಎನ್ನುತ್ತಾರೆ. **(ಅದೇ, ಪುಟ 116)**

ಬುನಾದಿ ಶಾಲೆಯಲ್ಲಿ ವಿದ್ಯಾರ್ಥಿಗಳ ಮೇಲೆ ಹೇರಲಾಗುತ್ತಿದ್ದ ಒತ್ತಡವನ್ನು ಗಟ್ಟಿಯವರು ವಿರೋಧಿಸುತ್ತಾರೆ. ಅದನ್ನು ಅಂಡಮಾನೆಂದು ಕರೆದರೆ ತಪ್ಪಾಗಲಾರದು ಎನ್ನುತ್ತಾರೆ. ಅಲ್ಲಿ ಹತ್ತಿ ಉಗ್ರಾಣದಿಂದ ಹತ್ತಿ ಪಡೆದು ಬೀಜ ತೆಗೆದು ಹತ್ತಿ ಬತ್ತಿ ತಯಾರಿಸಿ ತಕಲಿ ಅಥವಾ ಚರಕದಲ್ಲಿ ನೂಲು ಮಾಡಿ ಇಪ್ಪತ್ತು ಗಜ ಬಟ್ಟೆ ನೇದು ಒಪ್ಪಿಸಬೇಕಿತ್ತು. ಒಪ್ಪಿಸದಿದ್ದರೆ ಪರೀಕ್ಷೆಗೆ ಕಟ್ಟುವಂತಿರಲಿಲ್ಲ. ಹೊರಗೆ ಯಾರೂ ಇಂಗ್ಲಿಷ್ ಮಾತಾಡಬಾರದು. ಕನ್ನಡ ಮಾತಿನೆಡೆಯಲ್ಲಿ ಇಂಗ್ಲಿಷ್ ಶಬ್ದ ಬರಕೂಡದು. ಸಹ ವಿದ್ಯಾರ್ಥಿಗಳಿಂದ ಸಲಿಂಗರತಿಗೆ ಆಹ್ವಾನ ಬರುತ್ತಿತ್ತು. ನಿರಾಕರಿಸಿದಾಗ ಅಧ್ಯಾಪಕನಾದ 'ಗುರು ರಾಕ್ಷಸ'ನಿಗೆ ಏನೇನೋ ದೂರು ಹೇಳಿ ಬೈಸುತ್ತಿದ್ದರು. ಕನ್ನಡ ಪಾಠ ಮಾಡುವ ಅಧ್ಯಾಪಕರೊಬ್ಬರು ಡಿಕ್ಟೇಷನ್ ಕೊಟ್ಟಾಗ ಅದನ್ನು ಬರೆದು ಅದರಲ್ಲಿ ಹೆಸರು ಬರೆಯಲಿಲ್ಲ ಎಂಬ ಕಾರಣಕ್ಕಾಗಿ ಅವರು ಕಿವಿ ಹಿಂಡಿದ್ದಲ್ಲದೆ ಥತ್, ಸ್ನಾನ ಮಾಡದೆ

ಎಷ್ಟು ದಿನವಾಗಿತ್ತೋ ಏನೊ, ಇನ್ನು ಕೈ ತೊಳೆಯಬೇಕು ಕರ್ಮ! ಎಂದು ಹೇಳಿದರು. "ಯಾವ ಅಧ್ಯಾಪಕನಿಗೆ ವಿದ್ಯಾರ್ಥಿಯನ್ನು ಕಾಣುವಾಗ ಅದರ ಜೊತೆ ಅವನ ಜಾತಿ ಕೂಡ ಕಾಣಿಸುತ್ತದೆಯೋ ಅವರಿಂದಲೇ ಈ ದೇಹ ಹಾಳಾದದ್ದು ಎಂದು ನನಗೆ ಎಷ್ಟೋ ಬಾರಿ ಅನಿಸಿದೆ. ಹಾಳಾಗಿಲ್ಲವಲ್ಲ ಎಂದು ಯಾರಾದರೂ ಹೇಳಿದರೆ, ಅದು ಖಂಡಿತವಾಗಿಯೂ ಇಂಥ ಮೇಸ್ಟರುಗಳಿಂದಾಗಿಯಲ್ಲ" ಎಂದು ಆ ಸಂದರ್ಭದ

**(ಅದೇ, ಪುಟ 124)**

ಬಗ್ಗೆ ಗಟ್ಟಿಯವರು ಮನನೊಂದು ನುಡಿಯುತ್ತಾರೆ. ಮಾನವ ಹೇಗೆ ಬದುಕಬೇಕು ಎಂದು ತಿಳಿಸುತ್ತಾರೆ. "ಅನುಭವಗಳ ವಿಶ್ಲೇಷಣೆಯಲ್ಲಿಯೇ ಬದುಕಿನ ಮುನ್ನಡೆ ಇರುವುದು. ಬದುಕು ನಿಂತ ನೀರಾಗದಿರಬೇಕಾದರೆ, ಪ್ರಶ್ನಿಸಬೇಕು. ಕೀಟ್ಸನಂತೆ ನಿರಂತರ ಸತ್ಯವನ್ನು, ಸೌಂದರ್ಯವನ್ನು ಕಾಣುವ ಪ್ರಯತ್ನದಲ್ಲಿರಬೇಕು. ಹಲ್ಲುಗಿಂಜಿ, ಆತ್ಮವನ್ನು ಮುಚ್ಚಿ, ಮುಖಸ್ತುತಿಗೆ ಲಭಿಸುವ ಸಿಹಿ ತಿಂಡಿಗೆ ಜೊಲ್ಲು ಸುರಿಸಬಾರದು. ಸಮಾಜ ನಿಂದಿಸಬಹುದು. ತರಗತಿಯಿಂದ, ಯೂನಿವರ್ಸಿಟಿಯಿಂದ, ಉದ್ಯೋಗದಿಂದ ಹೊರಗೆ ಹಾಕಬಹುದು. ಜಾತಿ ಬಹಿಷ್ಕಾರದ, ಮತ ಬಹಿಷ್ಕಾರದ ಫರ್ಮಾನು ನೀಡಬಹುದು. ಗಲ್ಲಿಗೇರಿಸಬಹುದು. ಹಾಗೆಲ್ಲ ದುಷ್ಕೃತ್ಯ ಮಾಡಿದವರೂ ಸಾಯುತ್ತಾರೆ. ಆ ದುಷ್ಕೃತ್ಯಕ್ಕೆ ಗುರಿಯಾದ ಸಜ್ಜನನೂ ಸಾಯುತ್ತಾನೆ. ಆದರೆ ಪಿಲಾತನಂತೆ ಸಾಯುವುದಕ್ಕಿಂತ, ಯೇಸುವಿನಂತೆ ಸಾಯುವುದು ಒಳ್ಳೆಯದು ಎಂದು ನಾವು ಅರ್ಥಮಾಡಿಕೊಳ್ಳಬೇಕು."

**(ಅದೇ, ಪುಟ 132)**

ತಮ್ಮ ವೃತ್ತಿ ಜೀವನದಲ್ಲಿ ಎದುರಾದ ದುಷ್ಟ ವ್ಯಕ್ತಿಗಳ ಬಗ್ಗೆಯೂ ಗಟ್ಟಿಯವರು ತಿಳಿಸುತ್ತಾರೆ. ಸಮಾಜದಲ್ಲಿ ಮುಂದುವರಿದುಕೊಂಡು ಬರುತ್ತಿರುವ ಮೌಢ್ಯಗಳನ್ನು ಖಂಡಿಸುತ್ತಾರೆ. "ತಂದೆ ಸತ್ತೊಡನೆ ತಾಯಿಯನ್ನೂ ಸತ್ತಂತೆ ಎಂದು ಪರಿಗಣಿಸಬೇಕೆಂಬ ಆಚರಣೆಯಿರುವ ಈ ಸಮಾಜದಲ್ಲಿ ಯಾರ ಮನಸ್ಸಿನಲ್ಲಿ ಯಾರು ಬದುಕಿ ಉಳಿಯಲು ಸಾಧ್ಯ? ಮಗ ಅಥವಾ ಮಗಳ ಮದುವೆಯಾದಾಗ, ಅವರ ತಂದೆ ಜೀವಂತವಾಗಿಲ್ಲವೆಂದಾದರೆ, ತಾಯಿ ಸಹ ವಧುವಿನ ಬಳಿ ವರನ ಬಳಿ ಇರಕೂಡದು! ಈ ನಿಯಮವನ್ನು ವಿದ್ಯಾವಂತ ವಧೂವರರೇ ಪಾಲಿಸಿಕೊಂಡು ಬರುವುದಕ್ಕಿಂತ ಸೋಜಿಗದ ವಿಚಾರ ಬೇರೆ ಇದೆಯೇ? ತಂದೆ ಸತ್ತರೆ, ತಾಯಿಯಾದರೂ ಇದ್ದಾಳಲ್ಲಾ ಎಂದು ಸಮಾಧಾನ ಪಡುವುದಕ್ಕೂ ಸಮಾಜದ ಆಕ್ಷೇಪ! ಹೆಣ್ಣಿಗೆ 'ಗಂಡ ಸತ್ತವಳು' ಎಂಬ ವಿಶೇಷವಾದ ಶಬ್ದವಿದೆ. ಗಂಡಿಗೆ 'ಹೆಂಡತಿ ಸತ್ತವನು' ಎನ್ನುವುದಿಲ್ಲ. ಈ ಸಮಾಜಕ್ಕೆ ದೈವಾಜ್ಞೆಯೇನೂ ಇಲ್ಲ. ಈ ಸಮಾಜ ಹುಚ್ಚು ಹುಚ್ಚಾಗಿ ಹೆಜ್ಜೆಯಿಟ್ಟು ಹುಚ್ಚು

ಹುಚ್ಚಾಗಿ ನಡೆದುಕೊಂಡಿದೆ. ಇದು ನಡೆದ ದಾರಿಯೇ ಸರಿ ಎಂದು ಪ್ರಶ್ನಾತೀತವಾಗಿ ನಂಬಿದರೆ, ಪ್ರಜ್ಞಾವಂತಿಕೆಗೆ ಸ್ಥಾನವೇ ಇರುವುದಿಲ್ಲ."

**(ಅದೇ, ಪುಟ 137)**

ಈ ದೇಶದಲ್ಲಿ ಮೌಲ್ಯದ ವಿಚಾರದಲ್ಲಿ ಶ್ರೇಷ್ಠವಾದುದನ್ನು 'ಬ್ರಾಹ್ಮಣ' ಎಂದು ಗುರುತಿಸುವ ಪರಿಪಾಠ ಇದೆ ಎನ್ನುತ್ತಾ ಶ್ರೇಷ್ಠ ಅಕಾಡೆಮಿಕ್ ಮೌಲ್ಯವನ್ನು ಬ್ರಾಹ್ಮಣೀಯತೆಗೆ ಸಮೀಕರಿಸಿದ್ದರಿಂದಾಗಿ ಅಥವಾ ಅದನ್ನು ದೈವಿಕ ಗುಣವೆಂದು ಪರಿಗಣಿಸಿದ್ದರಿಂದಾಗಿ ಕಾಲಾಂತರದಲ್ಲಿ ಒಂದು ಅಮಾನವೀಯ ಸಾಮಾಜಿಕ ವರ್ಗೀಕರಣ ಸೃಷ್ಟಿಯಾದದ್ದು ಭಾರತೀಯ ಸಮಾಜದ ಒಂದು ದೋಷ ಎಂದು ತಿಳಿಸುತ್ತಾರೆ. "ಬ್ರಾಹ್ಮಣ ದೈವಾರಾಧನಾ ಪರಂಪರೆ ಜಗತ್ತಿನಲ್ಲಿ ಅತ್ಯಂತ ವಿಚಿತ್ರವಾದದ್ದು. ಯಾವುದೇ ಒಂದು ನಿರ್ದಿಷ್ಟ ಜಾತಿಯ ಮಂದಿ ದೇವರ ಕಸ್ಟೋಡಿಯನ್ ಆಗಿರುವುದು ಭೂಮಿಯಲ್ಲಿ ಬೇರೆಲ್ಲಿಯೂ ಇಲ್ಲ. ಯಾಕೆ ಬ್ರಾಹ್ಮಣನೇ ದೇವರನ್ನು ಪೂಜಿಸಬೇಕು ಮತ್ತು ಬ್ರಾಹ್ಮಣನ ಕಸ್ಟಡಿಯಲ್ಲಿರಬೇಕು ಎಂಬ ಪ್ರಶ್ನೆಗೆ ವೈಚಾರಿಕವಾದ ಉತ್ತರವನ್ನು ಯಾರೂ ಕೊಡಲಾರರು. ಈ ಜಾತೀಯ ಶ್ರೇಣೀಕೃತ ಭಾವನೆ ಕೇವಲ ಬ್ರಾಹ್ಮಣ-ಬ್ರಾಹ್ಮಣೇತರ ಎಂಬುದಕ್ಕೇ ಸೀಮಿತವಾಗಿಲ್ಲ. ಇದು ಇತರ ಜಾತಿಯವರಲ್ಲಿಯೂ ಇರುವಂಥದ್ದೇ. ತಾವು ಮೇಲು ಎಂದು ಬಹುತೇಕ. ಎಲ್ಲ ಜಾತಿಯವರೂ ಭಾವಿಸುತ್ತಾರೆ" ಎಂದು ಜಾತಿ ವ್ಯವಸ್ಥೆಯನ್ನು ಪ್ರಶ್ನಿಸುತ್ತಾರೆ.

**(ಅದೇ, ಪುಟ 138)**

ಜಾತಿ ತಾರತಮ್ಯದ ಬಗ್ಗೆ ಗಟ್ಟಿಯವರು ವೈಚಾರಿಕ ಪ್ರಶ್ನೆಯನ್ನು ಎತ್ತುತ್ತಾರೆ. "ಹುಡುಗನ ಬ್ರಹ್ಮೋಪದೇಶಕ್ಕೆ ಅವನಿಂದ ಅವನ ಬ್ರಾಹ್ಮಣ ಮೇಷ್ಟ್ರುಗಳಿಗೆ ಸಂಜೆಯ ಟೀ ಪಾರ್ಟಿಯ ಆಮಂತ್ರಣ. ಊರ ದೇವಾಲಯಕ್ಕೆ ಕಾಣಿಕೆ, ವಂತಿಗೆ ಸಕಲ ಜಾತಿಯವರಿಂದಲೂ ಬರುತ್ತದೆ. ಆದರೆ ಬ್ರಾಹ್ಮಣರಿಗೆ ಮೊದಲ ಊಟ, ಬ್ರಾಹ್ಮಣರಲ್ಲದವರಿಗೆ ಆಮೇಲೆ. 'ನಾವು ಪ್ರೀತಿಯಿಂದ ಪಾಠ ಮಾಡುತ್ತೇವೆ, ಭೇದವೆಣಿಸದೆ ಪಾಠ ಮಾಡುತ್ತೇವೆ. ಆದರೆ ನಮ್ಮ ಮಕ್ಕಳು ನಮಗೆ ಬೇರೆಯೇ ಒಂದು ಇನ್ವಿಟೇಶನ್ ನೀಡುವ ಮೂಲಕ ನಮ್ಮನ್ನು ಶೂದ್ರ ಎಂದು ಗುರುತಿಸುವಾಗ ತುಂಬಾ ಕೆಟ್ಟದೆನಿಸುತ್ತದೆ' ಎಂದು ಅಧ್ಯಾಪಕರು ಹೇಳುತ್ತಾರೆ. 'ನಾವು ಕೊಡುವ ಚಿಕಿತ್ಸೆಗೆ, ಔಷಧಿಗೆ, ಇಂಜೆಕ್ಷನಿಗೆ ಜಾತಿಯಿಲ್ಲ, ರಕ್ತಕ್ಕೆ ಜಾತಿಯಿಲ್ಲ ಪ್ರಾಣಕ್ಕೆ ಜಾತಿಯಿಲ್ಲ. ಆದರೆ ನಮ್ಮ ಪೇಶಂಟುಗಳು ಅವರು ನಮಗಿಂತ ಮೇಲು ಜಾತಿಯವರು ಎಂದು ತೋರಿಸುವ ಸ್ಪೆಶಲ್ ಇನ್ವಿಟೇಶನ್ ಕೊಡುತ್ತಾರೆ' ಎಂದು ಡಾಕ್ಟರುಗಳು ಹೇಳುತ್ತಾರೆ."

**(ಅದೇ, ಪುಟ 139).**

ಗಟ್ಟಿಯವರು ನಾಲ್ಕನೆ ತರಗತಿಯಲ್ಲಿರುವಾಗ ಅವರ ಸಹಪಾಠಿ ಶ್ರೀಧರ ತನ್ನ ಮನೆಗೆ ಕರೆದುಕೊಂಡು ಹೋಗಿ ತಿಂಡಿ ತಿನ್ನಲು ಒತ್ತಾಯ ಮಾಡುತ್ತಾನೆ. ಇವರು ಒಳಗೆ ನಡೆದಾಗ ಅಲ್ಲಿ ಅಲ್ಲ, ಇಲ್ಲಿ ಎಂದು ಹೊರ ಜಗಲಿಯಲ್ಲಿ ಕುಳ್ಳಿರಿಸುತ್ತಾರೆ. ಬಾಳೆಲೆಯಲ್ಲಿ ತಿಂಡಿ ತಿಂದ ನಂತರ ಶ್ರೀಧರ ಹೇಳಿಕೊಟ್ಟಂತೆ ತಿಂದ ಜಾಗಕ್ಕೆ ನೀರು ಚಿಮುಕಿಸಿ ಸೆಗಣಿ ಸವರಿ ಶುದ್ಧೀಕರಣ ನಡೆಸಿ ಲೋಟ ತೊಳೆದು ಕವಚಿ ಇರಿಸಬೇಕಾಗುತ್ತದೆ. ಆ ಸಂದರ್ಭದಲ್ಲಿ ಅವರು ಮಾನಸಿಕ ಯಾತನೆಯನ್ನು ಅನುಭವಿಸುತ್ತಾರೆ. ತಾನು ಅಧ್ಯಾಪಕನಾಗಿರುವಾಗಲೂ ಇಂತಹ ಒಂದು ಪ್ರಸಂಗವನ್ನು ಎದುರಿಸಬೇಕಾಗಿ ಬರುತ್ತದೆ ಎಂದು ತಿಳಿಸುತ್ತಾರೆ.

"ಪರಮ ಸತ್ಯ ಅಂದರೆ, ಶ್ರೀಮಂತ ವ್ಯಕ್ತಿ, ಡಾಕ್ಟರ್, ಸರಕಾರಿ ಅಧಿಕಾರಿ ಇತ್ಯಾದಿ ಆಗಿರುವವರ ಜಾತಿ ಏನೇ ಆಗಿದ್ದರೂ ಅವರಲ್ಲಿ ಸ್ವಾಗತಾರ್ಹವಾದ 'ಬ್ರಹ್ಮತ್ವ'ವಿದೆ. ಬಡತನ ಮತ್ತು ವಿದ್ಯಾಹೀನತೆಯೇ ಕೀಳು ಜಾತಿಯ ಸಂಕೇತ. ಬಡತನ ಮತ್ತು ವಿದ್ಯಾಹೀನತೆಯನ್ನು ತೊಲಗಿಸಿದರೆ ಜಾತಿ ತಾನಾಗಿ ತೊಲಗುತ್ತದೆ" ಎನ್ನುತ್ತಾ ಸಮಸ್ಯೆಗೆ ಪರಿಹಾರದ ಸಾಧ್ಯತೆಯನ್ನು ಸೂಚಿಸುತ್ತಾರೆ. ಮೀಸಲಾತಿಯನ್ನು ಎಲ್ಲಾ ಕಾಲಕ್ಕೂ ಇರಬೇಕಾದ್ದು ಎನ್ನುವುದನ್ನು ಅವರು ಒಪ್ಪುವುದಿಲ್ಲ. ಮೀಸಲಾತಿ ಸರ್ವಕಾಲಕ್ಕೂ ಇರಬೇಕಾದ್ದು ಎಂಬ ರೀತಿಯಲ್ಲಿ ನಡೆದುಕೊಳ್ಳುವುದು ಕೂಡ ಮೂಲಭೂತವಾದ ಎನಿಸುವುದಿಲ್ಲವೇ? ಎಂದು ಪ್ರಶ್ನಿಸುತ್ತಾರೆ. ಮೀಸಲಾತಿಯಿರುವುದು ಆದಷ್ಟು ಬೇಗನೆ ಮೀಸಲಾತಿಯ ಅಗತ್ಯವಿಲ್ಲದ ಸ್ಥಿತಿಯುಂಟಾಗಬೇಕು ಎಂಬ ಉದ್ದೇಶದಿಂದ. ತಾವೇ ಅಸ್ಪೃಶ್ಯರೆಂಬಂತೆ ನಡೆದುಕೊಳ್ಳುವ ಮೇಲು ಜಾತಿಯವರು ಇದನ್ನು ಮನದಟ್ಟು ಮಾಡಿಕೊಳ್ಳದಿದ್ದರೆ ಕೊನೆಗೆ ಅಸ್ಪೃಶ್ಯತೆಗೊಂದು ಆರ್ಥಿಕ ಅರ್ಥ ಬರುತ್ತದೆ ಎನ್ನುತ್ತಾರೆ.

ಕಾಲ ಬದಲಾದಂತೆ ಜನರ ಮನೋಸ್ಥಿತಿಯಲ್ಲಿಯೂ ವ್ಯತ್ಯಾಸಗಳಾಗಿರುವುದನ್ನು ಗಟ್ಟಿಯವರು ಗುರುತಿಸುತ್ತಾರೆ. ಇವತ್ತು ಅಕ್ಷರವಿರುವವರೆಲ್ಲ ಓದುತ್ತಾರೆ. ಆಹಾರವೆನಿಸಿ ಕೊಂಡಿರುವುದನ್ನೆಲ್ಲಾ ಎಲ್ಲರೂ ತಿನ್ನುತ್ತಾರೆ. ಯಾರು ಯಾವ ಉದ್ಯೋಗವನ್ನಾದರೂ ಮಾಡಬಹುದು.

ಇಂದಿನ ಜಾತಿ ರಾಜಕಾರಣದ ಬಗ್ಗೆ ತಮ್ಮ ಅಸಮ್ಮತಿಯನ್ನು ವ್ಯಕ್ತಪಡಿಸುತ್ತಾರೆ. ಸೆಕ್ಯೂಲರ್ ಎನಿಸಿಕೊಳ್ಳುವ ನಮ್ಮ ದೇಶದಲ್ಲಿ ಯಾವುದೇ ಪ್ರಜಾಪ್ರತಿನಿಧಿಯ ಆಯ್ಕೆ ಸೆಕ್ಯೂಲರ್ ಆದ ರೀತಿಯಲ್ಲಿ ಆಗುವುದಿಲ್ಲ. ಚುನಾವಣೆಯಲ್ಲಿಯೂ ಜಾತೀಯತೆ ಕೆಲಸ ಮಾಡುತ್ತದೆ. ಸಚಿವ ಸಂಪುಟ ರಚನೆಯಲ್ಲಿಯೂ ಜಾತೀಯತೆ ಕೆಲಸ ಮಾಡುತ್ತದೆ.

ಎನ್ನುತ್ತಾ 'ಜಾತಿಯೆಂಬುದು ಇಲ್ಲ' ಎನ್ನುವ ಧೈರ್ಯವಂತರು ಯಾವಾಗ ಹುಟ್ಟಿ ಬರುತ್ತಾರೆ? ಎಂದು ಪ್ರಶ್ನಿಸುತ್ತಾರೆ.

ತನ್ನ ಮೇಲಾಧಿಕಾರಿಗಳು ಏನೇನೋ ಚಾಕರಿ ಮಾಡ ಹೇಳಿದರೆ ಅದನ್ನು ಕೆ.ಟಿ. ಗಟ್ಟಿಯವರು ವಿರೋಧಿಸುತ್ತಿದ್ದರು. ಅದರಿಂದಾಗಿ ಮೇಲಾಧಿಕಾರಿಗಳ ಕಿರುಕುಳಕ್ಕೆ ಒಳಗಾಗಬೇಕಾಗುತ್ತಿತ್ತು. ಶಕುನಿ ಮಾಮನಂತಿದ್ದ ಮುಖ್ಯ ಅಧ್ಯಾಪಕನಿಂದ ಮೆಮೋಗಳ ಸುರಿಮಳೆಯೇ ಸುರಿದಿತ್ತು.

ಕತೆ ಕಾದಂಬರಿಗಳಲ್ಲಿ ಶಬ್ದಗಳ ಬಳಕೆಯ ವಿಚಾರದಲ್ಲಿ ಓದುಗರ ಪ್ರತಿಕ್ರಿಯೆಯನ್ನು ಪ್ರಸ್ತಾಪಿಸುತ್ತಾರೆ. "ಇಂಗ್ಲೆಂಡಿನಲ್ಲಿ ಸುಪ್ರಭಾತ ಗೀತೆ, ವೆಂಕಟರಮಣ ಸ್ತೋತ್ರ ಇಲ್ಲ. ನಮ್ಮಲ್ಲಿ ಇದೆ. ಅದರಲ್ಲಿ ಕುಚ, ಚೂಚುಕ ಎಂಬ ಶಬ್ದಗಳು ಬರುತ್ತವೆ. ಶಂಕರಾಚಾರ್ಯರು ಬರೆದ ಶ್ಲೋಕಗಳಲ್ಲಿ ಅಂಥ ಕೆಲವು ಶಬ್ದಗಳು ಬರುತ್ತವೆ. ಕಾದಂಬರಿಯಲ್ಲಿ ಮೊಲೆ ಎಂದು ಬರೆದರೆ, ಅದೆಂತು ಕೀಳು ಆಗುತ್ತದೆ ಎಂದು ನನಗೆ ಅರ್ಥವಾಗುವುದಿಲ್ಲ" ಎನ್ನುತ್ತಾರೆ.

ಈ ದೇಶದ ಪ್ರತಿಭೆಗಳು ನಮ್ಮ ದೇಶಕ್ಕೆ ದಕ್ಕದೆ ಹೋದುದರ ಬಗ್ಗೆ ಗಟ್ಟಿಯವರಿಗೆ ವಿಷಾದವಿದೆ. "ಅಮೇರಿಕೆಯಲ್ಲಿ ಓದಲಿಕ್ಕೋಸ್ಕರ ಸ್ಕಾಲರ್‌ಶಿಪ್ ಸಿಗುತ್ತದೆ. ಮೂರು ವರ್ಷದಲ್ಲಿ ಪಿ.ಎಚ್.ಡಿ. ಯೂ ಆಗುತ್ತದೆ. ಅಷ್ಟೆಲ್ಲಾ ಆದ ಮೇಲೆ ಅವರು ವಾಪಾಸು ಬರುತ್ತಾರೆಯೇ? ಬರುವುದಿಲ್ಲ. ಎಷ್ಟು ಲಕ್ಷ ಬುದ್ಧಿವಂತರು ಹೀಗೆ ದೇಶ ಬಿಟ್ಟು ಹೋಗಿದ್ದಾರೆ ಎಂಬ ಸ್ಟಾಟಿಸ್ಟಿಕ್ಸ್ ನೋಡಿದರೆ, ಈ ದೇಶ ಹೀಗಲ್ಲದೆ ಬೇರೆ ರೀತಿ ಇರಲು ಸಾಧ್ಯವಿಲ್ಲ ಎನ್ನುವುದು ಸ್ಪಷ್ಟವಾಗುತ್ತದೆ. ನಮ್ಮ ಎಲ್ಲಾ ಪ್ರಥಮ ದರ್ಜೆಯ ವೈಜ್ಞಾನಿಕ ಮಿದುಳು ಅಮೇರಿಕೆಯಲ್ಲಿದೆ ಎಂದು ಎಷ್ಟು ಮಂದಿ ಭಾರತೀಯರಿಗೆ ತಿಳಿದಿದೆ? ಭಾರತೀಯರಲ್ಲಿ ಎಷ್ಟು ವಿಜ್ಞಾನಿಗಳಿದ್ದಾರೆಂದು ತಿಳಿಯಬೇಕಾದರೆ 'ನಾಸಾ'ದ ಒಳಗೆ ಹೋಗಬೇಕು. ಅವರೆಲ್ಲ ಈ ಕಡೆ ಬಂದರೆ ಅಮೆರಿಕೆ ಗಾಳಿಯಿಲ್ಲದ ಬೆಲೂನಾದೀತು".

**(ಅದೇ, ಪುಟ 174)**

ಗಟ್ಟಿಯವರು ಪರೀಕ್ಷೆಗೆ ಕಟ್ಟುತ್ತಿದ್ದಾರೆಂದು ಗೊತ್ತಾದೊಡನೆ ಹೆಡ್‌ಮಾಸ್ಟರ್ ಕೆಲಸದ ಹೊರೆಯನ್ನು ಹೆಚ್ಚಿಸುತ್ತಾ, ರಜೆ ಕೊಡದೆ ತೊಂದರೆ ಕೊಡುತ್ತಿದ್ದರು. ಆ ಕಾಲದಲ್ಲಿ ಹತ್ತು ವರ್ಷ ಸರ್ವೀಸು ಮಾಡಿದ ಒಬ್ಬ ಎಲಿಮೆಂಟರಿ ಶಾಲೆಯ ಅಧ್ಯಾಪಕನಿಗೆ ಒಂದು ಸೈಕಲು ಸಹ ಕೊಳ್ಳಲಾಗುತ್ತಿರಲಿಲ್ಲ. ಗಟ್ಟಿಯವರು ಸಹ ಓದುತ್ತಾ ತಮ್ಮಂದಿರಿಗೂ ಓದಿಸುತ್ತಾ ಉದ್ಯೋಗ ಮಾಡಿದರು.

ಈ ದೇಶದಲ್ಲಿ ನಡೆಯುವ ಮದುವೆಗಳ ಬಗ್ಗೆ ತಿಳಿಸುತ್ತಾ "ನಮ್ಮ ದೇಶದಲ್ಲಿ ಮದುವೆಗಳೆಂದರೆ ಒಂದು ಬಗೆಯ ಸಮರಗಳೇ. ಹೆಣ್ಣು ಗಂಡುಗಳನ್ನು ಮದುವೆಯ ಮಂಟಪಕ್ಕೆ ತಂದು ಕುಳ್ಳಿರಿಸುವ ರೀತಿ, ಅವರು ಕುರಿಗಳಂತೆ ಕುಳಿತುಕೊಳ್ಳುವ ರೀತಿ, ಪುರೋಹಿತನ ಅರ್ಥವಾಗದ ಭಾಷೆಯ ಒದರಾಟವನ್ನು ಅನಿವಾರ್ಯವಾಗಿ ಕೇಳಿಸಿಕೊಂಡು ಅವನ ಆಜ್ಞೆಯನ್ನು ಪಾಲಿಸುವ ರೀತಿ, ಈ ಎಲ್ಲದರ ಹಿಂದೆ ತಾವು ಏನೋ ಒಂದು ಮಹತ್ತಾದುದನ್ನು ಸಾಧಿಸಿದ್ದೇವೆಂಬಂತೆ ಅಥವಾ ಯಾವುದೋ ಯುದ್ಧದಲ್ಲಿ ವಿಜಯವನ್ನು ಗಳಿಸಿದ್ದೇವೆಂಬಂತೆ ಗಂಡು ಹೆಣ್ಣಿನ ತಂದೆ ತಾಯಿಯರ ಹೆಮ್ಮೆ, ಮದುವೆಗೆ ಲಕ್ಷಗಟ್ಟಲೆ ಖರ್ಚು ಮಾಡಿದ ಗತ್ತು ಗೈರತ್ತು, ಅದರ ಹಿಂದೆ ಹೆಣ್ಣನ್ನು ಹಡೆದವರಿಂದ ಡೌರಿ ಅರ್ಥಾತ್ ವರಭಿಕ್ಷೆಯನ್ನು ಕಕ್ಕಿಸಿದ ಸುಖ ಮತ್ತು ಅದನ್ನು ಕಕ್ಕಿದವರ ಸಂಕಟ ಮದುವೆಯೆಂದರೆ ಇವೇ ಅಲ್ಲದೆ ಇನ್ನೇನು? ಇರಬಹುದು ಸಂಬಂಧದ ಹಿಂದೆ ಇನ್ನೂ ಕೆಲವು ಸಮರಭಾವಗಳು. ಮದುವೆಗೆ ಮೊದಲೇ ಪ್ರೀತಿಸಿದ್ದರೆ ಅದಕ್ಕೆ ವಿರೋಧ, ಜಾತಿ ವ್ಯತ್ಯಾಸವಿದ್ದರೆ ಪ್ರಳಯವಾಯಿತು ಎಂಬ ಭಾವನೆ ಇತ್ಯಾದಿ. ಮದುವೆಯೇ ಒಂದು ಕಾಳಗದ ಕಣವಾಗುವುದೂ ಇದೆ". ಎನ್ನುತ್ತಾರೆ.

**(ಅದೇ, ಪುಟ 202)**

ಮದುವೆಯ ಹಿಂದಿರುವ ಸ್ವಪ್ರತಿಷ್ಠೆ, ಆಡಂಬರ, ಶೋಷಣೆಗಳನ್ನು ಗಟ್ಟಿಯವರು ವಿರೋಧಿಸುತ್ತಾರೆ. ಮದುವೆಯ ಸಮಾರಂಭದ ಹಿಂದೆ ಒಂದು ಭಯೋತ್ಪಾದಕ ಮುಖ ಇರುವುದನ್ನು ತಿಳಿಸುತ್ತಾರೆ. "ಮದುವೆ ಮಂಟಪದಲ್ಲಿ ಕುಳಿತ ಗಂಡು ಹೆಣ್ಣಿಗೆ ಯಾವತ್ತೂ ಆರಾಮವೆನಿಸುವುದಿಲ್ಲ. ಏನೋ ಒಂದು ಭಯದ ವಾತಾವರಣ ನಿರ್ಮಾಣವಾಗಿರುತ್ತದೆ. ಹಿರಿಯರೆಂಬವರು ಶಸ್ತ್ರ ಸನ್ನದ್ಧ ಯೋಧರಂತೆ ಚಲಿಸುತ್ತಿರುತ್ತಾರೆ. ಮತ, ಧರ್ಮ ಯಾವುದೇ ಇರಲಿ, ಶ್ಲೋಕಗಳು, ಮಂತ್ರಗಳು, ಆಜ್ಞೆಗಳು ಅಪ್ಪಣೆಗಳು ಮತ್ತು ದೇವರ ಹೆಸರಿನಲ್ಲಿರುವ ಬೆದರಿಕೆಗಳು ಅರ್ಥದಲ್ಲಿಯೂ ಘೋರ, ಶಬ್ದದಲ್ಲಿಯೂ ಘೋರ! ಗೊಂದಲಕ್ಕೀಡಾಗಿಸುವ, ಗಂಡು ಹೆಣ್ಣು ಕಣ್ಣು ಮುಚ್ಚಿ ಅನುಸರಿಸಲೇ ಬೇಕಾದ ಕೈ ಕಾಲುಗಳ ಚಲನೆ, ಪುರೋಹಿತನ ಕಟ್ಟಪ್ಪಣೆಯ ಶ್ಲೋಕಗಳ ಅರ್ಥ ಮತ್ತು ಅವುಗಳನ್ನು ಅವನು ಒದರುವ ಯಾಂತ್ರಿಕ ವಿಧಾನ ಎಲ್ಲಕ್ಕಿಂತ ಘೋರ!"

**(ಅದೇ, ಪುಟ 202)**

ಕೆ.ಟಿ.ಗಟ್ಟಿಯವರು ಸೈನ್ಯಕ್ಕೆ ಸೇರುವ ಇರಾದೆ ವ್ಯಕ್ತಪಡಿಸಿದ ಸಂದರ್ಭದಲ್ಲಿ ತಾಯಿ ಕಣ್ಣೀರು ಸುರಿಸಿದ್ದಳು. "ಸೈನ್ಯಕ್ಕೆ ಸೇರುವವರಲ್ಲಿ ಮುಕ್ಕಾಲು ಪಾಲು ಮಂದಿ ದೇಶ ಭಕ್ತಿಯಿಂದ ಹೋದವರೇನೂ ಆಗಿರುವುದಿಲ್ಲ. ಬಡತನವೇ ಸೈನ್ಯಕ್ಕೆ ತಳ್ಳುವ ಮುಖ್ಯ ಶಕ್ತಿ. ಲಕ್ಷಾಧಿಪತಿಗಳ ಕೋಟ್ಯಧಿಪತಿಗಳ ಮಕ್ಕಳು, ದೊಡ್ಡ ದೊಡ್ಡ ಹುದ್ದೆಯಲ್ಲಿರುವವರ

ಮಕ್ಕಳು ಯಾಕೆ ಸೈನಿಕರಾಗುವುದಿಲ್ಲ? ಅವರಲ್ಲಿ ದೇಶ ಪ್ರೇಮ ಇಲ್ಲವೆ? ದೇಶ ಪ್ರೇಮ ಬಡವರಲ್ಲಿ ಮಾತ್ರ ಇರುವಂಥದೆ? ಸರ್ವರೂ ಶ್ರೀಮಂತರಾದರೆ ಸದಾ ಏನಾದೀತು? ಆಗ ಬಹುಶಃ ಅಪರಿಮಿತ ಜನಸಂಖ್ಯೆಯಿರುವ ಬಡ ದೇಶ ಯುದ್ಧದಲ್ಲಿ ವಿಜಯಿಯಾಗಬಹುದು! ಕೇವಲ ಸ್ವಯಂ ಚಾಲಿತ ಯಂತ್ರಗಳ ನಡುವೆ ಯುದ್ಧ ನಡೆಯಬಹುದೆ?" ಬಡವನಿಗೆ ಹೊಟ್ಟೆಯ ಹಸಿವನ್ನು ನಿವಾರಿಸಿಕೊಳ್ಳುವುದೇ

**(ಅದೇ, ಪುಟ 211)**

ಎಲ್ಲದಕ್ಕಿಂತಲೂ ಮುಖ್ಯವಾಗುತ್ತದೆ ಎನ್ನುತ್ತಾರೆ. ಗಟ್ಟಿಯವರ ತಮ್ಮ ಸೈನ್ಯದಲ್ಲಿ ನಡೆಯುತ್ತಿದ್ದ ಭ್ರಷ್ಟಾಚಾರ, ಅವ್ಯವಹಾರಗಳನ್ನು ತಿಳಿಸುತ್ತಿದ್ದ. ಅದನ್ನು ಕೇಳಿದರೆ ಇರುವ ದೇಶ ಪ್ರೇಮವೂ ತೊಲಗಿ ಹೋಗಬಹುದು ಎನ್ನುತ್ತಾರೆ. ಮನುಷ್ಯ ಹೇಗೆ ಸತ್ತ ಎಂಬುದು ಮುಖ್ಯವಾಗುವುದಿಲ್ಲ; ಹೇಗೆ ಬದುಕಿದ ಎಂಬುದು ಮುಖ್ಯವಾಗುತ್ತದೆ ಎನ್ನುತ್ತಾ ಬದುಕಬೇಕಾದ ರೀತಿಯನ್ನು ತಿಳಿಸುತ್ತಾರೆ. ಲೋಕ ಕಲ್ಯಾಣಕ್ಕಾಗಿ ಹೋರಾಟ ನಡೆಸಿದ ಎಷ್ಟೋ ಮೇಧಾವಿಗಳನ್ನು ಸರಕಾರಗಳೇ ನಿರ್ದಯವಾಗಿ ದಂಡಿಸಿವೆ. ಈಗಲೂ ದಂಡಿಸುತ್ತಿವೆ. ಆದರೂ ಇತರ ಮಾನವರು ಅವರ ಪರವಾಗಿ ಕೈಯೆತ್ತುತ್ತಿಲ್ಲ. ಮನುಷ್ಯನನ್ನು ಹಣದ ಆಕರ್ಷಣೆಯಷ್ಟು ಪ್ರಬಲವಾಗಿ ಆಕರ್ಷಿಸುವಂಥದು ಇನ್ನೊಂದಿಲ್ಲ. ಆದ್ದರಿಂದ ಹತ್ತರಲ್ಲಿ ಏಳೂವರೆ ಮಂದಿಗೆ ಪ್ರೀತಿ ಪ್ರಾಮಾಣಿಕತೆಗಿಂತ ಹಣವೇ ಹೆಚ್ಚು ಮೌಲ್ಯವುಳ್ಳದ್ದಾಗಿರುತ್ತದೆ ಎನ್ನುತ್ತಾರೆ.

ಆತ್ಮಗಳೊಂದಿಗೆ ಸಂಭಾಷಣೆ ನಡೆಸುವುದು, ಮಂತ್ರವಾದಿಯ ಪ್ರೇತ ಬಿಡಿಸುವ ವಿಧಾನ ಇವುಗಳನ್ನು ಹತ್ತಿರದಿಂದ ಕಂಡಾಗ ಇದನ್ನು ತುಂಬಾ ಓದಿದ ವಿದ್ಯಾವಂತರು ಕೂಡ ಒಪ್ಪಿಕೊಳ್ಳುತ್ತಾರೆಂಬುದಕ್ಕಿಂತ ವಿಚಿತ್ರ ಬೇರೇನಿದೆ? ಎಂದು ಅವರಿಗೆ ಅನಿಸದಿರಲಿಲ್ಲ. ಎಲ್ಲಾ ಹರಕೆಗಳ, ನೂರಾರು ಪೂಜೆಗಳ, ಹಲ್ಲಿ ಶಕುನಗಳಿಂದ ಆರಂಭವಾಗಿ 'ವಾಸ್ತು' ವಿಶ್ವಾಸದವರೆಗೆ ಎಲ್ಲಾ ನಂಬಿಕೆಗಳ ತಳದಲ್ಲಿ ಇರುವುದು ಭಯ, ಸಾವಿನ ಭಯ ಎಂದು ಹೇಳುತ್ತಾರೆ. ಕೆ.ಟಿ.ಗಟ್ಟಿಯವರು ಇಥಿಯೋಪಿಯಾದಲ್ಲಿದ್ದಾಗ ಬಸ್ಸಿನಲ್ಲಿ ಪ್ರಯಾಣಿಸುವ ಸಂದರ್ಭದಲ್ಲಿ ಬಸ್ ಅಪಘಾತಕ್ಕೀಡಾಗಿ ಬದುಕಿ ಬಂದಿದ್ದರು. ಈ ವಿಚಾರವನ್ನು ಅವರು ತಿಳಿಸುತ್ತಾ ನಾವು ಸಾಯದುಳಿಯುವುದು, ಉಳಿಯದೆ ಸಾಯುವುದು ಕೂಡ ಯಾವ ದೈವಶಕ್ತಿ ಅಥವಾ ಪವಾಡದಿಂದಲೂ ಅಲ್ಲ. ಎಲ್ಲಾ ಕೇವಲ ಆಕಸ್ಮಿಕ ಎನ್ನುತ್ತಾರೆ. ಇಥಿಯೋಪಿಯನ್ ಸರಕಾರ ಇಡೀ ದೇಶವನ್ನು ನ್ಯಾಷನಲೈಸ್ ಮಾಡಿ ದೇಶದ್ರೋಹಿಗಳನ್ನು ನಿರ್ನಾಮ ಮಾಡುವ ಕೆಲಸದಲ್ಲಿ ತೊಡಗಿತ್ತು. ಅದಕ್ಕಾಗಿ ಮೂರು ದಿನಗಳ ಕಾಲ ಎಲ್ಲೆಡೆ ಬಂದ್ ಮಾಡಿ ಸೈನಿಕ ಸರಕಾರವು, ಅಡಗಿರಿಸಿದ ಎಲ್ಲಾ ಶಸ್ತ್ರಾಸ್ತ್ರಗಳನ್ನು ವಶಪಡಿಸಿಕೊಂಡಿತ್ತು. ಈ ಸಂದರ್ಭವನ್ನು

ವಿವರಿಸುವ ಕೆ.ಟಿ.ಗಟ್ಟಿಯವರಿಗೆ "ಇಥಿಯೋಪಿಯನ್ ಸರಕಾರಕ್ಕೆ ದೇಶವನ್ನೇ ಮೂರು ದಿನ ಫ್ರೀಜ್ ಮಾಡಿ ಶೋಧನೆ ನಡೆಸಬಹುದಾದರೆ, ನಮ್ಮ ಸರಕಾರಕ್ಕೆ ಜಮ್ಮು ಕಾಶ್ಮೀರವನ್ನು ಮೂರು ದಿನ ಇದೇ ರೀತಿ ಫ್ರೀಜ್ ಮಾಡಿ ಶುದ್ಧ ಮಾಡಲಿಕ್ಕೆ ಸಾಧ್ಯವಿಲ್ಲವೆ" ಎಂಬ ಪ್ರಶ್ನೆ ಕಾಡುತ್ತದೆ. ಇವರು ಇಥಿಯೋಪಿಯಾದಲ್ಲಿದ್ದಾಗ ತನ್ನ ಕಣ್ಣೆದುರು ನಡೆಯುತ್ತಿದ್ದ ನರಮೇಧವನ್ನು ಕಂಡವರು. ಭಯದ ಆ ವಾತಾವರಣ ದಲ್ಲಿಯೂ ಧೈರ್ಯದಿಂದ ಅಲ್ಲೇ ನೆಲೆಸಿದವರು.

ಆಫ್ರಿಕದಲ್ಲಿದ್ದ ಇಥಿಯೋಪಿಯಾಕ್ಕೆ ಹೋಗುವ ಸಂದರ್ಭದಲ್ಲಿ ಕೆ.ಟಿ.ಗಟ್ಟಿಯವರು ಪಾಸ್ ಪೋರ್ಟ್‌ಗಾಗಿ ಅರ್ಜಿಸಲ್ಲಿಸಿದರೂ ಅದು ಬೇಗನೆ ಸಿಗದೆ ನಾನಾ ಕಷ್ಟ ಅನುಭವಿಸಬೇಕಾಗುತ್ತದೆ. ಈ ಸಂದರ್ಭದಲ್ಲಿ ಅವರು ಇಥಿಯೊಪಿಯಾ ಸರಕಾರಕ್ಕೆ 'ನಾನು ಹೊರಡುವುದು ತಡವಾಗುತ್ತದೆ ಏನು ಮಾಡಲಿ ಎಂದು ಪತ್ರ ಬರೆಯುತ್ತಾರೆ. ಪತ್ರಕ್ಕೆ ಕೂಡಲೇ ಉತ್ತರ ಬಂತು. 'ತಡವಾದರೆ ತೊಂದರೆಯಿಲ್ಲ, ನಾವು ನಿಮಗಾಗಿ ಕಾಯುತ್ತೇವೆ ಎಂದು!. ಆದರೆ ನಮ್ಮ ದೇಶದಲ್ಲಿನ ಪರಿಸ್ಥಿತಿಯೇ ಬೇರೆಯಾಗಿರುತ್ತದೆ. "ನಮ್ಮ ದೇಶದಲ್ಲಿ ಸರಕಾರಕ್ಕಂತಿರಲಿ. ಖಾಸಗಿ ಸಂಸ್ಥೆಗಳಿಗೆ ಸ್ಟಾಂಪ್ ಅಂಟಿಸಿದ ಲಕೋಟೆಯಿರಿಸಿ ಪತ್ರ ಬರೆದರೆ ಉತ್ತರ ಬರುತ್ತದೆಯೇ? ಯಾರೋ ಇಡೀ ಕಾಡನ್ನು ಕಡಿದೊಯ್ಯುತ್ತಿದ್ದಾರೆ' ಎಂದು ಅರಣ್ಯಮಂತ್ರಿಗೆ ಬರೆದರೆ ಉತ್ತರ ಬರುತ್ತದೆಯೆ? 'ಸೇತುವೆ ಬಿರುಕು ಬಿಟ್ಟಿದೆ ಬೇಗನೆ ಬಂದು ನೋಡಿ' ಎಂದು ರೈಲ್ವೇ ಮಂತ್ರಿಗೆ ಬರೆದರೆ ಉತ್ತರ ಬರುತ್ತದೆಯೇ? 'ದಯಮಾಡಿ ನನ್ನ ಸ್ಕಾಲರ್‌ಶಿಪ್ ಕೊಡಿ. ಕೊಡದಿದ್ದರೆ ಹೊಳೆಗೆ ಹಾರುತ್ತೇನೆ' ಎಂದು ಸಂಬಂಧಪಟ್ಟ ಹತ್ತು ಆಫೀಸುಗಳಿಗೆ, ಸಂಬಂಧ ಪಡದ ಪ್ರೆಸಿಡೆಂಟು, ಪ್ರಧಾನಮಂತ್ರಿ ಇತ್ಯಾದಿಗಳಿಗೆ ಬರೆದರೆ, ಒಂದು ಕಡೆಯಿಂದಾದರೂ ಉತ್ತರ ಬರುತ್ತದೆಯೇ? ಸಿಗಬೇಕಾದ್ದು ಸಿಗುತ್ತದೆಯೇ? ಇಲ್ಲ. ಅದೆಲ್ಲಾ ಹಾಗಿರಲಿ 'ಸಾವಿರದ ನೂರು ಕಿಲೊವಾಟ್ ವಿದ್ಯುತ್ ಶಕ್ತಿಯ ತಂತಿಯನ್ನು ಹೊತ್ತ ಕಂಬದ ಮೇಲೆ ಮರವೊಂದು ಬಿದ್ದು ಮರ ಮತ್ತು ಕಂಬ ಎರಡೂ ನನ್ನ ಮನೆಯ ಮೇಲೆ ಬೀಳುವುದರಲ್ಲಿದೆ' ಎಂದು ವಿದ್ಯುತ್ ಇಲಾಖೆಗೆ ಫೋನು ಮಾಡಿದರೆ, ಫಾರೆಸ್ಟ್ ಡಿಪಾರ್ಟ್‌ಮೆಂಟಿಗೆ ಫೋನು ಮಾಡಿ ಎಂದು ಉತ್ತರ ಬರುತ್ತದೆ. ಫಾರೆಸ್ಟ್ ಡಿಪಾರ್ಟ್‌ಮೆಂಟಿಗೆ ಫೋನು ಮಾಡಿದರೆ ವಿದ್ಯುತ್ ಇಲಾಖೆಗೆ ಫೋನು ಮಾಡಿ ಎಂದು ಉತ್ತರ ಬರುತ್ತದೆ. ಭವ್ಯ ಸಂಸ್ಕೃತಿಯ ನಮ್ಮ ದೇಶಕ್ಕೆ ಈ ಕೊಳಕು ಬ್ಯೂರೋಕ್ರಟಿಕ್ ಮೈಂಡ್ ಎಲ್ಲಿಂದ ಬಂತು? ಬ್ರಿಟಿಷರಿಂದ ಬಂತೆ? "ನಿಮ್ಮಲ್ಲಿ ಓದಬೇಕಿದ್ದೇನೆ" ಎಂದು ಮಾಹಿತಿ ಅಪೇಕ್ಷಿಸಿ ಇಂಗ್ಲೆಂಡಿನ, ಅಮೆರಿಕದ ಜರ್ಮನಿಯ ಯಾವುದೇ ಯೂನಿವರ್ಸಿಟಿಗೆ ಪತ್ರ ಬರೆಯಿರಿ. ಪ್ರೋಸ್ಪೆಕ್ಟಸ್ ಮತ್ತು ಇತರ ಪುಸ್ತಕಗಳ ಒಂದು

ದೊಡ್ಡ ಪಾರ್ಸೆಲ್ ಬರುತ್ತದೆ. ಜೊತೆಗೆ ಬಂದ ಉತ್ತರದಲ್ಲಿ ಇನ್ನೇನಾದರೂ ಸಂದೇಹವಿದ್ದರೆ, ದಯವಿಟ್ಟು ಬರೆಯಿರಿ ಎಂಬ ವಾಕ್ಯವಿರುತ್ತದೆ. ಸ್ಕಾಲರ್‌ಶಿಪ್ ಸಿಗುವುದು ನಮ್ಮ ಅರ್ಹತೆಯನ್ನವಲಂಬಿಸಿರುತ್ತದೆ. ಆದರೆ ಅದಕ್ಕೆ ಏನು ಮಾಡಬೇಕೆಂದು ಸಕಲ ವಿವರಗಳೂ ಇರುತ್ತವೆ. ನಮ್ಮ ಯೂನಿವರ್ಸಿಟಿಗಳು? "ಪೇಪರಿನಲ್ಲಿ ಬಂದ ಜಾಹೀರಾತಿನ ಪ್ರಕಾರ ನಾನು ಯೂನಿವರ್ಸಿಟಿಗೆ ಡಿ.ಡಿ. ಕಳಿಸಿದೆ. ಅಲ್ಲಿಂದ ಪ್ರತಿಕ್ರಿಯಿಯೂ ಇಲ್ಲ" ಎನ್ನುವವರು ನಮ್ಮಲ್ಲಿ ಪ್ರತಿ ವರ್ಷ ಸಿಗುತ್ತಾರೆ."

**(ಅದೇ, ಪುಟ 243)**

ಎಂದು ಹೇಳುತ್ತಾ ತಾನು ಹೀಗೆ ಬರೆಯುತ್ತಿರುವುದಕ್ಕೆ ಕಾರಣವನ್ನು ನೀಡುತ್ತಾರೆ. ಅವರ ಅಭಿಪ್ರಾಯದಲ್ಲಿ ಈ ದೇಶದ ಬಗ್ಗೆ ಅತಿಯಾದ ಕಾಳಜಿಯಿದೆ, ಅಭಿಮಾನವಿದೆ. "ನಮ್ಮ ದೇಶ ಜಗತ್ತಿನಲ್ಲಿ ಒಂದು ಥರ್ಡ್‌ರೇಟ್ ಬ್ಯೂರೋಕ್ರಟಿಕ್ ರಾಷ್ಟ್ರ, ಒಂದು ಥರ್ಡ್‌ರೇಟ್ ಪೋಲೀಸ್ ಸ್ಟೇಟ್ ಎನಿಸಿಕೊಳ್ಳಬಾರದು, ವ್ಯಾಪಾರಿಗಳ ಎಂಜಲು ತಿಂದು ಬದುಕುವ ರಾಜಕಾರಣಿಗಳ ದೇಶವಾಗಬಾರದು. ನಮ್ಮ ದೇಶದಲ್ಲಿ ಸತ್ಪ್ರಜೆಗಳನ್ನು ಪೀಡಿಸುವ ಕೊಳಕು ಮನಸ್ಸುಗಳು, ದರಿದ್ರ ರೀತಿ ರಿವಾಜುಗಳು ಇರಬಾರದು." ಪ್ರಾಮಾಣಿಕ ದೇಶ ಪ್ರೇಮಿಯೊಬ್ಬನ ಮನದಾಳದ ಮಾತುಗಳಿವು.

1947–48ರ ಕಾಲದಲ್ಲಿ ಯಕ್ಷಗಾನ ಮೇಳದಲ್ಲಿ ಚೆಂಡೆಬಾರಿಸುತ್ತಿದ್ದ ರಾಮಭಟ್ಟ ಊರಿನಲ್ಲಿದ್ದ ಒಂದೇ ಹೋಟೆಲ್‌ನಲ್ಲಿ ದೋಸೆ ತಿಂದ. ಅದು ಗಾಣಿಗನ ಹೋಟೆಲ್ ಆಗಿದ್ದುದರಿಂದ ದೊಡ್ಡ ಸುದ್ದಿಯಾಯಿತು. ಇದರಿಂದಾಗಿ ಆತನ ಜಾತಿ ಹೋಯಿತು. ಇತ್ತೀಚೆಗೆ ಕೇರಳದಲ್ಲಿ ಮಾಂಸಾಹಾರದ ಹೋಟೆಲ್ಲುಗಳೇ ಹೆಚ್ಚಾಗಿವೆ ಎಂಬ ಸಂಗತಿಯನ್ನು ತಿಳಿಸುತ್ತಾರೆ. ಆಹಾರ ಮತ್ತು ಸಂಸ್ಕೃತಿಯ ನಡುವಿನ ಸಂಬಂಧದ ಬಗ್ಗೆ ತಿಳಿಸುತ್ತಾರೆ.

ಆಹಾರವನ್ನು ಸಾಂಸ್ಕೃತಿಕ ಮತ್ತು ಸಾಮಾಜಿಕ ಸಂಬಂಧಕ್ಕೆ ತಳಕು ಹಾಕುವುದನ್ನು ಗಟ್ಟಿಯವರು ವಿರೋಧಿಸುತ್ತಾರೆ. "ಬಂಗಾಳದಲ್ಲಿ ಬ್ರಾಹ್ಮಣರು ಅಬ್ರಾಹ್ಮಣರು ಎಲ್ಲಾ ಮೀನು ತಿನ್ನುವವರು. ಆದ್ದರಿಂದ ಅಲ್ಲಿ ಆಹಾರದ ಆಧಾರದಲ್ಲಿ ಬ್ರಾಹ್ಮಣ ಅಬ್ರಾಹ್ಮಣ ವ್ಯತ್ಯಾಸ ಗೌಣ. ತನಗೆ ಮೀನು ಸಾರು ಇಷ್ಟ ಎಂದು ವಿವೇಕಾನಂದರೇ ಹೇಳಿದ್ದಾರೆ. ಕೇರಳದವರಲ್ಲಿ ಯಾವ ಜಾತಿಯೆಂದಿಲ್ಲದೆ ಎಲ್ಲರೂ ಮೀನು ಮಾಂಸ ತಿನ್ನುತ್ತಾರೆ. ಆದರೆ ಅಚ್ಚರಿಯ ವಿಷಯವೆಂದರೆ, ಮಾರುಕಟ್ಟೆಯಲ್ಲಿ ಮೀನು, ಕೋಳಿ, ಮೊಟ್ಟೆ ಕೊಳ್ಳುವವರು ಯಾರೂ ನಮ್ಮ ಊರ ಮಾರುಕಟ್ಟೆಗಳಲ್ಲಿ ಕಾಣಿಸುವುದಿಲ್ಲ. ಕೆಲವರು ಕತ್ತಲಾದ ಮೇಲೆ ಬರುತ್ತಾರೆ. ಕೆಲವರು ಬೇರೆಯವರ

ಮೂಲಕ ಯಾರಿಗೆ ಎಂದು ಗೊತ್ತಿಲ್ಲದ ಹಾಗೆ 'ಇಂಡೈರೆಕ್ಟ್ ಮೆಥಡ್'ನಲ್ಲಿ ಸಂಪಾದಿಸುವವರು. ಕೆಲವರು ತಮ್ಮ ಮನೆಯಲ್ಲಿ ಬೇಯಿಸುವುದಿಲ್ಲ. ಬೇರೆ ಮನೆಗಳಲ್ಲಿ ಮಾತ್ರ ತಿನ್ನುತ್ತಾರೆ. ಮಾಂಸಾಹಾರ ಜಾತಿಯವರಲ್ಲಿ 'ಕೇವಲ ಸಸ್ಯಾಹಾರಿ'ಗಳ ಸಂಖ್ಯೆ ತೀರಾಸಣ್ಣದು. ಆದರೆ ಸಸ್ಯಾಹಾರ ಜಾತಿಯವರಲ್ಲಿ ಮಾಂಸಾಹಾರಿಗಳು ಕೂಡ ಆಗಿರುವವರ ಸಂಖ್ಯೆ ಇತ್ತೀಚೆಗಿನ ದಿನಗಳಲ್ಲಿ ತುಂಬಾ ದೊಡ್ಡದಾಗಿದೆ. ತಿನ್ನುವ ವಿಚಾರದಲ್ಲಿ ಇತರರು ಹೇಳುವ 'ಅದು ಒಳ್ಳೆಯದು ಇದು ಕೆಟ್ಟದು ಎಂಬ ಮಾತುಗಳಿಗೆ ಮೌಲ್ಯವಿಲ್ಲ. ಆಹಾರ ವ್ಯಕ್ತಿಯ ಸ್ವಂತ ವಿಚಾರ."

ತಾನು ಹೊರಗೆ ಒಂದಾಗಿದ್ದು ಒಳಗೆ ಬೇರೆಯೇ ಆಗಿರುವ ಮಾನವನ ಮನೋಧರ್ಮವನ್ನು ಪ್ರಶ್ನಿಸುತ್ತಾರೆ. "ಆಹಾರದ ವಿಚಾರದಲ್ಲಿ ಮುಚ್ಚು ಮರೆ ಯಾಕೆ? ಕದ್ದು ಮುಚ್ಚಿ ಮಾಡುವುದು ಯಾಕೆ? ಗುಟ್ಟಾಗಿ ಮಾಂಸ ತಿನ್ನುತ್ತಾ, ಮಾಂಸ ತಿನ್ನುವ ಜಾತಿಯವರು ಎಂದು ಇನ್ನೊಬ್ಬನನ್ನು ಕೀಳಾಗಿ ಕಾಣುವುದರಲ್ಲಿರುವ ವಿಶೇಷ ಸುಖ ಏನು? ವಿವೇಕಾನಂದರಂತೆ ಅಥವಾ ಕನ್ನಡದ ತೇಜಸ್ವಿಯವರಂತೆ ಮೀನು ತಿನ್ನುತ್ತೇನೆ ಎಂದು ಹೇಳಿದರೆ ಉಂಟಾಗುವ ಆಪತ್ತು ಏನು? ಕಳಬಾರದು, ಕೊಲಬಾರದು, ಹುಸಿಯ ನುಡಿಯಲು ಬಾರದು; ಲಂಚ ತೆಗೆದುಕೊಳ್ಳಬಾರದು, ಸರಕಾರದ ಹಣ ಅರ್ಥಾತ್ ಜನತೆಯ ಹಣ ನುಂಗಬಾರದು. ಸ್ವಿಸ್ ಬ್ಯಾಂಕಿನಲ್ಲಿ ಠೇವಣಿ ಇಡಬಾರದು, ಎರಡು ಹೆಂಡತಿ ಇರಬಾರದು, ಕುಡಿದು ಅಥವಾ ಕುಡಿಯದೆ ಹೆಂಡತಿ ಮಕ್ಕಳಿಗೆ ಹೊಡೆಯಬಾರದು. ಆದರೆ ಮೀನು ತಿಂದರೇನು ತೊಂದರೆ? ತಿನ್ನಲಾಗದಿದ್ದರೆ 'ತಿನ್ನು' ಎಂದು ಯಾರು ಒತ್ತಾಯಿಸುವುದಿಲ್ಲ. ಆದರೆ ಆ ಕಾರಣದಿಂದ ತಿನ್ನದ ಕಾರಣದಿಂದ ಅಥವಾ ಇತರರಿಗೆ ಕಾಣದಂತೆ ತಿಂದು ತಾನು 'ತಿನ್ನದ ಜಾತಿ'ಯವನು ಎಂದು ತೋರಿಸಿಕೊಂಡು ತನ್ನದು ಮೇಲಿನ ಜಾತಿ ಎಂದುಕೊಳ್ಳುವುದರಲ್ಲಿ ಏನು ಸುಖ ಏನು ಸಂತೋಷ? ಅಂಥ ಭ್ರಮೆಗಳನ್ನಿಟ್ಟುಕೊಂಡಾಗ, 'ನಾವು' ಎಂಬ ಏಕತಾ ಭಾವನೆ, ನಾವು ಮತಾತೀತ, ಜಾತ್ಯತೀತವಾದ ಒಂದೇ ಸಂಸ್ಕೃತಿಯ ಒಂದೇ ಜನತೆ ಎಂಬ ಭಾವನೆ ಉಂಟಾಗುವುದಿಲ್ಲ". ಹಾಗಾಗಿ ಆಹಾರ ವ್ಯಕ್ತಿಯ ಆಯ್ಕೆ ಸಂಸ್ಕೃತಿ ದೇಶದ ಗುಣ ಎಂದು
**(ಅದೇ, ಪುಟ 247)**
ತಿಳಿಯಬೇಕು ಎನ್ನುತ್ತಾರೆ. ತೆರಿಗೆ ಸಂಗ್ರಹ ಇತರ ದೇಶಗಳಲ್ಲಿ ಅದು ದೇಶಕ್ಕೆ ಬೇಕಾದ ಆದಾಯವನ್ನು ಸಂಗ್ರಹಿಸುವ ಕೆಲಸವಾದರೆ, ನಮ್ಮ ದೇಶದಲ್ಲಿ ಅದರಲ್ಲಿ ಭಯೋತ್ಪಾದನೆ ಸೇರಿಕೊಂಡಿದೆ. ತತ್ಪರಿಣಾಮವಾಗಿ, ಪ್ರಾಮಾಣಿಕರು ಸಂಕಷ್ಟಕ್ಕೊಳಗಾಗುತ್ತಾರೆ. ಪೋಲೀಸರ ಕಾರ್ಯ ವಿಧಾನ, ಅವರು ಪ್ರಜೆಗಳೊಡನೆ ಮಾತಾಡುವ ಶೈಲಿ ಬದಲಾದರೆ ಈ ದೇಶ ಅರ್ಧ ಸುಧಾರಿಸುತ್ತದೆ. ಈ ದೇಶದ ಬ್ಯುರೋಕ್ರಸಿ

ಸುಧಾರಣೆಯಾದರೆ, ಉಳಿದರ್ಥ ಸುಧಾರಣೆಯಾಗುತ್ತದೆ. ಇವೆರಡು ಸುಧಾರಣೆಯಾದರೆ, ರಾಜಕಾರಣಿಗಳ ಮತ್ತು ರಾಜಕಾರಣದ ಕ್ವಾಲಿಟಿ ಉತ್ತಮವಾಗಬೇಕು. ಮೊತ್ತಮೊದಲು ನಮ್ಮ ಉತ್ಸವ ರಾಜಕಾರಣ ಕೊನೆಗೊಳ್ಳಬೇಕು." ಇಲ್ಲಿಯೂ ಗಟ್ಟಿಯವರು ದೇಶದಲ್ಲಿ
**(ಅದೇ, ಪುಟ 249)**
ಬದಲಾವಣೆಯ ಅವಶ್ಯಕತೆಯನ್ನು ತಿಳಿಸುತ್ತಾರೆ.

ಪ್ರಶಸ್ತಿಗಾಗಿ ಪರಿಗಣಿಸಲು ಪುಸ್ತಕ ಕಳುಹಿಸಿಕೊಡುವ, ಅದಕ್ಕಾಗಿ ಏನೇನೋ ಸರ್ಕಸ್ಸು ಮಾಡುವ ಸಂಪ್ರದಾಯವನ್ನು ಕೆ.ಟಿ.ಗಟ್ಟಿಯವರು ವಿರೋಧಿಸುತ್ತಾರೆ. ತಾನು ಕಂಡು ಮಾತನಾಡಿದ್ದ ನಿರಂಜನ, ಲಂಕೇಶ್, ಶಿವರಾಮ ಕಾರಂತ, ಸುಮತೀಂದ್ರ ನಾಡಿಗ, ಅಡಿಗ, ಪಾವೆಂ ಮುಂತಾದವರ ಬಗ್ಗೆ ವಿವರಿಸುತ್ತಾರೆ.

ಗಟ್ಟಿಯವರಿಗೆ ಸಾಂಪ್ರಾಯಿಕ ಆಚರಣೆಗಳಲ್ಲಿ ನಂಬಿಕೆಯಿಲ್ಲ. ತಾವೂ ಬದುಕಿನಲ್ಲಿ ಅವುಗಳ ಬಗ್ಗೆ ಯೋಚನೆ ಮಾಡಿದವರಲ್ಲ. "ನಾನು ಯಾವುದೇ ಪೂಜೆ, ಹೋಮ ಹವನ ಮಾಡಿದ್ದಿಲ್ಲ. ಗೃಹಪ್ರವೇಶ ಮುಂತಾದ ಯಾವುದೇ ಆಚರಣೆ, ಮಾಡಿದ್ದಿಲ್ಲ. ಇದು ನನ್ನ ಧೋರಣೆ ಎಂದು ಹೇಳಿದ್ದಿಲ್ಲ. ಇತರರ ಮೇಲೆ ಅದನ್ನು ಹೇರಿದ್ದಿಲ್ಲ. ಅದೆಂತೋ ನನ್ನ ಹೆಂಡತಿಗೆ ಮತ್ತು ಮಕ್ಕಳಿಗೆ ಕೂಡಾ ಇಂಥದರಲ್ಲಿ ಏನೇನೂ ಆಸಕ್ತಿಯಿಲ್ಲ. ನಾವು ಸತ್ತ ಬಳಿಕವೂ ನಮಗಾಗಿ "ಯಾವ ಸಮಾರಂಭವನ್ನೂ ಏರ್ಪಡಿಸುವುದು ಬೇಡ; ನಮ್ಮ ಹೆಣಗಳನ್ನು ಅದೇ ಸ್ಥಿತಿಯಲ್ಲಿ ಒಂದು ಆಸ್ಪತ್ರೆಗೆ ದಾನ ಮಾಡಬೇಕು' ಎಂದು ನಾನು ಮತ್ತು ನನ್ನ ಹೆಂಡತಿ ವೀಲು ಬರೆದಿರಿಸಿದ್ದೇವೆ. ಒಂದೇ ಒಂದು ಬಾರಿ ಭಿಕ್ಷೆಗೆ ಕೈ ನೀಡಬೇಕಾಗಿ ಬಂದ ಮೇಲೆ ಯಾವ ಪೂಜೆ ಪುನಸ್ಕಾರ, ಮಾನ ಸನ್ಮಾನದಲ್ಲಿಯೂ ನನಗೆ ಅರ್ಥ ಕಾಣಿಸುವುದಿಲ್ಲ" ಇವು ಗಟ್ಟಿಯವರ ಗಟ್ಟಿ ವ್ಯಕ್ತಿತ್ವವನ್ನು ಬಿಂಬಿಸುವ
**(ಅದೇ, ಪುಟ 255)**
ಸಾಲುಗಳು.

ತಾನೇ ಕೆ.ಟಿ.ಗಟ್ಟಿ ಎಂದು ಹೇಳಿಕೊಂಡು ಯಾರೋ ಒಬ್ಬ ವ್ಯಕ್ತಿ ಏನೇನೋ ನೆಪದಲ್ಲಿ ಜನರಿಗೆ ಮೋಸ ಮಾಡುತ್ತಿದ್ದ, ಹಣ ಸಂಗ್ರಹಿಸುತ್ತಿದ್ದ ವಿಷಯ ತಿಳಿದ ಕೆ.ಟಿ.ಗಟ್ಟಿ ಯವರಿಗೆ ತನ್ನ ಫೋಟೊವನ್ನು ಪತ್ರಿಕೆಯಲ್ಲಿ ಪ್ರದರ್ಶಿಸಬೇಕಾದ ಸಂದರ್ಭ ಬರುತ್ತದೆ. 'ಅಬ್ರಾಹ್ಮಣ' ಕಾದಂಬರಿಯನ್ನು ವಿಮರ್ಶಿಸುವ ಬದಲು ಕಾದಂಬರಿಯ ಲೇಖಕನನ್ನೇ ವಿಮರ್ಶಿಸಿದ ದೇವಾಲಯ ಚರಿತ್ರಕಾರನೊಬ್ಬನು ಇವರಿಗೆ 'ಬ್ರಾಹ್ಮಣ ವಿರೋಧಿ' ಎಂಬ ಸರ್ಟಿಫಿಕೇಟು ಕೊಟ್ಟು ಬಿಟ್ಟಿದ್ದ.

ಕನ್ನಡದ ಕೆಲಸ ನಿರೀಕ್ಷಿಸಿದಂತೆ ಆಗದಿರುವ ಬಗ್ಗೆ ಕೆ.ಟಿ.ಗಟ್ಟಿಯವರು ವಿಷಾದಿಸುತ್ತಾರೆ. "ಕನ್ನಡದ ದೀಪ ಹಚ್ಚಿ ಕನ್ನಡ ಇಂಗ್ಲಿಷ್ ಹಿಂದಿ ಮತ್ತಿನ್ನೇನು ಲಭ್ಯವೋ ಅದನ್ನೆಲ್ಲ ಓದೋಣ. ಆದರೆ ಕೇವಲ ವಾಹನಗಳ ನಂಬರುಗಳನ್ನು ಕನ್ನಡದಲ್ಲಿ ಬರೆಸುವುದರ ಮೂಲಕ, ಇಂಗ್ಲಿಷ್ ನಾಮ ಫಲಕಗಳನ್ನೆಲ್ಲ ಕನ್ನಡಕ್ಕೆ ಬದಲಾಯಿಸುವುದರ ಮೂಲಕ ಕನ್ನಡವನ್ನು ಉಳಿಸಿ ಬೆಳೆಸಲಾದೀತೆ? ನಮ್ಮ ಕೈಯಲ್ಲಿಲ್ಲದ ದೂರದರ್ಶನ ನಮಗೆ ಯಾಕೆ? ಅಥವಾ ನಮ್ಮ ಕೈಯಲ್ಲಿರುವ ಬೇರೆಯೇ ಒಂದು ದೂರದರ್ಶನವನ್ನು ಸೃಷ್ಟಿಸಲಿಕ್ಕೆ ನಮ್ಮಿಂದಾಗುವುದಿಲ್ಲವೆ? ಎಲ್ಲಾ ವಿಚಾರದಲ್ಲಿಯೂ ದಿಲ್ಲಿಯೇ ನಮ್ಮನ್ನು ಯಾಕೆ ಆಳಬೇಕು? ಕನ್ನಡ ಮತ್ತು ಸಂಸ್ಕೃತಿಗೂ ದಿಲ್ಲಿಗೂ ಏನು ಸಂಬಂಧ?"

**(ಅದೇ ಪುಟ 261)**

ಎಂದು ತೀಕ್ಷ್ಣವಾಗಿ ನುಡಿಯುತ್ತಾರೆ. ಸಾಹಿತ್ಯದ ಮೂಲಕ ಭಾಷೆಯನ್ನು ಬೆಳೆಸಬಹುದು. ಆದರೆ ಸಾಹಿತ್ಯವನ್ನು ಜನರಿಗೆ ತಲಪಿಸುವ ಕೆಲಸ ನಡೆಯದಿದ್ದರೆ, ಭಾಷೆಯನ್ನು ಬೆಳೆಸುವುದು ಹೇಗೆ? ನಿಸರ್ಗದಲ್ಲಿ ನಮ್ಮ ಜೀವನದ ಉಸಿರಿರುವಂತೆ, ಸಾಹಿತ್ಯದಲ್ಲಿ ನಮ್ಮ ಚಿಂತನೆಯ ಉಸಿರಿದೆ. ಭಾಷೆಯನ್ನು ಉಳಿಸುವುದು ಎಂದರೆ ಸಾಹಿತ್ಯವನ್ನು ಉಳಿಸುವುದು ಎಂದು ಅರ್ಥ. ಸಾಹಿತ್ಯವನ್ನು ಉಳಿಸುವುದು ಎಂದರೆ ಸಾಂಸ್ಕೃತಿಕ ಚಿಂತನೆಯನ್ನು ಪೋಷಿಸುವುದು ಎಂದು ಅರ್ಥ". ಭಾಷೆಯ ಬಗ್ಗೆ ಗಟ್ಟಿಯವರ ಕಾಳಜಿ

**(ಅದೇ, ಪುಟ 202)**

ಗಮನಾರ್ಹವಾದುದು.

ಟಿ.ವಿ.ಯಿಂದಾಗಿ ಮಕ್ಕಳು ಹಾಳಾಗಿ ಹೋಗುತ್ತಿದ್ದಾರೆ ಎಂದು ಎಷ್ಟೋ ತಂದೆ ತಾಯಿ ಕಣ್ಣೀರಿಡುತ್ತಿದ್ದಾರೆ. ವಿದ್ಯಾವಂತರ ದಿನ ದಿನದ ಬದುಕು ಅದರಲ್ಲೇ ಮುಳುಗಿ ಹೋಗುತ್ತಿದೆ. ಇವರನ್ನೆಲ್ಲ ಟಿ.ವಿ.ಯಿಂದ ರಕ್ಷಿಸಲು ಕಲ್ಕಿಯ ಅವತಾರ ಯಾವಾಗ ಆದೀತು? ಎಮ್ಮೆಲ್ಲೇ, ಎಂ.ಪೀ. ಅಭ್ಯರ್ಥಿಗಳಾಗಿ ನಾಮ ಪತ್ರ ಸಲ್ಲಿಸುವವರು ಕನಿಷ್ಠ ಒಂದು ಕವನ ಸಂಕಲನ ಅಥವಾ ಒಂದು ಕಥಾಸಂಕಲನ, ಅಥವಾ ಒಂದು ಕಾದಂಬರಿ ಬರೆದಿರಬೇಕು ಎಂಬ ನಿಯಮ ಮಾಡಿದರೆ ಹೇಗೆ? ಎಂದು ಪ್ರಶ್ನಿಸುತ್ತಾರೆ.

ಕೆ.ಟಿ.ಗಟ್ಟಿಯವರ ಪುಸ್ತಕ ಪ್ರೀತಿಯೂ ಅಪಾರವಾದುದು. ಅವರು ಉಡುಪುಗಳಿಗಾಗಿ ಖರ್ಚು ಮಾಡುವ ವಿಚಾರದಲ್ಲಿ ಜಿಪುಣತನ ತೋರಿ ಪುಸ್ತಕಗಳಿಗೆ ಉದಾರವಾಗಿ ಹಣ ಖರ್ಚು ಮಾಡುತ್ತಿದ್ದರು. ಪುಸ್ತಕಗಳನ್ನು ಇಟ್ಟುಕೊಳ್ಳಲು ಕಪಾಟಿನಲ್ಲಿ ಜಾಗ ಸಾಲದಿದ್ದಾಗ ಪುಸ್ತಕಗಳನ್ನು ಆಗಾಗ ದಾನ ಮಾಡುತ್ತಿದ್ದರು. "ಕೆಲವರು ನೋಟಿನ ಕಂತೆಗಳ ನಡುವೆ ಕೊನೆಯುಸಿರೆಳೆಯುತ್ತಾರೆ. ಅದಕ್ಕಿಂತ ಹಳೆಯ

ಪುಸ್ತಕಗಳ ನಡುವೆ ಕೊನೆಯುಸಿರೆಳೆಯುವುದು ಅಂಥವರಿಗೂ ಇತರರಿಗೂ ಹೆಚ್ಚು ಸುಖಕರ" ಎಂದು ಅವರ ನಂಬಿಕೆಯನ್ನು ತಿಳಿಸುತ್ತಾರೆ.

ಗಟ್ಟಿಯವರು ದೇವರ ಅಸ್ತಿತ್ವದ ಕುರಿತು ವ್ಯಾಖ್ಯಾನ ನೀಡುವುದು ಹೀಗೆ – "ದೇವರಿದ್ದಾನೆ ಎಂದುಕೊಂಡರೂ ತಳವೊಡೆದ ದೋಣಿ ಮುಳುಗುತ್ತದೆ, ಓದದೆ ಪರೀಕ್ಷೆಗೆ ಕಟ್ಟಿದರೆ ಫೇಲಾಗುತ್ತದೆ, ರೋಗಕ್ಕೆ ಔಷಧಿ ಸಿಗಲಿಲ್ಲವೆಂದಾದರೆ ರೋಗಿ ಸಾಯುತ್ತಾನೆ. "ದೆವರಿಲ್ಲ" ಎಂದುಕೊಂಡರೂ ತಳವೊಡೆದ ದೋಣಿ ಮುಳುಗುತ್ತದೆ, ಓದದೆ ಪರೀಕ್ಷೆಗೆ ಕಟ್ಟಿದರೆ ಫೇಲಾಗುತ್ತದೆ. ರೋಗಕ್ಕೆ ಔಷಧಿಯಿಲ್ಲವೆಂದಾದರೆ ಅಥವಾ ಸಕಾಲದಲ್ಲಿ ಔಷಧಿ ಸಿಗಲಿಲ್ಲವೆಂದಾದರೆ ರೋಗಿ ಸಾಯುತ್ತಾನೆ. ಹಾಗಾದರೆ "ದೇವರಿದ್ದಾನೆ" ಎಂದೇನಾಗಬೇಕು, "ದೇವರಿಲ್ಲ" ಎಂದೇನಾಗಬೇಕು? ಬಾಯಿ ಮುಚ್ಚಿಕೊಂಡು ಸುಮ್ಮನಿದ್ದುಕೊಂಡು ಜೀವಿಸಲಿಕ್ಕೆ ಆಗುವುದಿಲ್ಲವೆ? ಪರಮಾತ್ಮನ ಕಲ್ಪನೆ ಮನುಷ್ಯರಿಂದ ಮನುಷ್ಯರಿಗೆ ಬರುವ ಕಲ್ಪನೆ. ಏನೋ ಒಂದನ್ನು ಕಲ್ಪಿಸಿಕೊಂಡು ಅದು ಇದೆ, ಅದು ಇಲ್ಲ ಎನ್ನುವ ಒಂದು ತಮಾಷೆಯ ಆಟದಂತೆ! ಯಾರಾದರೊಬ್ಬ ಏನಾದರೊಂದನ್ನು ಕಲ್ಪಿಸಿಕೊಂಡು, ಅದು ಇದೆ ಅಥವಾ ಅದು ಇಲ್ಲ ಎನ್ನುವುದು ಅವನ ನಂಬಿಕೆಗೆ ಬಿಟ್ಟದ್ದು. ಇದೆ ಎನ್ನುವುದು ಒಂದು ನಂಬಿಕೆ, ಇಲ್ಲ ಎನ್ನುವುದು ಒಂದು ನಂಬಿಕೆ. ಇದಕ್ಕೆ ಆತನಿಗೆ ಸಂಪೂರ್ಣ ಸ್ವಾತಂತ್ರ್ಯವಿದೆ. ಅದನ್ನು ನೀನು ನಂಬುತ್ತೀಯಾ? ಎಂದು ಇನ್ನೊಬ್ಬನನ್ನು ಕೇಳುವುದು ಶುದ್ಧ ಅಧಿಕ ಪ್ರಸಂಗ. ನೀನು ಕೂಡ ಅದು ಇದೆ ಎಂದು ಒಪ್ಪಿಕೊಳ್ಳಬೇಕು ಎಂದು ಒತ್ತಾಯಿಸುವುದು ಮೂರ್ಖತನ. ತಾನೇ ಕಂಡುಕೊಳ್ಳುವುದು ಶ್ರೇಯಸ್ಕರ. ಆಸ್ತಿಕನ ಪ್ರಕಾರ, ಆಸ್ತಿಕತೆ ಎಂದರೆ ಇರುವುದನ್ನು ಇದೆಯೆಂದು 'ನಂಬುವುದು'; ನಾಸ್ತಿಕತೆ ಎಂದರೆ ಇರುವುದನ್ನು ಇಲ್ಲ ಎಂದು ಹೇಳುವುದು"

**(ಅದೇ, ಪುಟ 267)**

"ಒಬ್ಬನಿಗೆ ಬದುಕಲು ಮತ್ತು ಒಳ್ಳೆಯ ಕೆಲಸ ಮಾಡಲು ದೇವರನ್ನು ಕಲ್ಪಿಸಿಕೊಂಡು ಅದನ್ನು ನಂಬಬೇಕಾದ್ದು ಅಗತ್ಯ ಎಂದಾದರೆ, ಅದು ಅವನ ಇಷ್ಟ. ಇನ್ನೊಬ್ಬನಿಗೆ ಅಂಥ ನಂಬಿಕೆಯೇನೂ ಇಲ್ಲದೆ ಬದುಕಲು ಸಾಧ್ಯವಿದೆ, ಒಳ್ಳೆಯ ಕೆಲಸ ಮಾಡಲು ಸಾಧ್ಯವಿದೆ ಎಂದಾದರೆ ಅದು ಅವನ ಇಷ್ಟ. ತನ್ನ ವಿಧಾನ ಸರಿ, ತನ್ನ ವಿಧಾನ ಸರಿ ಎಂದು ಹೋರಾಡುವುದು ಅವಿವೇಕ ಮಾತ್ರವಲ್ಲ ತನ್ನ ಮೇಲೆ ತನಗೆ ವಿಶ್ವಾಸವಿಲ್ಲದಿರುವಿಕೆಯ ಕುರುಹು. ಸಾರ್ವಜನಿಕ ಪ್ರಾರ್ಥನೆ, ಪೂಜೆ ಇತ್ಯಾದಿಗಳು ದೇವರ ಮೇಲಿನ ನಂಬಿಕೆ ಅಲ್ಲ. ಅದು ಧೈರ್ಯ ಮತ್ತು ಐಕ್ಯದ ಸಂಕೇತವಾಗಿರುವ

ಹೊತ್ತಿನಲ್ಲೇ ಭಯ ಮತ್ತು ಐಕ್ಯಹೀನತೆಯ ಸಂಕೇತವೂ ಆಗಿರಬಹುದು. ಅದರ ಮೂಲಕ ದೇವರೆಂಬುದೊಂದಿದೆ ಎಂದು ಸಮರ್ಥಿಸಲಿಕ್ಕೆ ಬರುವುದಿಲ್ಲ ಮತ್ತು ಅದು ಅದರ ಉದ್ದೇಶವೂ ಅಲ್ಲ. ಅದು ಕೇವಲ ಆಚರಣೆ, ರೂಢಿ. ಅದು ಜೀವಂತ ಸಾಮಾಜಿಕ ಇತಿಹಾಸ. ಅದನ್ನು ಉಳಿಸಿಕೊಳ್ಳಲು ಮತ್ತು ಮುಂದುವರಿಸಲು ಅದರದೇ ಆದ ಕಾರಣಗಳು ಮತ್ತು ಉದ್ದೇಶಗಳು ಇವೆ. ಅದು ಯಾರಿಗೆ ಬೇಕಾಗಿದೆಯೋ ಅವರು ಮಾಡುತ್ತಾರೆ". ಸಮಾಜದಲ್ಲಿ ಜನರು ಧರ್ಮ, ದೇವರ ಕುರಿತಾದ ಭೇದ ಭಾವವನ್ನು ಬಿಟ್ಟು ಒಂದಾಗಿ ಬಾಳಬೇಕಾದ ಅಗತ್ಯತೆಯನ್ನು ಗಟ್ಟಿಯವರು ತಿಳಿಸುತ್ತಾರೆ. ಮುಂದೊಂದು ದಿನ ಮಾನವ ಧರ್ಮ ಹುಟ್ಟಬಹುದು ಎಂಬ ಆಶಾವಾದವನ್ನು ಹೊಂದುತ್ತಾರೆ. "ಬುದ್ಧ, ಯೇಸು, ಮಹಮ್ಮದ ಮತ್ತು ನೂರಾರು ಚಿಂತಕರಿಂದ ರೂಪಿಸಲ್ಪಟ್ಟ ಜೀವನ ಧರ್ಮಗಳು ನದಿಗಳಂತೆ ಹರಿದು ಒಂದು ದಿನ ಒಂದೇ 'ಮಾನವ ಧರ್ಮ ಸರೋವರವನ್ನು' ಸೃಷ್ಟಿಸಬಹುದು. ಆ ನದಿಗಳು ಈಗ ಕ್ರಮಿಸಿರುವುದು ಅರ್ಧದಾರಿ. ಇನ್ನರ್ಧ ದಾರಿ ಕ್ರಮಿಸಿದ ಬಳಿಕ ಉಂಟಾಗುವ 'ಮಾನವ ಧರ್ಮ ಸರೋವರ' ದಿಂದ ಹೊಸ ನದಿಗಳು ಹುಟ್ಟಬಹುದು. ಆದ್ದರಿಂದ ಸಮಾಜಕ್ಕೆ ಒಳ್ಳೆಯದಾಗಬೇಕು, ಎಲ್ಲರಿಗೂ ಒಳ್ಳೆಯದಾಗಬೇಕು, ಎಲ್ಲರೂ ಒಳ್ಳೆಯ ಕೆಲಸ ಮಾಡಬೇಕು ಎಂದಾದರೆ ಸ್ತ್ರೀ ಪುರುಷರೆಂಬ ಭೇದವಿಲ್ಲದೆ, ಆ ದೇವರು ಈ ದೇವರು ಎನ್ನದೆ, ಆ ಧರ್ಮ ಈ ಧರ್ಮ ಎನ್ನದೆ, ಎಲ್ಲರೂ ಎಲ್ಲ ದೇವಾಲಯಗಳಲ್ಲಿಯೂ ಸಾಂಸ್ಕೃತಿಕವಾಗಿ ಸೇರಬಹುದು. ಮತದ ಹಿಂದೆ ಮುಂದೆ ನಂಬಿಕೆಯ ಗೋಡೆಯಿರುತ್ತದೆ. ಸಂಸ್ಕೃತಿಯ ಸುತ್ತ ಪ್ರತಿಯೊಬ್ಬನ ಮುಕ್ತ ಮನಸ್ಸು ಇರುತ್ತದೆ".

**(ಅದೇ, ಪುಟ 268)**

ಯಾವುದೋ ಕಾಲದಲ್ಲಿ ಹುಟ್ಟಿದ ಮತ, ಧರ್ಮ, ಸಿದ್ಧಾಂತಗಳನ್ನು ಎಲ್ಲಾ ಕಾಲದಲ್ಲೂ ವಿಚಾರ ಹೀನವಾಗಿ ಅನುಸರಿಸುವುದನ್ನು ಗಟ್ಟಿಯವರು ವಿರೋಧಿಸುತ್ತಾರೆ. " ಯಾವುದೇ ಧರ್ಮ ಸರ್ವಕಾಲಕ್ಕೂ ಸಲ್ಲುವಂಥದಾಗಿರಲಾರದು. ಅದು ಹುಟ್ಟಿದ ಕಾಲ, ಅದು ಹುಟ್ಟಲು ಕಾರಣ, ಮತ್ತು ಅಂದಿನ ಮನುಷ್ಯನ ಚಿಂತನೆಯ ಮಿತಿ ಅದಕ್ಕಿರುತ್ತದೆ. ಮನುಷ್ಯ ವಿಚಾರವಂತನಾಗುವ ಬದಲು, ಯಾವುದೇ ವಿಚಾರವನ್ನು ಕಣ್ಣು ಮುಚ್ಚಿ ಸ್ವೀಕರಿಸಿದಾಗ ಅವಿಚಾರಿಯಾಗುತ್ತಾನೆ. ಪ್ರತಿಗಾಮಿಯಾಗುತ್ತಾನೆ. ಮೂಲಭೂತ ವಾದಿಯಾಗುತ್ತಾನೆ. ಯಾವುದೇ ಮತ ಗುರುವಿಗೆ, ಮತ ಸ್ಥಾಪಕ ಅಥವಾ ಸಂತನಿಗೆ ಕೆಲವು ನೂರು ಅಥವಾ ಸಾವಿರ ವರ್ಷಗಳ ನಂತರದ ಬದುಕಿನ ಕಲ್ಪನೆ ಇರಲು ಸಾಧ್ಯವಿಲ್ಲ. ಎಲ್ಲ ಜ್ಞಾನಿಗಳಿದ್ದುದು ಭೂತ ಕಾಲದಲ್ಲಿ ಮಾತ್ರ. ಅವರು ಬರೆದಿರಿಸಿದ್ದನ್ನೆಲ್ಲ ನಾವು ವಿಚಾರ ಮಾಡದೆ, ಪ್ರಶ್ನಿಸದೆ, ವಿಮರ್ಶಿಸದೆ ಅನುಸರಿಸಬೇಕು ಎಂದರೆ, ನಾವೆಲ್ಲ ಜ್ಞಾನಹೀನರೆಂದಂತಾಗಲಿಲ್ಲವೆ? ಮನುಕುಲ ಬೆಳೆದಂತೆ ಮನುಷ್ಯನೇನು ಜ್ಞಾನದಿಂದ

ಅಜ್ಞಾನದ ಕಡೆಗೆ ಸಾಗಿದನೆ? ಅಥವಾ ಅಲ್ಲೇ ಎಲ್ಲೋ ಭೂತ ಕಾಲದಲ್ಲಿ ಒಂದು ದಿನ ಮನುಕುಲದ ಚಿಂತನೆ ಸ್ಥಗಿತಗೊಂಡಿತೆಂದರ್ಥವೆ? ನಾವು ಹೇಗೆ ಜೀವಿಸಬೇಕೆಂಬ ಬಗ್ಗೆ ಎಲ್ಲವೂ ನೂರಾರು ವರ್ಷಗಳ ಹಿಂದೆಯೇ ತೀರ್ಮಾನಿಸಲ್ಪಟ್ಟಿದೆ. ನಾವು ಏನನ್ನೂ ಬದಲಾಯಿಸಬಾರದು ಎನ್ನುವುದು ಎಂಥ ವಿಕಲ್ಪ! ನಮ್ಮ ಇಂದಿನ ಸಮಸ್ಯೆಗಳಿಗೆ ಅವತ್ತು ಅವರು ಪರಿಹಾರವನ್ನು ಕಂಡಿರಲು ಹೇಗೆ ಸಾಧ್ಯ? ಇನ್ನೂ ಐವತ್ತು-ನೂರು ವರ್ಷಗಳ ನಂತರದ ಬದುಕಿಗೆ ನಾವು ಶಾಸ್ತ್ರ ಬರೆದಿರಿಸುವುದು ಸರಿಯಾದೀತೆ? ನೂರಾರು ವರ್ಷಗಳ ಹಿಂದಿನ ನೀತಿ ಸಂಹಿತೆ ಬದುಕಿನಲ್ಲಿ ನೂರೊಂದು ಪರಿಷ್ಕಾರಗಳುಂಟಾಗಿರುವ ಇಂದಿನ ದಿನಕ್ಕೆ ಹೇಗೆ ಹೊಂದುತ್ತದೆ? ಯಾಕೆ ಸರಿ ಹೊಂದಬೇಕು? ಅವರು ಅವರಿಗೆ ತೋರಿದ್ದನ್ನು, ಅವರ ವಿಚಾರಗಳನ್ನು ಬರೆದಿರಿಸಿದರು. ಅವು ಆ ಕಾಲದ ಬದುಕಿಗೆ ಸೂಕ್ತವಾಗಿರಲು ಮಾತ್ರ ಸಾಧ್ಯ. ನಮ್ಮ ಬದುಕು ಹೇಗಿರಬೇಕು ಎಂದೆಲ್ಲ ಬರೆದಿರಿಸಬೇಕಾದ ಹೊಣೆಗಾರಿಕೆ ಅವರಿಗೇನಿದೆ? ಅವರು ಬರೆದಿರಿಸಿದಂತೆ ಜೀವಿಸಬೇಕಾದ ಹೊಣೆಗಾರಿಕೆ ನಮಗೇನಿದೆ? ನಾವು ಹೇಗೆ ಬದುಕಬೇಕು ಎಂದು ನಿರ್ಧರಿಸಲು ನಮಗೂ ಜ್ಞಾನ ಇದೆ, ನಮಗೂ ವಿವೇಕ ಇದೆ. ನಾವು ಪರಂಪರೆಯ ಗುಲಾಮರಲ್ಲ. ಪರಂಪರೆಯಿಂದ ನಮಗಾಗುವುದನ್ನು ನಾವಿಟ್ಟುಕೊಳ್ಳುತ್ತೇವೆ. ಬದುಕು ಸ್ಥಾವರವಲ್ಲ, ಬದುಕು ಚಿಂತನಶೀಲ" ಎನ್ನುತ್ತಾರೆ.

**(ಅದೇ ಪುಟ 269)**

ನಾವು ಬೇರೆ ಬೇರೆ ಎಂದು ತೋರಿಸಿಕೊಳ್ಳುವುದರಿಂದಲೇ ಸಾಮಾಜಿಕ ಸಂಘರ್ಷಗಳಾಗುತ್ತವೆ ಎಂದು ಹೇಳುತ್ತ "ಹಣೆಯ ಮೇಲೆ ಯಾವುದೋ ವಿಚಿತ್ರವಾದ ನಾಮವನ್ನು ಎಳೆದುಕೊಂಡು ಗುಂಪು ಸೇರಿ, ತಲೆಯ ಮೇಲೆ ವಿಲಕ್ಷಣವಾದ ಟೊಪ್ಪಿಗೆ ಇಟ್ಟುಕೊಂಡು ಗುಂಪು ಸೇರಿ ಅಥವಾ ಇನ್ನೇನೋ ವಿಲಕ್ಷಣವಾದ ಉಡುಪು ಧರಿಸಿಕೊಂಡು ಗುಂಪು ಸೇರಿ 'ನಾನು ಬೇರೆ' ಅಥವಾ 'ನಾವು ಬೇರೆ' ಎಂದು ತೋರಿಸಿಕೊಳ್ಳುವುದರಲ್ಲಿ ಯಾವ ಮಾನಸಿಕ ಬೆಳವಣಿಗೆಯಿದೆ? ಯಾವ ಜೀವನ ವಿಕಾಸವಿದೆ? ಅಥವಾ ಯಾವ ಸುಖ, ಶಾಂತಿ, ಸಮಾಧಾನವಿದೆ? ಎನ್ನುತ್ತಾರೆ. ಕಳೆದ ಮೂವತ್ತು-ನಲ್ವತ್ತು ವರ್ಷಗಳಲ್ಲಿ ದೇವರು ಇದ್ದಾನೆಯೆ, ನೀವು ದೇವರನ್ನು ನಂಬುತ್ತೀರಾ ಎಂದು ಮುಂತಾದ ಪ್ರಶ್ನೆಗಳಿಗೆ ಉತ್ತರಿಸಿ ಗಟ್ಟಿಯವರಿಗೆ ಸಾಕಾಗಿದೆ.

'ತೀರ'ದ ಕೊನೆಯಲ್ಲಿ ರಿಪಿಟಿಷನ್ ಈಸ್ ಅನವೈಡಬ್‌ಲ್ ಎನ್ನುತ್ತಾ ಇಲ್ಲಿ ಬಂದಿರುವ ಬಾಲ್ಯದ ವಿಚಾರಗಳನ್ನು ನನ್ನ ಆತ್ಮೀಯರು ಸ್ನೇಹಿತರಿಗೆ ಹೇಳಿದ್ದೇನೆ, ಬದುಕೇ ಬಹಳ ಬಾರಿ ಒಂದು ಬೋರು, ಬಹಳ ಬಾರಿ ಒಂದು ಹಿಂಸೆ. ಸ್ವಂತ ಬದುಕಿನ ಬಗ್ಗೆ ಪುನಃ ಪುನಃ ಹೇಳುವುದು ಮತ್ತಷ್ಟು ಬೋರು, ಮತ್ತಷ್ಟು ಹಿಂಸೆ.

ಅದನ್ನು ಬರೆದು ಬಿಟ್ಟರೆ ಅದರಿಂದಲೂ ಬಿಡುಗಡೆ ಸಿಗುತ್ತದೆ ಎಂದು ಯೋಚಿಸಿ ಬರೆಯುತ್ತಾರೆ. ಇದು ಆತ್ಮಕಥೆಯಲ್ಲ ಆತ್ಮಚಿಂತನೆ ಎಂದು ಹೇಳುತ್ತಾ ತಮ್ಮ ಆತ್ಮಕಥೆಯನ್ನು ಕೊನೆಗೊಳಿಸುತ್ತಾರೆ.

ಕೆ.ಟಿ.ಗಟ್ಟಿಯವರ ಆತ್ಮಕಥೆಯಲ್ಲಿ ಎಲ್ಲಾ ಆತ್ಮಕಥೆಗಳಂತೆ ತನ್ನ ಜೀವನದ ವಿವರಗಳಾದ ಬಡತನ, ಜಾತಿ ಸಮಸ್ಯೆಯ ವಿವರಗಳು, ಭಾಷೆ ಮತ್ತು ಶಿಕ್ಷಣವನ್ನು ಕುರಿತು ಚಿಂತನೆಗಳಿಗೆ ಗಂಭೀರ ಚರ್ಚೆ ನಡೆದಿದೆ. ಲೇಖಕರೇ ಹೇಳಿರುವಂತೆ ಇದು "ಶಿಕ್ಷಣ ಕಥೆ". ಬಡತನ, ಅವಮಾನಗಳನ್ನು ಸಹಿಸಿಕೊಂಡು ಬದುಕಿನಲ್ಲಿ ಹೋರಾಟದ ಮನೋಭಾವನೆಯನ್ನು ರೂಢಿಸಿಕೊಂಡು ಸಾಧ್ಯವಾದಷ್ಟು ಮಟ್ಟಿಗೆ ಅದಕ್ಕೆ ಮುಖಾಮುಖಿಯಾಗುತ್ತ ಸ್ಪಂದಿಸಿದ ಕಥೆ. ಅವರು ಇಲ್ಲಿ ತಮ್ಮ ಬದುಕಿನ ಎಲ್ಲ ವಿವರಗಳನ್ನೂ ಸುಸಂಬದ್ಧವಾಗಿ ನಿರೂಪಿಸಲಿಲ್ಲ. ತೊಂಬತ್ತು ಖಂಡಗಳನ್ನಾಗಿ ಮಾಡಿಕೊಂಡು ಹೇಳಿದ ವಿಚಾರಗಳು ಕೆಲವೊಮ್ಮೆ ಅವುಗಳಲ್ಲಿ ಮುಂದುವರಿಕೆ ಇಲ್ಲದೆ ಪ್ರತ್ಯೇಕ ಅಸ್ತಿತ್ವವನ್ನೂ ಪಡೆದುಕೊಳ್ಳುತ್ತವೆ. ಚಿಂತನೆಗೆ ಹೆಚ್ಚು ಒತ್ತುಕೊಡಲಾಗಿದೆ. ಗಟ್ಟಿಯವರು ವರ್ಗ, ಜಾತಿ, ಜನಾಂಗ, ವೃತ್ತಿಗಳನ್ನೆಲ್ಲ ಮೀರಿದವರು. ಕಾಲ ಮತ್ತು ವಿದ್ಯಾಭ್ಯಾಸ ಬದುಕನ್ನು ಬದಲಾಯಿಸುವ ಬಗೆಯನ್ನು ಇಲ್ಲಿ ವಸ್ತುನಿಷ್ಠವಾಗಿ ದಾಖಲಿಸಿದ್ದಾರೆ. ಸಂಪ್ರದಾಯದ ಹಿಡಿತ, ಅದರಿಂದ ಮುಕ್ತನಾಗಲು ಮಾಡುವ ಪ್ರಯತ್ನದ ಪ್ರಜ್ಞೆಗಳು ಇಲ್ಲಿ ಕೆಲಸ ಮಾಡುತ್ತವೆ. ಇದು ಒಂದು ಸೃಜನಶೀಲ ಮನಸ್ಸು ಪಡೆಯುವ ಸೂಕ್ಷ್ಮ ಸಂವೇದನೆಗಳನ್ನು ಪರಿಚಯಿಸುವ ಪ್ರಯತ್ನ.

ಭಾರತದ ಶ್ರೇಣೀಕೃತ ಜಾತಿ ವ್ಯವಸ್ಥೆಯನ್ನು ಒಪ್ಪದೆ ಮತ ಧರ್ಮಗಳ ಬಗ್ಗೆ ಹೊಸ ಚಿಂತನೆಯ ಮಾರ್ಗವನ್ನು ತೋರಿಸುತ್ತಾ ಆ ಕಾಲದ ಸಾಮಾಜಿಕ ಸಮಸ್ಯೆಯನ್ನು ಮಾರ್ಮಿಕವಾಗಿ ವಿವರಿಸುತ್ತಾರೆ. ಅಭಿವ್ಯಕ್ತಿ ಸ್ವಾತಂತ್ರ್ಯದ ಅಗತ್ಯವನ್ನು ತಿಳಿಸುತ್ತಾರೆ. ಇವರ ಬರಹದಲ್ಲಿ ಪ್ರಾಮಾಣಿಕತೆಯ ಜೊತೆಗೆ ವೈಚಾರಿಕ ದೃಷ್ಟಿಯೂ ಇದೆ. ಈ ಕೃತಿ ಕೇವಲ ಆತ್ಮಕಥೆ ಮಾತ್ರವಾಗಿರದೆ ವಿಚಾರ ಸಾಹಿತ್ಯವೂ ಆಗಿದೆ.

ಆತ್ಮಕಥೆಯನ್ನು ಓದುತ್ತಾ ಹೋದಂತೆ ಲೇಖಕರ ಸಂಘರ್ಷದ ಬದುಕು, ಅದಕ್ಕೆ ಅವರು ಬೇರೆ ಬೇರೆ ನೆಲೆಗಳಲ್ಲಿ ತೋರಿಸಿದ ಪ್ರತಿರೋಧ ತೆರೆದುಕೊಳ್ಳುತ್ತಾ ಹೋಗುತ್ತದೆ. ಇದರೊಂದಿಗೆ ಅನೇಕ ತಾತ್ವಿಕ ವಿಚಾರಗಳ ಕುರಿತ ಪ್ರತಿರೋಧವೂ ಲೇಖಕರ ಬರಹದಲ್ಲಿ ಕಂಡು ಬರುತ್ತದೆ.

## ೭.೨: ಪ್ರವಾಸ ಸಾಹಿತ್ಯ– 'ನಿಸರ್ಗಕನ್ಯೆ ಅಂಡಮಾನ್'

"ಕೈಗೊಂಡ ಪ್ರವಾಸದ ಅನುಭವ, ನೋಡಿದ ಜನಸ್ಥಳಗಳ ಪರಿಚಯ, ಸಂಸ್ಕೃತಿ ವಿಶೇಷತೆಗಳು, ಕಲೆಯ ವೈಶಿಷ್ಟ್ಯ ಇತ್ಯಾದಿ ವಿಷಯಗಳನ್ನು ಕುರಿತು ಬರೆದ ಗ್ರಂಥ ಪ್ರವಾಸ ಕಥನ ಎನಿಸುತ್ತದೆ. ಪ್ರವಾಸ ಸಾಹಿತ್ಯ ಸಾಮಾನ್ಯವಾಗಿ ಕಂಡ ದೃಶ್ಯಗಳ ವಿವರಣೆಯಿಂದ ಕೂಡಿರುತ್ತದೆ.

ಕನ್ನಡದಲ್ಲಿ ಮೊದಲು ಪ್ರಕಟವಾದ ಪ್ರವಾಸ ಕಥನ ಕೃತಿ 'ದಕ್ಷಿಣ ಭಾರತ ಯಾತ್ರೆ'. ಸೂರಿ ವೆಂಕಟರಮಣ ಶಾಸ್ತ್ರಿಗಳು ಇದನ್ನು 1885ರಲ್ಲಿ ಬರೆದು ಪ್ರಕಟಿಸಿದರು. ಕನ್ನಡ ಪ್ರವಾಸ ಸಾಹಿತ್ಯದಲ್ಲಿ ಕನ್ನಡ ನಾಡಿನ ಪ್ರವಾಸ ಸಾಹಿತ್ಯ, ಭಾರತದ ಪ್ರವಾಸ ಸಾಹಿತ್ಯ ವಿದೇಶ ಪ್ರವಾಸ ಸಾಹಿತ್ಯ ಸೇರಿದೆ. ವಿದೇಶ ಪ್ರವಾಸ ಸಾಹಿತ್ಯದಲ್ಲಿ ಅಮೇರಿಕವನ್ನು ಕುರಿತಾಗಿ ಹೆಚ್ಚು ಪ್ರವಾಸ ಸಾಹಿತ್ಯ ರಚನೆಗೊಂಡಿದೆ. "ಕನ್ನಡದಲ್ಲಿ ಪ್ರವಾಸ ಸಾಹಿತ್ಯ ಇತ್ತೀಚಿನ ಬೆಳೆ. ಅದು ನವೋದಯ, ನವ್ಯ, ಬಂಡಾಯ ಎಂಬ ಧೋರಣೆಗಳನ್ನು ಮೀರಿದ, ಎಲ್ಲ ಮನೋಭಾವಗಳನ್ನು ಒಳಗೊಂಡ, ಪ್ರಕೃತಿ ಪ್ರಪಂಚಗಳನ್ನು, ಕಲೆ–ವಿಜ್ಞಾನಗಳನ್ನು, ಅನಾಗರಿಕ, ನಾಗರಿಕ ಜಗತ್ತುಗಳನ್ನು ಪ್ರತ್ಯಕ್ಷ ದರ್ಶನದ, ಅನುಭವದ ಆಧಾರದಿಂದ ಬಿತ್ತರಿಸುವ, ವಿಶ್ಲೇಷಿಸುವ ವಿಶಿಷ್ಟವಾದ ಸಾಹಿತ್ಯ ಪ್ರಕಾರ. ಪ್ರೀತಿ, ಅನುಕಂಪ, ಕುತೂಹಲ, ವಿನೋದ, ಆಶ್ಚರ್ಯ ಮೊದಲಾದ ಭಾವಗಳನ್ನು ಉದ್ದೀಪನಗೊಳಿಸುವ ಸಾಹಿತ್ಯವೂ ಅಹುದು. ಅದು ಒಮ್ಮೆ ಲಲಿತ ಪ್ರಬಂಧದಂತೆ, ಇನ್ನೊಮ್ಮೆ ಕಾದಂಬರಿಯ ಕತೆಯಂತೆ ಮತ್ತೊಮ್ಮೆ ವಿಜ್ಞಾನಿಯ ಅನ್ವೇಷಣೆಯಂತೆ ವಿವಿಧ ಸ್ವರೂಪಗಳನ್ನು ತಾಳುತ್ತ ಸಾಗುತ್ತದೆ. ಅದರ ವಸ್ತು ಜಗತ್ತಿನಷ್ಟೇ ವಿಸ್ತಾರವಾದದ್ದು".

**(ವೀರಣ್ಣ ರಾಜೂರ, ಹಿರೇಮಠ ಬಿ.ಆರ್ (ಸಂ), 1996. ಪುಟ 171)**

ಕೆ.ಟಿ.ಗಟ್ಟಿಯವರು 1996ರಲ್ಲಿ 'ನಿಸರ್ಗ ಕನ್ಯೆ ಅಂಡಮಾನ್' ಎಂಬ ಪ್ರವಾಸ ಕಥನವನ್ನು ಬರೆದಿದ್ದಾರೆ. ಇದು ತರಂಗ ವಾರ ಪತ್ರಿಕೆಯಲ್ಲಿ ಇಪ್ಪತ್ತೊಂದು ವಾರಗಳ ಕಾಲ ಧಾರಾವಾಹಿಯಾಗಿ ಪ್ರಕಟಗೊಂಡಿದೆ. ಐದು ಭಾಗಗಳಲ್ಲಿ ಒಟ್ಟು ಇಪ್ಪತ್ತೊಂದು ಅಧ್ಯಾಯಗಳನ್ನಾಗಿ ಮಾಡಿಕೊಂಡು ಪ್ರವಾಸಕಥನವನ್ನು ರಚಿಸಲಾಗಿದೆ.

'ಕರಿನೀರ ನಡುವೆ' ಎಂಬ ಮೊದಲ ಅಧ್ಯಾಯವು ಅವರ ಸಮುದ್ರ ಮಾರ್ಗದ ಪ್ರಯಾಣದ ಚಿತ್ರಣವನ್ನು ನೀಡುತ್ತದೆ. ಗಟ್ಟಿಯವರು ಪ್ರಯಾಣದ ಸಂದರ್ಭದಲ್ಲಿ

ಏಕಾಂತವಾಗಿರುವುದನ್ನು ಬಯಸುತ್ತಾರೆ. ಹಡಗುಗಳ ಬಂಕ್‌ಗಳಲ್ಲಿನ ಗಲೀಜು ಸ್ಥಿತಿ ಅದರಲ್ಲಿ ಪ್ರಯಾಣಿಸುವವರ ಕಷ್ಟಗಳನ್ನು ತಿಳಿಸುತ್ತಾರೆ.

'ಪಚ್ಚೆರತ್ನಗಳು' ಅಧ್ಯಾಯದಲ್ಲಿ ತಿಳಿಸುವಂತೆ ಅವರು ತಮ್ಮ ಪ್ರಯಾಣದ ಸಂದರ್ಭದಲ್ಲಿ ಪ್ರತಿದಿನವೂ ಮನೆಗೆ ಪತ್ರ ಬರೆಯುತ್ತಿದ್ದರು. ಪೋರ್ಟ್‌ಬ್ಲೇರ್ ಸಮೀಪಕ್ಕೆ ಬಂದಾಗ ಎತ್ತ ನೋಡಿದರೂ ಹಸುರು ದ್ವೀಪಗಳಾಚೆ ದ್ವೀಪಗಳು ಕಾಣಿಸಿದವು. ಅಂಡಮಾನ್ ಪ್ರಕೃತಿ ಸೌಂದರ್ಯವನ್ನು ಹೇಳುತ್ತಾ "ಹಸುರು ದ್ವೀಪ. ಕಪ್ಪು – ನೀಲಿ ನೀರು. ಎಲ್ಲವನ್ನೂ ತೊಳೆದಿಟ್ಟಂತೆ ತೋರಿಸುವ ಬಿಸಿಲು. ಒಂದಿಷ್ಟೂ ಮಾಲಿನ್ಯಕ್ಕೆ ಗುರಿಯಾಗದ ಗಾಳಿ. ಟೋಕಿಯೋ ಸಿಂಗಾಪುರಗಳಂತೆ ಸುಖೋಪಭೋಗದ ಸಾಮಾಗ್ರಿಗಳನ್ನು ಗುಡ್ಡೆ ಹಾಕಿಸಿಕೊಂಡ ಫ್ರೀಪೋರ್ಟ್ ಅಲ್ಲ. ಇದು ಪ್ರಕೃತಿ ಸೌಂದರ್ಯರಾಶಿಯ ಫ್ರೀಪೋರ್ಟ್"ಎನ್ನುತ್ತಾರೆ. ಪೋರ್ಟ್ ಬ್ಲೇರ್ ಮಡಿಕೇರಿಯಂತೆ
**(ಗಟ್ಟಿ ಕೆ.ಟಿ, ನಿಸರ್ಗಕನ್ಯೆ ಅಂಡಮಾನ್, 1996, ಪುಟ 27)**
ಕಾಣಿಸುತ್ತದೆ ಎನ್ನುತ್ತಾರೆ.

ಅಂಡಮಾನ್ ಭಾರತದ ಒಂದು ಭಾಗ ಎಂದು ತಿಳಿಯದವರು ಈಗಲೂ ಇದ್ದಾರೆ ಎಂದು 'ನಿಗೂಢ' ಅಧ್ಯಾಯದಲ್ಲಿ ತಿಳಿಸುತ್ತಾ ಇದಕ್ಕೆ ನಮ್ಮ ದೇಶದ ಜನ ಶಿಕ್ಷಣ ಮಾಧ್ಯಮಗಳ ಕೆಲಸ ಅಸಮರ್ಪಕವಾಗಿರುವುದೇ ಕಾರಣ. ನಮ್ಮ ಶಾಲಾ ಪಠ್ಯಪುಸ್ತಕ ಗಳಲ್ಲಿರುವ ಭೂಗೋಳ ಶಾಸ್ತ್ರದಲ್ಲಿ ಒಂದಿಷ್ಟೂ ಜೀವಸತ್ವ ಇಲ್ಲ. ಬ್ರಿಟಿಷರು ಬರೆಸಿದ ಪಠ್ಯಪುಸ್ತಗಳ ಜೆರಾಕ್ಸ್‌ನ್ನು ಈಗಲೂ ಕಾಣಬಹುದು. ನಮ್ಮ ದೇಶದ ಎಲ್ಲಾ ಭಾಗಗಳ ಬಗ್ಗೆ ಎಲ್ಲಾ ಮಾಹಿತಿ ನೀಡಿ, ಕುತೂಹಲ ಪ್ರೀತಿ ಆಸಕ್ತಿ ಪ್ರೀತಿ ಹುಟ್ಟಿಸುವ ಪಠ್ಯಗಳಿಲ್ಲ. ನಮ್ಮ ಲೋಕಶಿಕ್ಷಣ ಮಾಧ್ಯಮಗಳಾದ ಪತ್ರಿಕೆಗಳು ಆಕಾಶವಾಣಿ ಮತ್ತು ದೂರದರ್ಶನವು ಕೂಡ ಟೂರಿಸಂ ಭೂಗೋಳ ಶಾಸ್ತ್ರವನ್ನಷ್ಟೇ ಚೂರುಪಾರಾಗಿ ಸಾದರಪಡಿಸುತ್ತವೆ. ಆಕರ್ಷಕವಾದ ಪುಸ್ತಕಗಳಂತೂ ಇಲ್ಲವೇ ಇಲ್ಲ. ಪರಿಸ್ಥಿತಿ ಹೀಗಿರುವಾಗ, ಒಂದು ಪ್ರದೇಶದ ಬಗ್ಗೆ ಇನ್ನೊಂದು ಪ್ರದೇಶದಲ್ಲಿ ಅಜ್ಞಾನ ಸ್ವಾಭಾವಿಕ ಎಂದು ಹೇಳುತ್ತಾರೆ. ರೋಸ್ ದ್ವೀಪ, ವೈಪರ್ ದ್ವೀಪಗಳನ್ನು ಸಂದರ್ಶಿಸಿದ ವಿವರ ನೀಡುತ್ತಾರೆ. ವೈಪರ್ ದ್ವೀಪ ಅಂಡಮಾನಿನ ಮೊತ್ತ ಮೊದಲ ಜೈಲು, ದ್ವೀಪವೇ ಜೈಲು ಎಂದು ತಿಳಿಸುತ್ತಾರೆ.

'ನೂರಾರು ಅವಕಾಶಗಳ ಹಸುರು ನೆಲ' ಅಂಡಮಾನ್. ಇಲ್ಲಿ ಶಿಲಾಯುಗದ ಮಾನವ ಇಪ್ಪತ್ತನೆಯ ಶತಮಾನದ ಈ ಹೊತ್ತು ಜೀವಂತವಿದ್ದಾನೆ. ಅನನ್ಯ ನಿಸರ್ಗವಿದೆ. ಇಲ್ಲಿ ಕೋಮು ಘರ್ಷಣೆ ಇಲ್ಲ. ಜಾತಿ ಮತಗಳ ಮಾತೇ ಇಲ್ಲ. ಎಲ್ಲರೂ 'ಒಂದೇ ಜಾತಿ

ಒಂದೇ ಕುಲ' ಎಂಬಂತೆ ಇದ್ದಾರೆ. ಭಯೋತ್ಪಾದಕರ ಕಾಟವಿಲ್ಲ. ಬಾಂಬ್ ಹಾವಳಿಯಿಲ್ಲ. ಭೂಗತ ಜಗತ್ತು ಇಲ್ಲ. ಇಲ್ಲಿ ವಿದ್ಯುತ್ ವೈಫಲ್ಯ ಇಲ್ಲ. ಅಲ್ಲಿನ ಲೆಫ್ಟಿನೆಂಟ್ ಗವರ್ನರ್ ಹೈಸ್ಕೂಲಿನ ವಾರ್ಷಿಕೋತ್ಸವಕ್ಕೆ ಮುಖ್ಯ ಅತಿಥಿಯಾಗಿ ಬರುತ್ತಾರೆ. ಭಾರತದ ಮುಖ್ಯ ಭೂಮಿಯಲ್ಲಿ ರಾಜ್ಯಪಾಲರು, ಮುಖ್ಯಮಂತ್ರಿಗಳು ಕಾಲೇಜಿನೊಳಗೆ ಕಾಲಿಡುವುದಿಲ್ಲ. ಅಂಡಮಾನ್ ಅಮೇರಿಕಕ್ಕಿಂತ ಹತ್ತು ಪಟ್ಟು ಚೆನ್ನಾಗಿದೆ ಎಂದು ಗಟ್ಟಿಯವರ ಅಭಿಪ್ರಾಯ.

'ಭಾಷೆಯ ಬೆಸುಗೆ'ಯ ಬಗ್ಗೆ ತಿಳಿಸುತ್ತಾ ಪೋರ್ಟ್ ಬ್ಲೇರ್ ನಗರದ ಕೇಂದ್ರ ಭಾಗದಲ್ಲೇ ಮಹಾರಾಷ್ಟ್ರ ಮಂದಿರ, ತಮಿಳು ಸಂಘ, ಕೇರಳ ಸಮಾಜ, ಬಂಗಾಲಿ ಸಂಘ ಮತ್ತು ಕನ್ನಡ ಸಂಘಗಳ ಕಟ್ಟಡಗಳನ್ನು ಕಾಣಬಹುದು ಎನ್ನುತ್ತಾರೆ. ಎಲ್ಲ ಸಂಘಗಳಲ್ಲಿಯೂ ಎಲ್ಲಾ ಹೊತ್ತಿನಲ್ಲೂ ಏನಾದರೂ ಚಟುವಟಿಕೆ ನಡೆಯುತ್ತಿರುತ್ತದೆ. ನಮ್ಮ ರಾಜ್ಯದಲ್ಲಿರುವ ಎಷ್ಟೋ ಸಂಘಗಳಿಗೆ ವಿಳಾಸ ಮಾತ್ರ ಇರುತ್ತದೆ. ಬೇರೇನೂ ಇರುವುದಿಲ್ಲ.

ದೂರದ ಊರಿನಲ್ಲಿ ಒಬ್ಬ ಮಲೆಯಾಳಿ ತನ್ನ ಭಾಷೆಯನ್ನಾಡುವ ಇನ್ನೊಬ್ಬ ಕಾಣಸಿಕ್ಕರೆ ಯಾಕೆ ತನ್ನ ಬಂಧುವನ್ನು ಕಂಡಂತೆ ಸಂಭ್ರಮಿಸುತ್ತಾನೆ?. ತನ್ನ ರಕ್ತ ಸಂಬಂಧಿಗೆ ತೋರುವುದಕ್ಕಿಂತಲೂ ಹೆಚ್ಚು ಔದಾರ್ಯವನ್ನು ತನ್ನ ಭಾಷಾ ಸಂಬಂಧಿಗೆ ತೋರಿಸುತ್ತಾನೆ?. ಆದರೆ ಕನ್ನಡ ನಾಡಿನ ಜನ ಭಾಷೆಯ ಸಂಬಂಧದಲ್ಲಿ ಬಂಧುಗಳಾಗುವುದಿಲ್ಲ. ಕನ್ನಡ ಒಂದು ಸಂಸ್ಕೃತಿಯಾಗಿ ಸಾಕಷ್ಟು ಬೆಳೆಯದಿರುವುದೇ ಇದಕ್ಕೆ ಕಾರಣ. ಇಲ್ಲಿ ಆಚರಣೆಯಲ್ಲಿ ಮತವೆಂಬುದು ಇಲ್ಲ. ಆದರೆ ಅಂಡಮಾನಿನದೇ ಆದ ಒಂದು ಸಂಸ್ಕೃತಿ ಇಲ್ಲಿ ಕಾಣಿಸುವುದಿಲ್ಲ. ಅಲ್ಲಿನದೇ ಆದ ಒಂದು ಭಾಷೆ ಇಲ್ಲ. ಸಾಂಸ್ಕೃತಿಕ ಏಕತೆ ಅಥವಾ ಏಕರೂಪತೆ ಇಲ್ಲಿ ಇಲ್ಲ.

1872 ಫೆಬ್ರವರಿ ಎಂಟರಂದು ಫೋರ್ಟ್ ಬ್ಲೆಯರಿನಲ್ಲಿ ಸಂಭವಿಸಿದ ಲಾರ್ಡ್ ಮೆಯೋ ಎಂಬ ಭಾರತದ "ಒಬ್ಬ ವೈಸರಾಯಿಯ ಕೊಲೆ"ಯ ಬಗ್ಗೆ ಗಟ್ಟಿಯವರು ವಿವರಿಸುತ್ತಾರೆ. ಸೆಲ್ಯುಲರ್ ಜೈಲಿನಲ್ಲಿ ಸಾವರ್‌ಕರ್ ಅವರನ್ನು ಶಿಕ್ಷೆಗೆ ಗುರಿಪಡಿಸಿದ ಸಂದರ್ಭವನ್ನು ನೆನಪಿಸುತ್ತಾರೆ. ಜೈಲಿನ ಬಗ್ಗೆ ತಿಳಿಸುತ್ತಾರೆ. ಭಾರತದ ಸ್ವಾತಂತ್ರ್ಯ ಹೋರಾಟಗಾರನನ್ನು ಅಲ್ಲಿನ ಜೈಲಿಗೆ ಸಾಗಿಸುತ್ತಿದ್ದರು. ಅಲ್ಲಿ ಕಠಿಣವಾದ ಶಿಕ್ಷೆ ನೀಡಲಾಗುತ್ತಿತ್ತು. ಅಂಡಮಾನಿಗೆ ಕೊಲೆ ಪಾತಕಕ್ಕಾಗಿ ಕರಿನೀರ ಶಿಕ್ಷೆಗೊಳಗಾಗಿ ಬಂದಿದ್ದ ಕೈದಿಗಳು ಜೈಲು ಅಧ್ಯಾಯವನ್ನು ಮುಗಿಸಿ ಅಂಡಮಾನಿನ ಪ್ರಜೆಗಳೇ ಆಗಿಬಿಟ್ಟಿದ್ದರು.

'ಕಾಲವನ್ನು ಗೆದ್ದವರು' ಸಾವರ್ಕರ್ ಅವರು. ಅವರು ಜೈಲಿನಲ್ಲಿದ್ದಾಗ ಬರೆದ ಪತ್ರದ ವಿವರವನ್ನು ಗಟ್ಟಿಯವರು ನೀಡುತ್ತಾರೆ. ನೇತಾಜಿ ಸುಭಾಷ್ಚಂದ್ರ ಭೋಸರು ಬ್ರಿಟಿಷರನ್ನು ಹೊರಗಟ್ಟಲು ಜಪಾನ್ ಸರಕಾರದೊಂದಿಗೆ ನಡೆಸಿದ ಸಂಧಾನ, ಇದರಿಂದಾಗಿ ಮೊದಲು ಭಾರತದ ಭಾಗವಾಗಿ ಸಿಕ್ಕಿದ ಅಂಡಮಾನ್ ನಿಕೋಬಾರ್ ದ್ವೀಪ ಸಮೂಹ ಅಲ್ಲಿನ ಇಂಡಿಯನ್ ಇಂಡಿಪೆಂಡೆಂಟ್ ಲೀಗಿನ ಮುಖ್ಯಸ್ಥ ದೀವಾನ್ ಸಿಂಘ್‌ಗೆ ಜಪಾನೀ ಸೈನಿಕರು ಅಮಾನುಷವಾಗಿ ನೀಡಿದ ಶಿಕ್ಷೆ, ಸುಭಾಷ್ಚಂದ್ರ ಭೋಸರೊಂದಿಗೆ ಅದನ್ನು ತಿಳಿಸಿದ್ದು, ಅವರು ಮೌನವಾಗಿದ್ದುದು ಇದರ ವಿವರಗಳನ್ನು ನೀಡುತ್ತಾರೆ. ಶ್ರೀಕಿಷನ್ ಎಂಬ ವ್ಯಕ್ತಿ ಜಪಾನ್ ಸೈನಿಕರಿಂದ ಅನುಭವಿಸಿದ ಶಿಕ್ಷೆಯನ್ನು ಆತನಿಂದಲೇ ತಿಳಿದುಕೊಂಡು ವಿವರಿಸುತ್ತಾರೆ. ಪೋರ್ಟ್ ಬ್ಲೇಯರಿನಲ್ಲಿ ಔಷಧಿ ಅಂಗಡಿ ನಡೆಸುತ್ತಿದ್ದ ಗುರುಮೂರ್ತಿಯ ಕತೆಯನ್ನು ತಿಳಿಸುತ್ತಾರೆ. ಆತನ ತಂದೆ ಖೈದಿಯಾಗಿ ಅಂಡಮಾನಿಗೆ ಬಂದು ನಂತರ ಮದುವೆಯಾಗಿ ಅಲ್ಲೇ ನೆಲೆಸಿದವರು. ಗುರುಮೂರ್ತಿ ಬೇಹುಗಾರಿಕೆ ನಡೆಸುತ್ತಿದ್ದಾನೆಂದು ಸೈನಿಕರು ಆತನನ್ನು ಜೈಲಿಗೆ ತಳ್ಳುತ್ತಾರೆ. ತನ್ನ ವಿಚಾರಣೆಗಾಗಿ ಅಂಗಡಿಗೆ ಬಂದಿದ್ದ ಜಪಾನೀ ಸೈನಿಕನಿಗೆ ಆತನ ಕೋರಿಕೆಯಂತೆ 'ಆರು ಕೋಳಿಮೊಟ್ಟೆ' ನೀಡುತ್ತಾನೆ. ಕೊಲೆಗಾಗಿ ಆಯ್ಕೆ ಮಾಡಲಾದವರ ಪಟ್ಟಿಯಿಂದ ಆತ ಗುರುಮೂರ್ತಿಯ ಹೆಸರನ್ನು ತೆಗೆದು ಬೇರೆಯವರ ಹೆಸರು ಹಾಕಿದ್ದ. ಹಾಗಾಗಿ ತನ್ನ ಪ್ರಾಣ ಉಳಿಯಿತೆಂದು ಲೇಖಕರಿಗೆ ಅವರು ತಿಳಿಸುತ್ತಾರೆ.

ಕೆ.ಟಿ.ಗಟ್ಟಿಯವರು 'ಲೈಟ್ ಆಫ್ ಅಂಡಮಾನ್' ಪತ್ರಿಕೆ ನಡೆಸುತ್ತಿದ್ದ ಪರಶುರಾಮನನ್ನು ಭೇಟಿ ಮಾಡುತ್ತಾರೆ. ಆತನಿಗೆ ಭ್ರಷ್ಟಾಚಾರವನ್ನು ಕಂಡರೆ ಆಗದು. ತನ್ನ ಪತ್ರಿಕೆಯ ಮೂಲಕ ಈ ಬಗ್ಗೆ ಹೋರಾಟ ನಡೆಸುತ್ತಾ ಬಂದಿದ್ದಾನೆ. ಆಗಾಗ ಬಂಧನಕ್ಕೊಳಗಾಗುತ್ತಾ ಬಂದಿದ್ದಾನೆ. ಆತನಿಗೆ ಬ್ರಟಿಷರ ಕಾಲದ ಜೈಲುವಾಸದ ಅನುಭವವಿದೆ. ಆತನ ಬಾಯಿಯಲ್ಲಿ ವ್ಯವಸ್ಥೆಯ ಕುರಿತು ಪ್ರತಿರೋಧದ ಮಾತುಗಳು ಹೊರ ಬೀಳುತ್ತವೆ. "ಈಗ ನೋಡಿ ಭಾರತ ಸರ್ಕಾರ ಈ ಅಂಡಮಾನಿನ ಅಭಿವೃದ್ಧಿಗಾಗಿ ಕೋಟಿಗಟ್ಟಲೆ ವ್ಯಯಿಸುತ್ತದೆ. ಇಲ್ಲಿ ನಡೆಯುವ ದ್ವೀಪ ಮಹೋತ್ಸವ ಎಂಬ ಎಕ್ಸಿಬಿಷನಿಗೆ ಆರು ಕೋಟಿ ಖರ್ಚು ಮಾಡುತ್ತಾರೆ. ಇದರಲ್ಲಿ ಸಿಂಹಪಾಲು ಇಲ್ಲಿನ ಭ್ರಷ್ಟ ಅಧಿಕಾರಿಗಳ ಜೇಬಿಗೆ ಹೋಗುತ್ತದೆ. ಪ್ರತಿಯೊಂದು ಕಾಮಗಾರಿಯಲ್ಲಿಯೂ ಈ ಅಧಿಕಾರಿಗಳು ಹಣ ಹೊಡೆಯುತ್ತಾರೆ. ಕೆಲವರು ಲಕ್ಷಗಟ್ಟಲೆ ಅಂದರೆ ನಾಲ್ಕೈದು ಲಕ್ಷವಲ್ಲ, ಇಪ್ಪತ್ತು-ಮೂವತ್ತು ಲಕ್ಷ ಮಾಡಿಕೊಳ್ಳುತ್ತಾರೆ. ಒಬ್ಬ ಸರಕಾರಿ ಇಂಜಿನಿಯರ್ ಇಪ್ಪತ್ತು ಇಪ್ಪತ್ತೈದು ಲಕ್ಷ ಸಂಪಾದಿಸಿ, ಭಾರೀ ಬಂಗಲೆಯಲ್ಲಿ ಜೀವಿಸುತ್ತಿದ್ದಾನೆ.

ಕಾರುಗಳನ್ನಿಟ್ಟುಕೊಂಡು ರಾಜಾರೋಷವಾಗಿ ಓಡಾಡುತ್ತಿದ್ದಾನೆ. ಸರಕಾರಕ್ಕೆ ಅವನನ್ನು ಏನೂ ಮಾಡಲಾಗಲಿಲ್ಲ" ಎನ್ನುತಾನೆ.

**( ಅದೇ, ಪುಟ 101)**

ಭಾರತದಿಂದಲೇ ಶಿಕ್ಷೆಗೊಳಗಾಗಿ ಕಳಿಸಲ್ಪಟ್ಟ ಕೈದಿಗಳಲ್ಲಿ ಯಾರನ್ನಾದರೂ ಭೇಟಿಯಾಗಬೇಕೆಂದು ಯೋಚಿಸಿದ ಲೇಖಕರು ಎಪ್ಪತ್ತೆಂಟು ವರ್ಷದ ಮಂಗಳೂರು ಮೂಲದ ವ್ಯಕ್ತಿಯೊಬ್ಬನನ್ನು ಭೇಟಿಯಾಗುತ್ತಾರೆ. ಆತ ಜಪಾನಿನವರಿಗಿಂತ ಇಂಗ್ಲಿಷರು ಒಳ್ಳೆಯವರು ಎನ್ನುತ್ತಾನೆ. ಅಂಡಮಾನಿನಲ್ಲಿ ಜಪಾನೀಯರ ಕೈಯಲ್ಲಿ ಸಿಕ್ಕಿ ನರಳಿದವರ ಪೈಕಿ ಮಹಮ್ಮದ್ ಸೌದಾಗರ್ ಎಂಬ 92 ವರ್ಷದ ವ್ಯಕ್ತಿ ಬಹಳ ಸುದ್ದಿಯ ವಸ್ತುವಾಗಿದ್ದ. ಆತ ಜೀವ ಉಳಿಸಿಕೊಳ್ಳಲು ಮನುಷ್ಯ ಮಾಂಸವನ್ನೇ ತಿಂದಿದ್ದ. ಆತನನ್ನು ಕೆ.ಟಿ.ಗಟ್ಟಿಯವರು ಭೇಟಿಯಾಗುತ್ತಾರೆ. ತನ್ನ ಹಿರಿಯರು ಮಾಡಿದ ಕೊಲೆಯನ್ನು ತಾನೇ ಮಾಡಿರುವುದಾಗಿ ಹೇಳಲು ಆತನನ್ನು ಒಪ್ಪಿಸಲಾಗಿತ್ತು. ಸ್ಥಳೀಯರನ್ನು ಜಪಾನ್ ಸೈನಿಕರು ಬೇಹುಗಾರಿಕೆ ಮಾಡಿದ್ದಾರೆಂದು ಬಂಧಿಸಿ ಒಪ್ಪಿಸುತ್ತಿದ್ದರು. ಚಿತ್ರ ಹಿಂಸೆ ನೀಡಿ ಕೊಲ್ಲುತ್ತಿದ್ದರು. ಅವರ ಶಿಕ್ಷೆಯ ಬಗ್ಗೆ ತಿಳಿಸುತ್ತಾ – "ನವಾಬ್ ಆಲಿ ಎಂಬವನಿಗೆ "ಹೌದು ನಾನು ಬ್ರಿಟಿಷರ ಬೇಹುಗಾರ ಎಂದು ಒಪ್ಪಿಕೊಳ್ಳುವಂತೆ ಇಲೆಕ್ಟ್ರಿಕ್ ಶಾಕ್ ಮತ್ತು ವಿವಿಧ ರೀತಿಯ ಹಿಂಸೆಯನ್ನು ನೀಡಿದ ಬಳಿಕ ಅವನ ಇಬ್ಬರು ಹದಿಹರೆಯದ ಹೆಣ್ಣು ಮಕ್ಕಳನ್ನು ಜೈಲಿಗೆ ಎಳೆದು ತಂದರು. ಅವರನ್ನು ಬೆತ್ತಲಾಗಿಸಿ ಕಾಲುಗಳನ್ನು ಅಗಲಿಸಿ ಕಟ್ಟಿ ತಂದೆಯ ಮುಂದೆ ನಿಲ್ಲಿಸಿ ಅವರ ಕಾಲುಗಳ ನಡುವೆ ಕಾಗದ ಹಾಕಿ ಬೆಂಕಿ ಹಚ್ಚಿದರು. 'ಅಬ್ಬಾ ಜಾನ್ ಬೋಲ್ ದೊ ಹಾಂ' ಎಂದು ಮಕ್ಕಳು ಕಿರುಚಿದರು. ಮರುದಿನ ಬೆಳಿಗ್ಗೆ ನವಾಬ್ ಆಲಿಯನ್ನು ಕೊಲ್ಲಲಾಯಿತು. ಹುಡುಗಿಯರ ಪ್ರಾಣ ಉಳಿಯಿತು". ಜಪಾನೀಯರು ಕೈದಿಗಳನ್ನು ಸಮುದ್ರದ ಮಧ್ಯಕ್ಕೆ

**(ಅದೇ ಪುಟ 113)**

ಒಯ್ದು ನೀರಿಗೆ ತಳ್ಳುತ್ತಿದ್ದರು. ಈಗಿನ ಅಂಡಮಾನಿನ ಸ್ಥಿತಿಯ ಬಗ್ಗೆ ಅಲ್ಲಿಯವರಿಗೆ ಆಕ್ರೋಶವಿದೆ. "ಈಗಿನವರ ಕಾರುಬಾರು ಒಂದೇ: ಲಂಚ ಮತ್ತು ಭ್ರಷ್ಟಾಚಾರ. ತಟ್ಟೆಯಲ್ಲಿ ಹಾಕಿದ ಅನ್ನವನ್ನು ಎಲ್ಲರೂ ತಿನ್ನುತ್ತಾರೆ. ಆದರೆ ಅಂಡಮಾನಿನ ಆಡಳಿತವನ್ನು ನೋಡಿದರೆ ಈ ಜನಗಳು ತಟ್ಟೆಯನ್ನೇ ತಿನ್ನುತ್ತಿದ್ದಾರೆ ಅನಿಸುತ್ತದೆ ಎಂದು ಹೇಳುತ್ತಾ ಸೌದಾಗರ್ ಅಧಿಕಾರಿಗಳ, ಸರಕಾರಿ ಉದ್ಯೋಗಸ್ಥರ ಭ್ರಷ್ಟಾಚಾರದ ಹಲವು ಉದಾಹರಣೆಗಳನ್ನು ನೀಡುತ್ತಾನೆ.

"ಇನ್ನೂ ಬದುಕಿರುವ ಶಿಲಾಯುಗದ ಮಾನವ" ಅಧ್ಯಾಯದಲ್ಲಿ ಅಂಡಮಾನಿನ ಜಾರವ, ಜಂಗಿ ಆದಿವಾಸಿಗಳ ಬಗ್ಗೆ ವಿವರಿಸುತ್ತಾರೆ. ಇಂದಿರಾ ಪ್ವೊಂಟ್ ಮತ್ತು ಶೋಂಪೆನ್ ಮೂಲ ನಿವಾಸಿಗಳ ಮಾಹಿತಿ ನೀಡುತ್ತಾರೆ. ಈಗಲೂ ಶುದ್ಧ ಶಿಲಾಯುಗದ ಜೀವನ ರೀತಿಯಲ್ಲಿರುವ ಜಾರವ ಮೂಲನಿವಾಸಿಗಳನ್ನು ಆಧುನಿಕ ಜಗತ್ತಿನ ಆಶ್ಚರ್ಯ ಎನ್ನಲಾಗುತ್ತದೆ. 1859ರಲ್ಲಿ ಜಾರವಗಳು ಮತ್ತು ನೆಲಸಿಗರ ಮಧ್ಯೆ ನಡೆದ "ಅಬರ್ಡೀನ್ ಕಾಳಗ" ಈ ದ್ವೀಪದ ಚರಿತ್ರೆಯಲ್ಲಿ ಮುಖ್ಯವಾದ ಘಟನೆ.

ಅಂಡಮಾನಿನ ಮೂಲನಿವಾಸಿಗಳ ಪೈಕಿ ಅತ್ಯಂತ ನಿಗೂಢವಾಗಿ ಉಳಿದಿರುವವರೆಂದರೆ ಉತ್ತರ ಸೆಂಟಿನಲ್ ದ್ವೀಪದ ಸೆಂಟಿನಲೀಸ್. "ನಾಗರಿಕತೆ, ನಗ್ನತೆ, ಸೌಂದರ್ಯ ಇತ್ಯಾದಿಗಳ ಬಗ್ಗೆ ಪ್ರತಿಯೊಂದು ಜನಾಂಗಕ್ಕೂ ಅದರದೇ ಆದ ಕಲ್ಪನೆ ಇದೆ. ಮಿನಿ ಸ್ಕರ್ಟ್ ಹಾಕಿದ ಆಫ್ರಿಕನ್ ಮಹಿಳೆ ಭಾರತೀಯ ಮಹಿಳೆಗೆ ಅರೆನಗ್ನಳಾಗಿ ಕಾಣಿಸುತ್ತಾಳೆ. ಹೊಟ್ಟೆ ಮತ್ತು ಬೆನ್ನು ಕಾಣಿಸುವ ಭಾರತೀಯಳ ಉಡುಪು "ಎಕ್ಸ್‌ಪೋಸಿಂಗ್" ಆಗಿ ಆಫ್ರಿಕನ್ ಮಹಿಳೆಗೆ ಕಾಣಿಸುತ್ತಿದೆ. ಇತಿಯೋಪಿಯಾದಲ್ಲಿ ರೆಡ್ ಸೀಗೆ ಹತ್ತಿರ ಆಫರ್ ಮತ್ತು ಇಸ್ಸಾ ಎಂಬ ಜನಾಂಗವಿದೆ. ಇಲ್ಲಿನ ಸ್ತ್ರೀಯರು ಸೊಂಟದ ಮೇಲೆ ಏನನ್ನೂ ಧರಿಸುವುದಿಲ್ಲ. ಬಟ್ಟೆ ಬರೆ ತೊಟ್ಟ ಹೆಂಗಸರು ಮತ್ತು ಗಂಡಸರೊಂದಿಗೆ ಅವರು ಆರಾಮವಾಗಿ ಬೆರೆಯುತ್ತಾರೆ. ಹೋಟೆಲಿನಲ್ಲಿ ನಮ್ಮ ಪಕ್ಕದಲ್ಲಿ ಕುಳಿತು ಚಹ ಕುಡಿಯುತ್ತಿದ್ದರೆ ಅವರು ನಗ್ನ ಎಂದು ನಮಗೆ ಅನಿಸಬೇಕೇ ವಿನಾ, ತಾವು ನಗ್ನ ಎಂದು ಅವರಿಗೆ ಅನಿಸುವುದಿಲ್ಲ" ಎಂದು ಕೆ.ಟಿ.ಗಟ್ಟಿಯವರು ತಿಳಿಸುತ್ತಾರೆ. ನಿಕೋಬಾರ್ ದ್ವೀಪ
**(ಅದೇ, ಪುಟ 126)**
ಸಮೂಹದ ಒಟ್ಟು ಜನಸಂಖ್ಯೆಯಾದ ಐವತ್ತು ಸಾವಿರದಲ್ಲಿ ಮೂವತ್ತು ಸಾವಿರ ಉತ್ತರ ಕೊನೆಯ ನಿಕೋಬಾರ್ ದ್ವೀಪದಲ್ಲಿ ಇದ್ದಾರೆ. ನಿಕೋಬಾರ್ ದ್ವೀಪಗಳ ಆಡಳಿತ ಕೇಂದ್ರ ಕಾರ್‌ನಿಕೋಬಾರ್ ದ್ವೀಪವೇ. ಅಲ್ಲಿನ ಪರ್ವತಗಳ ಮರೆಯಲ್ಲಿ ಶೋಂಪೆನ್ ನಿವಾಸಿಗಳಿದ್ದಾರೆ. ಕೆಲವು ವರ್ಷಗಳಲ್ಲಿ ಮೂಲ ನಿವಾಸಿಗಳ ಜನಾಂಗ ಇಲ್ಲವಾಗಬಹುದೆಂಬ ಅಭಿಪ್ರಾಯ ಇಲ್ಲಿ ವ್ಯಕ್ತವಾಗಿದೆ.

ಪೋರ್ಟ್ ಬ್ಲೆಯರ್ ಒಂದು ಬಂದರು ನಗರ. ಇಲ್ಲಿ ಕಾಡು ಇಲ್ಲ. ನಗರದ ರಸ್ತೆಗಳ ಒಟ್ಟು ಉದ್ದ ಎಪ್ಪತ್ತಮೂರು ಕಿಲೋ ಮೀಟರ್. ನೀರಿಗೆ ತತ್ವಾರವಿದೆ. ಮಳೆ ನೀರು ಸಂಗ್ರಹವಾದ ಕೆರೆಯಿಂದ ನೀರನ್ನೆಲ್ಲ ಶುದ್ಧಗೊಳಿಸಿ ಸರಬರಾಜು ಮಾಡಲಾಗುತ್ತದೆ. ರಸ್ತೆ ಅಪಘಾತ, ಕಳ್ಳತನ, ಸುಲಿಗೆ, ಮಾನಭಂಗಗಳು ಕಡಿಮೆ. ಆದರೆ ಭ್ರಷ್ಟಾಚಾರ ತುಂಬಿಕೊಂಡಿದೆ. ಅಂಡಮಾನ್ ನಿಕೋಬಾರ್‌ನಲ್ಲಿ ಸಸ್ಯರಾಶಿಯಿರುವಂತೆ

ಹಲವಾರು ರೀತಿಯ ಮೀನುಗಳಿವೆ. ಇದನ್ನು ಕದಿಯುವುದಕ್ಕಾಗಿ ಅಕ್ಕ ಪಕ್ಕದ ದೇಶಗಳಿಂದ ಮೀನುಗಳ್ಳರು ಇಲ್ಲಿಗೆ ಬರುತ್ತಾರೆ. ಅವರು ಕೆಲವು ದ್ವೀಪಗಳಿಂದ ಸಸ್ಯಗಳನ್ನು ಕದ್ದು ಸಾಗಿಸುತ್ತಾರೆ. ಕೆಲವು ಕಡೆ ಸಮುದ್ರ ಕಿನಾರೆಯಲ್ಲಿ ಸಿಗುವ ಆ್ಯಂಬರ್ ಎನ್ನುವ ವಸ್ತುವಿಗೆ ಅಮೇರಿಕಾದಲ್ಲಿ ಕಿಲೋ ಗ್ರಾಂಗೆ 80-90 ಸಾವಿರ ಸಿಗುತ್ತದೆ.

ವಿದೇಶಿಯರಂತೆ ನಮ್ಮ ದೇಶದವರು ಪ್ರವಾಸ ಮಾಡುವುದು ಕಡಿಮೆ. "ಪ್ರವಾಸವನ್ನು ಪೂರ್ತಿಯಾಗಿ ಅನುಭವಿಸಿ ನೋಡಬೇಕೆಂದಿದ್ದರೆ ಪಶ್ಚಿಮದ ಸಾಮಾನ್ಯ ಪ್ರವಾಸಿಗರಂತೆ ಪ್ರವಾಸ ಮಾಡಬೇಕು. ಅದಕ್ಕೆ ಕಡಿಮೆ ಪಕ್ಷ ಎರಡು ತಿಂಗಳಾದರೂ ಬೇಕು. ನಿಗದಿತ ಅವಧಿಯೊಳಗೆ ವಾಪಾಸು ಹೋಗಬೇಕೆಂದು ತರಾತುರಿ ಇರಬಾರದು"

**(ಅದೇ, ಪುಟ 143).**

ಎಂದು ಪ್ರವಾಸ ಕೈಗೊಳ್ಳುವವರಲ್ಲಿ ಇರಬೇಕಾದ ಮನೋಭಾವನೆಯ ಬಗ್ಗೆ ತಿಳಿಸುತ್ತಾರೆ.

ಅಂಡಮಾನಿನ ಪ್ರದೇಶಗಳ ಹೆಸರುಗಳಲ್ಲಿ ಭಾರತೀಯ ಹೆಸರುಗಳು ಅಧಿಕ. ಮಧ್ಯ ಅಂಡಮಾನ್ ಮತ್ತು ಉತ್ತರ ಅಂಡಮಾನಿನಲ್ಲಿ ಬಂಗಾಳೀಯರ ಸಂಖ್ಯೆ ಅಧಿಕ. ಅಂಡಮಾನಿನ ಪ್ರವಾಸಿ ಮಂದಿರಗಳ ಅಚ್ಚುಕಟ್ಟುತನವನ್ನು ಲೇಖಕರು ಮೆಚ್ಚಿಕೊಳ್ಳುತ್ತಾರೆ. ಉತ್ತರ ಅಂಡಮಾನಿನ ಕಾಲಿಘಾಟ್‌ನಿಂದ ಮಧ್ಯ ಅಂಡಮಾನಿನ ಮಾಯಾ ಬಂದರ್‌ವರೆಗಿನ ಎರಡೂವರೆ ಗಂಟೆಗಳ ಪುಟ್ಟ ಮೋಟಾರ್ ಲಾಂಚ್‌ನಲ್ಲಿ ಮ್ಯಾಂಗ್ರೋವ್ ಕಾಡುಗಳ ಮಧ್ಯೆ ಮಾಡಿದ ಪ್ರಯಾಣದ ಅನುಭವ ಅವಿಸ್ಮರಣೀಯ ಎಂದು ತಿಳಿಸುತ್ತಾರೆ. "ಅಂಡಮಾನಿನಲ್ಲಿ ಈದ್ ಹಬ್ಬ ಇಡೀ ಅಂಡಮಾನೀಯರ ಹಬ್ಬ. ಹಾಗೆಯೇ ಕ್ರಿಸ್ಮಸ್, ಹಾಗೆಯೇ ದುರ್ಗಾಪೂಜೆ. ಯಾವ ಮೂಲ, ಯಾವ ಜಾತಿ, ಯಾವ ಮತ?. ಬದುಕು ಅಂದರೆ ಕೇವಲ ಬದುಕು. ಮನುಷ್ಯ ಕೇವಲ ಮನುಷ್ಯ. ಅದರಲ್ಲಿ ಜಾತಿ ಮತ ಎಂಬುದೆಲ್ಲ ಮೂರ್ಖರು ಕಟ್ಟಿಕೊಂಡ ಭ್ರಮೆಗಳು ಅಂಡಮಾನಿನ ಪ್ರಕೃತಿಯಂತೆ ಅಂಡಮಾನಿನ ಮನುಷ್ಯರೆಲ್ಲ ಒಂದೇ ಜಾತಿಯವರು" ಎಂದು ಅಭಿಪ್ರಾಯ ಪಡುತ್ತಾರೆ.

**(ಅದೇ, ಪುಟ 156).**

ಜಾಲಿಬಾಯ್ ದ್ವೀಪವನ್ನು ಅದರ ತಳದ ಹವಳ ಉದ್ಯಾನವನ್ನು ತಳವಿರುವ ಪ್ಲಾಸ್ಟಿಕ್ ಮೋಟಾರ್ ಬೋಟಿನಲ್ಲಿ ನೋಡಲು ಹೋದರು. ಹಿಂತಿರುಗುವ ಸಂದರ್ಭದಲ್ಲಿ ಪುನಃ ಕೋರಲ್ ತೋಟವನ್ನೂ ನೋಡಬಹುದು ಎಂದುಕೊಂಡರು. ಆದರೆ

ಅದಾಗಲೇ ಗಾಜಿನ ತಳವನ್ನು ಮರದ ಹಲಗೆಯಿಂದ ಭದ್ರವಾಗಿ ಮುಚ್ಚಲಾಗಿತ್ತು. ಈ ಬಗ್ಗೆ ಗಟ್ಟಿಯವರು "ಮುಚ್ಚದಿದ್ದರೆ ಏನು ನಷ್ಟವಿತ್ತು? ಮುಟ್ಟುವಂತಿಲ್ಲ, ಕೀಳುವಂತಿಲ್ಲ, ನೋಡಿದರೇನು ದೋಷ? ಅಷ್ಟು ದೂರದಿಂದ ಅದನ್ನು ಕಾಣಲೆಂದೇ ಬಂದವರಿಗೆ ಪೂರ್ತಿ ಎರಡು ನಿಮಿಷ ಕೂಡ ನೋಡಲು ಸಿಗಲಿಲ್ಲ. ಬೋಟ್ ನಡೆಸುವ ಜನ ಭಯಾನಕವಾಗಿದ್ದರು. ಸರಕಾರ ಎಷ್ಟೋ ಪ್ರವಾಸಿ ಆಕರ್ಷಣಾ ಕೇಂದ್ರಗಳಲ್ಲಿ ಇಂಥ ಜಯ ವಿಜಯರನ್ನು ಪ್ರವಾಸಿಗರ ಸೇವೆಗೆ ನೇಮಿಸುತ್ತದೆ. ಖರ್ಚು ಮಾಡಿ ಓಡಾಡುವ ಪ್ರವಾಸಿಗನಿಗೆ ಕುರಿಯ ಸ್ಥಾನ. ಆ ಹಣವನ್ನು ಸ್ವೀಕರಿಸಿ ಸೇವೆ ನೀಡುವ ವ್ಯಕ್ತಿಯೇ ಇರಲಿ ಸಂಸ್ಥೆಯೇ ಇರಲಿ, ಅದಕ್ಕೆ ಹುಲಿಯ ಸ್ಥಾನ! ಯುರೋಪು ಮತ್ತು ಅಮೇರಿಕದ ಪ್ರವಾಸೋದ್ಯಮಕ್ಕೂ ನಮ್ಮ ದೇಶದ ಪ್ರವಾಸೋದ್ಯಮಕ್ಕೂ ಮುಖ್ಯವಾದ ವ್ಯತ್ಯಾಸವಿರುವುದು ಈ ವಿಚಾರದಲ್ಲಿ". ಎನ್ನುತ್ತಾರೆ. ತಾವು ಅಂಡಮಾನಿನಲ್ಲಿ ನೋಡದೆ ಇರುವ ಎಷ್ಟೋ ಸ್ಥಳಗಳು ಇವೆ. ಅದನ್ನು ನೋಡಲು ಮತ್ತೊಮ್ಮೆ ಹೋಗಬೇಕೆಂಬ ಇಂಗಿತವನ್ನು ವ್ಯಕ್ತಪಡಿಸುತ್ತಾರೆ.

## ೭.೩: ಪ್ರಬಂಧ ಸಾಹಿತ್ಯ

ಪ್ರಬಂಧ ಪ್ರಕಾರವು ಹೊಸಗನ್ನಡ ಸಾಹಿತ್ಯದಲ್ಲಿ ಅನುವಾದದಿಂದ ಆರಂಭವಾಯಿತು. 1898ರಲ್ಲಿ ಬಿ. ವೆಂಕಟಾಚಾರ್ಯ ಮತ್ತು ಗ.ಹು. ಹೊನ್ನಾಪುರಮಠ ಅವರು ಮೊದಲು ಕ್ರಮವಾಗಿ ಬಂಗಾಳಿ ಮತ್ತು ಇಂಗ್ಲಿಷ್ ಭಾಷೆಯಿಂದ ಕನ್ನಡಕ್ಕೆ ಪ್ರಬಂಧವನ್ನು ಅನುವಾದಿಸಿದರು. "ಕನ್ನಡದಲ್ಲಿ ಮೊದಲನೆಯ ಪ್ರಬಂಧ ಸಂಕಲನ "ಲೋಕ ರಹಸ್ಯ"(1898) ಎಂದು ಕಾಣುತ್ತದೆ. ಇದು ಬಂಕಿಮಚಂದ್ರರು ಬಂಗಾಳಿ ಭಾಷೆಯಲ್ಲಿ ಬರೆದ ಪ್ರಬಂಧಗಳ ಅನುವಾದ, ಬಿ. ವೆಂಕಟಾಚಾರ್ಯರು ಮಾಡಿದ್ದು. ವೆಂಕಟಾಚಾರ್ಯರ 'ದಾಡಿಯ ಹೇಳಿಕೆ'(1913) ಪ್ರಾಯಶಃ ಕನ್ನಡದಲ್ಲಿ ಮೊಟ್ಟಮೊದಲನೆಯ ಸ್ವತಂತ್ರ ಲಲಿತ ಪ್ರಬಂಧ". 1931ರ ನಂತರ ಅನೇಕರು ಪ್ರಬಂಧ ರಚಿಸಿದ್ದಾರೆ.

**(ಶೇಷಗಿರಿರಾವ್ ಎಲ್.ಎಸ್, 1999, ಪುಟ 231.)**

ದ.ಬಾ.ಕುಲಕರ್ಣಿರವರ ಪ್ರಬಂಧಗಳಲ್ಲಿ ಕುಟುಂಬ ಜೀವನದ ಆತ್ಮೀಯವಾದ ನಿರೂಪಣೆಯಿದೆ.

ಪ್ರಬಂಧಗಳಲ್ಲಿ ಬಾಳಿನ ಸೌಂದರ್ಯದ ಪ್ರೀತಿ ಇದೆ. ವಿ.ಸೀ.ಯವರ ಪ್ರಬಂಧಗಳಲ್ಲಿ ವಿಚಾರಪೂರ್ಣ ಹೊಸ ದೃಷ್ಟಿಕೋನವಿದೆ. ಶಿವರಾಮ ಕಾರಂತರ ಪ್ರಬಂಧಗಳಲ್ಲಿ ವಿಚಾರ ವಿಡಂಬನೆ ಇದೆ. ಈ ಪ್ರಕಾರದಲ್ಲಿ ಅತ್ಯಂತ ಶ್ರೇಷ್ಠಸಾಧನೆ

ಮಾಡಿದವರೆಂದರೆ ಎ.ಎನ್. ಮೂರ್ತಿರಾಯರು. ಇವರು ಲಲಿತ ಪ್ರಬಂಧ ಸಾಹಿತ್ಯ ಪ್ರಕಾರದ ಆಚಾರ್ಯ ಪುರುಷರಾಗಿದ್ದಾರೆ. ಪ್ರಮುಖ ಪ್ರಬಂಧಕಾರರಾದ ಪು.ತಿ.ನ. ಪ್ರಬಂಧಗಳಲ್ಲಿ ಚಿಂತನಶೀಲತೆ, ಕಲ್ಪಕತೆ ಇದೆ. ಗೊರೂರು ರಾಮಸ್ವಾಮಿ ಅಯ್ಯಂಗಾರರ ಪ್ರಬಂಧಗಳು ಹಾಸ್ಯ ಪ್ರಧಾನವಾಗಿ ಹರಟೆಗಳತ್ತ ವಾಲುತ್ತವೆ. ಸಿಂಪಿ ಲಿಂಗಣ್ಣ, ಕುವೆಂಪು, ಎಂ.ವಿ.ಸೀತಾರಾಮಯ್ಯ, ಕೆ.ವೆಂಕಟರಾಮಪ್ಪ, ಎನ್.ಪ್ರಹ್ಲಾದರು, ರಂ.ಶ್ರೀ.ಮುಗಳಿ, ದ.ರಾ.ಬೇಂದ್ರೆ, ನಾ.ಕಸ್ತೂರಿ, ಶಿವರಾಮ ಕಾರಂತ, ಶ್ರೀರಂಗ, ಬೀಚಿ, ರಾಕು, ಎಚ್.ಎಸ್.ಕೆ., ಎನ್ಕೆ, ಅ.ರಾ.ಮಿತ್ರ, ಎನ್.ಎಸ್ ಗದಗಕರ, ಲಾಂಗೂಲಾಚಾರ್ಯ, ದೇ.ಜ.ಗೌ., ಹಾ.ಮಾ.ನಾಯಕ, ಪ್ರಭುಶಂಕರ, ಸುನಂದಾ ಬೆಳಗಾವಕರ, ಮ.ಸು.ಕೃಷ್ಣಮೂರ್ತಿ, ಲಂಕೇಶ್ ಮೊದಲಾದವರು ಉತ್ತಮ ಪ್ರಬಂಧಗಳನ್ನು ರಚಿಸಿದಿದ್ದಾರೆ.

## ೭.೩.೧: ಮೂರನೆಯ ಧ್ವನಿ (ಸಾಹಿತ್ಯ ಚಿಂತನೆ)

ಕೆ.ಟಿ.ಗಟ್ಟಿಯವರು 'ಮೂರನೆಯ ಧ್ವನಿ' ಎಂಬ ಸಾಹಿತ್ಯ ಚಿಂತನೆಗೆ ಸಂಬಂಧಿಸಿದ ಕೃತಿಯನ್ನು 1994ರಲ್ಲಿ ಪ್ರಕಟಿಸಿದರು. ಈ ಸಂಕಲನದಲ್ಲಿ ಬದುಕು ಮತ್ತು ಸಾಹಿತ್ಯ ಮತ್ತು ಅವೆರಡರ ನಡುವಿನ ಸಂಬಂಧದ ಕುರಿತಾದ ಚಿಂತನೆಯನ್ನು ಉಳ್ಳ ಒಟ್ಟು ಹದಿನಾಲ್ಕು ಲೇಖನಗಳಿವೆ. ಸಾಹಿತ್ಯಿಕ ಕೆಲಸ, ಸಾಹಿತ್ಯಿಕ ಗುಣ, ಸಾಹಿತ್ಯ ಮತ್ತು ಜೀವನ ಧರ್ಮ, ಸಾಹಿತ್ಯ ಮತ್ತು ಸಾಮಾಜಿಕ ಪರಿವರ್ತನೆ, ಧಾರ್ಮಿಕ ಸಮನ್ವಯ ಮತ್ತು ಸಾಹಿತ್ಯ, ಪುಸ್ತಕ ಸಂಸ್ಕೃತಿ, ಕನ್ನಡ ಸಾಹಿತ್ಯ ಮತ್ತು ಸಮಕಾಲೀನತೆ, ಜನಪ್ರಿಯತೆಯ ಅಳತೆಗೋಲು, ಕಾವ್ಯದಲ್ಲಿ ಆಸಕ್ತಿ, ಕಾದಂಬರಿಯ ಇತಿಮಿತಿ, ನಾಟಕವೆಂಬ ಸಾಹಿತ್ಯ ಪ್ರಕಾರ, ಸಾಹಿತ್ಯ, ಪ್ರಚಲಿತ ವಿದ್ಯಮಾನ ಮತ್ತು ಇತಿಹಾಸ, ವಿಮರ್ಶೆಯ ಮತ್ತೊಂದು ಮುಖ, ಪುನರ್ಮುದ್ರಣ ಎಂಬ ಪವಾಡ ಇವು ಈ ಸಂಕಲನದ ಬರಹಗಳು.

ಕೃತಿಯ ಬೆನ್ನುಡಿಯಲ್ಲಿ ಲೇಖಕರು ಈ ಕೃತಿಯ ಧ್ವನಿಯನ್ನು ಸ್ಪಷ್ಟಪಡಿಸಿದ್ದಾರೆ. "ಧರ್ಮ ಮತ್ತು ಅದರ ಬೇರೆ ಬೇರೆ ಅರ್ಥ – ಆಯಾಮಗಳ ಕುರಿತು, ಸಮಾಜದ ಸಾಂಸ್ಕೃತಿಕ – ಸಾಮುದಾಯಿಕ ಸ್ವರೂಪದ ಕುರಿತು ಚರ್ಚೆ, ವಿಶ್ಲೇಷಣೆ ನಡೆದಿದೆ. ಮನುಷ್ಯನು ಜೈವಿಕವಾಗಿ ಕ್ರಿಯಾಶೀಲವಾಗಿರುವ ಹೊತ್ತಿನಲ್ಲಿಯೇ ಒಳ್ಳೆಯ ಸಂವೇದನಾಶೀಲನೂ, ಪ್ರಜ್ಞಾವಂತನೂ, ಮಾನವೀಯ ಅಂತಃಕರಣವುಳ್ಳವನೂ

ಆಗಿರಬೇಕಾದ್ದು ಅಗತ್ಯ. ಭೌತಿಕ ಜೀವನದ ಆರಾಮಕ್ಕೆ ಬೇಕಾದ ಪರಿಕರಗಳನ್ನು ಹೊಂದಿಸಿಕೊಳ್ಳುವಂತೆಯೇ ಆಂತರಿಕವಾಗಿ ಹೆಚ್ಚು ಸುಖಿಯಾಗಿದ್ದು ಸಂತೋಷವನ್ನು ಪಡೆಯುವವನೂ, ಕೊಡುವವನೂ ಆಗಿ ವಿಕಸಿಸಬೇಕಾದ್ದು ಅಗತ್ಯ. ಬದುಕುವ ಕುರಿತಾದ ಚಿಂತನೆಗಳೊಂದಿಗೇ ಬದುಕಿನ ಕುರಿತಾದ ಚಿಂತನೆ ನಡೆಯಬೇಕು. ಈ ಚಿಂತನೆಗೆ ಸಾಹಿತ್ಯ ಎಂಬುದು ಒಂದು ಮೆಟ್ಟಿಲು, ಒಂದು ಬಾಗಿಲು ಅಥವಾ ಒಂದು ವೇದಿಕೆ – ಹೇಗೆ ಎಂಬ ಚಿಂತನೆ ಚರ್ಚೆ ಅಥವಾ ಸಂವಾದವೇ ಇದರ ಧ್ವನಿ" ಎನ್ನುತ್ತಾರೆ. ಕೆ.ಟಿ ಗಟ್ಟಿಯವರು ಈ ಕೃತಿಯ ಬಗ್ಗೆ ಹೇಳುತ್ತಾ "ನನ್ನ ಪುಸ್ತಕದ ಮುನ್ನುಡಿಗಳು ಕೆಲವು ಭಾಷಣಗಳು, ಪ್ರಬಂಧಗಳು ಮತ್ತು ಲೇಖನಗಳ ಪೈಕಿ ಕನ್ನಡ ಸಾಹಿತ್ಯ ಕ್ಷೇತ್ರದ ಪ್ರಚಲಿತ ಸ್ಥಿತಿಗತಿಗೆ ಸಂಬಂಧಿಸಿದವುಗಳನ್ನು ಮುಂದಿರಿಸಿಕೊಂಡು ಈ ಲೇಖನಗಳನ್ನು ತಯಾರಿಸಿದ್ದೇನೆ" ಎನ್ನುತ್ತಾರೆ.

'ಶ್ರೇಷ್ಠ' ಎಂದು ಕರೆಯಲ್ಪಡುವ ಗ್ರಂಥಗಳನ್ನು ನಾನು ರಚಿಸಲಾರೆ. ಲೇಖಕ ಶ್ರೇಷ್ಠರನ್ನು ಅಥವಾ ವಿಮರ್ಶಕ ಶ್ರೇಷ್ಠರನ್ನು ನನ್ನ ಪುಸ್ತಕದ ಓದುಗರನ್ನಾಗಿಸಬೇಕೆಂಬ ಉದ್ದೇಶ ನನಗಿಲ್ಲ. ಪುಸ್ತಕದ ಮೌಲ್ಯಮಾಪನ ಮಾಡುವವರನ್ನೂ ತಲುಪುವುದು ನನ್ನ ಗುರಿಯಲ್ಲ ಎನ್ನುವ ಗಟ್ಟಿಯವರು ನಾನು ಸಾಮಾನ್ಯ ಸಾಹಿತ್ಯಾಸಕ್ತರನ್ನು ದೃಷ್ಟಿಯಲ್ಲಿಟ್ಟುಕೊಂಡು ಬರೆಯುವ ಸಾಮಾನ್ಯ ಲೇಖಕ ಎಂದು ಸೌಜನ್ಯದಿಂದ ಹೇಳುತ್ತಾರೆ. ಸಾಹಿತ್ಯವೆಂಬುದು ಜೀವನ ಧರ್ಮದ ಅಭಿವ್ಯಕ್ತಿ ಸಾಧನ. ಸಾಮಾಜಿಕ ಪರಿವರ್ತನೆ ಸಾಹಿತ್ಯದಿಂದಲೂ ಸಾಧ್ಯವಾಗಬಹುದೆಂದು ಕೃತಿಯ ಮೂಲಕ ತಿಳಿಸುತ್ತಾರೆ. ಸಾಹಿತಿಗೆ ಇರಬೇಕಾದ ಬದ್ಧತೆಯ ಬಗ್ಗೆ ತಿಳಿಸುತ್ತಾರೆ.

'ಸಾಹಿತ್ಯದ ಕೆಲಸ' ಲೇಖನದಲ್ಲಿ ಬಹುತೇಕ ಎಲ್ಲಾ ಲೇಖಕರೂ ತಮ್ಮ ಬರಹದಲ್ಲಿ ಖಂಡಿಸುವ ಜಾತೀಯತೆ, ಮತಾಂಧತೆ, ಮೂಢನಂಬಿಕೆ, ತಾವು ಪ್ರತಿಪಾದಿಸುವ ಜಾತ್ಯತೀತತೆ, ವೈಚಾರಿಕತೆ, ಸ್ನೇಹಶೀಲತೆಗಳು ಸಮಾಜದ ದೃಷ್ಟಿಯಲ್ಲಿ ಪೂರ್ತಿ ಪ್ರಾಮಾಣೀಕವಲ್ಲ. ಯಾಕೆಂದರೆ ಸಮಾಜ ಕೆಲವು ವ್ಯಕ್ತಿಗಳ ಬಗ್ಗೆ ಪೂರ್ವಗ್ರಹವನ್ನು ಹೊಂದಿದೆ. ವ್ಯಕ್ತಿಯ ವೃತ್ತಿ ಮತ್ತು ಮನೋವೃತ್ತಿಯ ನಡುವೆ ಅಂತರವಿದೆ ಎನ್ನುತ್ತಾರೆ. ಭೌತಶಾಸ್ತ್ರದ ಪ್ರಾಧ್ಯಾಪಕ ಬಿಡು ಸಮಯದಲ್ಲಿ ಜಾತಕ ಬರೆದು ಹಣಗಳಿಸುವುದು, ಪ್ರಾಣಿಶಾಸ್ತ್ರದಲ್ಲಿ ಡಾಕ್ಟರೇಟ್ ಮಾಡಿರುವವನೊಬ್ಬ ತನ್ನ ತಲೆಯ ಮೇಲೆ ಹಲ್ಲಿ ಬಿದ್ದುದಕ್ಕೆ ಮೃತ್ಯುಂಜಯ ಹೋಮ ಮಾಡಿಸುವುದು, ಡಾರ್ವಿನ್ ವಿಕಾಸವಾದವನ್ನು ಬೋಧಿಸುವ ಕ್ರಿಶ್ಚಿಯನ್ ಅಧ್ಯಾಪಕ ಖಾಸಗಿಯಾಗಿ ಮಾತಾಡುವಾಗ ಎಲ್ಲವನ್ನು ದೇವರು ಸೃಷ್ಟಿಸಿದ ಎಂದು ಬೈಬಲಿನ ವಾಕ್ಯಗಳನ್ನು ಉದ್ಧರಿಸುವುದು

ಇವುಗಳನ್ನು ಉದಾಹರಣೆಯಾಗಿ ಹೇಳುತ್ತಾ ದ್ವಿಮುಖ ಜೀವನ ಧರ್ಮದ ಸ್ಥಿತಿಯನ್ನು ವಿರೋಧಿಸುತ್ತಾರೆ. ಇಂದು ಸನ್ಮಾರ್ಗವನ್ನು ಬೋಧಿಸುವ ಸ್ವಾಮಿ - ಪಾದ್ರಿ - ಮುಲ್ಲಾಗಳ ಖಾಸಗಿ ಬದುಕು ಅನೀತಿ ಅವಿಚಾರಗಳಿಂದ ಕೂಡಿದೆಯೆಂದು ತಿಳಿಯುವಂತಾಗಿದೆ. ಭ್ರಷ್ಟಾಚಾರದ ವಿರುದ್ಧ ಹೋರಾಟಕ್ಕೆ ಕರೆ ನೀಡುವ ರಾಜಕಾರಣಿ ಭ್ರಷ್ಟನಾಗಿರುತ್ತಾನೆ.

ದ್ವಿಮುಖ ಜೀವನ ಧರ್ಮದ ಪರಿಣಾಮವನ್ನು ಗಟ್ಟಿಯವರು ಪರಿಣಾಮಕಾರಿಯಾಗಿ ವಿವರಿಸುತ್ತಾರೆ. ಪ್ರಾಮಾಣಿಕ ಮಾತುಗಳು ಉಪೇಕ್ಷೆಗೆ ಗುರಿಯಾದರೆ ಡಂಭಾಚಾರದ ಸುಳ್ಳು ಮಾತುಗಳು ಆಕರ್ಷಕವಾಗುತ್ತವೆ. ಪ್ರಾಮಾಣಿಕರನ್ನು ಗಾಂಧಿ ಎಂದು ಕರೆಯುತ್ತಾರೆ. ಸಮಾಜದಲ್ಲಿ ದೇವರ ಹೆಸರಿನಲ್ಲಿ ಮತ್ತು ಸಮಾಜದ ಹೆಸರಿನಲ್ಲಿ ಅವಿರತ ಅನ್ಯಾಯ ಶೋಷಣೆ ನಡೆಯುತ್ತಿದೆ. ಬರೆಯುವುದನ್ನು ಕಸುಬಾಗಿಯೋ ಉಪಕಸುಬಾಗಿಯೋ ಮಾಡಿಕೊಂಡ ಜನ ಸರಕಾರೀ ಬೊಕ್ಕಸದಿಂದ ಕೋಟಿಗಟ್ಟಲೆ ಕೊಳ್ಳೆ ಹೊಡೆದ ಮಹಾಭ್ರಷ್ಟ ರಾಜಕಾರಣಿಯನ್ನು ಭೇಷ್! ಎಂದು ಅಭಿನಂದಿಸಬಹುದು. ದೇಶದ ರಹಸ್ಯವನ್ನು ಬೇರೆ ದೇಶಕ್ಕೆ ನೀಡಿದವರನ್ನೂ ಮೆಚ್ಚಿಕೊಳ್ಳಬಹುದು. ನಿಜವಾದ ಸಾಹಿತ್ಯ ವ್ಯಕ್ತಿಯೊಬ್ಬನ ಮನಸ್ಸಿನ ಧ್ವನಿಯಾಗಿರದೆ ಒಂದು ಸಮಾಜದ ಧ್ವನಿಯಾಗಿರುತ್ತದೆ. ಆ ಧ್ವನಿಯ ಶಕ್ತಿಯನ್ನು, ಪ್ರಭಾವವನ್ನು ಗುರುತಿಸುವಾಗ ವ್ಯಕ್ತಿಗಿಂತಲೂ ಕೃತಿ ಮುಖ್ಯವಾಗುತ್ತದೆ. ವ್ಯಕ್ತಿಯ ಬಣ್ಣ, ಲಿಂಗ, ಜಾತಿ, ಧರ್ಮ ನಗಣ್ಯವಾಗುತ್ತದೆ. ಕೃತಿಯ ಮೌಲ್ಯ ಮಾತ್ರ ಮುಖ್ಯವಾಗುತ್ತದೆ."

**(ಗಟ್ಟಿ ಕೆ.ಟಿ. ಮೂರನೆಯ ಧ್ವನಿ, 1994, ಪುಟ 22)**

ದೇವದೇವಿಯರನ್ನು ಆಪಾದ ಮಸ್ತಕ ವರ್ಣಿಸುವ ನೂರಾರು ಶ್ಲೋಕಗಳು ಖಂಡಿತ ಸಾಹಿತ್ಯದಲ್ಲಿ ಅದು ಬರೀ ಪದ ಪುಂಜರಂಜನ ಎಂಬ ಅಭಿಪ್ರಾಯ ಗಟ್ಟಿಯವರದು.

'ಸಾಹಿತ್ಯಿಕ ಗುಣ' ಲೇಖನದಲ್ಲಿ ಇಂದು ಜನಪ್ರಿಯ ಪ್ರಕಾರವಾಗಿರುವ 'ಕಾದಂಬರಿ' ಉತ್ತಮ ಮಟ್ಟದ್ದೆನಿಸಬೇಕಾದರೆ ಅದರಲ್ಲಿ ಏನಿರಬೇಕು? ಅದರಲ್ಲಿರಬೇಕಾದ ಸಾಹಿತ್ಯಿಕ ಗುಣಗಳು ಯಾವುವು? ಹಾಗೆಯೇ ಉತ್ತಮವಾದ ಕಾವ್ಯ, ನಾಟಕ ಪ್ರಬಂಧದಲ್ಲಿರಬೇಕಾದ ಸಾಹಿತ್ಯಿಕ ಗುಣಗಳೇನು? ಪ್ರತಿಯೊಂದು ಕೃತಿಯಲ್ಲಿಯೂ ಈ ಎಲ್ಲಾ ಗುಣಗಳಿರಬೇಕು ಎಂದು ಸಿದ್ಧಾಂತವನ್ನು ಮಾಡಲಾಗುತ್ತದೆಯೇ ಎಂದು ಪ್ರಶ್ನಿಸುತ್ತಾರೆ.

ಆಯಾಯ ಜನಾಂಗದ ಬಗ್ಗೆ ಅದೇ ಜನಾಂಗದ ಲೇಖಕರು ಬರೆದುದು ಮಾತ್ರ ಯಥಾರ್ಥವಾದ ಸಾಹಿತ್ಯ ಅಂತ ಇನ್ನೊಂದು ವಾದವಿದೆ. ಇದಕ್ಕೋಸ್ಕರ ಲೇಖಕನನ್ನು ಜೈನ, ಬ್ರಾಹ್ಮಣ, ಶೂದ್ರ, ಹರಿಜನ ಎಂಬ ಇತ್ಯಾದಿಯಾಗಿ ಗುರುತಿಸುವ ಸಂಪ್ರದಾಯ ನಮ್ಮಲ್ಲಿದೆ ಇಂಥ ದುರ್ದೆಸೆಗೆ ಈಡಾಗದ ಇಂಗ್ಲೆಂಡ್, ಅಮೇರಿಕ, ರಷ್ಯಾ ಮುಂತಾದ ದೇಶಗಳ ಸಾಹಿತಿಗಳು ನಿಜಕ್ಕೂ ಭಾಗ್ಯವಂತರು ಎನ್ನುವುದರ ಮೂಲಕ ಸಾಹಿತ್ಯವನ್ನು ಜಾತಿಯ ಮೂಲಕ ನೋಡುವುದನ್ನು ವಿರೋಧಿಸುತ್ತಾರೆ.

"ಪುಸ್ತಕ ಚೆನ್ನಾಗಿದೆ ಆದರೆ ಎಂಥದೂ ಅರ್ಥವಾಗಿಲ್ಲ" ಎಂದರೆ ಲೇಖಕನಿಗೆ ಖುಷಿಯಾಗುತ್ತದೆ! ತನ್ನ ಸುತ್ತಣ ಪರಿಸರದ, ಸಮಾಜದ ಅಂಟುನಂಟು ಇಲ್ಲದ ಶುದ್ಧ ಮಸ್ತಿಷ್ಕಜನ್ಯ ಸಾಹಿತ್ಯವನ್ನು ಶುದ್ಧ ಸಾಹಿತ್ಯ, ಶ್ರೇಷ್ಠ ಸಾಹಿತ್ಯ ಎಂದು ಕಣ್ಣುಮುಚ್ಚಿ ನಂಬುವವರು ಇದ್ದಾರೆ. ನಂಬುವುದು ಮತ್ತು ಹೊಗಳುವುದಷ್ಟೆ ಮುಖ್ಯ. ಓದುವುದೂ ಅಲ್ಲ, ಅರ್ಥ ಮಾಡಿಕೊಳ್ಳುವುದೂ ಅಲ್ಲ. ಇದು ಗಟ್ಟಿಯವರು ತಿಳಿಸುವ ನಮ್ಮ ವಿಮರ್ಶಕರ ನಿಲುವು.

'ಸಾಹಿತ್ಯ ಮತ್ತು ಜೀವನ ಧರ್ಮ' ಲೇಖನದಲ್ಲಿ ನಮ್ಮ ಸಂಸ್ಕೃತಿ ನಮ್ಮ ಜೀವವಾಗಬೇಕು ಎನ್ನುತ್ತಾರೆ. "ನಮ್ಮ ಸಂಸ್ಕೃತಿ ಕನ್ನಡದ್ದು, "ಕನ್ನಡ ನೆಲದಲ್ಲಿ ಹುಟ್ಟಿದೆ, ನನ್ನ ಪ್ರಾರಬ್ಧ! ಅಮೇರಿಕದಲ್ಲಿ ಹುಟ್ಟಬೇಕಿತ್ತು! ಇಂಗ್ಲೆಂಡಿನಲ್ಲಿ ಹುಟ್ಟಬೇಕಾಗಿತ್ತು!" ಎಂದು ಅಳುವರಿರಬಹುದು. ಹೌದು, ನಿಜವಾಗಿಯೂ ಪ್ರಾರಬ್ಧವೇ! ಏಕೆಂದರೆ, ಹುಟ್ಟಿನಿಂದಲೇ ಜಾತಿ ಬರುವುದಿಲ್ಲ. ಮತ ಬರುವುದಿಲ್ಲ. ಆದರೆ ಸಂಸ್ಕೃತಿ ಬರುತ್ತದೆ. ಬೇರೊಂದು ಭಾಷೆಯ, ಬೇರೊಂದು ನೆಲದ ಸಂಸ್ಕೃತಿ ನಮ್ಮ ಸಂಸ್ಕೃತಿಯಾಗುವುದಿಲ್ಲ. ಒಂದೇ ದಿನದಲ್ಲಿ ಜಾತಿ ಅಥವಾ ಮತವನ್ನು ಬದಲಾಯಿಸಿಕೊಳ್ಳಬಹುದು. ಸಂಸ್ಕೃತಿ ಬದಲಾಗದು. ಯಾಕೆಂದರೆ ಜಾತಿ ಅಥವಾ ಮತ ಒಂದು ಪೋಷಾಕು ಮಾತ್ರ. ಸಂಸ್ಕೃತಿ ನಮ್ಮ ಜೀವ. ನಮ್ಮ ವ್ಯಕ್ತಿತ್ವದ ಅಂಕಿತ."

**(ಅದೇ, ಪುಟ 36)**

ಸಾಹಿತ್ಯ ನಮಗೆ ಯಾಕೆ ಬೇಕು, ಸಾಹಿತ್ಯವೇನೂ ಬದುಕಿಗೆ ಅನಿವಾರ್ಯವಲ್ಲ, ಓದಿ ಏನಾಗಬೇಕು ಎಂದು ವಿದ್ಯಾವಂತ ಜನರೇ ಕೇಳುತ್ತಾರೆ. ಇಂದು ಪುಸ್ತಕ ಕೊಂಡು ಕೊಳ್ಳಲು ಮಾಡುವ ಖರ್ಚು ದಂಡ ಎಂಬ ಅಭಿಪ್ರಾಯವಿದೆ. ಭೋಗವಸ್ತುಗಳೇ ಇಂದು ಮುಖ್ಯವಾಗಿದೆ. ಸಾಹಿತ್ಯದ ಗ್ರಾಹಕರ ಸಂಖ್ಯೆಯನ್ನು ದೊಡ್ಡದು ಮಾಡುವ ಕೆಲಸ ಸಾಹಿತ್ಯ ಸಂಸ್ಥೆಗಳಿಂದ ಆಗಿಲ್ಲ.

"ಪ್ರತಿಭಟನೆ ಒಂದು ಬೆಳೆಯುತ್ತಿರುವ, ಬದಲಾಗುತ್ತಿರುವ ಸಮಾಜದ ಲಕ್ಷಣ. ಇದು ನಿರಂತರವಾಗಿ ನಡೆಯಲೇಬೇಕಾದ ಪ್ರಕ್ರಿಯೆ ಯಾಕೆಂದರೆ ಸಾಂಸ್ಕೃತಿಕ ಶಿಲ್ಪ ಅಮೂರ್ತ, ವಿಕಾಸಶೀಲ. ಎಲ್ಲಿ ಈ ಪ್ರಕ್ರಿಯೆಯನ್ನು ತಡೆಹಿಡಿಯಲಾಗುವುದೋ ಅಲ್ಲಿ ವ್ಯವಸ್ಥೆ ಅದು ಧರ್ಮದ್ದಿರಲಿ, ರಾಜಕೀಯದ್ದಿರಲಿ, ಕೊಳೆತು ನಾರುತ್ತದೆ. ರೋಗಗಳನ್ನು ಸೃಷ್ಟಿಸಿ ತನ್ನ ಪೃಥಕ್ಕರಣಕ್ಕೆ ತಾನೇ ಕಾರಣವಾಗುತ್ತದೆ."

ಧರ್ಮ ಎಂದರೆ ಏನು ಎಂಬ ಪ್ರಶ್ನೆಯನ್ನೇ ಲೇಖಕರು ಎತ್ತುತ್ತಾ – 'ಧರ್ಮ' ಎಂದರೇನು ಪ್ರಶ್ನೆಗಿಂತ ಅಧರ್ಮವೆಂದರೇನು ಎಂಬುದಕ್ಕೆ ಈ ಸಂಪ್ರದಾಯವಾದಿಗಳಲ್ಲಿ ತಟ್ಟನೆ ಉತ್ತರವಿದೆ ಎನ್ನುತ್ತಾರೆ. "ಪ್ರಶ್ನಿಸುವುದು ಅಧರ್ಮ, ವ್ಯವಸ್ಥೆಯನ್ನು ಟೀಕಿಸುವುದು ಅಧರ್ಮ. ಹತ್ತು ಜನರ ಅಭಿಪ್ರಾಯದಂತಿರದ ಬೇರೆಯೇ ಒಂದು ಅಭಿಪ್ರಾಯವನ್ನು ಪ್ರಕಟಿಸುವುದು ಅಧರ್ಮ ಎನ್ನುವಂತಾಗಿದೆ ಎನ್ನುತ್ತಾರೆ.

'ಸಾಹಿತ್ಯ ಮತ್ತು ಸಮಾಜ ಪರಿವರ್ತನೆ' ಲೇಖನದಲ್ಲಿ ಸಾಹಿತ್ಯದಿಂದ ಆಗುವ ಸಾಮಾಜಿಕ ಪರಿವರ್ತನೆ ಬಗ್ಗೆ ತಿಳಿಸುತ್ತಾರೆ. "ಸಾಮಾಜಿಕ ಪರಿವರ್ತನೆ ರಾತ್ರಿ ಬೆಳಗಾಗುವುದರೊಳಗೆ ಆಗುವುದಿಲ್ಲ. ಸಾಮಾಜಿಕ ಪರಿವರ್ತನೆ ಒಂದು ನಿರಂತರ ಪ್ರಕ್ರಿಯೆ. ಐವತ್ತು ನೂರು ವರ್ಷಗಳ ಅವಧಿಯನ್ನು ತೆಗೆದುಕೊಂಡು ಪರಿಶೀಲಿಸಿ ನೋಡಿದಾಗ ಅದರಲ್ಲಿ ಪರಿವರ್ತನೆಯ ಹಂತಗಳನ್ನು ಗುರುತಿಸಬಹುದು. ಸಾಹಿತ್ಯದ ಮೂಲಕ ಆಗುವ ಪರಿವರ್ತನೆ ಬಹಳ ಸೂಕ್ಷ್ಮವಾದ ಪರಿವರ್ತನೆ ಎನ್ನುತ್ತಾರೆ. "ಸಾಮಾನ್ಯರು ಪುಸ್ತಕದ ಶ್ರೇಷ್ಠತೆಯಷ್ಟೇ ಲೇಖಕನ ಪ್ರಾಮಾಣಿಕತೆ ಮುಖ್ಯ ಎಂದು ತಿಳಿಯುತ್ತಾರೆ. ರಾಜಕಾರಣಿ ಭ್ರಷ್ಟನಾಗಿರುವುದನ್ನು ಕಂಡರೆ ಇವರಿಗೆ ನೋವಾಗುವುದಿಲ್ಲ. ಆದರೆ ತಾವು ಮೆಚ್ಚಿದ ಪುಸ್ತಕದ ಲೇಖಕ ಅಪ್ರಾಮಾಣಿಕ, ಸ್ವಾರ್ಥಿ, ಭ್ರಷ್ಟ ಎಂದು ತಿಳಿದಾಗ ನೊಂದುಕೊಳ್ಳುತ್ತಾರೆ. ಆಗ ಸಾಹಿತ್ಯವೆಂದರೇನು ಎಂಬ ಪ್ರಶ್ನೆ ಅವರನ್ನು ಕಾಡುತ್ತದೆ. ಓದಿ ಏನಾಗಬೇಕು ಎಂಬ ನಿರುತ್ಸಾಹ ಹುಟ್ಟಿಕೊಳ್ಳುತ್ತದೆ."

"ಯಾವ ಧಾರ್ಮಿಕ ನಿಯಮಗಳು ಕಾನೂನುಗಳು ನೂರಾರು ವರ್ಷ ಹಿಂದಿನ ಪತ್ರಿಕೆ, ಸಿನಿಮಾ, ಟಿ.ವಿ., ಫ್ರಿಜ್, ರೈಲು, ಕಾರು, ವಿಮಾನ, ಕಂಪ್ಯೂಟರ್, ಗಗನಚುಂಬಿಗಳು ಇತ್ಯಾದಿ ಇಲ್ಲದ ಸಮಾಜಕ್ಕೆ ಸಂಬಂಧಿಸಿದವುಗಳಾಗಿದ್ದವೋ, ಅವು ಇಂದಿನ ಸಮಾಜಕ್ಕೆ ಹೊಂದುವಂಥವುಗಳಾಗಿರುವುದು ಅಸಾಧ್ಯ. ಇಂದಿಗೂ ಜಗತ್ತಿನ ಅತ್ಯುತ್ತಮ ಸಾಹಿತ್ಯ ಕೃತಿಗಳಲ್ಲಿ ಒಂದು ಎಂದು ಪರಿಗಣಿಸಲ್ಪಡುತ್ತಿರುವ ವಾಲ್ಮೀಕಿ ರಾಮಾಯಣವನ್ನು ಒಂದು ಧಾರ್ಮಿಕ ಗ್ರಂಥವಾಗಿ, ಪರಮಾತ್ಮನ ಅವತಾರದ

ಕತೆಯಾಗಿ ಮಾಡಿದ್ದರಲ್ಲಿ ಬಹಳ ಕುಟಿಲತನ, ಮೋಸವಿದೆ. ಜಗತ್ತಿನ ಯಾವ ಭಾಗದಲ್ಲೂ ಒಂದು ಸಾಹಿತ್ಯ ಕೃತಿಯ ಕಥಾ ನಾಯಕನನ್ನು ದೇವರಾಗಿಸಿ, ಜನಗಳಿಗೆ ಭಕ್ತಿಯ ಅಫೀಮು ತಿನ್ನಿಸಿ ಪೂಜಿಸುವಂತೆ ಮಾಡಿದ ಉದಾಹರಣೆ ಇಲ್ಲ. ಜನರನ್ನು ಈ ಬಗೆಯ ಭಕ್ತರನ್ನಾಗಿ, ಭಯಗ್ರಸ್ತರನ್ನಾಗಿ ಮಾಡಿದ್ದರಿಂದ ಪ್ರಯೋಜನವಾಗುವುದು ಅಧಿಕಾರಶಾಹಿಗೆ. ಈ ತೆರನ ಧರ್ಮ ಪ್ರತಿಪಾದನೆಯು ಭಯವನ್ನೂ, ದಾಸ್ಯ ಭಾವನೆಯನ್ನು ಪೋಷಿಸುತ್ತದೆ."

**(ಅದೇ, ಪುಟ 52)**

"ಸುಮಾರು ಮೂವತ್ತು ನಲವತ್ತು ವರ್ಷಗಳ ಹಿಂದೆ ಬಹಳ ಜನ ಮಠದ ಸ್ವಾಮಿಗಳು ಕಾಲು ತೊಳೆದು ಆ ನೀರನ್ನು ತಮ್ಮ ತಲೆಯ ಮೇಲೆ ಹಾಕಿಕೊಳ್ಳುತ್ತಿದ್ದರು. ಈಗ ಅಂಥ ಮೂಢರ ಸಂಖ್ಯೆ ಇಲ್ಲವೇ ಇಲ್ಲವೆನ್ನುವಷ್ಟು ಕಡಿಮೆಯಾಗಿದೆ. ಕಾವಿಯಾಗಿ ಕಂಡಲ್ಲಿ ದಢಲ್ಲೆಂದು ನೆಲದ ಮೇಲೆ ಬೀಳುವ ಜನಗಳ ಸಂಖ್ಯೆ ತುಂಬಾ ಕಡಿಮೆಯಾಗಿದೆ. ಈಗ ಮಾರ್ಜಾಲ ಸನ್ಯಾಸಿಗಳನ್ನು ಮೂರ್ಖ ಶಿರೋಮಣಿಗಳಾದ ಮಠದ ಸ್ವಾಮಿಗಳನ್ನು ಪ್ರಶ್ನಿಸುವ ಧೈರ್ಯ ಜನಕ್ಕೆ ಬಂದಿದೆ." ಎಂದು ಸಮಾಜದಲ್ಲಿನ ಬದಲಾವಣೆಯನ್ನು ಗಟ್ಟಿಯವರು ಗುರುತಿಸುತ್ತಾರೆ. **(ಅದೇ, ಪುಟ 55)**

'ಧಾರ್ಮಿಕ ಸಮನ್ವಯ ಮತ್ತು ಸಾಹಿತ್ಯ' ಲೇಖನದಲ್ಲಿ ಭೂಮಿ ಗೋಲಾಕಾರವಾಗಿದೆ ಎಂದು ಹೇಳಿದ ವ್ಯಕ್ತಿಗಳು ಧರ್ಮವಿರೋಧಿ ವಿಚಾರಗಳನ್ನು ಪ್ರತಿಪಾದಿಸಿದರೆಂದು ಅವರಿಗೆ ಶಿಕ್ಷೆನೀಡಲಾಗುತ್ತದೆ ಎಂದು ತಿಳಿಸುತ್ತಾರೆ. ದೇವರೆಂಬುದು ಎಲ್ಲಾ ಕಡೆ ಇದೆ ಎಂದು ಹೇಳಿದ ಜ್ಹೋನ್ ಆಫ್ ಆರ್ಕ್ ಎಂಬವಳನ್ನು ಹಿಂಸಿಸಿ ಇಗರ್ಜಿಯ ದೇವರನ್ನು ಮಾತ್ರವೇ ಒಪ್ಪಿಕೊಳ್ಳುವಂತೆ ಒತ್ತಾಯಿಸಲಾಯಿತು. ಆಕೆಯನ್ನು ನಾಸ್ತಿಕಳೆಂದು ಸಾರಿ ಜೀವಂತ ಸುಡಲಾಯಿತು. 1920ರಲ್ಲಿ ಆಕೆಯನ್ನು ಸಂತಳೆಂದು ಪರಿಗಣಿಸಲಾಯಿತು. ಜೀವ ಂತವಿದ್ದಾಗ ದೈವ ವಿರೋಧಿ, ನಾಸ್ತಿಕಳು ಎನಿಸಿದ್ದ ಜ್ಹೋನ್ ಆಫ್ ಆರ್ಕ್ ಸತ್ತು ಇನ್ನೂರು ವರ್ಷಗಳ ಬಳಿಕ ಸೈಂಟ್ ಜ್ಹೋನ್ ಆದಳು! ಎಂಬ ವಾಸ್ತವ ಸತ್ಯವನ್ನು ತಿಳಿಸುತ್ತಾರೆ. "ಕೆಲವು ಧಾರ್ಮಿಕ ಸ್ಥಾಪಿತ ಹಿತಾಸಕ್ತಿಗಳು ವೈಚಾರಿಕ ಪ್ರಗತಿಗೆ ತಡೆಯೊಡ್ಡುವುದನ್ನು ಈಗಲೂ ಮುಂದುವರಿಸಿವೆ. ಮನುಷ್ಯ ಮುಕ್ತ ಚಿಂತನ ಜೀವಿಯಾಗಿ ಬದುಕಲು, ವೈಚಾರಿಕವಾಗಿ ವಿಕಾಸಗೊಂಡು ಹೊರಗಿನ ಬಂಧನಗಳಿಲ್ಲದೆ, ತನ್ನ ವ್ಯಕ್ತಿ ಧರ್ಮವನ್ನು ಪಾಲಿಸುತ್ತಾ ಒಳ್ಳೆಯವನಾಗಿ, ಸಂತೋಷವಾಗಿ ಬದುಕಲು ಈ ಧಾರ್ಮಿಕ ಹಿತಾಸಕ್ತಿಗಳು ಅಡ್ಡಿಯಾಗುತ್ತವೆ." ಪ್ರಶ್ನಿಸಕೂಡದು, ಪ್ರಶ್ನಿಸದೆ ನಂಬಬೇಕು ಎನ್ನುವ ಗುರುಗಳು,

**(ಅದೇ, ಪುಟ 60)**

ಸ್ವಾಮೀಜಿಗಳು ಇದ್ದಾರೆ. ಪ್ರಶ್ನಿಸಿದವರಿಗೆ ಬೆದರಿಸಿ ಸುಮ್ಮನಾಗಿಸುವವರಿದ್ದಾರೆ. ಆಸ್ತಿಕತೆಯೆಂದರೆ ಪ್ರಶ್ನಿಸದಿರುವುದು ಮತ್ತು ಆ ಸ್ಥಿತಿಯಲ್ಲಿ ಸುಖವಾಗಿರುವುದು. ಎಂಬ ವಿಷಯವನ್ನು ವಿವರಿಸುತ್ತಾ "ದೇವರ ಬಗ್ಗೆಯೇ ಇರಲಿ, ವಿಜ್ಞಾನದ ಬಗ್ಗೆಯೇ ಇರಲಿ ಚಿಂತಿಸುವ, ಪ್ರಶ್ನಿಸುವ ಕೆಲಸವೆಲ್ಲ ನಾಸ್ತಿಕರದು. ದೇವರೆಂದರೇನು, ಯಾವುದು ದೇವರು, ಯಾವುದು ದೇವರಲ್ಲ ಎಂದು ನಾಸ್ತಿಕರು ಸದಾ ದೇವರ ಬಗ್ಗೆ ವಿಚಾರ ಮಾಡುತ್ತಿದ್ದರೆ, ಆಸ್ತಿಕರು ದೇವರು ಇದ್ದಾನೆ ಎಂದು ಘೋಷಿಸಿ ನಿಶ್ಚಿಂತೆಯಿಂದ ಇರುತ್ತಾರೆ. ಎಷ್ಟು ನಿಶ್ಚಿಂತೆ ಅಂದರೆ, ದೇವರ ಬಗ್ಗೆ ಚಿಂತಿಸದೆ ಬೇರೇನನ್ನೋ ಚಿಂತಿಸುತ್ತಾ 'ದೇವರ ಪೂಜೆ' ಯನ್ನೂ ಕೂಡಾ ಮಾಡುತ್ತಾರೆ" ಎಂಬ ವಿಚಾರ ತಿಳಿಸುತ್ತಾ ಆಸ್ತಿಕರಲ್ಲಿ ಪ್ರಶ್ನಿಸುವ ಗುಣ

**(ಅದೇ, ಪುಟ 61)**

ಇಲ್ಲದಿರುವ ಬಗ್ಗೆ ಪ್ರತಿರೋಧ ವ್ಯಕ್ತಪಡಿಸುತ್ತಾರೆ.

ಧರ್ಮಗಳ ನಿಯಮದಡಿಯಲ್ಲಿ ಸಿಲುಕಿ ಅನೇಕ ವರ್ಷಗಳಿಂದಲೂ ಶೋಷಣೆಗೊಳಗಾಗಿ ನಾಶವಾಗುವ ಜನರ ದುರಂತ ಚಿತ್ರವನ್ನು ಗಟ್ಟಿಯವರು ಮನಸ್ಸಿನಲ್ಲಿ ಮೂಡಿಸುತ್ತಾರೆ. "ಧರ್ಮ ಗ್ರಂಥಗಳು ಬೇರೆ ಬೇರೆ ಕಾಲ-ಸಂದರ್ಭಗಳಲ್ಲಿ ಧರ್ಮ ಪಂಡಿತರುಗಳಿಂದ ಸಂಗ್ರಹಿಸಲ್ಪಟ್ಟ ಕ್ರೋಢೀಕರಿಸಲ್ಪಟ್ಟ ವಿಚಾರಗಳು ಮತ್ತು ನಿಯಮಗಳ ಸಂಗ್ರಹಗಳು. ಇದು ದೇವರಿಂದ ಹೇಳಲ್ಪಟ್ಟಿದೆ ಎಂದು ಅವರೇ ಇದರಲ್ಲಿ ಬರೆದರು. ತಮ್ಮನ್ನು ರಕ್ಷಿಸಿಕೊಳ್ಳುವುದಕ್ಕೆ ಮತ್ತು ತಮ್ಮ ಹಿತಾಸಕ್ತಿಗಳ ಪೋಷಣೆಗೆ ಬೇಕಾದ ಎಷ್ಟೋ ನಿಯಮಗಳನ್ನು ಬರೆದು ಅವರು ಅದರಲ್ಲಿ ಸೇರಿಸಿದರು. ಪ್ರಶ್ನಿಸಕೂಡದು. ಪ್ರಶ್ನಿಸುವುದು ಪಾಪ, ಪ್ರಶ್ನಿಸಿದರೆ ದೇವರು ಶಿಕ್ಷಿಸುತ್ತಾನೆ. ಎಂದು ಬರೆದರು." ಎನ್ನುತ್ತಾರೆ.

**(ಅದೇ, ಪುಟ 61)**

ಭಾರತೀಯ ಸಮಾಜದ ಸ್ಥಿತಿಯ ಬಗ್ಗೆ ತಿಳಿಸುತ್ತಾ ಲೇಖಕರು "ಭಾರತೀಯ ಸಮಾಜ ಬೇಕು ಬೇಕೆಂದೇ ಅವೈಚಾರಿಕತೆಯ ಪಾಶಕ್ಕೆ ಕೊರಳೊಡ್ಡುತ್ತಾ ಬಂದಿದೆ. ಜೀವನವನ್ನು ಧಾರ್ಮಿಕ ಕಟ್ಟು ಪಾಡುಗಳಲ್ಲಿ ಹಿಡಿದಿಡುವಂಥ ಏಕಮೇವ ವಿಧಾಯಕ ಧಾರ್ಮಿಕ ಗ್ರಂಥವೊಂದಿಲ್ಲವಾದುದರಿಂದ ವಾಸ್ತವದಲ್ಲಿ, ಭಾರತೀಯ ಹಿಂದೂ ಸಮುದಾಯದಲ್ಲಿ ಧರ್ಮದ ವಿಚಾರದಲ್ಲಿ ಬಹಳ ಮನೋವೈಶಾಲ್ಯ ಮತ್ತು ರಾಷ್ಟ್ರೀಯ ಏಕತಾ ಭಾವ ಇರಬೇಕಾಗಿತ್ತು. ಇವೆರಡರ ಕೊರತೆ ಇದ್ದುದರಿಂದಲೇ ಹತ್ತನೇ ಶತಮಾನದಿಂದ ಹದಿನಾರನೆ ಶತಮಾನದವರೆಗೆ ಹಲವು ಅನ್ಯದೇಶೀಯರು ಈ ದೇಶದ ಮೇಲೆ ದಾಳಿ ಮಾಡಿದರು ಮತ್ತು ಪ್ರತಿಸಲವೂ ಅವರೇ ಗೆದ್ದರು. ಅವರು ಈ

ದೇಶವನ್ನಾಳಿದರು. ಅವರ ಮತ ಮತ್ತು ಭಾಷೆಗಳನ್ನು ಕೂಡ ಇಲ್ಲಿ ಬಿತ್ತಿ ಬೆಳೆಸಿ ಗೆಲ್ಲಿಸಿದರು."

**(ಅದೇ ಪುಟ 62)**

ಕಂದಾಚಾರ, ಮೂಢನಂಬಿಕೆಗಳನ್ನು ಸಮರ್ಥಿಸಿ ತಮ್ಮ ಪಾಂಡಿತ್ಯವನ್ನು ಉಪಯೋಗಿಸಿ ಜನರನ್ನು ಮಂಕು ಮಾಡುವ ವಿದ್ಯಾವಂತರು, ಪಂಡಿತರು ಮತ್ತು ಸಾಹಿತಿಗಳಿಂದಾಗುವ ಸಾಮಾಜಿಕ ಹಾನಿಯನ್ನು ಲೇಖಕರು ವಿರೋಧಿಸುತ್ತಾರೆ. ಭಾರತೀಯ ಸಮಾಜದಲ್ಲಿ ಒಬ್ಬ ಜಗದ್ಗುರು 'ಸತಿ' ಪದ್ಧತಿ ಹಿಂದೂ ಧರ್ಮದ ಅವಿಭಾಜ್ಯ ಅಂಗ ಎಂದರೆ ಇನ್ನೊಬ್ಬ ಜಾತಿ ಪದ್ಧತಿ ಹುಟ್ಟಿನಿಂದಲೇ ಬರುತ್ತದೆ. ವರ್ಣಾಶ್ರಮ ಉತ್ಕೃಷ್ಟ ಸಾಮಾಜಿಕ ಪದ್ಧತಿ ಎನ್ನುತ್ತಾನೆ.

ಗಟ್ಟಿಯವರು ವರ್ಣಾಶ್ರಮ ಧರ್ಮವನ್ನು ತೀವ್ರವಾಗಿ ವಿರೋಧಿಸುತ್ತಾರೆ. "ಒಂದು ಕಾಲದಲ್ಲಿ ಈ ದೇಶದಲ್ಲಿ ಜಾತಿ ವ್ಯವಸ್ಥೆ ಇತ್ತು ನಿಜ. ಬ್ರಾಹ್ಮಣರೇ ಬರೆಯುವಂಥ, ಕ್ಷತ್ರಿಯರೇ ಯುದ್ಧ ಮಾಡುವಂಥ, ವೈಶ್ಯರೇ ವ್ಯಾಪಾರ ಮಾಡುವಂಥ, ಶೂದ್ರರೇ ದುಡಿಯುವಂಥ ವ್ಯವಸ್ಥೆ ಇತ್ತು. ಈ ವ್ಯವಸ್ಥೆ ಇಲ್ಲದ ಯಾವ ದೇಶಗಳೂ ಕೆಟ್ಟು ಹೋಗಿಲ್ಲ. ವಾಸ್ತವದಲ್ಲಿ ಈ ದುಷ್ಟ ವರ್ಣಾಶ್ರಮ ಧರ್ಮದಿಂದಾಗಿ ಸಾಮಾಜಿಕವಾಗಿ ನಾವು ಬಹಳ ಕ್ಲೇಶವನ್ನು ಅನುಭವಿಸಿದ್ದೇವೆ. ಅನುಭವಿಸುತ್ತಾ ಇದ್ದೇವೆ. ಇದು ಒಳ್ಳೆಯ ವ್ಯವಸ್ಥೆ ಎಂದು ಮೂರ್ಖರು ಮಾತ್ರ ಒಪ್ಪಿಕೊಳ್ಳಬಹುದು. ಇಂದು ಬರೆಯುವವರಲ್ಲಿ, ಪಾಠ ಹೇಳುವವರಲ್ಲಿ, ಸೈನ್ಯದಲ್ಲಿರುವವರಲ್ಲಿ, ವ್ಯಾಪಾರ ಮಾಡುವವರಲ್ಲಿ, ಬ್ಯಾಂಕುಗಳಲ್ಲಿ, ಸರಕಾರಿ ಕಛೇರಿಗಳಲ್ಲಿ ಎಲ್ಲಾ ವರ್ಗದವರೂ ಇದ್ದಾರೆ. ಇಂದು ಜಾತಿಯನ್ನು, ವರ್ಣವನ್ನು ಗುರುತಿಸಬೇಕಾದ ಅಗತ್ಯ ಇಲ್ಲ. ಅಷ್ಟು ಮಾತ್ರವಲ್ಲ, ಹಿಂದೂ, ಕ್ರೈಸ್ತ, ಮುಸಲ್ಮಾನ, ಪಾರ್ಸಿ, ಸಿಖ್ಖ ಎಂದು ಗುರುತಿಸಬೇಕಾದ ಅವಶ್ಯಕತೆಯೂ ಇಲ್ಲ" ಎಂದು ಲೇಖಕರು ಅಭಿಪ್ರಾಯ ಪಡುತ್ತಾರೆ. ಧಾರ್ಮಿಕ ಪಟ್ಟ

**(ಅದೇ ಪುಟ 64)**

ಭದ್ರ ಹಿತಾಸಕ್ತಿಗಳು ತನ್ನನ್ನು ಓಲೈಸುವ ಬುದ್ಧಿವಂತರಿಗೆ ಧಾರಾಳವಾಗಿ ಬಿರುದು ಬಾವಲಿಗಳನ್ನು ಪ್ರಶಸ್ತಿ ಸನ್ಮಾನಗಳನ್ನು ಕೊಡುತ್ತದೆ. ತತ್ಪರಿಣಾಮವಾಗಿ ಸಮೂಹ ಅವರಿಗೂ ತಲೆಬಾಗುತ್ತದೆ. ಪ್ರಶ್ನಿಸುವ ಗುಣವನ್ನು ಪೂರ್ತಿಯಾಗಿ ಕಳೆದುಕೊಳ್ಳುತ್ತದೆ. ಪ್ರಶ್ನೆಯೇ ಇಲ್ಲ ಎಂದುಕೊಳ್ಳುತ್ತದೆ.

ಜೀವನ ಧರ್ಮಕ್ಕೂ ದೇವರ ಮಂದಿರಕ್ಕೂ ಸಂಬಂಧವಿಲ್ಲ. ಅದು ಬೇರೆಯೇ ಒಂದು ವ್ಯವಹಾರ. ದೇವರಿಗೂ ಜೀವನ ಧರ್ಮಕ್ಕೂ ಸಂಬಂಧವಿಲ್ಲ ಎಂಬುದು

ಗಟ್ಟಿಯವರ ಅಭಿಪ್ರಾಯ. ಅವರು ತಿಳಿಸುವಂತೆ ಪೂಜೆ, ಯಜ್ಞ, ಹವನ, ಹೋಮ ಯಾವ ಬಗೆಯ ದುಡಿತವೂ ಅಲ್ಲ. ಇವು ದುಡಿಯುವವರ ಜೇಬಿನಲ್ಲಿರುವ ಹಣವನ್ನು ದುಡಿಯದವರ ಜೇಬಿಗೆ ಕ್ರಾಂತಿ, ಸದ್ದು ಗದ್ದಲವಿಲ್ಲದೆ ರವಾನಿಸಲು ರೂಪಿಸಲ್ಪಟ್ಟ ತಂತ್ರಗಳು. ಜನರಲ್ಲಿ ಸಂಪತ್ತು ಸಮೃದ್ಧಿ ಹೆಚ್ಚಿದಷ್ಟೂ ಈ ತಂತ್ರಗಳು ವೃದ್ಧಿಯಾಗುತ್ತಾ ಹೋಗುತ್ತವೆ. ರಸ್ತೆಗಳ ಪಕ್ಕದಲ್ಲಿರುವ ಖಾಲಿ ಜಾಗಗಳಲ್ಲಿ ಮಾತ್ರವಲ್ಲ, ರಸ್ತೆಯಲ್ಲೇ ನಮ್ಮ ದಾರಿಗೆ ಅಡ್ಡ ಇಂಥ ಕಿಸೆ ಕೀಳುವ ಮಂದಿರಗಳು ಹುಟ್ಟಿಕೊಳ್ಳುತ್ತವೆ".

(ಅದೇ, ಪುಟ 68)

ಒಬ್ಬ ವ್ಯಕ್ತಿ ದೇವರ ಪಟ ಅಥವಾ ಮೂರ್ತಿಯೆದುರು ಒಂದು ಗಂಟೆ ಕಣ್ಣು ಮುಚ್ಚಿ ಕುಳಿತುಕೊಂಡು ಶ್ಲೋಕ ಪಠಣ ಮಾಡಿದರೆ ಅದು ಪೂಜೆಯೆನಿಸುವುದಾದರೆ ಒಬ್ಬ ಕವಿ ಎಲ್ಲ ಮರೆತು ಒಂದೆಡೆ ಒಂದೆರಡು ಗಂಟೆ ಕುಳಿತು ಕವಿತೆ ಬರೆದರೆ ಅದು ಪೂಜೆಯಲ್ಲವೇ? ಎಂದು ಪ್ರಶ್ನಿಸುತ್ತಾರೆ. ದೇಶವು ಅದರ ಸಂಸ್ಕೃತಿಯಿಂದ ಗುರುತಿಸಲ್ಪಡಬೇಕು, ಅದರಲ್ಲಿರುವ ಮತ ಧರ್ಮಗಳಿಂದಲ್ಲ. ಮನುಷ್ಯನು ಅವನ ಜೀವನ ಧರ್ಮದಿಂದ ಗುರುತಿಸಲ್ಪಡಬೇಕು, ಅವನ ಜಾತಿ ಅಥವಾ ಮತದಿಂದಲ್ಲ ಎನ್ನುವುದು ಕೆ.ಟಿ. ಗಟ್ಟಿಯವರ ಅಭಿಪ್ರಾಯ.

'ಪುಸ್ತಕ ಸಂಸ್ಕೃತಿ' ಯಲ್ಲಿ ಪುಸ್ತಕಗಳ ಮಹತ್ವವನ್ನು ಹೇಳುತ್ತಾರೆ. ಓದಿ ಬುದ್ಧಿವಂತರಾದವರಿದ್ದಾರೆ. ಟಿ.ವಿ. ನೋಡಿ ಅಥವಾ ಸಿನಿಮಾ ನೋಡಿ ಬುದ್ಧಿವಂತರಾದವರು ಯಾರೂ ಕಾಣಿಸುವುದಿಲ್ಲ. ರಾತ್ರಿ ಬೆಳಗಾಗುವುದರೊಳಗಾಗಿ ಧರ್ಮ ಅರ್ಥಾತ್ ಮತವನ್ನು ಬದಲಾಯಿಸಿಕೊಳ್ಳಬಹುದು. ಸಂಸ್ಕೃತಿಯನ್ನು ಬದಲಾಯಿಸಿಕೊಳ್ಳಲು ಸಾಧ್ಯವಿಲ್ಲ. ಟಿ.ವಿ.ಯಲ್ಲಿ ಕಾಣಿಸಲಾಗುವ ಸಂಸ್ಕೃತಿಯು ನಮ್ಮ ಸಂಸ್ಕೃತಿಯನ್ನು ಬೆಳೆಸುವ ಸಮಯವನ್ನು ಕಸಿಯುತ್ತದೆ. ನಮ್ಮ ಸಾಂಸ್ಕೃತಿಕ ಕ್ರಿಯಾಶೀಲತೆಯನ್ನು ಕುಂಠಿತಗೊಳಿಸುತ್ತದೆ. ಅಷ್ಟೇ ಅಲ್ಲ, ಬೆಳವಣಿಗೆಯ ಆರಂಭದ ಹಂತದಲ್ಲಿರುವ ಎಳೆಯ ಮನಸ್ಸಿಗೆ ಸಂಸ್ಕೃತಿಯೇ ಅಲ್ಲದ ಈ ವಿಶ್ವ ಸಂಸ್ಕೃತಿ ಸಂಸ್ಕೃತಿಯ ಬಗ್ಗೆ ತಪ್ಪು ಕಲ್ಪನೆಯನ್ನು ಉಂಟುಮಾಡಬಹುದು.

'ಕನ್ನಡ ಸಾಹಿತ್ಯ ಮತ್ತು ಸಮಕಾಲೀನತೆ' ಲೇಖನ ಬರೆಯುತ್ತಾ ಪಂಪನಿಂದ ಮುದ್ದಣ್ಣನವರೆಗೆ ಸಾಹಿತ್ಯದಲ್ಲಿ ಸಮಕಾಲೀನತೆಯ ಅಭಾವವಿತ್ತು ಎನ್ನುತ್ತಾರೆ. ಸಾಹಿತ್ಯದಲ್ಲಿ ಇರಬೇಕಾದ್ದೆಲ್ಲವೂ ವಚನ ಸಾಹಿತ್ಯದಲ್ಲಿ ಇತ್ತು ಎಂದು ವಾದಿಸುವವರಿದ್ದಾರೆ. ಇಂದಿನ ಬಂಡಾಯದ ಒಳದನಿಯಲ್ಲಿ ಮತ್ತು ಅಂದಿನ ಬಂಡಾಯದ ಒಳದನಿಯಲ್ಲಿ

ಸಮಾನ ನೆಲೆಯನ್ನು ಗುರುತಿಸುವವರಿದ್ದಾರೆ. ಅದೂ ವ್ಯವಸ್ಥೆಯ ವಿರುದ್ಧ ಪ್ರತಿಭಟನೆ ಇದೂ ವ್ಯವಸ್ಥೆಯ ವಿರುದ್ಧ ಪ್ರತಿಭಟನೆ ಎಂಬುದು ನಿಜ. ಆದರೆ ಆ ವ್ಯವಸ್ಥೆ ಬೇರೆಯಾಗಿತ್ತು ಈ ವ್ಯವಸ್ಥೆ ಬೇರೆಯಾಗಿತ್ತು. ಎಂಬುದನ್ನು ಗಮನಿಸಬೇಕು. ಆದುದರಿಂದ ಪ್ರತಿಭಟನೆಯ ವಿಚಾರದಲ್ಲೂ ವ್ಯತ್ಯಾಸ ಇರಲೇಬೇಕು ಎನ್ನುತ್ತಾರೆ. ಸಮಕಾಲೀನವಾದುದು ಸಾರ್ವಕಾಲಿಕವಲ್ಲ ಎಂಬ ವಾದವನ್ನು ಅವೈಚಾರಿಕ ಎಂದು ಹೇಳುತ್ತಾರೆ. ರಾಮ ಮತ್ತು ಕೃಷ್ಣ ಮತ್ತೆ ಬರುವುದಿಲ್ಲ. ಆದರೆ ವಾಲ್ಮೀಕಿ ಮತ್ತು ವ್ಯಾಸ ಮಾಡಿದ ಕೆಲಸವನ್ನು ಇವತ್ತು ಕೂಡ ಮಾಡಲಡ್ಡಿಯೇನಿಲ್ಲ. ಸಮಕಾಲೀನ ಸಮಾಜದಲ್ಲಿ ಸಾಹಿತ್ಯ ಸೃಷ್ಟಿಗೆ ಇಂದು ಅಂದಿಗಿಂತ ಹೆಚ್ಚು ಅವಕಾಶಗಳಿವೆ ಎನ್ನುತ್ತಾರೆ.

ನೊಂದವರ ಬಗ್ಗೆ ನೊಂದವರೇ ಬರೆಯಬೇಕು. ಆಗ ಮಾತ್ರ ನೋವಿಗೆ ಪ್ರಾಮಾಣಿಕವಾದ ಅಭಿವ್ಯಕ್ತಿ ಸಿಗುತ್ತದೆ. ಸಾಹಿತ್ಯ ಸತ್ವಶಾಲಿಯಾಗುತ್ತದೆ ಎಂಬ ವಾದ ಖಂಡಿತವಾಗಿ ಒಪ್ಪತಕ್ಕ ವಿಚಾರ. ಸಾಹಿತ್ಯಕ್ಕೆ ಅನುಭವ ಮುಖ್ಯ. ಆದರೆ ಅನುಭವದ ಅಥವಾ ನೋವಿನ ವರದಿ ಸಾಹಿತ್ಯವಾಗಲಾರದು. ದಲಿತ ಸಾಹಿತ್ಯ ಎಂಬ ವರ್ಗೀಕರಣವು ಸಾಹಿತ್ಯದ ಮೌಲೀಕರಣದ ಆಧಾರದಲ್ಲಿ ಆದದ್ದಲ್ಲ, ಲೇಖಕನ ಜಾತಿ ಅಥವಾ ಕೋಮಿನ ಆಧಾರದಲ್ಲಿ ಆದದ್ದು ಎಂಬುದು ಗಮನಿಸಬೇಕಾದ ವಿಚಾರ ಎನ್ನುತ್ತಾರೆ. "ಕೂಲಿಯಾಳೊಬ್ಬನ ಮಗನಾಗಿ ಹುಟ್ಟಿ ಕಛೇರಿ ಪೇದೆಯಾಗಿರುವ ದಲಿತನಿಗೂ, ಇಂಜಿನಿಯರೊಬ್ಬನ ಮಗನಾಗಿ ಹುಟ್ಟಿ ಐ.ಎ.ಎಸ್. ಅಧಿಕಾರಿಯಾದ ದಲಿತನಿಗೂ ವ್ಯತ್ಯಾಸವಿದೆ. ಇಬ್ಬರೂ ತಮ್ಮ ಜನಾಂಗದ ನೋವಿನ ಕುರಿತಾಗಿ ಒಂದೊಂದು ಕವಿತೆ ಬರೆದರೆ ಯಾವುದನ್ನು ಹೆಚ್ಚು ಪ್ರಾತಿನಿಧಿಕ ಎಂದು ಹೇಳುವುದೇನೋ ಸುಲಭ. ಆದರೆ ಹಾಗೆ ಹೇಳಲು ನಮಗೆ ಲೇಖಕನ ಬಯೋಡೇಟಾ ಬೇಕಾಗುತ್ತದೆ!. ಆದರೆ ಸಾಹಿತ್ಯಿಕವಾಗಿ ಯಾವುದು ಶ್ರೇಷ್ಠ ಎಂದು ನಿರ್ಧರಿಸುವುದು ಹೇಗೆ? ಅಥೆಂಟಿಕ್ ಅಥವಾ ಪ್ರಾತಿನಿಧಿಕವಾಗಿರುವುದೇ ಹೆಚ್ಚು ಸಾಹಿತ್ಯಿಕ ಎನ್ನಲಾದೀತೆ? ಅನುಭವವನ್ನು ಮಾತ್ರವೇ ಬರೆಯಬೇಕು, ಅನುಭವಿಸಿದವನೇ ಬರೆಯಬೇಕು ಎಂಬ ಷರತ್ತು ಸಾಹಿತ್ಯ ಸೃಷ್ಟಿಯ ವಿಚಾರದಲ್ಲಿ ಎಷ್ಟು ಸಮಂಜಸ?" ಎಂದು ಗಟ್ಟಿಯವರು ಪ್ರಶ್ನಿಸುತ್ತಾರೆ. **(ಅದೇ ಪುಟ 88)**

'ಜನಪ್ರಿಯತೆಯು ಅಳತೆಗೋಲು' ಎಂಬ ಪ್ರಬಂಧವನ್ನು ವಿದ್ವಜ್ಜನರಿಂದಲೂ ವಿಮರ್ಶಕರಿಂದಲೂ ಶ್ರೇಷ್ಠ ಮಟ್ಟದ ಸಾಹಿತ್ಯ ಎಂದು ಪರಿಗಣಿಸಿಲ್ಪಟ್ಟ ಒಂದು ಕೃತಿ ಪ್ರಸಿದ್ಧಿಯನ್ನು ಗಳಿಸಿ ಅದರ ಹಲವು ಸಾವಿರ ಪ್ರತಿಗಳು ಮಾರಾಟವಾದರೆ, ಹಲವು ಪುನರ್ಮುದ್ರಣವನ್ನು ಕಂಡರೆ ಅದನ್ನು ಜನಪ್ರಿಯ ಕೃತಿ ಎಂದು ಕರೆಯಲೇಬೇಕಲ್ಲವೆ?

ಎಂಬ ಪ್ರಶ್ನೆಯೊಂದಿಗೆ ಆರಂಭಿಸುತ್ತಾರೆ. ಪ್ರತಿ ವರ್ಷ ಪ್ರಶಸ್ತಿಗಳಿಸುವ ಮೂಲಕ ಪರಿಚಯಿಸಲ್ಪಡುವ ಒಂದೆರಡು ಕಾದಂಬರಿ ಅಥವಾ ಕವನ ಸಂಕಲನ, ಕಥಾ ಸಂಕಲನ ಮಾತ್ರವೇ ಸಾಹಿತ್ಯ, ಜನರು ಇದನ್ನು ಮಾತ್ರ ಓದಿದರೆ ಸಾಕು ಎಂಬ ಅಭಿಪ್ರಾಯವುಂಟಾಗುವ ರೀತಿಯಲ್ಲಿ ಸಾಹಿತ್ಯ ಕ್ಷೇತ್ರದ ವಹಿವಾಟು ಚಾಲ್ತಿಯಲ್ಲಿದೆ. ವಿಪರ್ಯಾಸವೆಂದರೆ ಈ ಪ್ರಶಸ್ತಿ ವಿಜೇತ ಕೃತಿಗಳು ಕೂಡ ನಿರೀಕ್ಷಿಸಿದಷ್ಟು ಜನ ಪ್ರೀತಿ ಗಳಿಸುವುದಿಲ್ಲ ಎಂದು ತಿಳಿಸುತ್ತಾರೆ.

"ಒಂದು ಉತ್ತಮ ಕೃತಿ ಅತಿಹೆಚ್ಚು ಓದುಗರನ್ನು ತಲುಪಿದಾಗ ಅದರ ಲೇಖಕ ಅತಿ ಹೆಚ್ಚು ಜನರಿಗೆ ಪರಿಚಿತನೂ, ಜನಪ್ರಿಯನೂ ಆಗುತ್ತಾನೆ. ಆಗ ಅವನನ್ನು ಜನಪ್ರಿಯ ಕಾದಂಬರಿಕಾರ, ಜನಪ್ರಿಯ ಕವಿ ಅಥವಾ ಜನಪ್ರಿಯ ಲೇಖಕ ಎಂಬ ಅಭಿದಾನದಿಂದ ಕರೆಯುತ್ತಾರೆ. ಇದು ಲೇಖಕನನ್ನು ಅಭಿಮಾನದಿಂದ ಕರೆಯುವ ಗುರುತಿಸುವ, ಗೌರವಿಸುವ ರೀತಿ ಎಂದು ತಿಳಿಯಬೇಕಲ್ಲವೆ? ಈ ಅರ್ಥದಲ್ಲಿ ನಮ್ಮ ಶ್ರೇಷ್ಠ ಲೇಖಕರೆಲ್ಲ ಜನಪ್ರಿಯರು ಎನ್ನಲು ಅಡ್ಡಿಯಿಲ್ಲವಲ್ಲ?" ಎಂದು ಕೆ.ಟಿ.ಗಟ್ಟಿಯವರು

**(ಅದೇ ಪುಟ 93)**

ತಿಳಿಸುತ್ತಾರೆ. ಜೋಮನ ದುಡಿ, ಸಂಸ್ಕಾರ ಕೃತಿಗಳೂ ಜನಪ್ರಿಯತೆಯನ್ನು ಪಡೆದಿವೆ. ಜನಪ್ರಿಯ ಲೇಖಕ ಎಂದರೆ ಪ್ರಸಿದ್ಧ ಲೇಖಕ ಎಂದೇ ಅರ್ಥ. ಜನಪ್ರಿಯವಾದ ಕೃತಿ ಸಾಹಿತ್ಯ ಮೌಲ್ಯವುಳ್ಳದ್ದಾಗಿರುವುದಿಲ್ಲ, ಸಾಹಿತ್ಯ ಮೌಲ್ಯವುಳ್ಳದ್ದು ಜನಪ್ರಿಯವಾಗುವುದಿಲ್ಲ ಎಂಬ ನಂಬಿಕೆ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಬೆಳೆದು ಬಂದದ್ದು ಹೇಗೆ ಎಂದು ಶೋಧಿಸುವ ಪ್ರಯತ್ನ ನಡೆಸುತ್ತಾರೆ.

"ನಮ್ಮ ಬಹಳ ಓದುಗರು ಚಂದಮಾಮ ದರ್ಜೆ ದಾಟಿ ಮೇಲಕ್ಕೆ ಹೋಗಿಲ್ಲ ಎಂಬುದು ನಿಜ. ಹೀಗಾಗಲು ಖಂಡಿತವಾಗಿಯೂ ಓದುಗರ ಬುದ್ಧಿ ಶಕ್ತಿಯ ಐಬು ಕಾರಣವಲ್ಲ. ಬಹುಮಟ್ಟಿಗೆ ಸಾಹಿತ್ಯ ಕ್ಷೇತ್ರದ ರಾಜಕೀಯ ಕಾರಣ. ತಾವು ಶ್ರೇಷ್ಠ ಮಟ್ಟದ ಲೇಖಕರೆಂದು ತಿಳಿದುಕೊಂಡವರು ಈ ವಾಚಕಸ್ತೋಮವನ್ನು ತಿರಸ್ಕರಿಸಿ ಬಿಟ್ಟಿದ್ದಾರೆ. ಕೇವಲ ಏಳೆಂಟು ನೂರು ಅಥವಾ ಸಾವಿರ ಓದುಗರಲ್ಲಿ ತಮ್ಮ ಬರಹದ ಸಾರ್ಥಕತೆಯನ್ನು ಕಂಡುಕೊಂಡಿದ್ದಾರೆ." ಜನಪ್ರಿಯ ಕೃತಿಯ ಕುರಿತು ಗಟ್ಟಿಯವರು

**(ಅದೇ ಪುಟ 95)**

ಪಿ.ಲಂಕೇಶ್‌ರವರ ಕೆಲವು ಮಾತನ್ನು ಉಲ್ಲೇಖಿಸುತ್ತಾರೆ. "ಈ ಜನಪ್ರಿಯ ಕೃತಿಗಳು ಅಗ್ಗದ ಕೃತಿಗಳೆಂದೂ ಗಣ್ಯರು ಓದುವುದಿಲ್ಲವೆಂದೂ ಅನೇಕರು ತಪ್ಪಾಗಿ ಭಾವಿಸಿದ್ದಾರೆ. ಬರ್ಟ್ರಂಡ್ ರಸೆಲ್‌ಗೆ ಈ ಕೃತಿಗಳೆಂದರೆ ಪಂಚಪ್ರಾಣ; ಅವನು ಅದನ್ನು

ಗಂಟೆಗೊಂದರಂತೆ ಓದಿ ಎಸೆಯುತ್ತಿದ್ದ. ಹಾಗೆಯೇ ಎಲ್ಲ ಗಣ್ಯರೂ. ಬದುಕು ಕೇವಲ ಬೋರಿಂಗ್ ಕೃತಿಗಳನ್ನು ಓದುವುದರಲ್ಲಿ ಇರುವುದಿಲ್ಲ. ಎಲ್ಲ ಬಗೆಯ ಕೃತಿಗಳೂ ಸೇರಿ ಸಾಹಿತ್ಯವಾಗುತ್ತದೆ. ಒಂದೇ ಬಗೆಯ ಏಕತಾನದ, ಯಾರಿಗೂ ಅರ್ಥವಾಗದ 'ಅರ್ಥಪೂರ್ಣ' ಸಾಹಿತ್ಯ ಮಾತ್ರ ಸಾಹಿತ್ಯವಲ್ಲ ಎಂಬುದನ್ನು ಮನಗಾಣಬೇಕು."

**(ಅದೇ ಪುಟ 99)**

'ಕಾವ್ಯದಲ್ಲಿ ಆಸಕ್ತಿ' ಪ್ರಬಂಧದಲ್ಲಿ ಯಾವುದು ಕಾವ್ಯ ಯಾವುದು ಕಾವ್ಯವಲ್ಲ ಎಂಬ ಜಗಳದಲ್ಲಿ ಕಾವ್ಯ ಜನರಿಂದ ದೂರ ಹೋಗಿದೆ ಎಂದು ಹೇಳುತ್ತಾರೆ. ಕಾವ್ಯದ ಕುರಿತಾಗಿ ಮೂಡಬಹುದಾದ ಮೂಲಭೂತ ಪ್ರಶ್ನೆಗಳನ್ನು ಹೇಳುತ್ತಾರೆ. "ಕಾವ್ಯ ಯಾಕೆ? ಕಾವ್ಯ ಯಾರಿಗಾಗಿ? ಕಾವ್ಯ ಏನು ಮಾಡಬೇಕು? ಕಾವ್ಯ ಜನಪ್ರಿಯ ವಾಗಬೇಡವೆ? ಕಾವ್ಯ ಜನಪ್ರಿಯವಾದರೆ, ಹೆಚ್ಚು ಜನಕ್ಕೆ ಅರ್ಥವಾದರೆ ಅಥವಾ ಅರ್ಥಮಾಡಿಕೊಳ್ಳುವ ಜನರ ಸಂಖ್ಯೆ ಹೆಚ್ಚಿದರೆ ಆ ಕಾವ್ಯ ಅಕಾವ್ಯವೆನಿಸುತ್ತದೆಯೇ?" ನಮ್ಮ ಕಾವ್ಯಗಳು ಸಾಮಾನ್ಯರಿಗೆ, ಬಡವರಿಗೆ ಏನು ಮಾಡಿವೆ ಎಂದು ತಿಳಿಸುತ್ತಾ "ನಮ್ಮ ಕಾವ್ಯ ಬಡವರ ಬದುಕಿನ ಕುರಿತು ಮಾತಾಡಲಿಲ್ಲ. ಬಡವರ ಭಾಷೆಯಲ್ಲಿ ಇರಲಿಲ್ಲ. ಆದುದರಿಂದ ಬಡವರ ಆಸಕ್ತಿಯನ್ನು ಕೆರಳಿಸಲಿಲ್ಲ. ಬಡವರ ಪ್ರೀತಿಯನ್ನು ಗಳಿಸಲಿಲ್ಲ. ಬಡವರ ರೊಟ್ಟಿಯಾಗಲಿಲ್ಲ ಎಂದು ಹೇಳುತ್ತಾರೆ.

"ಅತಿ ಹೆಚ್ಚು ಜನರನ್ನು ಆಕರ್ಷಿಸಲು ಬಂಡಾಯದಿಂದ ಮಾತ್ರ ಸಾಧ್ಯ. ಆದರೆ ವಸ್ತು ಅತಿ ಹೆಚ್ಚು ಜನರಿಗೆ ಸಂಬಂಧಿಸಿದ್ದಾಗಿರಬೇಕು. ಬಸವಣ್ಣನ, ಅಕ್ಕಮಹಾದೇವಿಯ ಕಾವ್ಯದ ವಸ್ತು ಜನ ಸಮಷ್ಟಿಗೆ ಸಂಬಂಧಿಸಿದ್ದಾಗಿತ್ತು. ಆದರೆ ಆಧುನಿಕ ಬಂಡಾಯ ಕಾವ್ಯದಲ್ಲಿ ಒಂದಷ್ಟಂಶ ವ್ಯಕ್ತಿ ವ್ಯಕ್ತಿಗಳ ನಡುವಣ ತಿಕ್ಕಾಟವಾಗಿದ್ದು ಚಹದ ಬಟ್ಟಲಿನೊಳಗಿನ ಬಿರುಗಾಳಿಯಾಗಿತ್ತು. ಕಾವ್ಯಕ್ಕೇನಾದರೂ ಪ್ರಯೋಜನವಾಗಿದ್ದರೆ ಸಾಹಿತ್ಯ ಜಾತಿಗಳ ನಡುವಣ ಬೀದಿ ಕಲಹದಿಂದ ಮಾತ್ರ!" ಕಾವ್ಯ ಎಲ್ಲರಿಗೂ

**(ಅದೇ ಪುಟ 106)**

ಅರ್ಥವಾಗುವಂಥದಲ್ಲ. ಕಾವ್ಯ ಜನಪ್ರಿಯ ಸಾಹಿತ್ಯ ಪ್ರಕಾರವಾಗಲಾರದು ಎಂಬ ಧೋರಣೆಯನ್ನೂ ತೊರೆಯಬೇಕು. ಇದರಿಂದ ಕಾವ್ಯಕ್ಕೆ ಒಳಿತಾಗುತ್ತದೆ. ಎಂದು ಗಟ್ಟಿಯವರ ಅಭಿಪ್ರಾಯ. ಕಾವ್ಯ ಪ್ರೀತಿ ಒಂದು ಜನಾಂಗದ ಸಂಸ್ಕೃತಿ ಎಷ್ಟು ವಿಕಾಸಹೊಂದಿದೆ ಎಂಬುದಕ್ಕೆ ಒಂದು ನಿದರ್ಶನವಾಗಿದೆ. ನಗರ ಮತ್ತು ಕನ್ಸ್ಯೂಮರಿಸಂ ಕಾವ್ಯವನ್ನೂ ದಿಕ್ಕೆಡಿಸಿದೆ, ಕವಿಗಳನ್ನು ದಿಕ್ಕೆಡಿಸಿದೆ.

'ಕಾದಂಬರಿಯ ಇತಿಮಿತಿ' ಪ್ರಬಂಧದಲ್ಲಿ ಕೆ.ಟಿ ಗಟ್ಟಿಯವರು ಒಂದು ಕೃತಿಯನ್ನು ವಿಮರ್ಶಿಸುವ ಸಂದರ್ಭದಲ್ಲಿ ಕೃತಿಕಾರನ ಜಾತಿ, ಮತ, ಲಿಂಗ ಇತ್ಯಾದಿ ಖಾಸಗಿ ಬದುಕಿಗೆ ಸಂಬಂಧಿಸಿದ ಮಾಹಿತಿಗಳನ್ನು ಸಂಗ್ರಹಿಸಿ ಚರ್ಚಿಸುವ ಅಗತ್ಯತೆಯನ್ನು ಪ್ರಶ್ನಿಸುತ್ತಾರೆ. ಬ್ರಾಹ್ಮಣನಾದುದರಿಂದ ಹೀಗೆ ಬರೆದ. ಶೂದ್ರನಾದುದರಿಂದ ಹೀಗೆ ಬರೆದ. ಅಥವಾ ಒಬ್ಬಳು ಮಹಿಳೆಯ ಕೃತಿಯಿಂದ ಇದಕ್ಕಿಂತ ಹೆಚ್ಚು ನಿರೀಕ್ಷಿಸಲು ಸಾಧ್ಯವಿಲ್ಲ ಎಂದೆಲ್ಲ ಹೇಳುವುದು ಎಷ್ಟು ಸಮಂಜಸ ಎಂದು ಪ್ರಶ್ನಿಸುತ್ತಾರೆ. "ವಿಮರ್ಶೆ ಸಾಹಿತಿಗೆ ಪ್ರಿಯವಾಗದಿದ್ದರೆ ತೊಂದರೆಯಿಲ್ಲ. ಅದು ಓದುವಾತನಿಗೆ ಪ್ರಿಯವಾಗಿರಬೇಕು. ಅರ್ಥಾತ್ ಸರಿಯೆನಿಸಬೇಕು. ಹೇಗೆ ಇಲ್ಲ, ಹೇಗಿರಬೇಕಾಗಿತ್ತು ಎಂದು ಹೇಳುವುದಷ್ಟೇ ವಿಮರ್ಶೆಯಾಗುತ್ತದೆಯೇ? ಹೇಗೆ ಇದೆ ಎಂದು ಹೇಳಬೇಕಾದ್ದು ಹೆಚ್ಚು ಮುಖ್ಯ. ಓದುಗನಿಗೆ ವಿಮರ್ಶೆಯಿಂದ ಏನಾದರೂ ಪ್ರಯೋಜನವಾಗಬೇಕಾದರೆ ಅದು ಅವನ ಓದುವ ಆಸಕ್ತಿಯನ್ನು ಕೆರಳಿಸುವಂತಿರಬೇಕು. ಅವನ ವಿಮರ್ಶನ ಸಾಮರ್ಥ್ಯವನ್ನು ಹರಿತಗೊಳಿಸುವಂತಿರಬೇಕು. ಸಾಹಿತ್ಯದ ಬಗ್ಗೆ ಧನಾತ್ಮಕ ಧೋರಣೆಯನ್ನು ಬೆಳೆಸುವ ದಿಸೆಯಲ್ಲಿರಬೇಕು" ಎನ್ನುತ್ತಾರೆ.

**(ಅದೇ, ಪುಟ 110)**

'ನಾಟಕವೆಂಬ ಸಾಹಿತ್ಯ ಪ್ರಕಾರ' ಪ್ರಬಂಧದಲ್ಲಿ ಸಿನಿಮಾ ಮತ್ತು ಟಿ.ವಿ. ನಾಟಕ ನೋಡುವ ಆಸಕ್ತಿಯನ್ನು ಕುಗ್ಗಿಸಿದೆ ಎಂಬುದು ವಾಸ್ತವವಲ್ಲ ಎನ್ನುತ್ತಾರೆ. ನಾಟಕ ಬರಹವಿಲ್ಲದವರನ್ನು ತಲುಪುವ ಸಾಹಿತ್ಯ ಪ್ರಕಾರ. ಒಂದು ಶೈಕ್ಷಣಿಕ ಸಾಧನ. ಸರಕಾರ ಸಿನಿಮಾಗಳಿಗೆ ಸಬ್ಸಿಡಿ ನೀಡುತ್ತದೆ. ನಾಟಕಗಳಿಗೆ ಯಾಕೆ ನೀಡಬಾರದು? ನಾಟಕಗಳಿಗೆ ಲಭಿಸಬಹುದಾದ ವೇದಿಕೆ ಇವತ್ತು ಶಬ್ದರಾಕ್ಷಸನ ಅಟ್ಟಹಾಸವಾಗಿರುವ ರಸಮಂಜರಿಗೆ ದೊರೆಯುತ್ತದೆ. ಸಿನಿಮಾ, ರೇಡಿಯೋ, ಟಿ.ವಿ., ಟೇಪು ಈ ನಾಲ್ಕು ಮಾಧ್ಯಮಗಳ ಮೂಲಕ ಇನ್ನಿಲ್ಲದಂತೆ ಜೀರ್ಣಶೀರ್ಣವಾದ ಹಾಡುಗಳನ್ನು ಪುನಃ ಆಲಿಸಲು ಜನ ಯಾಕೆ ಸೇರುತ್ತಾರೆ? ಎಂದು ಪ್ರಶ್ನಿಸುತ್ತಾರೆ.

'ಸಾಹಿತ್ಯ, ಪ್ರಚಲಿತ ವಿದ್ಯಮಾನ ಮತ್ತು ಇತಿಹಾಸ' ಪ್ರಬಂಧದಲ್ಲಿ ಕೆ.ಟಿ. ಗಟ್ಟಿಯವರು "ಇತಿಹಾಸವು ಇತಿಹಾಸದ ಬಗ್ಗೆ ಮಾತಾಡಲಾರದು. ಆ ಕೆಲಸವನ್ನು ಸಾಹಿತ್ಯ ಮಾಡಬೇಕಾಗುತ್ತದೆ. ಇತಿಹಾಸ ಇತಿಹಾಸವಾಗಿದ್ದುಕೊಂಡೇ ಸಾಹಿತ್ಯದಂತಿರಲು ಸಾಧ್ಯ ಎಂಬುದನ್ನು ಹಲವು ಇಂಗ್ಲಿಷ್ ಇತಿಹಾಸ ಲೇಖಕರು ತೋರಿಸಿಕೊಟ್ಟಿದ್ದಾರೆ. ಕನ್ನಡದಲ್ಲಿ ಯಾಕೆ ಸಾಧ್ಯವಿಲ್ಲ? ಯಾರಿಗೂ ಬೇಡದ ರೂಪದಲ್ಲಿರುವ ಇತಿಹಾಸವನ್ನು ಎಲ್ಲರಿಗೂ ಬೇಕಾಗುವ ರೀತಿಯಲ್ಲಿ ಪುನಃ ಕಟ್ಟುವ ಕೆಲಸವನ್ನು ಯಾಕೆ ಮಾಡಲಾಗದು?

ಕೇವಲ ಸುದ್ದಿಯೇ ಯಾಕೆ ಪತ್ರಿಕೆಗಳಿಗೆ ಪರಬ್ರಹ್ಮವಾಗಿರಬೇಕು? ಪ್ರಚಲಿತ ವಿದ್ಯಮಾನಗಳು ಮತ್ತು ಗತಕಾಲದ ಪುನರ್ವಿಮರ್ಶೆ ಕೂಡ ಅಷ್ಟೇ ಆಕರ್ಷಕವಾಗಲಾರದೆ? ಇತಿಹಾಸವನ್ನು ಜನಪ್ರಿಯಗೊಳಿಸುವುದರಿಂದ ಸಮಾಜಕ್ಕೆ ತುಂಬಾ ಪ್ರಯೋಜನವಿದೆ" ಎಂದು ಹೇಳುತ್ತಾರೆ.

**(ಅದೇ, ಪುಟ 125)**

"ಇತಿಹಾಸದ ಸತ್ಯ ರಾಜಕಾರಣಿಗಳಿಗೆ ಮಾತ್ರವೇ ಅಲ್ಲ ಈ ದೇಶದ ಸುಮಾರು ಅರ್ಧದಷ್ಟು ಸಂಪತ್ತನ್ನು ಹೊಂದಿರುವ ಬಂಡವಾಳಶಾಹಿಗಳಿಗೂ ಸಂಬಂಧಿಸಿದ್ದಾಗಿರುತ್ತದೆ. ಅಧಿಕಾರವನ್ನು ದುರುಪಯೋಗಪಡಿಸಿ ಸಂಪತ್ತು ಶೇಖರಿಸಿದ ನೌಕರಶಾಹೀ ಹಿರಣ್ಯಗರ್ಭರಿಗೂ ಸಂಬಂಧಿಸಿದ್ದಾಗಿರುತ್ತದೆ. ಇವರ ತಿಜೋರಿಗಳು ಸ್ವಲ್ಪ ದಿನ ಭದ್ರವಾಗಿರಬಹುದು. ಆದರೆ ಒಂದು ದಿನ ಈ ತಿಜೋರಿಗಳು ಒಡೆದೇ ಒಡೆಯುತ್ತವೆ. ಯಾಕೆಂದರೆ ಇವರು ಈ ರೀತಿ ಬೆಳೆದದ್ದು ತಮ್ಮ ಶ್ರಮದ ಫಲದಲ್ಲಿ ಎಂಬುದನ್ನು ಶ್ರಮಿಕರು ಒಂದು ದಿನ ಅರ್ಥಮಾಡಿಕೊಳ್ಳುತ್ತಾರೆ." ಕೆಟ್ಟದಾರಿಯಿಂದಲೇ ಆಗಲಿ,

**(ಅದೇ, ಪುಟ 126)**

ಲಕ್ಷಾಧೀಶನಾದವನು ಬುದ್ಧಿವಂತ, ಕೋಟ್ಯಧೀಶನಾದವನು ಮಹಾಬುದ್ಧಿವಂತ ಎಂದು ಮನ್ನಣೆ ನೀಡುವವರ ಸಂಖ್ಯೆ ದೊಡ್ಡದಾಗಿ ಬಿಟ್ಟಿದೆ! ಇದು ಕೃತಕ ಮನ್ನಣೆ, ಕೇವಲ ತೋರಿಕೆಯ ಮನ್ನಣೆ ಎಂದು ಎಲ್ಲರಿಗೂ ಗೊತ್ತಿದೆ. ಆದರೆ ನಿಜವಾದ ಮನ್ನಣೆ ಇದೇ, ಬೇರೆ ಮನ್ನಣೆ ಇಲ್ಲ ಎಂಬ ಪರಿಸ್ಥಿತಿ ಸೃಷ್ಟಿಯಾಗಿದೆ.

"ಸರಕಾರದ ಧೋರಣೆಗಳನ್ನು ಎತ್ತಿ ಹಿಡಿಯುವವರಿಗೆಂದೇ ಸರಕಾರ ನೂರಾರು ಪ್ರಶಸ್ತಿಗಳನ್ನು ಸೃಷ್ಟಿಸಿದೆ. ಸಮಾಜದ ಒಳಿತಿಗಾಗಿ ದುಡಿಯುವವರು ಈ ಪ್ರಶಸ್ತಿಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಸ್ಥಾಪಿತ ಹಿತಾಸಕ್ತಿಯೊಡನೆ ಸ್ವಲ್ಪ ಹೊಂದಾಣಿಕೆ ಮಾಡಿಕೊಂಡು ಮುಂದುವರಿಯುವಂತೆ ಈ ಪ್ರಶಸ್ತಿಗಳು ಪರೋಕ್ಷವಾಗಿ ಪ್ರಭಾವ ಬೀರುತ್ತವೆ. ಜಾತಿ ಭೇದ, ಮತ ಭೇದ, ಕಂದಾಚಾರಗಳನ್ನು ಘೋಷಿಸುವ ಬುದ್ಧಿವಂತರಿಗೆ ಸ್ವಾಮಿಗಳು ಬಾಬಾಗಳು ಮುಂತಾದ ಮಾನವರು ಬಿರುದು ಬಾವಲಿಗಳನ್ನು ನೀಡುತ್ತಾರೆ. ಹೀಗಾಗಿ ವೈಜ್ಞಾನಿಕ ಚಿಂತನೆಯ ಬುದ್ಧಿಜೀವಿಗಳಾದ ಮಂದಗಾಮಿಗಳಿಗೂ ಪುರಸ್ಕಾರ, ಅವೈಜ್ಞಾನಿಕ ಚಿಂತನೆಯ ಪ್ರತಿಗಾಮಿಗಳಿಗೂ ಪುರಸ್ಕಾರ!"

**(ಅದೇ, ಪುಟ 129)**

'ವಿಮರ್ಶೆಯ ಮತ್ತೊಂದು ಮುಖ' "ಪ್ರಬಂಧದಲ್ಲಿ ಉತ್ತಮ ಎಂದು ವಿಮರ್ಶನ ಪ್ರಪಂಚವು ಶಿಫಾರಸ್ಸು ಮಾಡಿರುವ ಪುಸ್ತಕಗಳನ್ನು ಓದುವವನು ಮಾತ್ರ ಬುದ್ಧಿವಂತ ಓದುಗ ಎಂಬ ಅರ್ಥದಲ್ಲಿ ಮಾತಾಡುವುದು ಸಾಹಿತ್ಯ ವಿರೋಧಿ

ಧೋರಣೆ" ಎಂದು ಗಟ್ಟಿಯವರು ತಿಳಿಸುತ್ತಾರೆ. ಪತ್ರಿಕೆಗಳಲ್ಲಿ ಬರುವ ಪುಸ್ತಕ ವಿಮರ್ಶೆಗಳು ಬಹಳಷ್ಟು ವಿಮರ್ಶೆಯೇ ಆಗಿರುವುದಿಲ್ಲ. ಬಹಳ ಬಾರಿ ಅದು ಒಂದೋ ಬೈಗಳು ಅಥವಾ ಲೇಖಕನ ವಿಮರ್ಶೆ ಆಗಿರುತ್ತದೆ. ಈ ಲೇಖಕ ಅಥವಾ ಲೇಖಕಿ ಬರೆಯಲೇಬಾರದು ಎಂಬ ಧಾಟಿಯ ವಿಮರ್ಶೆಯೇ ಯಾಕೆ ಹೆಚ್ಚು ಹೆಚ್ಚು ಕಾಣಿಸಿಕೊಳ್ಳುತ್ತದೆ ಎಂದು ಕೆ.ಟಿ.ಗಟ್ಟಿಯವರು ಆಶ್ಚರ್ಯ ವ್ಯಕ್ತಪಡಿಸುತ್ತಾರೆ. ಸಾಹಿತ್ಯಿಕ ಕಾಳಜಿ ಸಹೃದಯತೆ ಮತ್ತು ಶಿಸ್ತು ಇಲ್ಲದ ವಿಮರ್ಶೆಯಿಂದ ಸಾಹಿತ್ಯಕ್ಕೆ ಏನೂ ಪ್ರಯೋಜನವಾಗಲಾರದು. ವಿಮರ್ಶೆಯ ಅಗತ್ಯವಿರುವುದು ಮುಖ್ಯವಾಗಿ ಸಾಹಿತ್ಯದ ಬಳಕೆಯ ಸಂದರ್ಭದಲ್ಲೇ ಹೊರತು ಸೃಷ್ಟಿಯ ಸಂದರ್ಭದಲ್ಲಿ ಅಲ್ಲ ಎನ್ನುತ್ತಾರೆ.

'ಪುನರ್ಮುದ್ರಣವೆಂಬ ಪವಾಡ' ಪ್ರಬಂಧದಲ್ಲಿ ಕೆ.ಟಿ.ಗಟ್ಟಿಯವರು ಕನ್ನಡದ ಒಂದು ಕೃತಿ ಪುನರ್ಮುದ್ರಣಗೊಳ್ಳುವ ಸಾಧ್ಯತೆ ಬಹಳ ಕಡಿಮೆ ಎನ್ನುತ್ತಾರೆ. ಕಳೆದ ಹತ್ತು ಇಪ್ಪತ್ತು ವರ್ಷಗಳಲ್ಲಿ ಪ್ರಶಸ್ತಿಗಳಿಸಿದ ಪುಸ್ತಕಗಳು ಮಾರುಕಟ್ಟೆಯಲ್ಲಿ ಲಭ್ಯವಿವೆಯೆ? ಜನ ಇವುಗಳನ್ನು ಕೊಂಡುಕೊಳ್ಳುತ್ತಿದ್ದಾರೆಯೇ? ವರ್ಷದಿಂದ ವರ್ಷಕ್ಕೆ ಓದುಗರ ಸಂಖ್ಯೆ ಹೆಚ್ಚಾಗುತ್ತಿದೆಯೇ? ಉತ್ತಮವಾದ ಪುಸ್ತಕಗಳನ್ನು ಪುನರ್ ಮುದ್ರಿಸುವ ಪ್ರಕಾಶಕರುಗಳು ಇದ್ದಾರೆಯೇ? ಎಂಬ ಈ ಪ್ರಶ್ನೆಗಳನ್ನು ಎತ್ತುತ್ತಾರೆ. ಉತ್ತಮ ಪುಸ್ತಕಗಳು ಪುನರ್ಮುದ್ರಣಗೊಳ್ಳುವುದು ಸಾಹಿತ್ಯಿಕವಾಗಿ ಬೆಳೆಯುತ್ತಿರುವ ಸಮಾಜದ ಲಕ್ಷಣ ಎನ್ನುತ್ತಾರೆ.

ಮೂರನೆಯ ಧ್ವನಿ ಪುಸ್ತಕದ ಪ್ರಬಂಧಗಳು ಸರಳವಾಗಿಯೂ, ಸ್ಪಷ್ಟವಾಗಿಯೂ ನೇರವಾಗಿಯೂ ಆಡಿದ ನುಡಿಗಳು ಇಲ್ಲಿ ಕ್ಲಿಷ್ಟತೆ, ವಿಕ್ಷಿಪ್ತತೆ, ಅಸ್ಪಷ್ಟತೆಯಿಲ್ಲ. ಬದುಕಿನ ಕುರಿತಾದ ಚಿಂತನೆಗಳಿವೆ. ಪ್ರಪಂಚದ ಹಲವಾರು ಮುಖ್ಯ ಸಮಸ್ಯೆಗಳು, ಸನ್ನಿವೇಶಗಳನ್ನು ಪ್ರಬಂಧದ ರೂಪದಲ್ಲಿ ಬರೆದಿದ್ದಾರೆ. ಇಲ್ಲಿ ಸಮಾಜಮುಖಿಯಾದ ಚಿಂತನೆಯಿದೆ. ವರ್ಗವ್ಯತ್ಯಾಸ, ಕೋಮು ದ್ವೇಷ ಮುಂತಾದ ಸಾಮಾಜಿಕ ಅನಿಷ್ಟಗಳ ವಿರುದ್ಧದ ಧ್ವನಿಯಿದೆ.

## ೭.೩.೨: ನಿನ್ನೆ ನಾಳೆಯ ನಡುವೆ (ಸಾಮಾಜಿಕ ಚಿಂತನೆ)

ಕೆ.ಟಿ.ಗಟ್ಟಿಯವರು ಬರೆದ 'ನಿನ್ನೆ ನಾಳೆಯ ನಡುವೆ' ಹದಿನಾಲ್ಕು ಪ್ರಬಂಧ ಗಳನ್ನೊಳಗೊಂಡ ಒಂದು ಸಾಮಾಜಿಕ ಚಿಂತನೆ. ಲೇಖಕನಿಗಿಂತ ಹೆಚ್ಚು ತಿಳಿದ ಓದುಗರು ಇದ್ದಾರೆ ಎಂಬ ಪ್ರಜ್ಞೆಯನ್ನಿಟ್ಟುಕೊಂಡೇ ಬರೆಯುವುದು ಸಾಮಾಜಿಕ ಅಗತ್ಯ

ಎಂಬ ವಿಚಾರವನ್ನು ಮನಸ್ಸಿನಲ್ಲಿಟ್ಟುಕೊಂಡು ಇಲ್ಲಿ ಚಿಂತನೆ ನಡೆಸಿದ್ದಾರೆ. ಚಿಂತನೆ ಒಂದು ಸಾಮಾಜಿಕ ಅಗತ್ಯ ಎಂಬ ಅರಿವು ಲೇಖಕರಿಗಿದೆ. ಈ ಪ್ರಬಂಧಗಳ ಕೆಲವು ಲೇಖನಗಳ ಕೆಲವು ಭಾಗಗಳು ತರಂಗ, ಸುಧಾ, ಕರ್ಮವೀರ, ಸುದ್ದಿ ಸಂಗಾತಿ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ.

ಕೆ.ಟಿ.ಗಟ್ಟಿಯವರು ಸಂಕಲನದ ಪ್ರಸ್ತಾವನೆಯಲ್ಲಿ "ಸಾಹಿತ್ಯವೆಂಬುದು ಕೇವಲ ಬುದ್ಧಿಜೀವಿಗಳ ವ್ಯವಹಾರ ಎಂಬ ಭಾವನೆ ಬೆಳೆಸಿಕೊಂಡ ಬುದ್ಧಿಜೀವಿಗಳ ಸಿದ್ಧಾಂತಗಳು ಮತ್ತು ಹೇಳಿಕೆಗಳು ಸಾಹಿತ್ಯಾಸಕ್ತರ, ವಿಚಾರಾಸಕ್ತರ ಮನಸ್ಸಿನಲ್ಲಿ ಭಾಷೆ-ಶೈಲಿ-ಸಾಹಿತ್ಯ-ವಿಮರ್ಶೆ ಇತ್ಯಾದಿಗಳ ಬಗ್ಗೆ ಪೂರ್ವಗ್ರಹಗಳನ್ನು, ತಪ್ಪು ಕಲ್ಪನೆಗಳನ್ನು ಬಿತ್ತಿ ಬೆಳೆಸುತ್ತಿವೆ. ಇಂತಹವರ ಮೇಲೆ, ಮೂಢನಂಬಿಕೆಗಳನ್ನು ಮತ್ತು ಅಂಧಶ್ರದ್ಧೆಗಳನ್ನು ಸಮರ್ಥಿಸುವ ಸುಶಿಕ್ಷಿತರ ಮೇಲಿರುವಷ್ಟೇ ಸಿಟ್ಟು ನನಗಿದೆ" ಎಂದು ತಿಳಿಸುತ್ತಾರೆ.

ಈ ಸಂಕಲನದಲ್ಲಿ ಮೊದಲ ಪ್ರಬಂಧ 'ಶಿಕ್ಷಣ, ಸಂಸ್ಕೃತಿ ಮತ್ತು ವಿಚಾರ ಜಾಗೃತಿ'. ಶಿಕ್ಷಣವೆಂಬುದು ಇಂದು ಆಧುನಿಕ ಜೀವನ ಕ್ರಮಕ್ಕೆ ಬೇಕಾದ ಸಾಮಗ್ರಿಗಳನ್ನು ಒದಗಿಸುವ ಉದ್ಯಮವಾಗಿದೆ. ಈ ವ್ಯವಸ್ಥೆಯಲ್ಲಿ ಮಹತ್ವವಿರುವುದು ಶಿಕ್ಷಣಕ್ಕಲ್ಲ, ಸರ್ಟಿಫಿಕೇಟಿಗೆ. ವರ್ಷದಿಂದ ವರ್ಷಕ್ಕೆ ಪದವೀಧರರ ಸಂಖ್ಯೆ ಅಧಿಕವಾಗುತ್ತಾ ಹೋಗುವುದು ಒಂದೆಡೆಯಾದರೆ ಇನ್ನೊಂದೆಡೆ ನೌಕರಿಯಿಲ್ಲದೆ ಬದುಕಲಾರೆವು ಎನ್ನುವವರ ಸಂಖ್ಯೆಯೂ ಬೆಳೆಯುತ್ತಾ ಹೋಗುತ್ತಿದೆ ಎಂದು ಗಟ್ಟಿಯವರು ಕಳವಳ ವ್ಯಕ್ತಪಡಿಸುತ್ತಾರೆ. ವೈದ್ಯಕೀಯ, ತಾಂತ್ರಿಕ ಅಧ್ಯಯನ ಕ್ಷೇತ್ರದಲ್ಲಿ ಸಾಧನೆ ಮಾಡಿದ ಹೆಚ್ಚಿನವರು ವಿದೇಶಕ್ಕೆ ಹೋಗಿ ನೆಲೆಸುತ್ತಾರೆ. ಅವರಿಗೆ ಹಣ ಗಳಿಕೆಯೇ ಮುಖ್ಯವಾಗುತ್ತದೆ.

ನಂಬಿಕೆಗಳನ್ನು, ಪರಂಪರೆಯನ್ನು, ಪ್ರಶ್ನಿಸಲು-ವಿಮರ್ಶಿಸಲು ವಿದ್ಯಾರ್ಥಿಗಳಿಗೆ ಅವಕಾಶ ಒದಗಿಸುವ ಪಠ್ಯ ಪುಸ್ತಕಗಳಿಲ್ಲ. ಪಠ್ಯ ಪುಸ್ತಕವನ್ನು ದಾಟಿ ಶಿಕ್ಷಕರು ಹೋಗಲಾರರು. ಒಬ್ಬ ಉತ್ತಮ ವೈದ್ಯ, ಉತ್ತಮ ಇಂಜಿನಿಯರ್ ಬೇಕು ಎಂದು ಬಯಸುವ ಸಮಾಜ ಅಷ್ಟೇ ಉತ್ತಮ ಆಡಳಿತಗಾರ, ಅಷ್ಟೇ ಉತ್ತಮ ಶಿಕ್ಷಕ ಕೂಡಾ ಬೇಕು ಎಂದು ಬಯಸದಿದ್ದರೆ ಸಾಮಾಜಿಕ, ಸಾಂಸ್ಕೃತಿಕ ಮೌಲ್ಯಗಳ ಕೊಳೆತ ಆರಂಭವಾಗುತ್ತದೆ ಎಂದು ಅಭಿಪ್ರಾಯಪಡುತ್ತಾರೆ. 'ಅತಿಶಿಕ್ಷಣ'ದ ಫಲವಾಗಿ ಮಕ್ಕಳು ಒಂದು ರೀತಿಯಲ್ಲಿ ಯಾಂತ್ರಿಕವಾಗಿ ಬುದ್ಧಿವಂತರಾಗುತ್ತಾರೆ. ಹಾಗಾಗುವಾಗ ಅವರ ವೈಯಕ್ತಿಕತೆ ನಾಶವಾಗುವ ಸಂಭವವೇ ಹೆಚ್ಚು. ಶ್ರೇಷ್ಠವೆಂದು ತಿಳಿಯಲಾಗುವ ಆಧುನಿಕ

ಖಾಸಗಿ ಶಾಲೆಗಳ ಪೈಕಿ ನೂರರಲ್ಲಿ ತೊಂಬತ್ತನ್ನು ನಡೆಸುವವರು ದ್ರವ್ಯ ಪಿಪಾಸುಗಳು. ಉಪಯೋಗಕ್ಕಿಲ್ಲದ ಇಂಗ್ಲಿಷನ್ನು ಕಲಿಸುವ ಮತ್ತು ಎಲ್ಲವನ್ನು ಇಂಗ್ಲಿಷಿನಲ್ಲೇ ಕಲಿಸುವ ವ್ಯವಸ್ಥೆ ಅನಗತ್ಯ ಎಂದು ಇಂದಿನ ಶಿಕ್ಷಣ ವ್ಯವಸ್ಥೆಯ ಬಗ್ಗೆ ಲೇಖಕರು ಪ್ರತಿರೋಧ ವ್ಯಕ್ತಪಡಿಸುತ್ತಾರೆ. "ವೃತ್ತಿ ಸಂಬಂಧವಾಗಿ, ಉದ್ಯೋಗ ಸಂಬಂಧವಾಗಿ ಕನ್ನಡಕ್ಕೆ ಆದ್ಯತೆ ನೀಡಿದರೆ, ಅದು ಇಂಗ್ಲಿಷಿಗಿಂತ ಹೆಚ್ಚು ಅಪೇಕ್ಷಿಸಲ್ಪಡುವ ಭಾಷೆಯಾಗುತ್ತದೆ. ಹೆಚ್ಚು ಸಂಬಳದ ಉದ್ಯೋಗದ ಮೇಲೆ ಜರ್ಮನಿಗೋ, ಜಪಾನಿಗೋ, ರಶ್ಯಕ್ಕೋ ಹೋಗುವ ಇಂಜಿನಿಯರನು ಆರು ತಿಂಗಳಲ್ಲಿ ಬೆವರು ಸುರಿಸಿ ಆ ದೇಶದ ಭಾಷೆಯನ್ನು ಕಲಿಯುತ್ತಾನೆ. ಯಾಕೆಂದರೆ ಅದು ಅವನಿಗೆ ವೃತ್ತಿ ಸಂಬಂಧವಾಗಿ ಬಹು ಮುಖ್ಯವಾಗುತ್ತದೆ. ಹಾಗೆಯೇ ವ್ಯಕ್ತಿಗೆ ಕನ್ನಡಕ್ಕೆ ಸಂಬಂಧಿಸಿದ ವೃತ್ತಿಪರ ಅಥವಾ ಔದ್ಯೋಗಿಕ ಆಕರ್ಷಣೆಯಿದ್ದರೆ ಕನ್ನಡ ಅವನಿಗೆ ಬಹು ಮುಖ್ಯವಾಗುತ್ತದೆ" ಎಂದು

**(ಗಟ್ಟಿ ಕೆ.ಟಿ; ನಿನ್ನೆ ನಾಳೆಯ ನಡುವೆ; 1996. ಪುಟ 30)**

ಕನ್ನಡವನ್ನು ಉಳಿಸುವ, ಬೆಳೆಸುವ ಕುರಿತು ಚಿಂತಿಸುತ್ತಾರೆ.

ಅಧ್ಯಾಪಕ ವೃತ್ತಿಯನ್ನು ಆಕರ್ಷಕವಾಗಿಸಿ, ಪ್ರತಿಭಾವಂತರನ್ನು ಶಿಕ್ಷಣ ಕ್ಷೇತ್ರಕ್ಕೆ ಆಕರ್ಷಿಸಬೇಕಾದ್ದು ಅಗತ್ಯ ಎಂದು ಹೇಳುತ್ತಾರೆ. ವಿದ್ಯಾರ್ಥಿಗಳಿಗೆ ಸರಿಯಾಗಿ ಸ್ಕಾಲರ್‌ಶಿಪ್ ಸಿಗುತ್ತಿಲ್ಲ. ಗಟ್ಟಿಯವರು ಶೈಕ್ಷಣಿಕ ಅಸಮಾನತೆಯನ್ನು ವಿರೋಧಿಸುತ್ತಾರೆ. "ಈಗಲೂ ಇಲ್ಲಿ ಗುರುಕುಲ ಶಿಕ್ಷಣ ಪದ್ಧತಿಯೇ ಇದೆ. ಹಿಂದೆ ಗುರುಕುಲದಲ್ಲಿ ರಾಜರು, ಮಂತ್ರಿಗಳು, ಸೇನಾಧಿಪತಿಗಳು ತಯಾರಾಗುತ್ತಿದ್ದರು. ಇತರರಿಗೆ ಅಕ್ಷರ ಕೂಡಾ ಇರಲಿಲ್ಲ. ಇಂದಿನ ಗುರುಕುಲಗಳಲ್ಲಿ ವೈದ್ಯರು, ಇಂಜಿನಿಯರುಗಳು, ಆಡಳಿತಾಧಿಕಾರಿಗಳು ತಯಾರಾಗುತ್ತಾರೆ. ಇತರರಿಗೆ ಅಕ್ಷರ ಮಾತ್ರ ಸಿಗುತ್ತದೆ. ಬ್ರಿಟಿಷರ ಕಾಲದಲ್ಲಿ ಸಹ ಹೀಗಿರಲಿಲ್ಲ. ಬ್ರಿಟಿಷರು ಹೋದ ನಂತರ ಭಾರತೀಯ ಬೆಳವಣಿಗೆ ಸಮಾನತೆಯ ಹೆಸರಿನಲ್ಲಿ ಅಸಮಾನತೆ" ಎನ್ನುತ್ತಾರೆ.

**(ಅದೇ, ಪುಟ 32)**

ಅರುವತ್ತು-ಎಪ್ಪತ್ತು ವರ್ಷ ವಯಸ್ಸಿನ ಡಾಕ್ಟರು, ವಕೀಲರು ದುಡಿಯುತ್ತಿರುವಾಗ ನಿವೃತ್ತ ಪ್ರೊಫೆಸರರು ಯಾಕೆ ತನ್ನ ಅಧ್ಯಯನ ಮತ್ತು ಪ್ರವಚನ ಮುಂದುವರಿಸಬಾರದು? ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಸಂಶೋಧನೆಗಳನ್ನು ನಡೆಸುವವರು, ಪುಸ್ತಕಗಳನ್ನು ಪ್ರಕಟಿಸುವವರು, ನೋಬೆಲ್ ಪಾರಿತೋಷಕಗಳನ್ನು ಪಡೆಯುವ ವಿಜ್ಞಾನಿಗಳು ಇಂಥವರೇ. ನಿರಂತರ ಓದು, ದುಡಿಮೆಯ ಅವಶ್ಯಕತೆಯನ್ನು ಲೇಖಕರು

ತಿಳಿಸುತ್ತಾರೆ. ಎಲ್ಲಿಯ ತನಕ ಚುನಾವಣೆಯಲ್ಲಿ ಚಿಹ್ನೆಗೆ ಮಹತ್ವವಿರುತ್ತದೆಯೋ ಅಲ್ಲಿಯವರೆಗೆ ದೇಶ ಅವಿದ್ಯೆಯ ಕತ್ತಲೆಯಲ್ಲೇ ಇರುತ್ತದೆ ಎನ್ನುತ್ತಾರೆ.

ಎರಡನೆಯ ಪ್ರಬಂಧ 'ಪ್ರಜಾಸತ್ತೆಯ ಮುಂದಿರುವ ಸವಾಲುಗಳು' ಪ್ರಜಾಪ್ರಭುತ್ವ ವ್ಯವಸ್ಥೆಯ ಬಗ್ಗೆ ಚಿಂತನೆ ನಡೆಸುತ್ತದೆ. ದೇಶಕ್ಕೆ ಸ್ವಾತಂತ್ರ್ಯ ಸಿಕ್ಕಿದ ಮೊದಲ ದಿನಗಳಲ್ಲಿ ಜನರಿಗೆ ಸರಕಾರದ ಬಗ್ಗೆ ವಿಶ್ವಾಸವಿತ್ತು. ರಾಜಕಾರಣಿಗಳ ಪೈಕಿ ಸ್ವಾರ್ಥಿಗಳ ಸಂಖ್ಯೆ, ಹಣ ಮಾಡಲು ಪ್ರಜಾಪ್ರತಿನಿಧಿಗಳಾಗಬಯಸುವವರ ಸಂಖ್ಯೆ ಕಡಿಮೆಯಿತ್ತು. ಈಗ ಅಂಥವರ ಸಂಖ್ಯೆ ಅತಿಯಾಗಿ 'ಜನರಿಂದ ಸರಕಾರ' ಎಂಬುದು ಬಹುಮಟ್ಟಿಗೆ ಸುಳ್ಳಾಗಿದೆ. ಪ್ರಜಾಪ್ರಭುತ್ವದಲ್ಲಿ ಜನ ಮತ ಚಲಾವಣೆ ಮಾಡಿ ನಮ್ಮ ನಾಯಕರನ್ನು ಮತ್ತು ಪಕ್ಷವನ್ನು ಚುನಾಯಿಸುತ್ತಾರೆ. "ನೂರು ಸದಸ್ಯರಿರುವ ಒಂದು ವಿಧಾನ ಸಭೆಯಲ್ಲಿ ಐವತ್ತೊಂದು ಮಂದಿ ಸದಸ್ಯರಿರುವ ಪಕ್ಷವೊಂದು ಅಧಿಕಾರಕ್ಕೆ ಬಂದಿದೆ ಎಂದು ಭಾವಿಸೋಣ. ಆ ರಾಜ್ಯದ ಒಟ್ಟು ಮತದಾರರ ಸಂಖ್ಯೆ ಮೂರು ಕೋಟಿ ಎಂದಿಟ್ಟುಕೊಳ್ಳೋಣ. ಆಳುವ ಪಕ್ಷದ ಐವತ್ತೊಂದು ಸದಸ್ಯರು ಪಡೆದ ಮತಗಳು ಸರಾಸರಿ 30% ಎಂದು ಪರಿಗಣಿಸಿದರೆ ಅದು ಬರೀ ನಲವತ್ತೈದು ಲಕ್ಷ ಆಗುತ್ತದೆ. ಅಂದರೆ ರಾಜ್ಯದ ಒಟ್ಟು ಮೂರು ಕೋಟಿ ಮತದಾರರಲ್ಲಿ ನಲವತ್ತೈದು ಲಕ್ಷ ಮತದಾರರಿಂದ ಅಧಿಕಾರಕ್ಕೆ ಬಂದ ಸರಕಾರ ಎಂದು ಅರ್ಥ. ಅದೇ ಪಕ್ಷದ ನಲವತ್ತೊಂಬತ್ತು ಪರಾಜಿತ ಅಭ್ಯರ್ಥಿಗಳು ಪಡೆದ ಮತಗಳು ಸರಾಸರಿ 20% ಎಂದಿಟ್ಟುಕೊಂಡರೂ, ಈ ಪಕ್ಷವನ್ನು ಒಪ್ಪಿಕೊಂಡ ಮತದಾರರ ಒಟ್ಟು ಸಂಖ್ಯೆ ಎಪ್ಪತ್ತೈದು ಲಕ್ಷ ಆಗುತ್ತದೆ. ಇನ್ನಷ್ಟು ಉದಾರವಾಗಿ ಸರಳೀಕರಿಸಿ ಹೇಳುವುದಾದರೆ ಮೂರು ಕೋಟಿ ಜನರಿಂದ ತಿರಸ್ಕರಿಸಲ್ಪಟ್ಟ ಪಕ್ಷ ಆಡಳಿತ ನಡೆಸುತ್ತದೆ ಎಂದು ಅರ್ಥ"

**(ಅದೇ, ಪುಟ 38)**

ಎಂದು ಹೇಳುತ್ತಾ ಲೇಖಕರು "ಜನರ ಸರಕಾರ" ಎಂಬ ಹೇಳಿಕೆಯ ಹಿಂದಿರುವ ಸತ್ಯವನ್ನು ಶೋಧಿಸುತ್ತಾರೆ.

ರಾಜಧಾನಿಗಳಲ್ಲಿ ಬೈಠಕ್ ನಡೆಸಿ ರಾಜಕಾರಣದ ದೊರೆಗಳಿಗೆ, ಉದ್ಯಮ ಪತಿಗಳಿಗೆ ಅನುಕೂಲವಾದ ನಿಯಮಗಳನ್ನು ರಚಿಸಿ ಒಪ್ಪಂದಗಳಿಗೆ ಸಹಿ ಹಾಕುವ ಸರಕಾರ ಇದು ಎಷ್ಟರ ಮಟ್ಟಿಗೆ 'ಜನರಿಗೋಸ್ಕರ' ಸರಕಾರ? ಇದರಿಂದಾಗಿ ಹೇಗೆ ಜನ ತೊಂದರೆಗೆ ಒಳಗಾಗುತ್ತಾರೆ ಎಂಬುದನ್ನು ಲೇಖಕರು ತಿಳಿಸುತ್ತಾರೆ. ಬಂಡವಾಳ ಶಾಹಿಯ ಒಂದು ಕೋಟಿ ಮೌಲ್ಯದ ಉದ್ಯಮ ಸಾಮ್ರಾಜ್ಯ, ಹತ್ತು ಕೋಟಿಯದ್ದಾಗುತ್ತದೆ. ನೂರು ಕೋಟಿ ಸಾವಿರ ಕೋಟಿಯದ್ದಾಗುತ್ತದೆ. ಕೃಷಿಕ ಬಡವನಾಗಿಯೇ ಉಳಿಯುತ್ತಾನೆ.

ಬಹುತೇಕ ನಿರಂಕುಶ ಪ್ರಭುವೇ ಆಗಿರುವ ಪಕ್ಷ-ಸರಕಾರ ಜನರ ಅಸಹಾಯಕತೆಯನ್ನು ಗಮನಿಸುವುದಿಲ್ಲ. ಒಂದಲ್ಲ ಒಂದು ದಿನ ಖಂಡಿತ ಸ್ಫೋಟಗೊಂಡು ಲಕ್ಷಾಂತರ ಜನರನ್ನು ಬಲಿತೆಗೆದುಕೊಳ್ಳಲಿರುವ ಅಣು ವಿಕಿರಣ ಸ್ಥಾವರಗಳನ್ನು ಇಂಥ ಸರಕಾರ ನಿರ್ಮಿಸುತ್ತದೆ. ರಾಜಕಾರಣಿಗಳು, ಉದ್ಯಮಪತಿಗಳು ಕೋಟ್ಯಧೀಶರಾಗುತ್ತಾರೆ. ಪ್ರಜಾಪ್ರಭುತ್ವ ನಿಜವಾಗಿಯೂ 'ಜನರ ಸರಕಾರ' ಎನಿಸಬೇಕಾದರೆ ಪ್ರತಿಯೊಬ್ಬರೂ ವಿದ್ಯಾವಂತರಾಗಿರಬೇಕು. ರಾಜಕೀಯ ಎಚ್ಚರ, ಅರಿವು ಮತ್ತು ವಿವೇಕ ಇರಬೇಕು ಎನ್ನುತ್ತಾ ಲೇಖಕರು ಅತಿ ಕಡಿಮೆ ವಿದ್ಯಾವಂತರಿರುವ ಸಮಾಜದಲ್ಲಿ ಬುದ್ಧಿವಂತ ಅಧಿಕಾರದಲ್ಲಿದ್ದರೆ ಮಾತ್ರ ಬುದ್ಧಿವಂತನೆನಿಸಿಕೊಳ್ಳುತ್ತಾನೆ. ಸಾಮಾನ್ಯ ಬುದ್ಧಿವಂತ ಸಿರಿವಂತನಾಗಿದ್ದರೆ ಮಹಾಬುದ್ಧಿವಂತನೆನಿಸಿಕೊಳ್ಳುತ್ತಾನೆ. ವಾಸ್ತವದಲ್ಲಿ ಜನತೆ ತೋರುವ ಗೌರವ ವ್ಯಕ್ತಿಯ ಮೇಧಾಶಕ್ತಿಗೆ ಅಥವಾ ಪ್ರತಿಭೆಗೆ ಆಗಿರುವುದಿಲ್ಲ. ಅಧಿಕಾರ ಮತ್ತು ಹಣಕ್ಕೆ ಆಗಿರುತ್ತದೆ. ಅವೆರಡೂ ಇಲ್ಲದಾಗ ಆತ ಸಾಮಾನ್ಯ ಮನುಷ್ಯನೆನಿಸಿಕೊಳ್ಳುತ್ತಾನೆ ಎಂದು ತಿಳಿಸುತ್ತಾರೆ. ಇಂದು ಬದುಕಿನಲ್ಲಿ ವ್ಯಕ್ತಿಯ ವಿದ್ಯೆಗಿಂತ ಹಣವೇ ಮುಖ್ಯವಾಗಿರುವ ಮನೋಭಾವನೆಯನ್ನು ಲೇಖಕರು ವಿರೋಧಿಸುತ್ತಾರೆ.

ಪ್ರಜಾಪ್ರಭುತ್ವದ ಬಗ್ಗೆ ಮರು ಚಿಂತನೆ ಮಾಡಬೇಕಾದ ಅಗತ್ಯವನ್ನು ಗಟ್ಟಿಯವರು ತಿಳಿಸುತ್ತಾರೆ. ಆಯ್ಕೆಯಾಗಿ ಹೋದ ಪ್ರಜಾಪ್ರತಿನಿಧಿ ಜನರ ಇಚ್ಛೆಗೆ ವಿರುದ್ಧವಾಗಿ ಕೆಲಸ ಮಾಡುತ್ತಾನೆ. ಅವನನ್ನು ಸರಿಪಡಿಸಲು ಜನರಿಂದ ಆಗುವುದಿಲ್ಲ. ಅವನನ್ನು ಕೆಳಗಿಳಿಸಲು, ಅನ್ಯಾಯವಾಗಿ ಹಣ ಸಂಪಾದನೆ ಮಾಡುವುದನ್ನು ತಡೆಯಲು ಅಗುವುದಿಲ್ಲ. ಸರಕಾರ ಜನ ವಿರೋಧಿ ಯೋಜನೆಗಳನ್ನು ಜಾರಿಗೊಳಿಸಲು ನಿರ್ಧರಿಸಿದಾಗ ಅದನ್ನು ತಡೆಯಲು ಜನರಿಂದ ಆಗುವುದಿಲ್ಲ. ಪ್ರತಿನಿಧಿಯೊಬ್ಬ ಕೆಟ್ಟ ರೀತಿಯಲ್ಲಿ ಮಾಡಿದ್ದನ್ನು ಅವನಿಂದ ಕಿತ್ತುಕೊಳ್ಳುವಂಥ ಕಾನೂನು ಬೇಕು. ಹಿಂದೆ ಹಣಕ್ಕಾಗಿ ಪಕ್ಷಾಂತರ ನಡೆಯುತ್ತಿತ್ತು. ಪಕ್ಷಾಂತರ ನಿಷೇಧ ಕಾನೂನಿನಿಂದ ಒಳ್ಳೆಯದು ಆಗುವ ಬದಲು ಕೆಟ್ಟದೇ ಆಯಿತು. ಭ್ರಷ್ಟ ಸರಕಾರ ನಾಲ್ಕೈದು ವರ್ಷ ಪಟ್ಟು ಹಿಡಿದು ಕುಳಿತುಕೊಳ್ಳುತ್ತದೆ. ನೌಕರಶಾಹಿಯ ಭ್ರಷ್ಟತೆಯನ್ನು ವಿಚಾರಿಸಿಕೊಳ್ಳುವವರಾದರೂ ಯಾರು? ಭ್ರಷ್ಟರಿಲ್ಲದ ಒಂದು ಮಂತ್ರಿಮಂಡಲ ಅಸ್ತಿತ್ವಕ್ಕೆ ಬರುವುದು ಸಾಧ್ಯವೆಂದಾದರೆ ಎಲ್ಲಾ ಭ್ರಷ್ಟಾಚಾರವನ್ನು ಒಂದೇ ದಿನದಲ್ಲಿ ತೊಡೆದುಹಾಕಬಹುದು. ಭ್ರಷ್ಟನಾದವನ್ನು ತಕ್ಷಣ ಕಿತ್ತೊಗೆದು ವಿಚಾರಣೆಗೊಳಪಡಿಸುವಂಥ ವ್ಯವಸ್ಥೆಯನ್ನು ರೂಪಿಸುವುದು ಸಾಧ್ಯವೆ? ಎಂದು ಗಟ್ಟಿಯವರು ಪ್ರಶ್ನಿಸುತ್ತಾ 50% ಜನರಾದರೂ ವಿದ್ಯಾವಂತರಾದಾಗ ಇದು ಸಾಧ್ಯ ಎಂದು ಇದಕ್ಕೆ ಪರಿಹಾರೋಪಾಯವನ್ನು ಯೋಚಿಸುತ್ತಾರೆ.

ಕೆ.ಟಿ.ಗಟ್ಟಿಯವರು ಈ ದೇಶದ ಭ್ರಷ್ಟಾಚಾರವನ್ನು ವಿರೋಧಿಸುತ್ತಾ ಇದನ್ನು ನಾಶಮಾಡಲು ಸಾಧ್ಯವಾಗಬಹುದಾದ ವಿಚಾರಗಳನ್ನು ನಮ್ಮ ಮುಂದಿಡುತ್ತಾರೆ. ಜನರಲ್ಲಿ ವ್ಯಾಪಕವಾಗಿ ಅರಿವು, ಎಚ್ಚರ ಮೂಡಿಸುವ ಕೆಲಸ ಕೂಡಲೇ ಆಗಬೇಕು. ದೇಶದಾದ್ಯಂತ ಭ್ರಷ್ಟಾಚಾರದ ವಿರುದ್ಧ ಜನರಲ್ಲಿ ಎಚ್ಚರ ಮೂಡಿಸಲು ಹಿರಿಯ ಕಿರಿಯ ಎಂಬ ವ್ಯತ್ಯಾಸವಿಲ್ಲದೆ ಪ್ರತಿಯೊಬ್ಬ ಲೇಖಕನೂ ಲೇಖನಿ ಎತ್ತಿಕೊಳ್ಳಬೇಕು ಮತ್ತು ಲೇಖನಿಗೆ ವಿರಾಮ ಇರಕೂಡದು. ಈ ದೇಶದಲ್ಲಿ ವೈಚಾರಿಕ ಕ್ರಾಂತಿಯಾಗಬೇಕು ಎಂದು ತಿಳಿಸುತ್ತಾರೆ.

'ನಮ್ಮ ಪ್ರಜಾಪ್ರಭುತ್ವ-ಕೆಲವು ಟಿಪ್ಪಣಿಗಳು' ಪ್ರಬಂಧದಲ್ಲಿ ಕೆ.ಟಿ.ಗಟ್ಟಿಯವರು ಹಿಂದಿನ ಪ್ರಬಂಧದಲ್ಲಿ ಹೇಳಿರುವ ವಿಚಾರಗಳನ್ನು ಮುಂದುವರಿಸುತ್ತಾರೆ. ನಮ್ಮ ಜನಪ್ರತಿನಿಧಿಗಳು ರಾಜಕಾರಣಿಗಳಲ್ಲ ರಾಜಕೀಯ ನಟರು. ಯಾವ ಜ್ಞಾನ, ಅರ್ಹತೆ ಇಲ್ಲದವನೂ ಕೂಡಾ ಪ್ರಧಾನಮಂತ್ರಿ ಕುರ್ಚಿಯಲ್ಲಿ ಕೂರಲು ತಯಾರು ಎಂಬ ವಾಸ್ತವ ಸ್ಥಿತಿಯನ್ನು ಗಟ್ಟಿಯವರು ಬಹಿರಂಗಪಡಿಸುತ್ತಾರೆ.

ಒಂದು ಪಕ್ಷದ ಸದಸ್ಯ ಸಾರ್ವಜನಿಕ ವೇದಿಕೆಯಲ್ಲಿ ತನ್ನ ಪಕ್ಷದ ರೀತಿ ನೀತಿಗಳನ್ನು ಟೀಕಿಸಿದಾಗ ಅದು ಅಶಿಸ್ತು ಎನಿಸಿಕೊಳ್ಳುತ್ತದೆ. ಆ ಸಂದರ್ಭದಲ್ಲಿ ಆತನನ್ನು ಪಕ್ಷದಿಂದ ಉಚ್ಚಾಟನೆ ಮಾಡಬಹುದು. ಆದರೆ "ವಿದೇಶೀ ಕಂಪೆನಿಗಳೊಂದಿಗೆ ರಹಸ್ಯ ಒಪ್ಪಂದ ಮಾಡಿಕೊಂಡು ಸರಕಾರದ ಕೋಟಿಗಟ್ಟಲೆ ರೂಪಾಯಿ ತಿನ್ನುವುದು ಅಶಿಸ್ತು ಅಲ್ಲವೆ? ಇದು ರಾಜದ್ರೋಹಕ್ಕೆ ಸಮ ಎನಿಸುವ ಅಪರಾಧ ಅಲ್ಲವೆ? ತನ್ನ ಖಾತೆಯ ಅಧಿಕಾರಿಗಳನ್ನು ಉಪಯೋಗಿಸಿ ಸಂಪತ್ತು ಸಂಗ್ರಹಿಸುವುದು 'ಅಶಿಸ್ತು' ಅಲ್ಲವೆ? ನಾನಾ ವಿಧಾನಗಳಿಂದ ಸರಕಾರದ ಖಜಾನೆಯಲ್ಲಿರುವ ಹಣವನ್ನು ಲಪಟಾಯಿಸಲು ತಾನೂ ತನ್ನ ಕುಟುಂಬವೂ ಸೇರಿ ತಂತ್ರಗಳನ್ನು ರೂಪಿಸುವ ರಾಜಕಾರಣಿ ರಾಜಕೀಯ ಅಪರಾಧಿ ಅಲ್ಲವೆ? ಇಂಥವರಿಗೆಲ್ಲ ಯಾಕೆ ಉಚ್ಚಾಟನೆ ಇಲ್ಲ?" ಎಂದು ಲೇಖಕರು ಪ್ರತಿರೋಧದ ಮಾತುಗಳನ್ನಾಡುತ್ತಾರೆ. **(ಅದೇ, ಪುಟ 51)**

ನಮಗೆ ನೀತಿವಂತ ನೌಕರ ವರ್ಗ ಬೇಕೆಂದಾದರೆ ಭ್ರಷ್ಟರಾದ ವರಿಷ್ಠ ಅಧಿಕಾರಿಗಳನ್ನು ಮೊದಲು ವಜಾ ಮಾಡಬೇಕು ಎಂದು ಭ್ರಷ್ಟಾಚಾರದ ವಿರುದ್ಧ ಕಿಡಿ ಕಾರುತ್ತಾರೆ. ಅಧಿಕಾರದಲ್ಲಿದ್ದಾಗ ಸಿಕ್ಕಿದ ಬಂಗಲೆಯನ್ನು ತೊರೆಯದೆ ಬಾಡಿಗೆ ನೀಡುವ, ಶಾಸಕರಾದೊಡನೆ ತಮ್ಮ ಗ್ರಾಮವನ್ನು ತೊರೆದು ರಾಜಧಾನಿಯಲ್ಲಿ ನೆಲೆಸುವ ಸ್ವಾರ್ಥ ರಾಜಕಾರಣಿಗಳನ್ನು ಟೀಕಿಸುತ್ತಾರೆ. ಜನರಿಗೆ ಹಿತವನ್ನು ಮಾಡುವುದಕ್ಕಾಗಿ ಜನರಿಂದ

ಆಯ್ಕೆಯಾದ ವ್ಯಕ್ತಿ ವಿಜಯೋತ್ಸವವನ್ನು ಆಚರಿಸುವುದೆಂದರೆ ಏನು? ಮಂತ್ರಿ ಅಥವಾ ಶಾಸಕನೊಬ್ಬ ತನ್ನ ಚುನಾವಣಾ ಕ್ಷೇತ್ರಕ್ಕೆ ಬಂದು ತನಗೆ ಓಟು ಹಾಕಿದವರಿಗೆ ಕೃತಜ್ಞತೆ ಸೂಚಿಸುವ ಭಾಷಣ ಮಾಡುವುದು ಪ್ರಜಾಪ್ರಭುತ್ವದ ಮೂಲ ತತ್ವಕ್ಕೆ ವಿರುದ್ಧವಲ್ಲವೆ? ಎಂದು ಗಟ್ಟಿಯವರು ಪ್ರಶ್ನಿಸುತ್ತಾರೆ.

ಒಂದೂರಿಗೆ ಒಬ್ಬ ಮಂತ್ರಿ ಬರುತ್ತಾನೆಂದರೆ ರಸ್ತೆಯುದ್ಧಕ್ಕೂ ತೋರಣ ಕಟ್ಟಿ ಲಾರಿ ಬಸ್ಸುಗಳಲ್ಲಿ ಜನರನ್ನು ತಂದು ರಸ್ತೆ ಬದಿಯಲ್ಲಿ ಸುರಿಯಬೇಕಾದ ಅಗತ್ಯ ಏನು? ಸಾರ್ವಜನಿಕ ಜೀವನಕ್ಕೆ ಅಡ್ಡಿ ಆತಂಕ ಉಂಟುಮಾಡುವುದು ಎಷ್ಟು ಸಮಂಜಸ! ನಮ್ಮ ದೇಶದಲ್ಲಿ ಶಂಕುಸ್ಥಾಪನೆ ಮತ್ತು ಉದ್ಘಾಟನೆಗೆ ಆಗುವ ಅಪವ್ಯಯ ಎಷ್ಟು? ಸಮಾರಂಭಕ್ಕಾಗಿ ಲಕ್ಷಗಟ್ಟಲೆ, ಕೋಟಿಗಟ್ಟಲೆ ಖರ್ಚು ಮಾಡುವುದು ರಾಜಕೀಯ ಧರ್ಮ ಅಲ್ಲ ಎಂದು ತಿಳಿಸುತ್ತಾರೆ. ರಾಜಕಾರಣಿಗಳಿಗೆ ಹಣ ಸುರಿಯುವ ಖಾತೆಗಳೇ ಬೇಕು. ಆತನನ್ನು ತಪ್ಪಿತಸ್ಥ ಎಂದು ನ್ಯಾಯಾಲಯ ತೀರ್ಪು ನೀಡಿದ ಮೇಲೂ ಅವರು ಅಧಿಕಾರ ತ್ಯಜಿಸಲಾರರು. "ಅಧಿಕಾರದಲ್ಲಿರುವ ಪಕ್ಷ ಜನರನ್ನು ವಿಭಜಿಸಿ ಆಳುತ್ತದೆ. ಅಲ್ಪಸಂಖ್ಯಾತರು ಎಂದು ಯಾವುದೋ ಒಂದು ಮತದವರಿಗೆ ಪ್ರತ್ಯೇಕ ಸವಲತ್ತುಗಳು, ಕೆಳವರ್ಗದವರೆಂದರೆ ಕೆಲವು ಸವಲತ್ತುಗಳು. ಯಾವುದೋ ಒಂದು ಸವಲತ್ತು ಯಾವುದೋ ಜಾತಿಗೆ ಸೇರಿದವನಾದುದರಿಂದ ಶ್ರೀಮಂತನಿಗೆ ಲಭಿಸುತ್ತದೆ. ಮತ್ತೊಂದು ಜಾತಿಗೆ ಸೇರಿದ ದಟ್ಟ ದರಿದ್ರನಿಗೂ ಲಭಿಸುವುದಿಲ್ಲ" ಎಂದು ಒಡೆದು ಆಳುವ

**(ಅದೇ, ಪುಟ 59)**

ರಾಜಕೀಯ ಪಕ್ಷಗಳ ಮನೋಧರ್ಮವನ್ನು ವಿರೋಧಿಸುತ್ತಾರೆ. ಜನ ಅಭ್ಯರ್ಥಿಯ ಜಾತಿ ಅಥವ ಮತವನ್ನು ಗಮನಕ್ಕೆ ತೆಗೆದುಕೊಳ್ಳಲೇಬಾರದು. ಜನ ಅವನ ಅರ್ಹತೆಯನ್ನು ಮಾತ್ರ ನೋಡಬೇಕು. ಅನರ್ಹ, ಭ್ರಷ್ಟ, ಅವಿದ್ಯಾವಂತ ಅಭ್ಯರ್ಥಿ ಯಾವ ಮತದವನಾದರು ಬೇಡ. ಸೆಕ್ಯೂಲರ್ ರಾಷ್ಟ್ರದಲ್ಲಿ ಹಿಂದೂ ಮತದಾರರು, ಮುಸ್ಲಿಮ್ ಮತದಾರರು ಎಂದು ಉಲ್ಲೇಖಿಸುವುದು ಸರಿಯೇ? ಓಟಿನಲ್ಲಿ ಹಿಂದೂ ಓಟು, ಮುಸ್ಲಿಮ್ ಓಟು, ಸಿಖ್ ಓಟು ಅಂತ ಇದೆಯೆ? ಎಂದು ಪ್ರಶ್ನಿಸುತ್ತಾರೆ.

'ಸ್ವಾಮೀಜಿ ಎಂಬ ವ್ಯಸನ' ಲೇಖನದ ಮೂಲಕ ತಿಳಿಸುವಂತೆ ಸ್ವಾಮೀಜಿಗಳ ದುಷ್ಕೃತ್ಯಗಳ ವರದಿಗಳು ಮೇಲಿಂದ ಮೇಲೆ ಪತ್ರಿಕೆಗಳಲ್ಲಿ ಬರುತ್ತಿವೆ. ಹೆಚ್ಚಿನ ಸ್ವಾಮೀಜಿಗಳ ಅಸ್ತಿತ್ವ ಹೆಣ್ಣು ಮತ್ತು ಹಣದಲ್ಲಿ. ಇವೆರಡೂ ಇಲ್ಲವಾದರೆ ನೂರರಲ್ಲಿ ತೊಂಬತ್ತೊಂಬತ್ತು ಸ್ವಾಮೀಜಿಗಳು ಸಿಮೆಂಟ್ ಗೋಡೌನ್‌ನಲ್ಲಿ ಸಿಮೆಂಟ್ ಹೊರುತ್ತಲೋ, ಕಾಮಾಟಿಪುರದಲ್ಲಿ ತಲೆ ಹಿಡುಕರಾಗಿಯೋ ಉದರಂಭರಣ

ಮಾಡಬೇಕಾಗುತ್ತದೆ. ಆ ಶಕ್ತಿ ಈ ಶಕ್ತಿ ಎರಡೂ ಇಲ್ಲದಿದ್ದರೆ ಬೀದಿ ಬೀದಿಗಳಲ್ಲಿ ಬಟ್ಟೆ ಹಾಸಿಕೊಳ್ಳಬೇಕಾಗುತ್ತದೆ ಎಂದು ಸ್ವಾಮೀಜಿಗಳ ಮರ್ಮವನ್ನೇ ಲೇಖಕರು ಜಾಲಾಡುವ ಪ್ರಯತ್ನ ನಡೆಸುತ್ತಾರೆ. ಸ್ವಾಮೀಜಿಗಳ ಆಶ್ರಮದಲ್ಲಿ ಸಾಮೂಹಿಕ ಕಾಮಕೇಳಿ ನಡೆಯುತ್ತದೆ. ಭಕ್ತರಿಗೆ ತಿಳಿದಿರುವಂತೆಯೇ ನಡೆಯುತ್ತದೆ. ಹೆಂಗಸರ ಮೇಲೆ ಅತ್ಯಾಚಾರ ನಡೆಯುತ್ತದೆ. ಇತರರ ಆಸ್ತಿ ಪಾಸ್ತಿಗಳನ್ನು ಲಪಟಾಯಿಸುವ ಕೆಲಸ ನಡೆಯುತ್ತದೆ. ಕೊಲೆಗಳು ನಡೆಯುತ್ತವೆ. ಆಶ್ರಮದೊಳಗೆ ಶವಗಳು ದೊರೆಯುತ್ತವೆ. ಕಪಾಟಿನಲ್ಲಿ ಅಸ್ತಿಪಂಜರಗಳು ದೊರೆಯುತ್ತವೆ. ಎಷ್ಟೋ ಸ್ವಾಮೀಜಿಗಳು ಸ್ವತಃ ಮನೋರೋಗಿಗಳು, ವಿಕೃತ ಮನಸ್ಸಿನವರು ಆಗಿರುತ್ತಾರೆ. ಸ್ವಾಮೀಜಿ ಎಂಬ ವ್ಯಸನ ಒಳಗೊಳಗೆ ಬೆಳೆಯುತ್ತಾ ಗಟ್ಟಿಗೊಳ್ಳುತ್ತಾ ಹೋಗುವುದರಿಂದ ಸಾಮಾಜಿಕ ಅಂತಃಸತ್ವ ಕಡಿಮೆಯಾಗುತ್ತಾ ಹೋಗುತ್ತದೆ ಎಂದು ಗಟ್ಟಿಯವರು ಸ್ವಾಮೀಜಿಗಳ ಅಪ್ರಾಮಾಣಿಕತನವನ್ನು ತಿಳಿಸುತ್ತಾರೆ.

'ಸ್ತ್ರೀ ಸ್ವಾತಂತ್ರ್ಯದ ವ್ಯಾಪ್ತಿ" ಪ್ರಬಂಧದಲ್ಲಿ ಕೆ.ಟಿ.ಗಟ್ಟಿಯವರು ತಿಳಿಸುವಂತೆ ಅಧುನಿಕ ಜಗತ್ತಿನಲ್ಲಿ ಸ್ತ್ರೀ ಒಂದು ಔದ್ಯಮಿಕ ಸಾಧನವಾಗಿ ರೂಪುಗೊಂಡಿದ್ದಾಳೆ. ಉದ್ಯಮಶೀಲ, ವ್ಯಾಪಾರೀ ದೃಷ್ಟಿಯ ಆಧುನಿಕ ನಾಗರಿಕ ಲೋಕಕ್ಕೆ ಸ್ತ್ರೀಯ ಗ್ಲಾಮರೀಕೃತ ಚಿತ್ರಣ ಅನಿವಾರ್ಯ ಎಂಬಂಥ ಸ್ಥಿತಿ ಸೃಷ್ಟಿಯಾಗಿದೆ. ರಾಜಕೀಯದಲ್ಲೂ ಮಹಿಳೆಯರ ಸಂಖ್ಯೆ ಕಡಿಮೆಯಾಗಿದೆ. ನಲ್ವತ್ತು ಸದಸ್ಯರಿರುವ ಸಚಿವ ಸಂಪುಟದಲ್ಲಿ ಹತ್ತು ಮಹಿಳೆಯರಿದ್ದರೆ ಅವರೆಲ್ಲರೂ ವರದಕ್ಷಿಣೆಯ ವಿರುದ್ಧ ಹೋರಾಟಕ್ಕಿಳಿದರೆ ಸಮಾಜ ಬದಲಾಗಬಹುದು. ಮದ್ಯಪಾನದ ಪಿಡುಗನ್ನು ಉಚ್ಚಾಟಿಸಬಹುದು. ಮಹಿಳೆಗೆ ಆಗುವ ಅನ್ಯಾಯದ ವಿರುದ್ಧ, ಮಹಿಳೆಯ ಶೋಷಣೆಯ ವಿರುದ್ಧ ಮಹಿಳೆಯರು ಮಾತ್ರವೇ ಹೋರಾಡಬೇಕೆಂದಿದೆಯೆ? ಅಶ್ಲೀಲ ಸಿನಿಮಾಗಳು ಅಸಹ್ಯ ಭಿತ್ತಿ ಪತ್ರಗಳ ವಿರುದ್ಧ ಮಹಿಳೆಯರು ಮಾತ್ರವೇ ಚಳುವಳಿ ನಡೆಸಬೇಕೆ? ಎಂದು ಪ್ರಶ್ನಿಸುತ್ತಾ ಮಹಿಳೆಯ ಉನ್ನತಿಗಾಗಿ, ಮಹಿಳೆಯ ಸಮಸ್ಯೆಗಳ ಪರಿಹಾರಕ್ಕಾಗಿ ನಡೆಯುವ ಹೋರಾಟಗಳು ಸ್ತ್ರೀ ಪುರುಷ ಎಂಬ ಭೇದವಿಲ್ಲದೆ ಸ್ತ್ರೀಯರೂ ಪುರುಷರು ಇರುವ ನಾಗರಿಕ ವೇದಿಕೆಗಳಿಂದ ನಡೆಯಬೇಕೆಂದು ಲೇಖಕರು ತಿಳಿಸುತ್ತಾರೆ.

'ಸ್ತ್ರೀಯ ಸಾಮಾಜಿಕ ನೆಲೆ: ಕೆಲವು ಉದಾಹರಣೆಗಳು' ಪ್ರಬಂಧದಲ್ಲಿ ಸ್ತ್ರೀಯನ್ನು ಯಾವ ದೃಷ್ಟಿಯಿಂದ ನೋಡಿದರೂ ಆಕೆ ಪುರುಷನಿಗಿಂತ ಕಡಿಮೆ ಇಲ್ಲ ಎಂಬ ವಾದವನ್ನು ಲೇಖಕರು ಮಂಡಿಸುತ್ತಾರೆ. ಮಕ್ಕಳನ್ನು ಹೆತ್ತು ಪಾಲಿಸಿ ಬೆಳೆಸುವ ಕೆಲಸವೇನು ಸಣ್ಣ ಕೆಲಸವೇ? ಅದಕ್ಕೆ ಸ್ತ್ರೀಗೆ ಸಮಾಜದಿಂದ ಅಥವಾ ದೇಶದಿಂದ ಏನು ಸಂಬಳ ದೊರೆಯುತ್ತದೆ? ಯಾವ ನೌಕರಿಗೆ ಇದು ಕಡಿಮೆ? ಪ್ರತಿ ಹೆರಿಗೆಗೆ ಆರು

ತಿಂಗಳು ಹೆರಿಗೆ ರಜೆಯನ್ನು ಆಕೆಗೆ ನೀಡಬೇಕು ಎನ್ನುತ್ತಾರೆ. "ತನ್ನ ಮಾನಕ್ಕೋಸ್ಕರ ಗಂಡಿಗೆ ತನ್ನ ಹೆಂಡತಿ ಪತಿವ್ರತೆಯಾಗಿರಲೇ ಬೇಕು. ಹಾಗೆಯೇ ಹೆಣ್ಣಿಗೆ ಕೂಡಾ ತನ್ನ ಮಾನಕ್ಕೋಸ್ಕರ ಗಂಡು ಸತಿವ್ರತನಾಗಿರುವುದು ಬೇಡವೆ? ಅಹಲ್ಯೆಯನ್ನು ಗೌತಮ ಶಪಿಸಿದ. ಸೀತೆಯನ್ನು ರಾಮ ಕಾಡಿಗಟ್ಟಿದ. ಜಮದಗ್ನಿ ರೇಣುಕಳ ತಲೆ ಕಡಿಸಿದ. ಆದರೆ ಕಂಡ ಕಂಡ ಹೆಣ್ಣುಗಳನ್ನು ಕೂಡುವ ಋಷಿಗಳನ್ನು ಅವರ ಪತ್ನಿಯರು ಯಾಕೆ ಶಪಿಸದಾದರು? ಬಲಾತ್ಕಾರಕ್ಕೆ ಒಳಗಾದ ಹೆಣ್ಣನ್ನು ಸ್ತ್ರೀಯರು ಹೇಗೆ ನೋಡುತ್ತಾರೆ? ಮದುವೆಗೆ ಮುಂಚೆ ಹೆತ್ತ ಹೆಣ್ಣನ್ನು ಹೇಗೆ ನೋಡುತ್ತಾರೆ? ವಿಧವೆಯಾಗಿ ತಾಯಿಯಾದ ಹೆಣ್ಣನ್ನು ಹೇಗೆ ನೋಡುತ್ತಾರೆ? ಸ್ತ್ರೀ ಪುರುಷನನ್ನು ನೋಡುವ ದೃಷ್ಟಿಕೋನದಲ್ಲಿ ಬದಲಾವಣೆ ಆದಂತೆ ತೋರುವುದಿಲ್ಲ. ಸ್ತ್ರೀ ಸ್ತ್ರೀಯನ್ನು ನೋಡುವ ದೃಷ್ಟಿಕೋನದಲ್ಲಿ ಬದಲಾವಣೆ ಆಗಿದೆಯೇ?" ಲೇಖಕರು ವೈಚಾರಿಕ ಸವಾಲನ್ನು ನಮ್ಮ ಮುಂದೆ

**(ಅದೇ, ಪುಟ 92)**

ಒಡ್ಡುತ್ತಾರೆ. ಕುರಾನ್ ಬಹುಪತ್ನಿತ್ವವನ್ನು ಶಿಫಾರಸು ಮಾಡಿರುವುದು ಅಂದು ಉಹಾದ್ ಯುದ್ಧದಿಂದಾಗಿ ವಿಧವೆಯರಾದ ಸಾವಿರಾರು ಸ್ತ್ರೀಯರು ಮತ್ತು ಅವರ ಮಕ್ಕಳು ನಿರ್ಗತಿಕರಾಗುವುದನ್ನು ತಡೆಯುವುದಕ್ಕೋಸ್ಕರ. ಸ್ತ್ರೀಯೆಂದರೆ ಪುರುಷ ತನಗಿಚ್ಛೆ ಬಂದಂತೆ ಭೋಗಿಸಿ ತನಗಿಚ್ಛೆ ಬಂದಾಗ ಎಸೆಯುವ ವಸ್ತು ಎಂದು ಯಾವ ಧರ್ಮ ಗ್ರಂಥವೂ ಹೇಳಿಲ್ಲ. ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಳ್ಳುವಲ್ಲಿ ಅಡ್ಡಿಯಾಗುವ ನಿರ್ಬಂಧಗಳನ್ನು ಕಳಚಿಕೊಳ್ಳಲು ಸ್ತ್ರೀಯರೇ ಕಾರ್ಯ ಪ್ರವೃತ್ತರಾಗದಿದ್ದರೆ ಮುಸ್ಲಿಂ ಮಹಿಳೆಯ ಬದುಕು ಎಂದೆಂದಿಗೂ ನಿಂತ ನೀರಾಗುತ್ತದೆ ಎಂಬ ಅಭಿಪ್ರಾಯವನ್ನು ಲೇಖಕರು ಇಲ್ಲಿ ವ್ಯಕ್ತಪಡಿಸಿದ್ದಾರೆ.

ಚಾರಿತ್ರಿಕ ಕಾರಣದಿಂದಾಗಿ ಸಾಮಾಜಿಕ ಅಸಮಾನತೆಯಿರುವ ಭಾರತದಂಥ ಒಂದು ದೇಶದಲ್ಲಿ ಕೆಲವು ಬಗೆಯ ಮೀಸಲಾತಿ ಸ್ವಲ್ಪ ಕಾಲದವರೆಗೆ ಅಗತ್ಯವೆನಿಸಬಹುದು ಎಂಬುದು ಕೆ.ಟಿ.ಗಟ್ಟಿಯವರ ಅಭಿಪ್ರಾಯ. ಆದರೆ ಮೀಸಲಾತಿಯೆಂಬುದು ಒಂದು ಸಮುದಾಯದ ಧನಾತ್ಮಕ ಗುಣಾಂಶವಲ್ಲ ಋಣಾತ್ಮಕ ಗುಣಾಂಶ ಎಂಬುದನ್ನು ಒಪ್ಪಿಕೊಳ್ಳಲೇಬೇಕಾಗುತ್ತದೆ ಮತ್ತು ಎಷ್ಟು ಶೀಘ್ರವಾಗಿ ಈ ಮೀಸಲಾತಿಯ ಅಗತ್ಯ ಸಮಾಜದಲ್ಲಿ ಇಲ್ಲವಾಗುತ್ತದೋ ಅಷ್ಟು ಶ್ರೇಯಸ್ಕರ ಎಂಬುದನ್ನು ಒಪ್ಪಿಕೊಳ್ಳಲೇ ಬೇಕಾಗುತ್ತದೆ ಮತ್ತು ಎಷ್ಟು ಶೀಘ್ರವಾಗಿ ಈ ಮೀಸಲಾತಿಯ ಅಗತ್ಯ ಸಮಾಜದಲ್ಲಿ ಇಲ್ಲವಾಗುತ್ತದೋ ಅಷ್ಟು ಶ್ರೇಯಸ್ಕರ ಎಂದು ತಿಳಿಯಬೇಕು ಎಂದು ತಿಳಿಸುತ್ತಾರೆ. ಸಾಹಿತ್ಯದಲ್ಲಿ ಪುರುಷ ಸೃಷ್ಟಿ ಸ್ತ್ರೀ ಸೃಷ್ಟಿ ಎಂಬುದಿಲ್ಲ. ಇಂಥ ವಿಂಗಡಣೆಯೂ ಸರಿಯಲ್ಲ. ಒಂದು ಕಾದಂಬರಿ ಎಂದರೆ ಕಾದಂಬರಿ, ಒಂದು ಕವಿತೆ ಅಂದರೆ ಒಂದು ಕವಿತೆ.

ಅದು ಪುರುಷವೂ ಅಲ್ಲ. ಸ್ತ್ರೀಯೂ ಅಲ್ಲ. ಕನ್ನಡ ಲೇಖಕಿಗೆ ಮಹಿಳಾ ಸಾಹಿತಿ ಎಂಬ ಈ ಮುದ್ರೆ ಯಾಕೆ ಬೇಕು? ಎಂದು ಹೇಳುತ್ತಾ ಸಾಹಿತ್ಯದಲ್ಲಿ ಲಿಂಗ ಆಧಾರಿತ ವರ್ಗೀಕರಣವನ್ನು ವಿರೋಧಿಸುತ್ತಾರೆ.

'ಸ್ತ್ರೀವಾದದ ಒಳಸುತ್ತು' ಈ ಸಂಕಲನದ ಏಳನೆಯ ಪ್ರಬಂಧ. ಇಲ್ಲಿ ಕೆ.ಟಿ.ಗಟ್ಟಿಯವರು ನಮ್ಮ ಸಮಾಜದಲ್ಲಿ ಸ್ತ್ರೀ ಪುರುಷ ಎಂಬ ಭಾವನೆ ಬೆಳೆಯಬೇಕಾದರೆ ಎಲ್ಲಕ್ಕಿಂತ ಮುಖ್ಯವಾಗಿ ಕೌಟುಂಬಿಕ ಜೀವನ ಕ್ರಮದಲ್ಲಿ ಗಂಡು ಮಕ್ಕಳು ಮತ್ತು ಹೆಣ್ಣು ಮಕ್ಕಳ ಕಡೆಗಿನ ತಾಯ್ತಂದೆ ಮತ್ತು ಇತರ ಹಿರಿಯರ ರೂಢಮೂಲ ಧೋರಣೆ ಬದಲಾಗಬೇಕು ಎನ್ನುತ್ತಾರೆ. ವೃದ್ಧಾಪ್ಯದಲ್ಲಿ ನಿಜವಾಗಿಯೂ ದಿಕ್ಕೆಟ್ಟಂತವರಾಗುವ ತಾಯ್ತಂದೆಯರಿದ್ದಾರೆ. ಪುರುಷರು ಮಹಿಳೆಯ ಶತ್ರು ಆಗಲಾರರು. ಯಾಕೆಂದರೆ ಅವರಿಗೆ ಅವಳು ಬೇಕೇ ಬೇಕು. ಪುರುಷ ಸ್ತ್ರೀಯ ಮೇಲೆ ಅಧಿಕಾರ ಚಲಾಯಿಸುವುದು, ಶತ್ರುವಾಗುವುದು ವರದಕ್ಷಿಣೆ ಸಂಬಂಧ ಪೀಡೆ, ಲೈಂಗಿಕ ಬಲಾತ್ಕಾರ ಮುಂತಾದ ಕ್ರಿಮಿನಲ್ ಕ್ರಿಯೆಯ ಸಂಬಂಧಗಳಲ್ಲಿ ಮಾತ್ರ. ಒಬ್ಬಳು ಸ್ತ್ರೀ ಒಂದು ಪೀಡೆಯಾಗಿ ಇನ್ನೊಬ್ಬಳು ಸ್ತ್ರೀಯನ್ನು ಕಾಡುವುದು ಮುಖ್ಯವಾಗಿ ವಿವಾಹ ಮತ್ತು ವರದಕ್ಷಿಣೆಗೆ ಸಂಬಂಧಿಸಿದ ವ್ಯವಹಾರದಲ್ಲಿ. ವಧು ಪರೀಕ್ಷೆಯ ಸಂದರ್ಭದಲ್ಲಿ ವರನ ತಾಯಿ ಹುಡುಗಿಯನ್ನು ಹಾಡಿಸುವುದು, ನಡೆಸುವುದು, ಸೂಜಿಗೆ ದಾರ ಹಾಕಲು ಹೇಳುವುದು, ಹುಡುಗಿಯ ಹಲ್ಲು ಲೆಕ್ಕ ಮಡುವುದು, ಉಡುಪು ಕಳಚಿ ಪರೀಕ್ಷೆ ಮಾಡುವುದು ಇತ್ಯಾದಿ ಮಾಡುತ್ತಾಳೆ. ಶಿಶು ಹೆಣ್ಣೆಂದು ತಿಳಿದರೆ ಹೆರುವ ಮೊದಲು ಅಥವಾ ಹೆತ್ತ ಬಳಿಕ ಸಾಯಿಸುವ ಸಾವಿರಾರು ತಾಯಂದಿರಿದ್ದಾರೆ.

ಹೈಸ್ಕೂಲು ಓದನ್ನು ಸಹ ಮುಗಿಸದ ಒಬ್ಬಳು ಹೆಣ್ಣಿಗೆ ಒಬ್ಬ ಡಾಕ್ಟರ್, ಇಂಜಿನಿಯರ್ ಅಥವಾ ತುಂಬಾ ಓದಿದ ದೊಡ್ಡ ಉದ್ಯೋಗ ಮತ್ತು ದೊಡ್ಡ ಸಂಬಳದ ವರ ಸಿಕ್ಕಿದ ಎಂದಾದರೆ ಅದನ್ನು ಮಹಾ ಭಾಗ್ಯ ಎಂದು ತಿಳಿಯಲಾಗುತ್ತದೆ. "ಸ್ತ್ರೀ ಪುರುಷ ಸಮಾನತೆಗಾಗಿ ಹೋರಾಡುವ ಸ್ತ್ರೀಯರು ಈ ಒಂದು ಸಂಗತಿಯನ್ನು ಗಮನಿಸಬೇಕು; ಡಾಕ್ಟರ್, ಇಂಜಿನಿಯರ್ ಅಥವಾ ಉನ್ನತ ಶಿಕ್ಷಣ ಪಡೆದು ಉನ್ನತವಾದ ಉದ್ಯೋಗದಲ್ಲಿರುವ ಹೆಣ್ಣು ಹೈಸ್ಕೂಲಿನ ಓದನ್ನು ಕೂಡ ಪೂರ್ತಿ ಮಾಡದ ಗಂಡನ್ನು ಮದುವೆಯಾಗುವ ರೂಢಿ ಇಲ್ಲ. ಇದು ವಿಷಮ ಸಂಬಂಧವಾದರೆ ಅದೂ ವಿಷಮ ಸಂಬಂಧವೇ ಅಲ್ಲವೆ?" ಎಂದು ಸಮಾನತೆಯ ತತ್ವವನ್ನು ವಿಮರ್ಶಿಸುತ್ತಾರೆ.

**(ಅದೇ, ಪುಟ 110)**

'ದೇವರಿಗೊಂದು ಹೆಸರು' ಪ್ರಬಂಧದ ಮೂಲಕ ಕೆ.ಟಿ.ಗಟ್ಟಿಯವರು ದೇವರ ಇತಿಹಾಸವನ್ನು ಜಾಲಾಡುತ್ತಾರೆ. ದೇವರು ಎಂಬುದು ಮನುಷ್ಯನ ಭಾವನೆ ಮತ್ತು ಭಾಷೆಯ ಸೃಷ್ಟಿ ಎನ್ನುತ್ತಾರೆ. ದೇವರು ಮತ್ತು ದೇವರನ್ನು ನಂಬುವವರ ನಡುವೆ ಇರುವ ಸ್ವಾಮಿಗಳು, ಭಗವಾನ್‌ಗಳು ಸಾಮಾಜಿಕವಾಗಿ ಪ್ರತಿಗಾಮಿಗಳು. ಇವರನ್ನು ನಂಬುವವರಿಗೆ ಸ್ವಂತ ಮಿದುಳಿನ ಅಗತ್ಯವಿಲ್ಲದಿರುವುದರಿಂದ ಇವರು ಮನುಷ್ಯ ರೂಪದ ಕುರಿಗಳೇ ಆಗುತ್ತಾರೆ. ಇವರನ್ನು ಗೊಂಬೆಗಳಂತೆ ಆಡಿಸಿ ಈ ಸ್ವಾಮಿಗಳು, ಭಗವಾನ್‌ಗಳು ತಮ್ಮೆಲ್ಲ ದಾಹಗಳನ್ನು, ಹಸಿವುಗಳನ್ನು ತೀರಿಸಿಕೊಳ್ಳುತ್ತಾರೆ. "ಬದುಕಿನಲ್ಲಿ ಯಶಸ್ಸನ್ನು ಸಂಪಾದಿಸುವ ಏಕಮಾತ್ರ ಗುರಿಯನ್ನಿರಿಸಿಕೊಂಡಿರುವ ಒಂದು ವಿದ್ಯಾವಂತರ ಗುಂಪು ಇರುತ್ತದೆ. ನಂಬುಗೆಯ ನಟನೆಯಲ್ಲಿಯೇ ಇವರಲ್ಲೆಷ್ಟೋ ಮಂದಿಯ ಬದುಕು ಮುಗಿದು ಹೋಗುತ್ತದೆ. ನಿಜವಾದ ಪ್ರತಿಗಾಮಿಗಳೆಂದರೆ, ಹೊರಗೆ ಮಹಾ ಚಿಂತಕರು, ಮಹಾಜ್ಞಾನಿಗಳು, ವಿಜ್ಞಾನಿಗಳೆಂದು ತೋರಿಸಿಕೊಂಡು ಒಳಗೆ ಎಲ್ಲಾ ಅಂಧಶ್ರದ್ಧೆ, ಕಂದಾಚಾರಗಳಲ್ಲಿ ಮುಳುಗಿರುವವರು. ನಂಬುವ ನಟನೆ ಮಾಡುವ ನಂಬದವರಿಗೆ ಸ್ಥಾನ ಮಾನ ಸನ್ಮಾನಗಳು ಸಿಗುತ್ತವೆ. ನಂಬದವರಂತೆ ನಟನೆ ಮಾಡುವ ನಂಬುವವರಿಗೂ ಸ್ಥಾನ ಮಾನ ಸನ್ಮಾನಗಳು ಸಿಗುತ್ತವೆ."

**(ಅದೇ, ಪುಟ 118)**

ಗಾಂಧೀಜಿ ಕೆಳವರ್ಗದವರನ್ನು ದೇವಾಲಯಕ್ಕೆ ಸೇರಿಸಲು ನಡೆಸಿದ ಆಂದೋಲನ ಅಸಮಾನತೆಯ ಸಂಕೇತವಾಗಿದ್ದ ದೇವಾಲಯದ ಈ ಪದ್ಧತಿಯನ್ನು ಆ ಮೂಲಕ ಅಸಮಾನತೆಯನ್ನು ಮುರಿಯುವುದಾಗಿತ್ತು. ಕೆಳವರ್ಗದವರು ಈಗಲೂ ಪೂಜಿಸುವುದು ಭೂತಗಳನ್ನು ಎನ್ನುತ್ತಾರೆ. ದೇವರ ಅವತಾರಗಳನ್ನು ಗಟ್ಟಿಯವರು ಚರ್ಚಿಸುತ್ತಾರೆ. "ದೇವರು ಅವತಾರವೆತ್ತುವುದು ಅರಸ ಮತ್ತು ಆಡಳಿತ ಭ್ರಷ್ಟವಾದಾಗ, 'ಕೌರವ ಪ್ರಭುತ್ವ' ಕಾಣಿಸಿಕೊಂಡಾಗ ಎನ್ನುವುದಾದರೆ, ಜೂಜಾಡಿದ ಕೌರವ ಪಾಂಡವರ ಕಾಲದಲ್ಲಿದ್ದುದಕ್ಕಿಂತ ಸಾವಿರ ಪಾಲು ಕೆಟ್ಟದಾದ ಆಡಳಿತವಿರುವ ಇಂದಿನ ಕಾಲಕ್ಕಿಂತ ಸೂಕ್ತವಾದ ಕಾಲವು ಯಾವುದು? ಎಂದು ಪ್ರಶ್ನಿಸುತ್ತಾರೆ.

"ನಂಬಿಕೆಯನ್ನು ಇತರರ ಮೇಲೆ ಹೇರುವವರು ಅವಿಚಾರಿಗಳು, ಮತಾಂಧರು, ಮತ ಕಿವುಡರು ಎನ್ನುತ್ತಾ ತನ್ನ ದೇವರ ಪೂಜೆಗೋಸ್ಕರ ಇತರರಿಂದ ಬಲಾತ್ಕಾರವಾಗಿ ಚಂದಾ ಎತ್ತುವುದು, ಧ್ವನಿವರ್ಧಕಗಳನ್ನು ಹಚ್ಚಿ ಇಡೀ ಊರಿಗೆ ಕೇಳಿಸುವಂತೆ ಪ್ರಾರ್ಥನೆ, ಮಂತ್ರ ಘೋಷ, ಭಜನೆ ಮಾಡುವುದು, ಸಾರ್ವಜನಿಕರಿಗೆ ತೊಂದರೆಯುಂಟಾಗುವ

ರೀತಿಯಲ್ಲಿ ದೇವರ ಉತ್ಸವ ನಡೆಸುವುದು-ಇಂಥವರಿಂದೆಲ್ಲ ನಂಬುವವರ ಸಂಖ್ಯೆ ಅಧಿಕಗೊಳ್ಳಲು ಸಾಧ್ಯವೆ?"

**(ಅದೇ, ಪುಟ 122)**

"ದೇವಾಲಯ ಎಂದರೆ ದೇವರ ಹೆಸರಿನಲ್ಲಿ ಒಂದು ವ್ಯವಹಾರವನ್ನು ನಡೆಸುವ ಮಂದಿರ ಎಂಬುದು ಪ್ರತಿದಿನ ಅಥವಾ ಎಂದಾದರೊಮ್ಮೆ ದೇವಾಲಯಕ್ಕೆ ಹೋಗುವ ಎಲ್ಲರಿಗೂ ಗೊತ್ತು. ಹೆಚ್ಚು ಹೆಚ್ಚು ಸನ್ಮಾರ್ಗಿಯಾಗುವುದು, ಹೆಚ್ಚು ಹೆಚ್ಚು ಸದ್ಗುಣಿಯಾಗುವುದು ಮಾತ್ರ ನಿಜವಾದ ಪೂಜೆಯಾಗುತ್ತದೆ. ಒಂದೊಂದು ಮತದವರದು ಒಂದೊಂದು ಪೂಜಾವಿಧಾನ. ಒಂದೊಂದು ಜಾತಿಯವರದ್ದು ಒಂದೊಂದು ವಿಧಾನ. ಕೆಲವು ಪೂಜೆಗಳಂತೂ ಮಕ್ಕಳು ಆಡುವ ಆಟಕ್ಕಿಂತ ಭಿನ್ನವಲ್ಲ ಎಂಬ ಅಭಿಪ್ರಾಯವನ್ನು ಕೆ.ಟಿ.ಗಟ್ಟಿಯವರು ವ್ಯಕ್ತಪಡಿಸುತ್ತಾರೆ. "ಕೆಟ್ಟ ಕೆಲಸಗಳನ್ನು ಮಾಡುತ್ತಾ ದೇವರ ಪೂಜೆ, ಸ್ವಾಮಿ ಬಾಬಾ ಭಗವಾನ್‌ಗಳ ಪೂಜೆ ಮಾಡುತ್ತಿದ್ದರೆ ವ್ಯಕ್ತಿ ಒಳ್ಳೆಯವನು, ಧಾರ್ಮಿಕ, ರಿಲೀಜಿಯಸ್ ಎನ್ನಲಾದೀತೆ? ವಿಚಾರಹೀನನಾಗಿ ಮೂಢನಂಬಿಕೆಗಳನ್ನು ಕಂದಾಚಾರಗಳನ್ನು ಪಾಲಿಸಿಕೊಂಡು ಬಂದರೆ ಒಳ್ಳೆಯವನೆನ್ನಲಾದೀತೆ? ಮೂಢನಂಬಿಕೆಗಳು ಕುರುಡು ಸಂಪ್ರದಾಯಗಳು ಪರೋಕ್ಷವಾಗಿ ಶೋಷಣೆಗೆ ಕಾರಣವಾಗುತ್ತವೆ ಎಂಬುದನ್ನರಿಯದ ವಿವೇಕಹೀನನಿಂದ ಸಮಾಜಕ್ಕೆ ಒಳ್ಳೆಯದಾಗುತ್ತದೆಯೆ?" ಎಂದು ಮೂಢನಂಬಿಕೆಗಳನ್ನು ಕುರುಡು ಆಚರಣೆಗಳನ್ನು

**(ಅದೇ, ಪುಟ 124)**

ಕೆ.ಟಿ.ಗಟ್ಟಿಯವರು ವಿರೋಧಿಸುತ್ತಾರೆ.

ದೇವಾಲಯಕ್ಕೆ ಜನ ಮಾಡುವ ಖರ್ಚನ್ನು ಗಮನಿಸಿದರೆ ಈ ಹಣದಿಂದ ನಮ್ಮ ದೇಶದಲ್ಲಿ ಸಾಕಷ್ಟು ಅಭಿವೃದ್ಧಿ ಕಾರ್ಯಗಳನ್ನು ಮಾಡಬಹುದು ಎನ್ನುತ್ತಾರೆ. "ಎಷ್ಟೋ ದೇವಾಲಯಗಳನ್ನು ಕಟ್ಟಿಸಿದವರು ಸಮಾಜವನ್ನು ನಾನಾ ರೀತಿಯಿಂದ ಶೋಷಿಸಿದ ಧನವಂತರು. ವರ್ತಕರು, ವೇಶ್ಯೆಯರು ಕಟ್ಟಿದ ದೇವಾಲಯಗಳಿವೆ. ಕಳ್ಳರ ದೇವಾಲಯಗಳಿವೆ. ಶುದ್ಧ ಸಮಾಜ ಘಾತುಕರು ದೇವಾಲಯವನ್ನು ಕಟ್ಟಿಸಿ ಒಳ್ಳೆಯವರೆನಿಸಿಕೊಂಡದ್ದಿದೆ. ದೇವಾಲಯಕ್ಕೆ ಹೋಗುವ ಪಾಪಿಗಳು ತಮ್ಮ ಪಾಪ ಕೃತ್ಯಗಳನ್ನು ಮಾಡುತ್ತಲೇ ಇರುತ್ತಾರೆ. ದೇವಾಲಯಕ್ಕೆ ಹರಕೆ ಹೊರುವ ರೋಗಿಗಳು ರೋಗಗ್ರಸ್ತರಾಗಿಯೇ ಇರುತ್ತಾರೆ. ದೇವಾಲಯಗಳಲ್ಲಿ ಸಂಗ್ರಹವಾಗುವ ಲಕ್ಷಗಟ್ಟಲೆ, ಕೋಟಿಗಟ್ಟಲೆ ಹಣ ರಾಷ್ಟ್ರೀಯ ಆರ್ಥಿಕ ನೆಲೆಯಲ್ಲಿ ನೋಡುವುದಿದ್ದರೆ ದೇಶಕ್ಕೆ ದೊಡ್ಡ ನಷ್ಟ ಅಲ್ಲದೆ ಕೋಟಿಗಟ್ಟಲೆ ರೂಪಾಯಿ ಮೌಲ್ಯದ ಚಿನ್ನಾಭರಣಗಳು ದೇವಾಲಯದ ವಶದಲ್ಲಿ ಇವೆ. ಇಂಥ ಚಿನ್ನ ಕಲ್ಲಿಗೆ ಸಮಾನವಾಗಿ ಬಿದ್ದಿರುವುದರಿಂದ ಇದು ಕೂಡಾ

ದೇಶಕ್ಕೆ ನಷ್ಟ. ಅಮೆರಿಕದ ಸಾಲ ಪಡೆದು ಶ್ರೀಮಂತಿಕೆಯ ಕನಸು ಕಾಣುವ ನಮ್ಮ ದೇಶಕ್ಕೆ ನಮ್ಮದೇ ಸಂಪತ್ತನ್ನು ಬಳಸಿ ಶ್ರೀಮಂತವಾಗಲು ಸಾಧ್ಯವಿದೆ. ಅದಕ್ಕೆ ಈ ದೇವಾಲಯದ ಹುಚ್ಚು ಅಡ್ಡಿಯಾಗಿದೆ" ಎಂಬ ವಿಚಾರಶೀಲರ ವಾದವನ್ನು ತಿಳಿಸುತ್ತಾರೆ.

(ಅದೇ, ಪುಟ 126)

ಈ ವಾದದ ಬಳಿಕವೂ ವಸ್ತುಸ್ಥಿತಿ ಬದಲಾಗಿಲ್ಲ. ಬೇರೆ ಗ್ರಹದಿಂದ ಬಂದು ಬಿದ್ದ ಉಲ್ಕಾ ಶಿಲೆಯಂತೆ ಈ ದೇವರ ನಂಬಿಕೆ ಬಂದು ಬಿದ್ದಾಗಿದೆ. ಇದನ್ನು ಇಲ್ಲವಾಗಿಸಲು ಸಾಧ್ಯವಿಲ್ಲ. ಬಂದಲ್ಲಿಗೆ ಹಿಂದಕ್ಕೆ ಕಳಿಸಲೂ ಸಾಧ್ಯವಿಲ್ಲ ಎನ್ನುತ್ತಾ ದೇವಾಲಯದ ಸಾಮಾಜಿಕ ಕ್ರಿಯೆಯನ್ನು ಬದಲಾಯಿಸಬೇಕೆಂದು ತಿಳಿಸುತ್ತಾರೆ. ದೇವಾಲಯ, ಮಸೀದಿ, ಇಗರ್ಜಿ ಎಲ್ಲವೂ ಒಂದಕ್ಕಿಂತ ಇನ್ನೊಂದು ಭಿನ್ನವಲ್ಲದ ಮನುಷ್ಯ ಸಂಸ್ಕೃತಿಯ ಮಂದಿರಗಳಾಗಬೇಕು. ಪೂಜೆ ನಿಷ್ಪ್ರಯೋಜಕ. ಪ್ರಯೋಜನವಾಗುವುದು ಸತ್ಕ್ರಿಯೆಯಿಂದ, ಸಚ್ಚಿಂತನೆಯಿಂದ. ಇದಕ್ಕೆ ದೇವಾಲಯಗಳನ್ನು ಬಳಸಿಕೊಳ್ಳಬೇಕು ಎಂದು ಜನತೆಗೆ ಕರೆ ನೀಡುತ್ತಾರೆ.

'ತೆರೆಯ ಮೇಲಿನ ಮಾಯಾಲೋಕ' ಪ್ರಬಂಧವು ಚಲನಚಿತ್ರಗಳು ಪ್ರೇಕ್ಷಕರನ್ನು ಒಂದು ಭ್ರಮಾಧೀನ ಲೋಕಕ್ಕೆ ಕರೆದೊಯ್ದು ಹೇಗೆ ವಂಚಿಸುತ್ತವೆ ಎಂಬ ಕುರಿತು ವಿವರಿಸುತ್ತದೆ. ಶುದ್ಧ ವಿಶ್ವ ಸಂಸ್ಕೃತಿಯ ವಿದೇಶೀ ಚಾನೆಲ್ಲುಗಳು ನಮ್ಮ ದೇಶೀ ಸಂಸ್ಕೃತಿಯ ಲಕ್ಷಣ ರೇಖೆಗಳನ್ನು ಒಂದೊಂದಾಗಿಯೇ ಅಳಿಸಿ ಹಾಕುತ್ತಿವೆ. ಮನುಷ್ಯ ಬದುಕಿನಲ್ಲಿ ಇರುವುದು ಯವ್ವನದ ಕೆಲವು ವರ್ಷಗಳು ಮಾತ್ರ; ಈ ಅವಧಿಯ ಸಾರ್ಥಕತೆಯಿರುವುದು ಪ್ರೀತಿಸುವುದರಲ್ಲಿ, ಹೊಡೆಯುವುದರಲ್ಲಿ ಮತ್ತು ಹೊಡೆಸಿಕೊಳ್ಳುವುದರಲ್ಲಿ ಎಂಬ ಮೌನ ಸಂದೇಶ ಸಿನಿಮಾದಿಂದ ದೊರೆಯುತ್ತದೆ ಎಂದು ಸಿನಿಮಾಗಳ ಅಪಾಯಗಳ ಬಗ್ಗೆ ತಿಳಿಸುತ್ತಾರೆ.

'ಪೋಲೀಸು ಮತ್ತು ಮನುಷ್ಯ' ಪ್ರಬಂಧದಲ್ಲಿ ಪೋಲೀಸ್ ವ್ಯವಸ್ಥೆಯ ಅಗತ್ಯಗಳನ್ನು ತಿಳಿಸುತ್ತಾರೆ. ಎಲ್ಲಾ ಧರ್ಮದವರೂ ತಮ್ಮ ರಕ್ಷಣೆಗಾಗಿ ದೇವರಲ್ಲಿ ಬೇಡಿಕೊಳ್ಳುತ್ತಾರೆ. ವಾಸ್ತವದಲ್ಲಿ ಆ ದೇವರ ವಿಗ್ರಹ, ದೇವರ ವಸ್ತು ಒಡವೆಗಳನ್ನು ರಕ್ಷಿಸುವವರು ಪೋಲೀಸರು. ಪೋಲೀಸರಿಲ್ಲವೆಂದಾದರೆ ಪೂಜೆಗೆ ಮೂರ್ತಿಯೂ ಇರುವುದಿಲ್ಲ. ಪೋಲೀಸ್ ವ್ಯವಸ್ಥೆಯ ಲೋಪ ದೋಷಗಳ ಕುರಿತು ಕೆ.ಟಿ. ಗಟ್ಟಿಯವರು ಇಲ್ಲಿ ಚರ್ಚಿಸುತ್ತಾರೆ. ಪೋಲೀಸರಿಗೆ ಸಂಬಳವಿರುವುದು ಅಪರಾಧಗಳನ್ನು ಕಂಡು ಹಿಡಿಯುವುದಕ್ಕೆ ಮಾತ್ರವಲ್ಲ; ತೊಂದರೆಯಲ್ಲಿರುವವರಿಗೆ ಸಹಾಯ ಹಸ್ತವನ್ನು ನೀಡುವುದಕ್ಕೆ ಕೂಡ. ಅಗತ್ಯವೆನಿಸಿದರೆ ಮಾತ್ರ ವ್ಯಕ್ತಿಯನ್ನು ಸ್ಟೇಷನಿಗೆ

ಒಯ್ಯಬೇಕು. ಅವನೊಡನೆ ಮನುಷ್ಯ ಸಹಜ ಸದ್ವರ್ತನೆಯನ್ನು ತೋರಬೇಕು, ಜಫ್ತಿ ಮಾಡುವ ನೆಪದಲ್ಲಿ ಅವನಲ್ಲಿರುವ ಹಣ, ವಸ್ತು, ಒಡವೆ ಲಪಟಾಯಿಸಬಾರದು. ರಸ್ತೆಯಲ್ಲಿ ಒಂದು ಗಂಡು ಮತ್ತು ಹೆಣ್ಣು ಜೊತೆಯಾಗಿ ನಡೆಯುತ್ತಿದ್ದರೆ, ಅಥವಾ ಎಲ್ಲೋ ಒಂದೆಡೆ ಕುಳಿತಿದ್ದರೆ ಅವರನ್ನು ಪೊಲೀಸು ಸ್ಟೇಷನಿಗೆಳೆಯುವ ಹಕ್ಕು ಪೋಲೀಸರಿಗಿದೆಯೇ? ಇದ್ದರೆ ಅದು ಅಗತ್ಯವೆ? ಪೋಲೀಸರು ಆತ್ಮರಕ್ಷಣೆಗಾಗಿ ಎಂದು ಹೇಳಿ ಜನಗಳ ಮೇಲೆ ಗುಂಡು ಹಾರಿಸಿ ಪ್ರಾಣ ತೆಗೆಯುವ ಪೋಲೀಸ್ ವರ್ತನೆಯನ್ನು ಗಟ್ಟಿಯವರು ವಿರೋಧಿಸುತ್ತಾರೆ. ಪೋಲೀಸರಿಗೆ ಆರ್ಬಿಟ್ರರಿ ಪವರ್ಸ್ ಇರಕೂಡದು ಅದು ಇರುವವರೆಗೆ ಪೋಲೀಸರು ಮನುಷ್ಯರಾಗುವುದಿಲ್ಲ. ಪೋಲೀಸರು ಕೆಟ್ಟದಾಗಿ ನಡೆದುಕೊಂಡಾಗ ಪ್ರತಿಭಟಿಸುವ, ಪ್ರಶ್ನಿಸುವ ಹಕ್ಕು ಪ್ರಜೆಗಳಿಗೆ ಇರಬೇಕು. ರಕ್ಷಕರಾದ ಪೋಲೀಸರು ಭಕ್ಷಕರಂತೆ ವರ್ತಿಸಿದರೆ, ಅವರನ್ನು ತರಾಟೆಗೆ ತೆಗೆದುಕೊಳ್ಳುವ ಹಕ್ಕು ಇರುವ ನ್ಯಾಯದಾನ ವ್ಯವಸ್ಥೆ ಇರಬೇಕು. ಇಂದು ಕಳ್ಳರಿಗಿಂತಲೂ ಪೋಲೀಸರನ್ನು ಕಂಡಾಗ ಜನ ಹೆಚ್ಚು ಹೆದರುವಂಥ ಸ್ಥಿತಿ ಉಂಟಾಗಿದೆ. ವೇಶ್ಯೆಯರಿಂದ, ಚಿಕ್ಕಪುಟ್ಟ ತಪ್ಪುಗಳನ್ನು ಮಾಡುವವರಿಂದ ಹಣ ಕಿತ್ತು ಅದನ್ನು ತಮ್ಮ ಜೀವನಕ್ಕೆ ಬಳಸಿಕೊಳ್ಳುವ ನೀತಿಗೆಟ್ಟ, ಲಜ್ಜೆಗೆಟ್ಟ ಮಂದಿ ಈ ಪೋಲೀಸರು ಎಂದು ಜನ ಭಾವಿಸುವುದಾದರೆ ಪೋಲೀಸರ ಬಗ್ಗೆ ಗೌರವ ಭಾವನೆ ಮೂಡುವುದಾದರೂ ಹೇಗೆ ?" ಎಂದು

**(ಅದೇ, ಪುಟ 158)**

ಪೋಲೀಸ್ ದೌರ್ಜನ್ಯಕ್ಕೆ ಕೆ.ಟಿ. ಗಟ್ಟಿಯವರು ಪ್ರತಿರೋಧ ವ್ಯಕ್ತಪಡಿಸುತ್ತಾರೆ.

'ಒತ್ತುಗುಂಡಿ ಸಂಸ್ಕೃತಿ' ಪ್ರಬಂಧವು ಒತ್ತುಗುಂಡಿ ಸಂಸ್ಕೃತಿಯಿಂದಾಗಿ ಮನುಷ್ಯ ತಾನೇ ನಿರ್ಮಿಸಿಕೊಂಡ ಅನುಕೂಲಗಳ ನಡುವೆ ಬಳಲುವ ಸ್ಥಿತಿಯನ್ನು ವಿವರಿಸುತ್ತದೆ. ತಾಳ್ಮೆಗಿಂತ ಮಿಗಿಲಾದ ತಪಸ್ಸು ಇಲ್ಲ. ತಪಸ್ಸು ಎಂದರೆ ತಾಳ್ಮೆಯೇ. ಕಾಯಬೇಕಾದ, ತಾಳಬೇಕಾದ ಪರಿಸ್ಥಿತಿಯೇ ಇಲ್ಲವಾದಂಥ ಪರಿಸ್ಥಿತಿಯಲ್ಲಿ ಅಂದರೆ ಗುಂಡಿ ಒತ್ತಿದೊಡನೆ ಎಲ್ಲವೂ ಲಭ್ಯವಾಗುವಂಥ ಪರಿಸ್ಥಿತಿಯಲ್ಲಿ, ತಾಳ್ಮೆಯ ಅನುಭವ ಆಗುವುದಾದರೂ ಹೇಗೆ? ಎಂದು ಲೇಖಕರು ಪ್ರಶ್ನಿಸುತ್ತಾರೆ. ಮನುಷ್ಯ ಇಂದು ಮಾನವೀಯ ಸಂಬಂಧಗಳ ಮಹತ್ವವನ್ನು ಕಳೆದುಕೊಳ್ಳುತ್ತಿದ್ದಾನೆ. "ಬಹುರಾಷ್ಟ್ರೀಯ ಕಂಪನಿಗಳು ಮತ್ತಷ್ಟು ಒತ್ತುಗುಂಡಿಗಳನ್ನು ತರುತ್ತವೆ. ನಮ್ಮ ದೇಶದ ಸಿಗಡಿ ಮತ್ತು ಮಾವಿನ ಹಣ್ಣು ನಮಗೆ ಸಿಗುವುದೇ ಇಲ್ಲ. ನಮ್ಮ ಬಹಳಷ್ಟು ರಫ್ತು ಸಮಾಜ ದ್ರೋಹ ಎಂಬುದಕ್ಕೆ ಇತ್ತೀಚಿನ ದಿನಗಳಲ್ಲಿ ಬೇಕಾದಷ್ಟು ಪುರಾವೆಗಳು ಸಿಕ್ಕಿವೆ. ಎಲ್ಲವೂ ದ್ರವ್ಯವಾಗಿ, ವಿದೇಶೀ ದ್ರವ್ಯವಾಗಿ ಪರಿವರ್ತನೆ ಹೊಂದಬೇಕಾಗಿಲ್ಲ. ಮರಗಳಿಗಿಂತ ಯಂತ್ರಗಳು ಶ್ರೇಷ್ಠವಲ್ಲ. ಹೊಲ ಗದ್ದೆಗಳಿಗಿಂತ ಅತ್ಯಾಧುನಿಕ ರಸ್ತೆ ಶ್ರೇಷ್ಠವಲ್ಲ. ನಮ್ಮ ದಿನ ಬಳಕೆ ಹೂ ಹಣ್ಣು

ಹಂಪಲುಗಳಿಗಿಂತ ಹಣ ಶ್ರೇಷ್ಠವಲ್ಲ. ಒತ್ತುಗುಂಡಿಗಳ ಸಂಖ್ಯೆ ಹೆಚ್ಚಾದಷ್ಟೂ ನಾವು ಪ್ರಕೃತಿಯಿಂದ ದೂರ ಹೋಗುತ್ತೇವೆ. ಪ್ರಕೃತಿಯಿಂದ ದೂರ ಹೋಗುವುದು ಎಂದರೆ ಸರಕು ಸಂಸ್ಕೃತಿಯ ಉತ್ತಮಣ"

**(ಅದೇ, ಪುಟ 170)**

"ಪ್ರಗತಿ ಮತ್ತು ನಿಧಾನ ಸಾವು" ಪ್ರಬಂಧವು ಪ್ರಗತಿ ಎಂದರೆ ಏನು ಎಂದು ನಾವಿಂದು ವಿಚಾರ ಮಾಡಬೇಕಾದ ಅಗತ್ಯವಿದೆ ಎಂದು ತಿಳಿಸುತ್ತದೆ. ಆಧುನಿಕತೆ ತಂದ ಅಪಾಯಗಳನ್ನು ಲೇಖಕರು ತಿಳಿಸುತ್ತಾರೆ. ದೇಶದಲ್ಲಿ ಪ್ರತಿ ವರ್ಷವೂ ಏಡ್ಸ್‌ಗೆ ತುತ್ತಾಗುತ್ತಿರುವವರ ಸಂಖ್ಯೆ ಹೆಚ್ಚಾಗುತ್ತಿದೆ. ಹಲವು ಕೋಟಿ ಮೆಟ್ರಿಕ್ ಟನ್ ಅಣುವಿಕಿರಣ ಕಶ್ಮಲಗಳು ಸಮುದ್ರ ತಳದಲ್ಲಿ ಸೇರಿಸಲ್ಪಟ್ಟು ನೀರು, ಜೀವರಾಶಿಗಳಿಗೆ ಹಾನಿಯುಂಟು ಮಾಡುತ್ತಿವೆ. "ಅಣುಶಕ್ತಿ ಸ್ಥಾವರ ಪ್ರಗತಿಯೆಂದಾದರೆ ಅಣುವಿಕಿರಣ ಕಶ್ಮಲ ಏನು? ಬಹುಮಹಡಿ ಕಟ್ಟಡಗಳು ಪ್ರಗತಿಯೆಂದಾದರೆ, ಕೊಳೆಗೇರಿಗಳು ಏನು? ಹೊಸ ಹೊಸ ಔಷಧಿಗಳು ಪ್ರಗತಿಯೆಂದಾದರೆ ಹೊಸ ಹೊಸ ರೋಗಗಳು ಏನು? ಪ್ರಗತಿಯ ಹೆಸರಿನಲ್ಲಿ ಬದುಕಿನ ಗುಣಮಟ್ಟವನ್ನು ಏರಿಸುವ ಹಲವಾರು ವಸ್ತುಗಳ ಸೃಷ್ಟಿಯಾಗಿರುವುದರೊಂದಿಗೇ ನಿಧಾನ ಸಾವನ್ನು ತರುವಂಥ ವಸ್ತುಗಳ ಉತ್ಪಾದನೆ ಮತ್ತು ಬಳಕೆಯಲ್ಲಿ ಕೂಡಾ ಪ್ರಗತಿಯಾಗಿದೆ" ಎಂದು ನಿಜವಾದ ಪ್ರಗತಿ ಯಾವುದೆಂದು ಲೇಖಕರು ಪ್ರಶ್ನಿಸುತ್ತಾರೆ. ಪ್ರಗತಿ ಕಾನ್ಸೆಪ್ಟಿನ ಪುನರ್ವಿಮರ್ಶೆ ನಡೆಯಬೇಕಾದ ಅಗತ್ಯವನ್ನು ತಿಳಿಸುತ್ತಾರೆ.

'ನೌಕರಶಾಹಿ ಮತ್ತು ಸಾಮಾಜಿಕ ನ್ಯಾಯ' ಪ್ರಬಂಧದಲ್ಲಿ ಕೆ.ಟಿ.ಗಟ್ಟಿಯವರು ನೌಕರಶಾಹಿಯ ಧೋರಣೆಗಳನ್ನು ಪ್ರತಿಬಿಂಬಿಸುತ್ತಾರೆ. ಅವಕಾಶದಿಂದ ವಂಚಿಸಲು ದಾರಿ ಹುಡುಕುವ, ದರ್ಪ, ಅಹಂಕಾರ ಪ್ರದರ್ಶಿಸುವ ನೌಕರಶಾಹಿಗಳ ಸಂಖ್ಯೆ ದೊಡ್ಡದು. ವಿದ್ಯಾರ್ಥಿಗಳಿಗೆ ನೀಡಲಾಗುವ ಸ್ಕಾಲರ್‌ಶಿಪ್ ಸರಿಯಾಗಿ ಸಿಗುತ್ತಿಲ್ಲ. "ನೌಕರಶಾಹಿಯ ಸಂಖ್ಯೆ ಒಟ್ಟು ಜನಸಂಖ್ಯೆಯ ಶೇಕಡಾ ಒಂದು ಇರಬಹುದು. ಅಂದರೆ ಒಂದು ಕೋಟಿಯಲ್ಲಿ ಒಂದು ಲಕ್ಷ. ಇದನ್ನು ಸರಕಾರ ತನ್ನ ರಕ್ಷಣೆಗೋಸ್ಕರ ಕೊಬ್ಬಿಸುತ್ತಾ ಹೋಗುತ್ತದೆ. ಇದಕ್ಕೆ ಆಡಳಿತ ವೆಚ್ಚ ಎಂಬ ಒಂದು ಒಳ್ಳೆಯ ಶಬ್ದವಿದೆ. ಸರಕಾರದ ಪ್ರಧಾನ ವೆಚ್ಚವೇ ಇದು ಎಂಬುದನ್ನು ಗಮನಿಸಿದರೆ, ಜನಸಾಮಾನ್ಯನಿಗೆ ಸಿಗುವ ಎಲ್ಲಾ ಸಾಮಾಜಿಕ ಸೇವೆ ಸೌಲಭ್ಯಗಳು ಯಾಕೆ ದುಬಾರಿಯಾಗುತ್ತಾ ಹೋಗುತ್ತವೆ ಎಂಬುದು ಅರ್ಥವಾದೀತು. ಆದರೆ ಇದನ್ನು ಅಂಕಿ ಅಂಶಗಳ ಮೂಲಕ ಜನರ ಮುಂದೆ ಬಿಚ್ಚಿಡುವ ಸಾಮಾಜಿಕ ಕಾಳಜಿ ಯಾರಿಗಿದೆ?" ಲಕ್ಷಾಧೀಶರು-ಕೋಟ್ಯಧೀಶರು ತಮ್ಮ

**(ಅದೇ, ಪುಟ 183)**

ಆದಾಯವನ್ನು ಹೆಚ್ಚಿಸುವ ಪ್ರಯತ್ನದಲ್ಲಿರುತ್ತಾರೆ. ರಾಜಕಾರಣಿಗಳು ಮತ್ತು ನೌಕರಶಾಹಿಯ ಜಂಟಿ ಭ್ರಷ್ಟಾಚಾರದ ಬಗ್ಗೆ ಮಾತಾಡದ ಪ್ರಜೆಯೇ ಇಲ್ಲ. ಗೊಬ್ಬರದಿಂದ ಹಿಡಿದು ವಿಮಾನದ ವರೆಗೆ ವಿವಿಧ ವಸ್ತುಗಳನ್ನು ಖರೀದಿಸುವಾಗ ಸಾವಿರಾರು ಮಂದಿ ಕೋಟ್ಯಧೀಶರಾಗುತ್ತಾರೆ. ಸರಕಾರಿ ನೌಕರನೊಬ್ಬ ನೂರಿನ್ನೂರು ರೂಪಾಯಿಗಳಿಗೆ ಕೈ ನೀಡಿ ಲೋಕಾಯುಕ್ತರ ಬಲೆಗೆ ಸಿಕ್ಕಿ ಬೀಳುತ್ತಾನೆ. ಆದರೆ ಮಂತ್ರಿಯೊಬ್ಬ 50 ಕೋಟಿ ರೂಪಾಯಿ ಮೌಲ್ಯದ ಅರಮನೆ ಕಟ್ಟಿಸುವುದು ಯಾರಿಗೂ ಕಾಣುವುದಿಲ್ಲ ಎಂದು ಗಟ್ಟಿಯವರು ತಿಳಿಸುತ್ತಾರೆ.

'ಸರಕಾರಿ ನೌಕರರ ಮತ್ತು ವೃತ್ತಿ ನಿರತರ ಸಾಮಾಜಿಕ ಬಾಧ್ಯತೆ'ಯನ್ನು ಕೆ.ಟಿ.ಗಟ್ಟಿಯವರು ಪ್ರಬಂಧದಲ್ಲಿ ತಿಳಿಸುತ್ತಾರೆ. ಬ್ರಿಟಿಷ್ ಅಧಿಕಾರಿಯ ಮುಂದೆ ಗುಲಾಮರಂತೆ ನಡೆದುಕೊಳ್ಳುತ್ತಿದ್ದ ಭಾರತೀಯ ನೌಕರರು ಬ್ರಿಟಿಷರು ಹೋದೊಡನೆ ಅವರ ಕುರ್ಚಿಗಳಲ್ಲಿ ಕುಳಿತು ಅವರಿಗಿಂತಲೂ ಮಿಗಿಲಾದ ಪ್ರಭುತ್ವ, ದರ್ಪ ಪ್ರದರ್ಶಿಸತೊಡಗಿದರು. ಅದೇ ಒಂದು ಸಂಪ್ರದಾಯವಾಗಿ ಮುಂದುವರಿದುಕೊಂಡು ಬಂತು. ಸಾಮಾನ್ಯ ಪ್ರಜೆಯೊಡನೆ ಗರ್ಜಿಸಿ ಮಾತನಾಡುವ ಸರಕಾರಿ ನೌಕರರು ಮತ್ತು ಪೋಲೀಸರು ಒಂದು ನಿರಂಕುಶ ಪ್ರಭುತ್ವದಲ್ಲಿ ಶೋಭಿಸಬಹುದು, ಪ್ರಜಾಪ್ರಭುತ್ವದಲ್ಲಿ ಅಲ್ಲ" ಎಂದು ಕೆ.ಟಿ.ಗಟ್ಟಿಯವರು ತಿಳಿಸುತ್ತಾರೆ. ವ್ಯಾಪಾರಸ್ಥ ಐದು ಲಕ್ಷ ಬಂಡವಾಳ

**(ಅದೇ, ಪುಟ 189)**

ಹಾಕಿ ವ್ಯಾಪಾರ ಮಾಡುತ್ತಾನೆ. ಅದರಲ್ಲೇನೂ ತಪ್ಪಿಲ್ಲ. ವೈದ್ಯ ವೃತ್ತಿಯೂ ಆ ಬಗೆಯದೇ ಎಂದು ನಂಬಿರುವ ಮರ್ಚೆಂಟ್ ಡಾಕ್ಟರ್ಸ್ ಇದ್ದಾರೆ. ಗಂಧ ಮತ್ತು ಬೀಟೆ ಮರಗಳು ಯಾರ ಸ್ವಂತ ಭೂಮಿಯಲ್ಲಿದ್ದರೂ ಅದು ಸರಕಾರೀ ಸೊತ್ತು. ಬ್ರಿಟಿಷರು ಮಾಡಿದ ಈ ಕಾನೂನನ್ನು ಕಿತ್ತೆಸೆಯಲಾಗುವುದಿಲ್ಲವೆ? ತಿದ್ದುಪಡಿ ಕೂಡ ಇಲ್ಲವೆ? ಬೆಳೆದ ಮೇಲೆ ಮರವನ್ನು ನ್ಯಾಯವಾದ ಬೆಲೆಗೆ ಸರಕಾರಕ್ಕೇ ಮಾರತಕ್ಕದ್ದು ಎಂದಾದರೂ ಕಾನೂನು ಮಾಡಲು ಸಾಧ್ಯವಿಲ್ಲವೆ? ಅಂಥ ಕಾನೂನು ಜಾರಿಗೆ ಬಂದರೆ ಎಲ್ಲರೂ ಗಂಧದ ಮರಗಳನ್ನು ಬೆಳೆದಾರು ಎಂದು ತಿಳಿಸುತ್ತಾರೆ.

'ನಾ ಡಿಸೋಜ' ರವರು ಈ ಸಂಕಲನಕ್ಕೆ ಮುನ್ನುಡಿಯನ್ನು ಬರೆದಿದ್ದಾರೆ. ಮುನ್ನುಡಿಯಲ್ಲಿ ಅವರು "ಇವತ್ತಿನ ನಮ್ಮ ಬದುಕು ಸುಖಕರವಾಗಿಲ್ಲ. ಅಲ್ಲೆಲ್ಲೋ ದೂರದಲ್ಲಿರುವ ಓಜೋನ್ ಪದರ ಛಿದ್ರವಾಗುತ್ತಿದೆ ಎಂದು ನಮ್ಮ ವಿಜ್ಞಾನಿಗಳು ಚಿಂತೆಗೀಡಾಗಿದ್ದಾರೆ. ಆದರೆ ನಮ್ಮ ಹತ್ತಿರದ ಬದುಕು ನೂರು ಛಿದ್ರಗಳಿಂದ ಚಿಂದಿ

ಚಿಂದಿಯಾಗಿದೆ. ಈ ಬಗ್ಗೆ ಯಾರು ಯೋಚಿಸಬೇಕು? ಕೆ.ಟಿ.ಗಟ್ಟಿಯವರು ಈ ಕೆಲಸ ಮಾಡಿದ್ದಾರೆ" ಎಂದು ಹೇಳುತ್ತಾರೆ.

**(ಅದೇ, ಪುಟ 8)**

ಇಲ್ಲಿನ ಲೇಖನಗಳಲ್ಲಿ ಸ್ವಾಮೀಜಿ ಎಂಬ ವ್ಯಸನ, ತೆರೆಯ ಮೇಲಿನ ಮಾಯಾಲೋಕ ಹೀಗೆ ಒಂದೆರಡು ಲೇಖನಗಳು ತೆಳುವಾಗಿಬಿಟ್ಟವು ಎಂಬ ನಾಡಿಸೋಜರ ಹೇಳಿಕೆಯನ್ನು ಒಪ್ಪಿಕೊಳ್ಳಬಹುದು. ಎಲ್ಲ ಪ್ರಬಂಧ ಸಂಕಲನದಂತೆ ಈ ಸಂಕಲನದಲ್ಲಿಯೂ ಕೆ.ಟಿ.ಗಟ್ಟಿಯವರು ಸಾಮಾಜಿಕ ವ್ಯವಸ್ಥೆಯಲ್ಲಿನ ಲೋಪದೋಷ ಗಳನ್ನು ಬಹಿರಂಗಪಡಿಸುತ್ತಾರೆ. ಅದಕ್ಕೆ ಕಾರಣರಾದವರ ಮೇಲೆ ಪ್ರತಿರೋಧ ವ್ಯಕ್ತಪಡಿಸುತ್ತಾರೆ. ಇಲ್ಲಿನ ಪ್ರತಿರೋಧಗಳು ಕೆಲವು ಕಡೆ ತೀಕ್ಷ್ಣತೆಯನ್ನು ಹೊಂದಿರುವುದು ಕಡಿಮೆಯಾಗಿದೆ ಅನ್ನಿಸುತ್ತದೆ.

## ೭.೩.೩: ನಮ್ಮ ಬದುಕಿನ ಪುಟಗಳು ( ವೈಚಾರಿಕ ಲೇಖನ)

ಕೆ.ಟಿ.ಗಟ್ಟಿಯವರು ಬರೆದ ವೈಚಾರಿಕ ಲೇಖನಗಳ ಸಂಗ್ರಹ 'ನಮ್ಮ ಬದುಕಿನ ಪುಟಗಳು' 1999ರಲ್ಲಿ ಪ್ರಕಟಗೊಂಡಿತು. ಇಲ್ಲಿ ಎಂಟು ವಿಭಾಗಗಳಲ್ಲಿ ಒಟ್ಟು ಐವತ್ತು ಲೇಖನಗಳಿವೆ. ಇಲ್ಲಿನ ಕೆಲವು ಲೇಖನಗಳು ಮಂಗಳೂರು ಆಕಾಶವಾಣಿಯಲ್ಲಿ ಬಿತ್ತರಗೊಂಡಿವೆ. ಮತ್ತೆ ಕೆಲವು ಲೇಖನಗಳು ಸುಧಾ, ತರಂಗ, ಕರ್ಮವೀರ, ಬೆಳ್ತಂಗಡಿಯ ಸುದ್ದಿ ಬಿಡುಗಡೆ ಮತ್ತು ಜೈ ಕನ್ನಡಮ್ಮ, ಕೋಲಾರದ ಹೊನ್ನಾಡಿ, ಮಂಗಳೂರಿನ ಜನವಾಹಿನಿ, ಹೊಸದಿಗಂತ, ಬೆಳಗಾವಿಯ ನಾಡೋಜ, ಹಾವೇರಿಯ ಮೂಡಣ ಪತ್ರಿಕೆಗಳಲ್ಲಿ ಪ್ರಕಟಗೊಂಡಿವೆ. ಲೇಖನಗಳಲ್ಲಿನ ಪ್ರಧಾನ ವಿಚಾರಗಳ ಆಧಾರದಲ್ಲಿ ಓದಿನ ಅನುಕೂಲಕ್ಕಾಗಿ ವರ್ಗೀಕರಣ ಮಾಡಲಾಗಿದೆ. ಈ ಕೃತಿಯ ಪ್ರಧಾನ ವಿಚಾರಗಳಲ್ಲಿ ವ್ಯಕ್ತಿ ಬದುಕು, ಪ್ರಕೃತಿ, ಸಮಾಜ ಸ್ವಾಸ್ಥ್ಯ, ಶಿಕ್ಷಣ, ಆಡಳಿತ ಭಾಷೆ, ಸಾಹಿತ್ಯ ಸಂಸ್ಕೃತಿ ಹೀಗೆ ಬೇರೆ ಬೇರೆ ಐವತ್ತು ಲೇಖನಗಳು ಇವೆ.

'ಧ್ಯಾನದಿಂದ ಜಾಗೃತಿಗೆ' ಎಂಬ ಮೊದಲ ಲೇಖನದಲ್ಲಿ "ನಿರರ್ಥಕ ಯೋಚನೆಗಳ ನೂರೊಂದು ತುಣುಕುಗಳ ಮೇಲೆ ಕಾವು ಕೂರುತ್ತಾ ತೂಕಡಿಸುವ ಸ್ಥಿತಿಯನ್ನೇ ಧ್ಯಾನಸ್ಥ ಸ್ಥಿತಿ ಎಂದು ತಪ್ಪಾಗಿ ತಿಳಿದುಕೊಂಡ ಮಂದಿ ಮನಸ್ಸನ್ನು ಸ್ತಂಭೀಕರಿಸಲು ಬೇರೆ ಬೇರೆ ವಿಧಾನವನ್ನು ಅನುಕರಿಸುತ್ತಾರೆ, ಕೆಲವರು ಗಂಟೆಗಟ್ಟಲೆ ಯಾವುದೋ ಶಬ್ದವನ್ನೋ, ಶ್ಲೋಕವನ್ನೋ ಉರು ಹಾಕುತ್ತಾರೆ. ಜಪದ

ಸರಮಣಿಯನ್ನು ಗಂಟೆ ಗಂಟೆ ಕಾಲ ಎಣಿಸುತ್ತಾರೆ. ದೇವರ ಹೆಸರನ್ನು ಲಕ್ಷ ಬಾರಿ ಬರೆಯುತ್ತಾರೆ. ಎಷ್ಟೋ ಸಂನ್ಯಾಸಿಗಳು, ಯೋಗಿಗಳು ವಿರಕ್ತರು ಅಫೀಮು, ಗಾಂಜಾ ಮತ್ತಿತರ ಮಾದಕ ದ್ರವ್ಯಗಳ ಮೊರೆ ಹೋಗುತ್ತಾರೆ. ಇದು ಧ್ಯಾನವಲ್ಲ. ಇದು ಪಲಾಯನವಾದ, ಮಾನಸಿಕ ಕೋಶಾವಸ್ಥೆ. ಯಾವುದೇ ಶಬ್ದವನ್ನು, ಮಂತ್ರವನ್ನು, ಶ್ಲೋಕವನ್ನು ಗಂಟೆಗಟ್ಟಲೆ ಉಚ್ಚರಿಸುವುದು ಒಂದು ಯಾಂತ್ರಿಕ ಕ್ರಿಯೆಯಾಗಿ ಪರಿವರ್ತನೆಗೊಂಡು ಮನಸ್ಸು ಅದೇ ಹೊತ್ತು ನಾನಾ ಚಿಂತೆಗಳಲ್ಲಿ ಯೋಚನೆಗಳಲ್ಲಿ ತೊಡಗಿಕೊಳ್ಳುತ್ತದೆ. ಧ್ಯಾನವಾಗಿರದ ದಿನದ ಪೂಜೆ ಕೂಡ ಇದೇ ಬಗೆಯದು. ಯಾಂತ್ರಿಕ ಕ್ರಿಯೆ ಅತಿಯಾಗಿ ಬುದ್ಧಿ ವಿಕಲ್ಪಕ್ಕೊಳಗಾಗುವವರೂ ಇದ್ದಾರೆ. ಅರ್ಧದಿನ ದೇವರ ಪೂಜೆ ಮಾಡುವವರು, ದೇವಾಲಯದಲ್ಲಿ ನೂರಾರು ಬಾರಿ ಪ್ರದಕ್ಷಿಣೆ ಮಾಡುವವರು, ದಿನಕ್ಕೆ ನಾಲ್ಕೈದು ಬಾರಿ ದೇವಾಲಯಕ್ಕೆ ಹೋಗಿ ಬರುವವರು ಇಂಥ ಬುದ್ಧಿವಿಕಲ್ಪಕ್ಕೊಳಗಾದವರು" ಎಂದು ಧ್ಯಾನದ ಹೆಸರಿನಲ್ಲಿ ನಡೆಸುವ ಯಾಂತ್ರಿಕ
**(ಗಟ್ಟಿ.ಕೆ.ಟಿ. ನಮ್ಮ ಬದುಕಿನ ಪುಟಗಳು, 1999, ಪುಟ 22)**
ಆಚರಣೆಗಳನ್ನು ವಿರೋಧಿಸುತ್ತಾರೆ. ಅದಕ್ಕೆ ವೈಜ್ಞಾನಿಕ ಕಾರಣವನ್ನೂ ನೀಡುತ್ತಾರೆ. "ಮನಸ್ಸನ್ನು ಪರಿಪೂರ್ಣ ಯೋಚನಾರಹಿತ ಸ್ಥಿತಿಯಲ್ಲಿ ಇರಿಸುವುದು ಧ್ಯಾನವೆಂದು ಕೆಲವರು ತಿಳಿಯುತ್ತಾರೆ. ಆದರೆ ಮನಸ್ಸು ಏಳೆಂಟು ಸೆಕುಂಡುಗಳಿಗಿಂತ ಹೆಚ್ಚು ಕಾಲ ಯೋಚನಾರಹಿತ ಸ್ಥಿತಿಯಲ್ಲಿ ಇರಲಾರದು ಎಂದು ಮನೋವಿಜ್ಞಾನ ಹೇಳುತ್ತದೆ". ಆವರು ಹೇಳುವ ನಿಜವಾದ ಧ್ಯಾನವೆಂದರೆ "ಎಲ್ಲಾ ಋಣಾತ್ಮಕ ಯೋಚನೆಗಳನ್ನು ತೊರೆಯಬೇಕು. ಜಗತ್ತಿನಲ್ಲಿ ಏನೇ ಜರಗುತ್ತಿರಲಿ ಒಳ್ಳೆಯದೇ ಹೆಚ್ಚು ಆಗುತ್ತದೆ. ಆದುದರಿಂದಲೇ ನಾವು ಜೀವಿಸಿದ್ದೇವೆ. ಜೀವಿಸಿರಲು ಬಯಸುತ್ತೇವೆ ಎಂಬುದು ಸತ್ಯ. ಆದುದರಿಂದ ಜಗತ್ತಿನಲ್ಲಿ ಒಳ್ಳೆಯದೇ ನಡೆಯುತ್ತಿದೆ ಎಂದು ಭಾವಿಸಬೇಕು. ಒಳ್ಳೆಯದನ್ನೇ ಮಾಡುತ್ತೇನೆ ಎಂದು ತೀರ್ಮಾನಿಸಬೇಕು. ಒಂದು ವಿಚಾರದ ಮೇಲೆ ಮನಸ್ಸನ್ನು ಕೇಂದ್ರೀಕರಿಸಬೇಕು ಮತ್ತು ಅತ್ಯಂತ ತೀವ್ರವಾಗಿ, ಗಾಢವಾಗಿ ಆ ಕುರಿತು ಯೋಚಿಸಬೇಕು. ಶಿಲ್ಪಿ ಆಂಥ ಧ್ಯಾನ ಮಾಡುತ್ತಾನೆ. ಕವಿ ಅಂಥ ಧ್ಯಾನ ಮಾಡುತ್ತಾನೆ. ಒಬ್ಬ ಡಾಕ್ಟರ್, ಇಂಜಿನಿಯರ್ ಅಥವಾ ಒಬ್ಬ ಶ್ರೇಷ್ಠ ಕಲಾವಿದ ಕುಶಲಕರ್ಮಿ ಅಂಥ ಧ್ಯಾನ ಮಾಡುತ್ತಾನೆ. ಒಬ್ಬಳು ತಾಯಿ ಕೂಡ ತನ್ನ ಮಗುವಿನ ಕ್ಷೇಮದ ಕುರಿತು ಅಂಥ ಧ್ಯಾನ ಮಾಡುತ್ತಾಳೆ" ಎನ್ನುತ್ತಾರೆ.

'ಜಗತ್ತೆಂಬ ಎಲ್ಲಕ್ಕಿಂತ ಮಿಗಿಲಾದ ಗುರು' ಲೇಖನದಲ್ಲಿ ಎಷ್ಟೋ ವಿಚಾರಗಳಲ್ಲಿ ಜಗತ್ತೇ ನಮ್ಮ ಗುರು ಎನ್ನುತ್ತಾರೆ. ಯಾರ ಆದೇಶ ಅಥವಾ ಬಲವಂತ ಇಲ್ಲದೆ ಎಷ್ಟೋ ಮಹಾಗ್ರಂಥಗಳು ಸೆರೆಮನೆಯಲ್ಲಿ ರಚಿತವಾದುವು, ಧರ್ಮಗ್ರಂಥಗಳೆಲ್ಲವೂ ಚಿಂತಕರು,

ದಾರ್ಶನಿಕರು ಜಗತ್ತಿನಿಂದ ಕಲಿತು ಜಗತ್ತಿಗೆ ಅರ್ಪಿಸುವ ಪಾಠಗಳು ಆಗಿವೆ ಎನ್ನುತ್ತಾರೆ. "ಮನುಷ್ಯನೊಬ್ಬ ಎಂಥ ಮಹಾ ವ್ಯಕ್ತಿಯೇ ಆಗಲಿ ಆತನಿಗೆ ತನ್ನ ಮನಸ್ಸನ್ನು ಪೂರ್ಣವಾಗಿ ಅರ್ಪಿಸಿಕೊಳ್ಳುವಾತ ತನ್ನ ಆತ್ಮವನ್ನು ನಾಶ ಮಾಡಿಕೊಳ್ಳುತ್ತಾನೆ. ತನ್ನ ಸ್ವಂತ ಜೀವಾತ್ಮನಿರಬೇಕಾದಲ್ಲಿ ಬೇರೊಬ್ಬ ಮನುಷ್ಯನನ್ನು ಸ್ಥಾಪಿಸಿಕೊಳ್ಳುವವನು ಆ ಮನುಷ್ಯನ ಗುಲಾಮನಾಗಿರುತ್ತಾನೆ ವಿನಃ ಸ್ನೇಹಿತನಾಗಲಾರ. ಆದ್ದರಿಂದಲೇ ತಮ್ಮನ್ನು ದೇವಮಾನವನೆಂದು ಕರೆಸಿಕೊಳ್ಳುವ ಗುರು, ಜಗದ್ಗುರುಗಳಿಗೆ ಅವರ ಪಾದ ಸೇವೆ ಮಾಡುವ ದಾಸಿಯರಿರುತ್ತಾರೆ."

(ಅದೇ, ಪುಟ 25)

'ಆತನಿಗೆ ಸಮನಾದುದಿಲ್ಲ' ಲೇಖನದಲ್ಲಿ ಪಾಂಡಿತ್ಯದಷ್ಟೇ ಪ್ರಪಂಚ ಜ್ಞಾನವೂ ಬದುಕಿಗೆ ಮುಖ್ಯ ಎನ್ನುತ್ತಾರೆ. ಕಲಿಯಬಲ್ಲವನಿಗೆ ಗುರು ನಿಮಿತ್ತ ಮಾತ್ರ, ಅರಿವು ಎಂಬುದು ತನ್ನಿಂದ ತಾನೇ ಬರುವುದಿಲ್ಲ. ಜಪ ತಪಗಳಿಂದಲೂ ಬರುವುದಿಲ್ಲ. ಅದನ್ನು ಗುರುವಿನಿಂದ, ಬಲ್ಲವರಿಂದ ತಿಳಿಯಬಹುದು. ನಮ್ಮ ಅನುಭವದಿಂದ ಕಂಡುಕೊಳ್ಳ ಬಹುದು ಎನ್ನುತ್ತಾರೆ.

'ಮಾತು ಮತ್ತು ಮೌನ' ಅರ್ಥಪೂರ್ಣವಾದ ಮಾತು ಎಷ್ಟು ಪ್ರಭಾವಶಾಲಿಯೋ ಅರ್ಥ ಪೂರ್ಣವಾದ ಮೌನವೂ ಅಷ್ಟೇ ಪ್ರಭಾವಶಾಲಿ ಎನ್ನುವ ವಿಚಾರವನ್ನು ವಿವರಿಸುತ್ತದೆ. ಪ್ರತಿದಿನ ಒಳ್ಳೆಯ ಮಾತುಗಳಿಗಿಂತ ಕೆಟ್ಟ ಮಾತುಗಳೇ ಹೆಚ್ಚಾಗಿ ಕೇಳಿ ಬರುತ್ತವೆ. ಒಂದು ದಿನ ಪತ್ರಿಕೆ ತೆಗೆದು ನೋಡಿದರೂ ಸಾಕಷ್ಟು ಕೆಟ್ಟ ಮಾತುಗಳು, ಯಾವ ಸತ್ಯವೂ ಇಲ್ಲದ ಹೇಳಿಕೆಗಳು ಕಾಣಿಸುತ್ತವೆ. ಇಂಥದ್ದನ್ನು ಓದಿ ಓದಿ ಪ್ರಪಂಚದಲ್ಲಿ ಒಳ್ಳೆಯವರೇ ಇಲ್ಲ, ಒಳ್ಳೆಯದೆಂಬುದೇ ಇಲ್ಲ ಎಂದು ಕೆಲವರು ಹೇಳಲಾರಂಭಿಸುತ್ತಾರೆ. ಇಡೀ ಪ್ರಪಂಚ ಭ್ರಷ್ಟರಾಗಿಲ್ಲದಿರುವುದು ಹೇಗೆ? ಎಲ್ಲರೂ ಹೀಗೆ ಹೇಳುವುದಾದರೆ ಯಾರ ಮಾತು ಸತ್ಯ ಯಾರ ಮಾತು ಸುಳ್ಳು ಎಂದು ಗಟ್ಟಿಯವರು ಪ್ರಶ್ನಿಸುತ್ತಾರೆ. ಸ್ವಲ್ಪ ಸ್ವಲ್ಪವೇ ಮಾತುಗಳನ್ನು ಕಡಿಮೆಮಾಡುವುದು ವಿಹಿತ. ದಿನಕ್ಕೆ ಒಂದರ್ಧ ಗಂಟೆ ಒಂದೆಡೆ ಮೌನವಾಗಿ ಕುಳಿತು ವಿಚಾರ ಮಾಡುವುದರಿಂದ ಖಂಡಿತವಾಗಿಯೂ ವಿಚಾರ ಶಕ್ತಿಯನ್ನು ವೃದ್ಧಿ ಮಾಡಿಕೊಳ್ಳಬಹುದು ಎನ್ನುತ್ತಾರೆ.

'ಪ್ರತಿಭೆ ಮತ್ತು ಆದರ್ಶ'ದಲ್ಲಿ ಇಂದು ಪ್ರತಿಭಾಶಾಲಿಗಳಾಗಿರುವವರ ಪೈಕಿ ಹೆಚ್ಚು ಹೆಚ್ಚು ಮಂದಿ "ಸ್ವಹಿತ" ಸಾಧನೆ ಮಾತ್ರವೇ ಬದುಕು ಬೇರೆ ಏನನ್ನೂ ಗಮನಿಸಿಕೊಳ್ಳಬೇಕಾಗಿಲ್ಲ ಎಂಬ ಧೋರಣೆ ಹೊಂದಿರುವವರನ್ನು ಕಾಣುತ್ತೇವೆ ಎನ್ನುತ್ತಾರೆ. ಹಿರಿಯ ವ್ಯಕ್ತಿಗಳೇ ಭಾಷಣದಲ್ಲಿ ಒಂದು ಆಚರಣೆಯಲ್ಲಿ ಇನ್ನೊಂದು

ಮಾಡುತ್ತಾರೆ. ಹಾಗಾಗಿ ಪ್ರಜ್ಞಾವಂತನಾದ ಸಜ್ಜನನಾದ ವ್ಯಕ್ತಿಯಲ್ಲಿ ಸ್ವಾಭಾವಿಕವಾಗಿಯೇ ರೋಷವುಂಟಾಗುತ್ತದೆ ಎನ್ನುತ್ತಾರೆ.

'ಆಲಸ್ಯ ಮನುಷ್ಯನ ಶತ್ರು' ಲೇಖನದಲ್ಲಿ ಆಲಸಿಯು ಸ್ವಾಭಾವಿಕವಾಗಿಯೇ ಹುಂಬನಾಗಿರುತ್ತಾನೆ. ವೈಚಾರಿಕವಾಗಿ ಮಂದ ಸ್ಥಿತಿಯಲ್ಲಿರುತ್ತಾನೆ. ಆಲಸ್ಯ ಒಂದು ಜಾಡ್ಯ ಆದು ಒಂದು ಸೋಂಕು ರೋಗವೂ ಹೌದು. ಮಿತಿಮೀರಿದ ಪಿತ್ರಾರ್ಜಿತ ಸಂಪತ್ತು ಸೋಮಾರಿತನಕ್ಕೆ ಕಾರಣವಾಗುತ್ತದೆ ಎನ್ನುತ್ತಾರೆ.

'ಧನಾತ್ಮಕ ಚಿಂತನೆ'ಯ ಅಗತ್ಯವನ್ನು ಗಟ್ಟಿಯವರು ವಿವರಿಸುತ್ತಾರೆ. "ನಮಗೆ ಬೇರೆ ದೇಶದಲ್ಲಿ ತಯಾರಾದ ಸಾಮಗ್ರಿಗಳ ಮೇಲೆ ಹೆಚ್ಚು ಪ್ರೀತಿ. ದೇಶಕ್ಕೆ ಏನಾದರೇನು, ನನಗೆ ನನ್ನ ಹೆಂಡತಿ ಮಕ್ಕಳಿಗೆ ಬೇಕಾದದ್ದೆಲ್ಲ ಮಾಡಿಕೊಂಡರೆ ಸಾಕು ಎಂಬುದು ನಮ್ಮ ಧೋರಣೆ. ನಮ್ಮ ಶಿಕ್ಷಣ ವ್ಯವಸ್ಥೆ ಚೆನ್ನಾಗಿಲ್ಲ, ನಮ್ಮ ಆಸ್ಪತ್ರೆಗಳು ಚೆನ್ನಾಗಿಲ್ಲ. ನಾವು ಸಾರ್ವಜನಿಕ ನೈರ್ಮಲ್ಯ ಕಾಪಾಡುವುದಿಲ್ಲ. ಕಂಡ ಕಂಡಲ್ಲಿ ಕೊಳೆ ಕಸಕಡ್ಡಿ ಎಸೆಯುತ್ತೇವೆ, ಉಗುಳುತ್ತೇವೆ ಇತ್ಯಾದಿಯಾಗಿ ನಮ್ಮ ದುರ್ಗುಣಗಳ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ನಾವು ಯಾವತ್ತೂ ಇರುವುದು ಹೀಗೆಯೇ. ನಮ್ಮ ವಿಧಿ ಲಿಖಿತವೇ ಇದು ಎಂಬಂತೆ! ಇತರ ದೇಶಗಳಲ್ಲಿರುವ ಒಳ್ಳೆಯದನ್ನು ಹೊಗಳುವುದು ಸರಿ. ಆದರೆ ನಾವು ಒಳ್ಳೆಯದನ್ನು ಇಲ್ಲಾ ಮಾಡೋಣ ಎಂದರೆ ಸಾಲದೇ? ಹೇಗೆ ಮಾಡೋಣ ಎಂದು ಚಿಂತಿಸಿದರೆ ಸಾಲದೇ? ನಮ್ಮ ತಪ್ಪುಗಳ ಕಡೆಗೆ ಬೊಟ್ಟಿಟ್ಟು ತೋರಿಸಬೇಕಾದ್ದು ಅಗತ್ಯ. ಆದರೆ ಆ ಬಗ್ಗೆ ಮಾತಾಡಬೇಕಾದ್ದು ಸುಧಾರಣಾವಾದಿಗಳ ಹಾಗೆ; ಅದೃಷ್ಟವಾದಿಗಳ ಹಾಗೆ ಅಲ್ಲ. ಸುಧಾರಣಾವಾದ ಧನಾತ್ಮಕ. ಅದೃಷ್ಟವಾದ ಋಣಾತ್ಮಕ."

**(ಅದೇ ಪುಟ 25)**

'ಯಾಕೆ ಓದಬೇಕು' ಲೇಖನದ ಮೂಲಕ ಇಂದಿನ ಓದು ವಿಸ್ತಾರಗೊಳ್ಳಬೇಕು ಎನ್ನುತ್ತಾರೆ. ಓದನ್ನು ವೃತ್ತಿಗೆ ಅಥವಾ ಉದ್ಯೋಗ ಪಡೆಯುವುದಕ್ಕೆ ತಳಕು ಹಾಕಿಕೊಂಡಂದಿನಿಂದ ಓದುವುದು ವಿದ್ಯಾರ್ಥಿಯಾದವನು ಮಾಡಬೇಕಾದ್ದು. ಇತರರಿಗೆ ಓದು ಅಗತ್ಯವೇನು ಅಲ್ಲ ಎಂಬ ಭಾವನೆ ಹುಟ್ಟಿಕೊಂಡಿರಬಹುದು. ಆದರೆ ಹೆಚ್ಚಿನ ವಿದ್ಯಾರ್ಥಿಗಳ ಓದು ಕೇವಲ ಪಠ್ಯ ಪುಸ್ತಕ, ನೋಟ್ಸ್ ಮತ್ತು ಗೈಡ್‌ಗಳಿಗೆ ಸೀಮಿತವಾಗಿ ಬಿಟ್ಟಿದೆ. ವಿದ್ಯಾವಂತರ ಪೈಕಿ ಓದುವ ಅಭ್ಯಾಸ ಎಷ್ಟು ಮಂದಿಗಿದೆ? ಶಾಲೆ ಕಾಲೇಜುಗಳ ಅಧ್ಯಾಪಕರ ಪೈಕಿ ಓದುವ ಹುಚ್ಚರು ಅಧ್ಯಯನಶೀಲರು ಎಷ್ಟು ಮಂದಿ ಇದ್ದಾರೆ ಎಂದು ಪ್ರಶ್ನಿಸುತ್ತಾ ಓದು ನಮ್ಮನ್ನು ಪ್ರಜ್ಞಾವಂತರನ್ನಾಗಿ ಸಂವೇದನಾ ಶೀಲರನ್ನಾಗಿ ಮಾಡುತ್ತದೆ. ನಮ್ಮ ಅರಿವನ್ನು ಹೆಚ್ಚಿಸಿ ವಿವೇಚನಾ ಶಕ್ತಿಯನ್ನು ಹರಿತಗೊಳಿಸುತ್ತದೆ ಎನ್ನುತ್ತಾರೆ.

'ಏಕಾಂತ ಇಲ್ಲದ ಬದುಕು' ಲೇಖನದಲ್ಲಿ ನಮ್ಮ ಜೀವನ ಕ್ರಮದಲ್ಲಿ ಮನಸ್ಸನ್ನು ಒಂದು ಕಡೆ ಕೇಂದ್ರೀಕರಿಸಲು ಅವಕಾಶವೇ ಇಲ್ಲದಿರುವ ವಿಚಾರವನ್ನು ಪ್ರಸ್ತಾಪಿಸುತ್ತಾರೆ. ಅವುಗಳಲ್ಲಿ ಟಿ.ವಿ.ಯ ಶಬ್ದ, ಉದ್ಘಾಟನೆ, ಚುನಾವಣೆ, ಸ್ವಾಗತ, ಸನ್ಮಾನ, ಮಂದಿರ, ಮಠ, ಮಸೀದಿಯ ಧ್ವನಿವರ್ಧಕಗಳು ಸೇರಿವೆ. ಸಾವಿರಾರು ಮನೆ, ಶಾಲೆ, ಕಾಲೇಜು ಆಸ್ಪತ್ರೆಗಳಲ್ಲಿರುವವರಿಗೆ ಇದು ತೊಂದರೆ ನೀಡುತ್ತದೆ. ಗಣೇಶ ಚತುರ್ಥಿ, ಶಾರದಾ ಪೂಜೆ, ದಸರೆ ಇತ್ಯಾದಿಗಳ ನೆಪದಲ್ಲಿ ಜನರ ಮಿದುಳನ್ನೇ ಕಂಪಿಸುವಂಥ ಶಬ್ದೋತ್ಪಾದನೆ ಮಾಡುವುದರಿಂದ ಯಾರಿಗೆ ಆನಂದ ದೊರೆಯುತ್ತದೆ ಎಂದು ಕೇಳುವವರೇ ಇಲ್ಲ. ಯಾಕೆಂದರೆ ಹಾಗೆ ಕೇಳಲು ಭಯ. ವಾಸ್ತವದಲ್ಲಿ ಒಂದು ಬಗೆಯ ಭಯೋತ್ಪಾದಕ ಗುಣದ ಒಂದು ಸಣ್ಣ ಗುಂಪು ಈ ಹಿಂಸಾ ವಿನೋದವನ್ನು ನಡೆಸುತ್ತದೆ ಎನ್ನುತ್ತಾರೆ. ಸಂಗೀತ ಅಂದರೆ ಘನಘೋರ ಶಬ್ದ ಎಂಬುದನ್ನು ಮದುವೆ ನಡೆಯುತ್ತಿರುವ ಯಾವುದೇ ಕಲ್ಯಾಣ ಮಂಟಪದೊಳಗೆ ಹೋದರೆ ತಟ್ಟನೆ ತಿಳಿಯುತ್ತದೆ. ಮನಸ್ಸನ್ನು ಕೇಂದ್ರೀಕರಿಸಲು ಸಾಧ್ಯವಾಗುವಂಥ ಆರೋಗ್ಯಪೂರ್ಣ ಪರಿಸರದ ಅಗತ್ಯವನ್ನು ತಿಳಿಸುತ್ತಾರೆ.

'ವಿಮರ್ಶಿಸುವ ಗುಣ'ದಲ್ಲಿ ವಿಮರ್ಶೆಯು ಚಿಂತನೆಯ ಒಂದು ವಿಧಾನ ಎನ್ನುತ್ತಾರೆ. ಪ್ರಶ್ನಿಸಿದರೆ, ವಿಮರ್ಶಿಸಿದರೆ, ಎಲ್ಲಿ ಇತರರ ಮನಸ್ಸಿಗೆ ನೋವಾಗುವುದೋ ಎಂದು ಮೂಕವಾಗಿದ್ದರೆ ಹುಳುಕುಗಳು ಹೊರಬೀಳಲಾರವು. ನಮ್ಮ ಸಾಹಿತ್ಯ ಕಲೆ ಸಂಗೀತದ ಕ್ಷೇತ್ರದಲ್ಲಿ ಸಾಕಷ್ಟು ವಿಮರ್ಶೆ ನಡೆಯುತ್ತದೆ. ಆದರೆ ಪ್ರಾಜ್ಞ ಪ್ರಬುದ್ಧ ವಿಮರ್ಶಕರದ್ದೇ ಆಟಾಟೋಪ ಹೆಚ್ಚು. ಹಿಂಸಾವಿನೋದಿ ವಿಮರ್ಶೆಯ ಪರಂಪರೆಯೇ ಇದೆ. ನಮ್ಮ ದೇಶದ ರಾಜಕಾರಣದಲ್ಲಿ ವಿಮರ್ಶಕ ದೃಷ್ಟಿಯೆಂಬುದೇ ಇಲ್ಲವಾಗಿದೆ ಎನ್ನುತ್ತಾ " ಒಬ್ಬ ವಿಕಲ್ಪ ಮತಿಯಾದ ರಾಜ್ಯಪಾಲ ಸಂವಿಧಾನವನ್ನು ಉಲ್ಲಂಘಿಸಿ ಒಂದು ಪ್ರಜಾಸತ್ತಾತ್ಮಕ ಸರಕಾರವನ್ನು ವಜಾ ಮಾಡಿದಾಗ, ವಿರೋಧ ಪಕ್ಷಗಳೆಲ್ಲ ರಾಜ್ಯಪಾಲರು ಮಾಡಿದ್ದು ಸರಿ ಎಂದು ವಾದಿಸುತ್ತಾ ಆನಂದದಿಂದ ವರ್ತಿಸುತ್ತ ಅಧಿಕಾರ ಗ್ರಹಣ ಮಾಡಲು ಧಾವಿಸುವುದು ಎಂಥ ವಿವೇಚನೆಯನ್ನು ತೋರುತ್ತದೆ? ಇದು ಸರಿ ಎಂದಾದರೆ ಮತ್ತು ಹಾಗೆಂದು ಸಾಂವಿಧಾನಿಕವಾಗಿ ದೇಶ ಒಪ್ಪಿಕೊಂಡರೆ ಯಾವ ಪಕ್ಷ ಅಧಿಕಾರದಲ್ಲಿರಲು ಸಾಧ್ಯ? ಮರಳಿ ಮರಳಿ ಹೀಗೆ ನಡೆಯುತ್ತಾ ಇದ್ದರೆ ಸರಕಾರ ಆಡಳಿತ ಎಂಬುದಿರಲು ಹೇಗೆ ಸಾಧ್ಯ? ಅದು ಅರಾಜಕತ್ವದ ಇನ್ನೊಂದು ಸ್ವರೂಪವಲ್ಲವೆ?" ಎನ್ನುತ್ತಾರೆ. ಆತ್ಮ ವಿಮರ್ಶೆ ಮಾಡಿಕೊಳ್ಳದವನು ಮೂರ್ಖ ಎಂದು

**(ಅದೇ, ಪುಟ 61)**

ಅಭಿಪ್ರಾಯಪಡುತ್ತಾರೆ.

'ನಾನು ಎಂದರೇನು?' ಪ್ರಬಂಧದಲ್ಲಿ ಮನುಷ್ಯನ ಅಹಂಕಾರ ಗುಣವನ್ನು ವಿವರಿಸುತ್ತಾರೆ. ಅಷ್ಟ ಮಠಗಳಲ್ಲಿ ವಿದ್ಯೆಯೂ ಉಲ್ಲೇಖಿಸಲ್ಪಟ್ಟಿದೆ. "ನಾವು ಶ್ರೇಷ್ಠವೆಂದು ಪರಿಭಾವಿಸುವುದಾದರೂ ಹೇಗೆ? ಯಾವುದರಲ್ಲಿ ನಾವು ನಮ್ಮ ಮಹತ್ತಿಕೆಯನ್ನು ಕಾಣಬೇಕು? ನಾವು ಉಣ್ಣುವ ಅಹಾರವನ್ನು ನಾವು ಬೆಳೆಸಿರುವುದಿಲ್ಲ. ನಾವು ಉಟ್ಟ ಬಟ್ಟೆಯನ್ನು ನಾವು ತಯಾರಿಸಿರುವುದಿಲ್ಲ. ನಮಗೆ ಕಾಯಿಲೆ ಬಂದರೆ ಇತರರು ನಮ್ಮನ್ನು ಉಳಿಸಬೇಕು. ನಾವು ಪಡೆದ ವಿದ್ಯೆ ಮತ್ತು ಜ್ಞಾನದ ಹಿಂದೆ ಹಲವು ಗುರುಗಳಿದ್ದಾರೆ. ನಾವು ಪಡೆದ ಅಧಿಕಾರ, ಪದವಿ ಅಥವಾ ಸ್ಥಾನಮಾನದ ಹಿಂದೆ ನೂರಾರು ಮಂದಿಯ ದುಡಿತವಿದೆ" ಎನ್ನುತ್ತಾ ವ್ಯಕ್ತಿ ತಾನು ಶ್ರೇಷ್ಠನಾಗುವುದು ಹೇಗೆ ಸಾಧ್ಯ ಎನ್ನುತ್ತಾರೆ.

**(ಅದೇ, ಪುಟ 64)**

'ಧೈರ್ಯವೆಂಬ ಸ್ನೇಹಿತ' ಪ್ರಬಂಧದಲ್ಲಿ ಮನುಷ್ಯ ದುರ್ಜನನಾಗಲು ಶ್ರಮಪಡಬೇಕಾಗಿಲ್ಲ. ಆದರೆ ಯಾವುದೇ ಒಳ್ಳೆಯ ಕೆಲಸ ಮಾಡಲು, ಒಂದು ಒಳ್ಳೆಯ ಮಾತು, ಅಭಿಪ್ರಾಯ ವ್ಯಕ್ತಪಡಿಸಲು, ಒಂದು ರಚನಾತ್ಮಕವಾದ ದಾರಿಯಲ್ಲಿ ಹೆಜ್ಜೆಯಿಡಲು ಎಷ್ಟೋ ಚಿಂತನೆ ಮಾನಸಿಕ ತಯಾರಿ ಮತ್ತು ಧೈರ್ಯ ಬೇಕಾಗುತ್ತದೆ. ಎಂಬ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ನಾವು ಆರಿಸಿಕೊಂಡ ದಾರಿಯಲ್ಲಿ ಸಾಗುವ ಆತ್ಮ ವಿಶ್ವಾಸ, ಧೈರ್ಯ ನಮ್ಮಲ್ಲಿದ್ದರೆ ನಾವು ಯೋಚಿಸಬೇಕಾದ್ದು ಆ ದಾರಿ ಸನ್ಮಾರ್ಗವೇ ಎಂದು ಮಾತ್ರ. ಆಗ ನಮ್ಮ ತಪ್ಪುಗಳನ್ನು ತಿದ್ದಿಕೊಳ್ಳುವ ಧೈರ್ಯ ಕೂಡ ನಮ್ಮಲ್ಲಿ ಉಂಟಾಗುತ್ತದೆ ಎಂದು ತಿಳಿಸುತ್ತಾರೆ.

'ಸತ್ಯ ಮತ್ತು ಸೌಂದರ್ಯ' ಪ್ರಬಂಧದಲ್ಲಿ ಕೆ.ಟಿ.ಗಟ್ಟಿಯವರು ಸತ್ಯ ಮತ್ತು ಸೌಂದರ್ಯದ ಸ್ವರೂಪವನ್ನು ತಿಳಿಸುತ್ತಾರೆ. ಒಬ್ಬನಿಗೆ ಕಾಣಿಸುವ ಸೌಂದರ್ಯ ಇನ್ನೊಬ್ಬನಿಗೆ ಕಾಣಿಸದಿರಬಹುದು. ಒಬ್ಬನಿಗೆ ಸತ್ಯವೆನಿಸಿದ್ದು ಇನ್ನೊಬ್ಬನಿಗೆ ಸತ್ಯ ವೆನಿಸದಿರಬಹುದು. ಯಾವುದೂ ಎಲ್ಲರಿಗೂ ಒಂದೇ ರೀತಿ ಕಾಣಿಸುವುದಿಲ್ಲ ಎನ್ನುತ್ತಾರೆ.

"ಪರಸ್ಪರ ಪ್ರೇಮಿಸುತ್ತಿರುವಾಗ, ಒಬ್ಬರಿಗಿನ್ನೊಬ್ಬರು ಸಮಗ್ರ ಸೌಂದರ್ಯದ ಮೂರ್ತ ರೂಪವಾಗಿ, ದೇವರಂತೆ ಕಾಣಿಸುವ ಗಂಡು ಹೆಣ್ಣು ವಿವಾಹದ ಬಳಿಕ ಒಬ್ಬರು ಇನ್ನೊಬ್ಬರನ್ನು ದ್ವೇಷಿಸುವುದನ್ನು ಕಾಣುತ್ತೇವೆ. ಹಾಗಾದರೆ ಅವರು ಮೊದಲು ಕಂಡ ದೇವ ಸೌಂದರ್ಯ ಎಲ್ಲಿ ಹೋಯಿತು? ಪಡೆಯುವುದರಲ್ಲಿ ಕಳೆದುಕೊಳ್ಳುವುದೆಂದರೆ ಇದೇ! ಅಮೂರ್ತ ರೂಪದಲ್ಲಿದ್ದುದನ್ನು ಗ್ರಹಿಸಲು ಸಾಧ್ಯವಾದಂತೆಯೇ ಅದನ್ನು ಉಳಿಸಲು ಕೂಡ ಸಾಧ್ಯವಾದರೆ ಪಡೆದದ್ದು ನಷ್ಟವಾಗುವುದಿಲ್ಲ. ಆದರೆ ಅದು

ಸುಲಭವಲ್ಲ. ಅದನ್ನು ಬುದ್ಧಿಪೂರ್ವಕವಾಗಿ ಸಾಧಿಸಬೇಕಾಗುತ್ತದೆ. ಸಾಧನೆಯಿಲ್ಲದೆ ಸತ್ಯದರ್ಶನ ಆಗುವುದಿಲ್ಲ" ಎನ್ನುತ್ತಾರೆ.

**(ಅದೇ, ಪುಟ 71)**

'ಎಂಥ ಉದ್ಯೋಗ' ಪ್ರಬಂಧದಲ್ಲಿ ಉದ್ಯೋಗದ ಹೆಸರಿನಲ್ಲಿ ನಡೆಯುವ ಭ್ರಷ್ಟಾಚಾರ, ದೌರ್ಜನ್ಯಗಳನ್ನು ವಿರೋಧಿಸಲಾಗಿದೆ. ಸಂಪಾದನೆ ತರುವಂಥದೆಲ್ಲ ನೈತಿಕವಾಗಿ ಉದ್ಯೋಗ ಎನಿಸಿಕೊಳ್ಳುತ್ತದೆಯೇ? ಎಂದು ಲೇಖಕರು ಪ್ರಶ್ನಿಸುತ್ತಾರೆ. ಗೌರವಾನ್ವಿತ ಹೆಸರಿರುವ ಸರಕಾರಿ ಉದ್ಯೋಗಕ್ಕೆ ನಿಗದಿಪಡಿಸಿದ ಸಂಬಳಕ್ಕಿಂತ ನಾಲ್ಕು ಪಟ್ಟು ಸಂಪಾದನೆಯನ್ನು ತರುವಂಥ ನೌಕರಿಗಳಿವೆ. ಇವುಗಳನ್ನು ಲಂಚ ಎಂದು ತಿಳಿಯುವ ಸಂಪ್ರದಾಯವೇ ಇಲ್ಲ. ಅದನ್ನು "ಆಟೋಮ್ಯಾಟಿಕ್" ವರಮಾನ ಎಂದೇ ತಿಳಿಯಲಾಗುತ್ತದೆ! ಇಂಥ ಇಲಾಖೆಯಿಂದ ನಿವೃತ್ತರಾಗುವಾಗ ಅವರು ಒಂದು ಕೋಟಿ ಮೌಲ್ಯದ ಆಸ್ತಿ ಪಾಸ್ತಿ ಮಾಡಿಕೊಳ್ಳುತ್ತಾರೆ. "ಸರಕಾರದಿಂದ ಅನುಮತಿ ದೊರೆಯುವುದಾದರೆ, ದೇಶದ ಉದ್ದಗಲಕ್ಕೆ ಲೆಕ್ಕವಿಲ್ಲದಷ್ಟು ದೇಣಿಗೆ ಆಧಾರಿತ ನರ್ಸರಿ ಶಾಲೆಗಳನ್ನು, ತಾಂತ್ರಿಕ ವಿದ್ಯಾಲಯಗಳನ್ನು, ಮೆಡಿಕಲ್ ಕಾಲೇಜುಗಳನ್ನು ಸ್ಥಾಪಿಸಲು ಸಿದ್ಧರಿರುವ ಲಕ್ಷಗಟ್ಟಲೆ ಜನರಿದ್ದಾರೆ. ಇವರ ಉದ್ದೇಶ ಏನು? ಸಮಾಜ ಕಲ್ಯಾಣವೇ ಈ ಸಂಸ್ಥೆಗಳನ್ನು ನಡೆಸುವವರಲ್ಲಿ ಎಷ್ಟು ಮಂದಿಗೆ ಇಂಥ ಉದ್ದೇಶ ಇದೆ? ಎಂದು ತಿಳಿಸುತ್ತಾರೆ.

'ವೇಗದ ಬದುಕು' ಜನರ ಇಂದಿನ ಬದುಕನ್ನು ಚಿತ್ರಿಸುತ್ತದೆ. "ದಿಡೀರ್ ಆಗಿ ಆಸ್ತಿ ಪಾಸ್ತಿ, ಸಂಪತ್ತು, ಕೀರ್ತಿ ಸನ್ಮಾನಗಳನ್ನು ಪಡೆಯಲು ನೇರ ಅವಕಾಶಗಳು ಒದಗಿ ಬರುವುದು ಬಹಳ ಕಡಿಮೆ. ಆದರೆ ಅಡ್ಡದಾರಿಗಳು ಇದ್ದೆ ಇವೆ. ಪ್ರತಿಷ್ಠಿತರಲ್ಲದವರು ಲಂಚ ವಶೀಲಿಯ ಮೂಲಕ ಅವಕಾಶ ಗಳಿಸಿಕೊಂಡರೆ, ಪ್ರತಿಷ್ಠಿತರು "ಲಾಬಿ" ಮಾಡುವುದರ ಮೂಲಕ ಗಳಿಸಿಕೊಳ್ಳುತ್ತಾರೆ. ಬೇಗನೆ ಇಷ್ಟಾರ್ಥಸಿದ್ಧಿ ಮಾಡಿಕೊಳ್ಳಲು ಕೆಲವರು ಅಪಮಾರ್ಗಗಳನ್ನು ಹಿಡಿಯುತ್ತಾರೆ. ಲಂಚ ಪಡೆಯಲು ಅವಕಾಶವಿರುವವರು ಲಂಚಕ್ಕೆ ಕೈಯೊಡ್ಡುತ್ತಾರೆ. ವಿವಿಧ ನೌಕರಿ, ವೃತ್ತಿಗಳಲ್ಲಿರುವವರು ಹಲವು ಭ್ರಷ್ಟ ವಿಧಾನಗಳನ್ನು ಅನುಸರಿಸುತ್ತಾರೆ. ಇತರರಿಗೂ ಇತರ ವಿಧಾನಗಳಿವೆ. ಯುವಕರು ಹೆಣ್ಣಿನ ತಾಯಿ ತಂದೆಯರಿಂದ ವರಭಿಕ್ಷೆ ಯಾಚಿಸುತ್ತಾರೆ. ಕೆಲವರು ಪಾಪವೂ ಇಲ್ಲ ಪುಣ್ಯವೂ ಇಲ್ಲ ಸುಲಿಯುವುದೇ ಪರಧರ್ಮ ಎಂದುಕೊಂಡು ನಾನಾ ವಿಧದ ದಂಧೆಗಳಿಗೆ ಕೈಹಾಕುತ್ತಾರೆ. ಬಡವರನ್ನು ದಿವಾಳಿಯಾಗಿಸುವ ಗಿರವಿ ಅಂಗಡಿಯಿಡುತ್ತಾರೆ."

**(ಅದೇ ಪುಟ79)**

ತತ್ಪರಿಣಾಮವಾಗಿ, ದ್ರವ್ಯಾರಾಧಕ ಸಮಾಜ ನಿರ್ಮಾಣವಾಗುತ್ತದೆ. ಮನುಷ್ಯನಿಂದ ಸರಕಿಗೆ ಹೆಚ್ಚಿನ ಮರ್ಯಾದೆ ಸಿಗುತ್ತದೆ ಎನ್ನುತ್ತಾರೆ.

'ಸ್ವಾರ್ಥವಲ್ಲದ್ದೇನು'? ಪ್ರಬಂಧದಲ್ಲಿ ಸ್ವಾರ್ಥ ಎಂಬುದು ಏನೇನೂ ಇಲ್ಲದೆ ಬದುಕಲು ಸಾಧ್ಯವೇ? ದೇವರ ಕಥೆ, ಪುರಾಣಗಳಲ್ಲಿ ಕೂಡ ದೇವರಿಗೆ ಸ್ವಾರ್ಥ ಕೆಟ್ಟದು ಎಂದು ಹೇಳಲು ಹೇಗೆ ಸಾಧ್ಯ ಎಂದು ಪ್ರಶ್ನಿಸುತ್ತಾರೆ. ತನ್ನ ಹಿತವನ್ನು ನೋಡುವವನು ಸ್ವಾರ್ಥಿ ಎನ್ನುತ್ತಾರೆ. "ಒಂದು ಕಾಲದಲ್ಲಿ ತಾನು ನೀಡಿದ ಸೇವೆಗೆ ಪ್ರತಿಫಲವನ್ನು ಬಯಸದಿದ್ದ ವೈದ್ಯರುಗಳಿದ್ದರು, ಗುರುಗಳಿದ್ದರು. ದುಡಿತಕ್ಕೆ ತಕ್ಕ ಪ್ರತಿಫಲವನ್ನು ನೀಡುವ ಮತ್ತು ಪಡೆಯುವ ಕ್ರಮ ಆರಂಭವಾದ ಬಳಿಕ ಈಗ ನ್ಯಾಯವಾಗಿ ಪಡೆಯಬೇಕಾದ ಪ್ರತಿಫಲದ ದುಪ್ಪಟ್ಟಿನಿಂದ ಹತ್ತು ಪಟ್ಟಿನವರೆಗೆ ಕೆಲವೊಮ್ಮೆ ಅದಕ್ಕಿಂತಲೂ ಹೆಚ್ಚು ಪಡೆಯುವುದು ರೂಢಿಯಾಗಿದೆ. ತಾನು ಅಪೇಕ್ಷಿಸಿದಷ್ಟು ಹಣ ಕೈಗೆ ಬಂದ ಬಳಿಕವೇ ರೋಗಿಯನ್ನು ಮುಟ್ಟುವ ಡಾಕ್ಟರುಗಳಿದ್ದಾರೆ. ಹತ್ತೈವತ್ತು ಸಾವಿರ ಡೆಪಾಸಿಟ್ ಇರಿಸಿದ ಬಳಿಕವೇ ರೋಗಿಯನ್ನು ದಾಖಲು ಮಾಡಿಕೊಳ್ಳುವ ಆಸ್ಪತ್ರೆಗಳಿವೆ. ಇದೇ ಸೇವಾ ವಿಧಾನದ ಉಪಾಧ್ಯಾಯರುಗಳಿದ್ದಾರೆ. ಶಿಕ್ಷಣ ಸಂಸ್ಥೆಗಳಿವೆ. ಪರಹಿತ ಮಾಡಿದ್ದಕ್ಕೆ ನ್ಯಾಯ ಸಮ್ಮತವಾದ ಧರ್ಮಸಮ್ಮತವಾದ ಪ್ರತಿಫಲವನ್ನು ಸ್ವೀಕರಿಸುವವರ ಸಂಖ್ಯೆ ಇಲ್ಲವೇ ಇಲ್ಲವೇನೊ ಎಂಬಷ್ಟು ಸಣ್ಣದಾಗಿದೆ. ಸ್ವಾರ್ಥ ಸಾಧಕರು ಸಾಮಾಜಿಕ ವ್ಯವಸ್ಥೆಯನ್ನು ಹಾಳುಗೆಡವಿದ್ದಾರೆ". ತನ್ನ ಪ್ರಾಣವನ್ನು ತೆತ್ತು ಇತರರ ಪ್ರಾಣವನ್ನು ಉಳಿಸಿದವನನ್ನು

**(ಅದೇ ಪುಟ 83)**

ಮಾತ್ರವೇ ನಿಸ್ವಾರ್ಥಿ ಎಂದು ತಿಳಿಯುಬಹುದು. ಬದುಕುವವರೆಲ್ಲರೂ ಸ್ವಾರ್ಥಿಗಳೇ ಆಗಿರುತ್ತಾರೆ ಎನ್ನುತ್ತಾರೆ.

'ಸ್ವಯಂ ಪ್ರಭುತ್ವಕ್ಕೊಂದು ಮಾರ್ಗ – ಶಿಸ್ತು' ಪ್ರಬಂಧದಲ್ಲಿ ಶಿಸ್ತು ಎಲ್ಲರಿಗೂ ಸ್ವಭಾವತಃ ಬರುತ್ತದೆ ಅಥವಾ ತಿಳುವಳಿಕೆಯಿಂದ ಬರುತ್ತದೆ ಎಂದು ನಂಬುವಂತಿಲ್ಲ. ಅಶಿಸ್ತಿಗೆ ದಂಡನೆಯಿದೆ ಎಂಬ ಭಯ ಶಿಸ್ತಿಗೆ ಸ್ವಲ್ಪ ಮಟ್ಟಿಗೆ ಅವಶ್ಯ. ವಿವೇಚನೆಯುಳ್ಳ ಮನುಷ್ಯ ಸ್ವಯಂ ಶಿಸ್ತುಪಾಲನೆ ಮಾಡುತ್ತಾನೆ. ಆದರೆ ವಿವೇಚನೆಯಿಲ್ಲದವನನ್ನು ಯಾಕೆ ಏನು ಎಂದು ಚಿಂತಿಸುವಂತೆ ಮಾಡಲು ದಂಡನೆಯ ಅಗತ್ಯವಿದೆ ಎನ್ನುತ್ತಾರೆ.

'ಹೆಂಡತಿ ಮಾಡಿದ ಅಡುಗೆ' ಪ್ರಬಂಧದಲ್ಲಿ ಅಡುಗೆಯ ಹೆಸರಿನಲ್ಲಿ ಸ್ತ್ರೀಗೆ "ಬೆಳಗ್ಗಿನ ಕಾಫಿ ತಿಂಡಿ ಮುಗಿಸಿ ಮಕ್ಕಳನ್ನು ಶಾಲೆಗೆ ಕಳಿಸಿ ಅಥವಾ ಕರೆದುಕೊಂಡು ಹೋಗಿ ಶಾಲೆಯಲ್ಲಿ ಬಿಟ್ಟು ಬಂದು ಗಂಡನನ್ನು ನಗುಮೊಗದಿಂದ ಆಫೀಸಿಗೆ ಬೀಳ್ಕೊಟ್ಟು

ಸೆರಗಿನಿಂದ ಮುಖದ ಮೇಲಿನ ಬೆವರೊರೆಸಿಕೊಂಡು ಮತ್ತೆ ಮಧ್ಯಾಹ್ನದ ಅಡುಗೆಗೆ ಸಿದ್ಧಗೊಳ್ಳುವ ಗೃಹಿಣಿಯ ಪಾಡನ್ನು ನೋಡಿದರೆ ಊಟದ ವಿಚಾರದಲ್ಲಿ ನಮ್ಮ ಸಮಾಜದಲ್ಲಿ ಕ್ರಾಂತಿಕಾರಿ ಬದಲಾವಣೆಯಾಗಬೇಕಾದ್ದು ಅಗತ್ಯ ಎನಿಸುತ್ತದೆ" ಎಂದು ತಿಳಿಸುತ್ತಾರೆ.

**(ಅದೇ ಪುಟ 90)**

'ಸಾಯಲು ಸಿದ್ಧರಾಗಬೇಕು' ಪ್ರಬಂಧದಲ್ಲಿ ಸಾವಿನ ಭಯ ಇರಬಾರದು ಎನ್ನುತ್ತಾರೆ. "ಕೆಲವರು ಸಾವೇ ಇಲ್ಲ ಎಂಬಂತೆ ಜೀವಿಸುತ್ತಾರೆ. ಶೋಷಣೆಯ ಮೂಲಕ, ಭ್ರಷ್ಟಾಚಾರದ ಮೂಲಕ ಸಂಪತ್ತನ್ನು ಕೂಡಿ ಹಾಕುವವರಲ್ಲಿ ಬಹಳ ಮಂದಿಗೆ ಸಾವಿದೆ ಎಂಬ ಯೋಚನೆಯೇ ಬರುವುದಿಲ್ಲ. ಅವರು ಸಾಯಲು ಖಂಡಿತ ಸಿದ್ಧರಿಲ್ಲ. ಸಾವಿನ ಬಗ್ಗೆ ಯೋಚಿಸಲೂ ಭಯಪಡುವ ಅವರು ಸಾವೆಂಬುದಿಲ್ಲ ಎಂಬಂತೆ ಜೀವಿಸುತ್ತಾರೆ. ರೋಗ ಬಂದಾಗ ಕೋಟಿಗಟ್ಟಲೆ ಲಕ್ಷಕಟ್ಟಲೆ ಖರ್ಚು ಮಾಡಿ ಪ್ರಾಣ ಉಳಿಸುವ ಪ್ರಯತ್ನಕ್ಕೆ ಸಿದ್ಧರಾಗುತ್ತಾರೆ. ಕೊನೆಗೆ ಸಾವು ಬಂದು ಎದುರು ನಿಂತು ಬಿಟ್ಟಿದ್ದನ್ನು ಕಂಡಾಗ ಥರಥರ ನಡುಗಿ ಪ್ರಾಣಬಿಡುತ್ತಾರೆ" ಎನ್ನುತ್ತಾರೆ. ಶವಕ್ಕೆ ಮಾಡುವ ಸಂಸ್ಕಾರ

**(ಅದೇ, ಪುಟ 95)**

ಒಂದು ರೀತಿಯ ಕಂದಾಚಾರ ಎಂಬುದು ಗಟ್ಟಿಯವರ ಅಭಿಪ್ರಾಯ. "ನಿಜವಾಗಿಯೂ ಹೆಣವನ್ನು ಮೀಯಿಸುವ, ಅದಕ್ಕೆ ಶೃಂಗಾರ ಮಾಡಿಸುವ, ಅದರ ಬಾಯಿಗೆ ನೀರು ಬಿಡುವ ಸಂಪ್ರದಾಯಕ್ಕೆ ಏನಾದರೂ ಅರ್ಥವಿದೆಯೇ? ಅದರ ಅಗತ್ಯ ವಿದೆಯೇ? ಅಗತ್ಯವಿದೆ ಎಂದಾದರೆ ಆ ಅಗತ್ಯ ಏನು ಎಂದು ತಿಳಿಸುವವರು ಯಾರಾದರೂ ಇದ್ದಾರೆಯೇ? ಎಲ್ಲರೂ ಸಾಯುವವರೇ. ಸತ್ತು ತಿರುಗಿ ಬಂದವರು ಯಾರೂ ಇಲ್ಲ. ಆದ್ದರಿಂದ ಸತ್ತ ನಂತರ ಏನು ಎಂಬುದರ ಬಗ್ಗೆ ಹೆಚ್ಚು ತಿಳಿದವರು ಅಧಿಕೃತವಾಗಿ ಹೇಳಬಲ್ಲವರು ಯಾರಿದ್ದಾರೆ?" ಎಂದು ಪ್ರಶ್ನಿಸುತ್ತಾರೆ. ಸತ್ತವನು ಭಾರೀ ಶ್ರೀಮಂತನೋ,

**(ಅದೇ, ಪುಟ 97)**

ಮಂತ್ರಿಯೋ, ಅರಸನೋ ಆಗಿದ್ದರೆ, ಆತನ ಹೆಣಕ್ಕೆ ಕೂಡ ಬಡವರ ಕಂಡು ಹೊಟ್ಟೆಕಿಚ್ಚು ಪಡಬೇಕೆಂಬಂಥ ಲಕ್ಸುರಿ !.

ಕೆ.ಟಿ. ಗಟ್ಟಿಯವರು ಮಾನವ ಬದುಕಿನಲ್ಲಿ ಆಚರಿಸುವ ಇಂತಹ ಆಚರಣೆಗಳನ್ನು ವಿರೋಧಿಸುತ್ತಾರೆ. ಅಲ್ಲದೆ ತನ್ನ ಕೊನೆಯ ದಿನದ ಬಗ್ಗೆ ನಾನು ಮತ್ತು ನನ್ನ ಹೆಂಡತಿ ಹೀಗೆ ಬರೆದಿರಿಸಿದ್ದೇವೆ ಎನ್ನುತ್ತಾ ಹೀಗೆ ಹೇಳುತ್ತಾರೆ. "ನಾನು ನನ್ನ ಮರಣ ಕಾಲದಲ್ಲಿ ಯಾವ ಸ್ಥಿತಿಯಲ್ಲಿರುತ್ತೇನೋ ಅದೇ ಸ್ಥಿತಿಯಲ್ಲಿ ನನ್ನ ಹೆಣವನ್ನು ಹತ್ತಿರದ ಮೆಡಿಕಲ್ ಕಾಲೇಜು ಆಸ್ಪತ್ರೆಗೆ ಒಪ್ಪಿಸಬೇಕು. ನನ್ನ ದೇಹದ ಅಂಗಾಂಗಗಳನ್ನು ಇತರ ವ್ಯಕ್ತಿಗಳಿಗೆ

ಜೋಡಿಸಬಹುದು. ಶವ ಸಂಸ್ಕಾರದ ಯಾವ ವಿಧಿಯೂ ಅಗತ್ಯವಿಲ್ಲ. ಬೊಜ್ಜ ಮಾಡಕೂಡದು. ಒಂದು ವೇಳೆ ಮೆಡಿಕಲ್ ಕಾಲೇಜು ತೆಗೆದುಕೊಳ್ಳದಿದ್ದಲ್ಲಿ ಹೆಣವನ್ನು ಅದೇ ಸ್ಥಿತಿಯಲ್ಲಿ ಸ್ನಾನ, ಶೃಂಗಾರ ಇತ್ಯಾದಿ ನಡೆಸದೆ ಸುಡಬೇಕು..."

'ಪರಿಸರ: ಬದುಕಿನ ಒಳಗೆ' ಪ್ರಬಂಧದಲ್ಲಿ ಪರಿಸರ ಸಂರಕ್ಷಣೆಯ ಅಗತ್ಯವನ್ನು ಒತ್ತುಕೊಟ್ಟು ತಿಳಿಸುತ್ತಾರೆ. ಪರಿಸರ ಸಂಬಂಧೀ ದುರಂತವನ್ನು ತಪ್ಪಿಸಲು ಮನುಷ್ಯ ಮಾನವ ಕೇಂದ್ರೀಕೃತ ಜೀವನ ವಿಧಾನದ ಬದಲು ಪರಿಸರ ಕೇಂದ್ರೀಕೃತ ಜೀವನ ವಿಧಾನವನ್ನೂ ಅನುಸರಿಸಬೇಕು. ನನ್ನ ಸುತ್ತ ಮುತ್ತ ಪರಿಸರವಿದೆ ಎಂದು ಭಾವಿಸುವುದನ್ನು ಬಿಟ್ಟು ಪರಿಸರದಲ್ಲಿ ನಾನಿದ್ದೇನೆ ಎಂದು ಭಾವಿಸಬೇಕು ಎನ್ನುತ್ತಾರೆ".

**(ಅದೇ ಪುಟ 100)**

"ಯಾರು ಶ್ರೇಷ್ಠರು" ಪ್ರಬಂಧದಲ್ಲಿ ಮನುಷ್ಯ ಏನೇನೋ ಅದ್ಭುತ ಸಾಧನೆ ಮಾಡಿದರೂ ತನ್ನ ಆಹಾರವನ್ನು ತಾನೇ ಸೃಷ್ಟಿಸಿಕೊಳ್ಳುವುದು ಅವನಿಂದ ಸಾಧ್ಯವಾಗಲಿಲ್ಲವೆಂದು ಹೇಳುತ್ತಾರೆ. ಮನುಷ್ಯನಿಂದಾಗಿ ಪ್ರಕೃತಿಯ ನಾಶವಾದರೆ ಮನುಷ್ಯ ಜನಾಂಗದ ನಾಶ ಆದಂತೆ ಎಂದು ತಿಳಿದುಕೊಳ್ಳಬೇಕು. ನಿಸರ್ಗದಲ್ಲಿ ಏನಿದೆಯೋ ಅದೆಲ್ಲ ತನಗಾಗಿ ಇದೆ. ಅದನ್ನು ತನಗೆ ಬೇಕಾದಂತೆ ಲೂಟಿ ಮಾಡಬಹುದು ಎಂಬ ಉದ್ಧಟತನವನ್ನು ಮನುಷ್ಯ ತೊರೆಯಲೇ ಬೇಕು ಎಂದು ತಿಳಿಸುತ್ತಾರೆ.

'ನದಿ ಬರೀ ನದಿಯಲ್ಲ, ಜೀವನದಿ' ಪ್ರಬಂಧದಲ್ಲಿ ವರ್ಷದಿಂದ ವರ್ಷಕ್ಕೆ ಕುಡಿಯುವ ನೀರಿಗಾಗಿ ಹಾಹಾಕಾರ ಹೆಚ್ಚುತ್ತಲೇ ಇರುವುದು ಎಲ್ಲರಿಗೂ ತಿಳಿದ ವಿಷಯವಾದರೂ ಜನರೇಕೆ ಜಾಗೃತರಾಗಿಲ್ಲ? ಸರಕಾರವೇಕೆ ಕಣ್ಣು ತೆರೆದಿಲ್ಲ ಎಂದು ಗಟ್ಟಿಯವರು ಪ್ರಶ್ನಿಸುತ್ತಾರೆ. ಕಾರ್ಖಾನೆಗಳು ಹೊರ ಹಾಕುವ ತ್ಯಾಜ್ಯ ಜಲವನ್ನು ಸಂಸ್ಕರಿಸಲು ಸಾಧ್ಯ. ಈ ನೀರಿನಿಂದ ಕಾಡು ಬೆಳೆಯಬಹುದು. ಕಾರ್ಖಾನೆಗಳು ದೂರದ ನದಿಯಿಂದ ನೀರನ್ನು ಕೊಳವೆ ಮೂಲಕ ಹಾಯಿಸಿಕೊಳ್ಳಬಹುದಾದರೆ ಅದೇ ರೀತಿ ಒಂದಷ್ಟು ದೂರದ ಬರಡು ಭೂಮಿಗೆ ತ್ಯಾಜ್ಯ ಜಲವನ್ನು ಒಯ್ಯಲು ಕೂಡ ಸಾಧ್ಯ. ಕಾರ್ಖಾನೆಗಳು ಯಾವ ನೈತಿಕ ಆಧಾರದಲ್ಲಿ ತ್ಯಾಜ್ಯ ಜಲವನ್ನು ನದಿಗೆ ಹರಿಯ ಬಿಡುತ್ತಲೇ ಇವೆ? ಎಂಬುದನ್ನು ಸರಕಾರ ಮತ್ತು ಜನತೆ ಒಂದು ಗಂಭಿರವಾದ ಪ್ರಶ್ನೆಯಾಗಿ ಇನ್ನೂ ಎತ್ತಿಕೊಂಡಿಲ್ಲ ಎನ್ನುತ್ತಾರೆ.

"ಕಡಿಯಲಾಗದ ಮರ" ಪ್ರಬಂಧದಲ್ಲಿ ಗಟ್ಟಿಯವರು ಪ್ರಕೃತಿ ಸಂರಕ್ಷಣೆಯ ಅಗತ್ಯಗಳನ್ನು ತಿಳಿಸುತ್ತಾರೆ. "ರಸ್ತೆಯ ಇಕ್ಕೆಲದಲ್ಲಿ, ಸಾರ್ವಜನಿಕ ಜಾಗಗಳಲ್ಲಿ ಇರುವ ಮರಗಳನ್ನು ಮುಟ್ಟಕೂಡದು ಎಂಬ ಕಾನೂನು ಅಗತ್ಯವಾಗಿ ಬೇಕು. ಆದರೆ ಒಬ್ಬ ಪ್ರಜೆ ತನ್ನದೇ ಆದ ಜಾಗದಲ್ಲಿರುವ ಮರಗಳನ್ನು ಕಡಿಯಬಾರದು ಎಂದು ಕಾನೂನು ಮಾಡಿದರೆ ಅವನಲ್ಲಿ ವೃಕ್ಷ ಪ್ರೇಮವುಂಟಾಗುವ ಬದಲು ವೃಕ್ಷದ್ವೇಷವುಂಟಾಗುತ್ತದೆ" ಎನ್ನುತ್ತಾರೆ. ಮರಗಳ ಸಂಖ್ಯೆ ಹೆಚ್ಚಾಗಬೇಕಾದರೆ ಮರ ಕಡಿಯಲು ಬಿಡಬಾರದು ಎಂಬ ಕಾನೂನಿನಿಂದ ಪ್ರಯೋಜನವಿಲ್ಲ. ಮರ ಬೆಳೆಸುವ ಹೊಸ ಹೊಸ ಕಾರ್ಯಕ್ರಮವನ್ನು ಆರಂಭಿಸಬೇಕು. ಪ್ರಜೆಗೆ ಕೂಡ ತನಗೆ ಬೇಕಾದ ಮರವನ್ನು ತಾನೇ ಬೆಳೆಯುವ ಮತ್ತು ಕಡಿಯುವ ಹಕ್ಕು ಇರಬೇಕು. ಕಡಿದ ಮರದ ಬದಲಿಗೆ ಮರ ನೆಡಲೇಬೇಕು ಎಂಬ ಕಾನೂನು ಮಾಡಿದರೆ ತಪ್ಪಿಲ್ಲ. ಕಡಿಯಲೇ ಬಾರದು ಎಂಬುದು ನೆಡಬಾರದು ಎಂಬ ಅರ್ಥವನ್ನು ಹೊರಡಿಸುತ್ತದೆ. ಇದು ಮನುಷ್ಯನಿಗೆ ಭೂಮಿಯ ಮೇಲೆ ಇರುವ ಹಕ್ಕನ್ನು ಭಾಗಶಃ ನಿರಾಕರಿಸುವ ಸರ್ವಾಧಿಕಾರಿ ಧೋರಣೆಯೇ ಆಗುತ್ತದೆ" ಎಂದು ಅಭಿಪ್ರಾಯ ಪಡುತ್ತಾರೆ. **(ಅದೇ ಪುಟ 113)**

'ಪಕ್ಷಿಗಳನ್ನು ಉಳಿಸಬೇಕು' ಲೇಖನದಲ್ಲಿ ಮನೆಗಳ ಸಂಖ್ಯೆ ಬೆಳೆದ ಹಾಗೆ, ನಗರಗಳು ವಿಸ್ತಾರಗೊಂಡ ಹಾಗೆ ಪಕ್ಷಿಗಳ ಸಂಖ್ಯೆ ಕಡಿಮೆಯಾಗಿದೆ. ಕೆಲವು ಪಕ್ಷಿ ಜಾತಿಗಳು ಅದೃಶ್ಯವಾಗಿರುವ ಹಾಗೆ ತೋರುತ್ತದೆ ಎಂದು ಗಟ್ಟಿಯವರು ಆತಂಕ ವ್ಯಕ್ತಪಡಿಸುತ್ತಾರೆ.

'ಕಡಲು ಭೂಮಿಯ ಒಡಲು'. ಆದರೆ ಮನುಷ್ಯನ ಸಂಪರ್ಕಕ್ಕೆ ಬಂದಷ್ಟು ಸಾಗರವನ್ನು ಮನುಷ್ಯ ವಿಷಸಾಗರವಾಗಿಸಿದ್ದಾನೆ. ಬೀಚ್ ಎಂದು ಕರೆಯಲ್ಪಡುವ ಕಡಲ ತೀರಗಳು ಕೊಳೆ ಕಸ ತುಂಬಿರುವ ಗಲೀಜು ದುರ್ವಾಸನೆಯ ತಾಣಗಳಾಗಿವೆ. ಅಣು ವಿಕಿರಣ ಕಶ್ಮಲ ಸಾಗರದ ಹೃದಯವನ್ನೇ ಕಲುಷಿತಗೊಳಿಸುತ್ತದೆ. ಸೂಕ್ತವಾದ ರಕ್ಷಣಾ ವಿಧಾನವಿಲ್ಲದೆ ಕಡಲ ತಡಿಯವರೆಗೆ ಮನೆ, ಮಹಲು, ತೋಟ ನಿರ್ಮಿಸಿ, 'ಕಡಲು ಕೊರೆಯಿತು' ಎಂದು ಹಲುಬುವುದು ಅರ್ಥಹೀನ. ಎಲ್ಲಿಂದಲೋ ಬಂಡೆಗಳನ್ನು ಪುಡಿಮಾಡಿ ತಂದು ಕಡಲಿನ ಬಾಯಿಗೆ ಹಾಕಿ, ಕಡಲಿನ ಬಾಯಿ ಮುಚ್ಚಿಸಲು ವ್ಯರ್ಥ ಪ್ರಯತ್ನ ನಡೆಸುತ್ತಾನೆ. ಕಡಲಂತೂ ಇಂದು ನಾಗರಿಕ ಜಗತ್ತಿನ ತಿಪ್ಪೆಗುಂಡಿಯಾಗಿದೆ ಎನ್ನುತ್ತಾರೆ.

'ಪ್ರವಾಸದೊಳಗಿನ ಪ್ರಯಾಸಗಳು' ಪ್ರಬಂಧವು ಪ್ರವಾಸೋದ್ಯಮದ ಕುರಿತು ಚರ್ಚಿಸುತ್ತದೆ. ಲೇಖಕರು ನಮ್ಮ ದೇಶದ ಧಾರ್ಮಿಕ ಪ್ರವಾಸಿಗರಿಂದ

ಪ್ರಯೋಜನವಾಗುವುದು ಮುಖ್ಯವಾಗಿ ದೇವಾಲಯಗಳಿಗೆ ಮತ್ತು ಬಸ್ ಕಂಪೆನಿಗಳಿಗೆ ಎನ್ನುತ್ತಾರೆ. ಪ್ರವಾಸಿಗರಿಂದಾಗಿ ಪ್ರವಾಸೀ ಆಕರ್ಷಣೆಯ ಪಟ್ಟಣದಲ್ಲಿ ಜೀವನಾವಶ್ಯಕ ಸಾಮಗ್ರಿಗಳು ದುಬಾರಿಯಾಗುತ್ತವೆ. ಕಡಲ ದಂಡೆಯ ಅಂದ ಕೆಡುತ್ತದೆ. ಅವರ ಲೈಂಗಿಕ ಚಟುವಟಿಕೆಗಳಿಂದ ಗುಹ್ಯ ರೋಗಗಳು ಹರಡುತ್ತವೆ. ಕೆಲವು ಬಡ ಹೆಣ್ಣುಗಳು ವೇಶ್ಯೆಯರಾಗುತ್ತಾರೆ. ಒಂದು ಕಡೆಯಿಂದ ಅಪಸಂಸ್ಕೃತಿಯ ಹಿತ್ತಲ ಬಾಗಿಲು ತೆರೆದುಕೊಳ್ಳುತ್ತದೆ. ಇನ್ನೊಂದು ಕಡೆಯಲ್ಲಿ ಪರದೇಶಿ ಸಂಸ್ಕೃತಿಯ ಜಗಲಿ ವಿಸ್ತಾರವಾಗುತ್ತದೆ. ವಿದೇಶೀ ಪ್ರವಾಸಿಗರನ್ನು ದೃಷ್ಟಿಯಲ್ಲಿರಿಸಿಕೊಂಡು ಪ್ರವಾಸೀ ಕೇಂದ್ರಗಳು ರೂಪುಗೊಳ್ಳುವುದು ಸರಿಯಲ್ಲ. ಸಾಮಾನ್ಯ ಪ್ರಜೆಗಳನ್ನು ಕೂಡ ದೃಷ್ಟಿಯಲ್ಲಿಟ್ಟುಕೊಂಡು ಪ್ರವಾಸೀ ಕೇಂದ್ರಗಳಲ್ಲಿ ಸವಲತ್ತು ಸೌಕರ್ಯಗಳನ್ನು ಒದಗಿಸಬೇಕು ಎಂದು ಕೆ.ಟಿ. ಗಟ್ಟಿಯವರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

'ತುತ್ತಿನ ವಿಷ: ಅಣು ವಿಕಿರಣ ಕಶ್ಮಲ' ಅಣುವಿಕಿರಣಗಳಿಂದಾಗುವ ಹಾನಿಯನ್ನು ತಿಳಿಸುತ್ತದೆ. ಅಣುವಿಕಿರಣದಿಂದ ರಕ್ತದ ಕ್ಯಾನ್ಸರ್ ಉಂಟಾಗುತ್ತದೆ. ಈಗ ಕಾಣಿಸದ ಎಷ್ಟೋ ದೈಹಿಕ ಮನಸಿಕ ವ್ಯಾಧಿಗಳು ಮುಂದಿನ ಸಂತತಿಯಲ್ಲಿ ಕಾಣಿಸಿಕೊಳ್ಳಬಹುದು. ದ್ರವರೂಪದ ಅಣು ವಿಕಿರಣ ಕಶ್ಮಲಗಳನ್ನು ಭಾರೀ ಗಾತ್ರದ ಉಕ್ಕಿನ ಪೀಪಾಯಿಗಳಲ್ಲಿ ತುಂಬಿ ನೆಲದಡಿಯಲ್ಲಿ, ಸಾಗರದ ತಳದಲ್ಲಿ ಹುದುಗಿ ಇಡಲಾಗಿದೆ. ಆದರೆ ತೀವ್ರವಾಗಿ ಕೊರೆಯುವ ಶಕ್ತಿಯುಳ್ಳ ಈ ಕೊಳೆಯು ಕ್ರಮೇಣ ಪೀಪಾಯಿಗಳ ಭಿತ್ತಿಯನ್ನು ದುರ್ಬಲಗೊಳಿಸುತ್ತಾ ಹೋಗುತ್ತದೆ. ಈಗಾಗಲೇ ಎಷ್ಟೋ ಕಡೆ ಪೀಪಾಯಿಗಳು ಸೋರ ತೊಡಗಿದ್ದು ನೆಲ ಜಲ ಮತ್ತು ಸಾಗರ ತಳ ಕಲುಷಿತಗೊಂಡಿದೆ. ಹತ್ತಿರದ ಭವಿಷ್ಯದಲ್ಲೇ ಎಲ್ಲರ ತುತ್ತಿನಲ್ಲೂ ಅಣುವಿಕಿರಣ ಕಶ್ಮಲ ಕಾಣಿಸಿಕೊಳ್ಳಬಹುದು ಎನ್ನುತ್ತಾರೆ. "ಮನುಷ್ಯ ಉಳಿಯಬೇಕಾದರೆ" ನಿಸರ್ಗವನ್ನು ರಕ್ಷಿಸಬೇಕಾದ ಉಳಿಸಬೇಕಾದ ಅನಿವಾರ್ಯತೆಯನ್ನು ಕೆ.ಟಿ.ಗಟ್ಟಿಯವರು ತಿಳಿಸುತ್ತಾರೆ.

'ಭ್ರಷ್ಟತೆ ಸಮಾಜದ್ದೇ ಸೃಷ್ಟಿ'. ಭ್ರಷ್ಟಾಚಾರ ಮಾನವ ಸಮಾಜ ವ್ಯವಸ್ಥೆಯ ಒಂದು ಸ್ವಾಭಾವಿಕವಾದ ಭಾಗವೆಂಬಂತಾಗಿರುವುದರಿಂದ ಅದರ ವಿರುದ್ಧ ಹೋರಾಡಿ ಪ್ರಯೋಜನವಿಲ್ಲ. ಅದನ್ನು ಒಪ್ಪಿಕೊಳ್ಳುವುದೇ ಒಳ್ಳೆಯದು ಎಂದು ಜನರು ಭಾವಿಸುವಷ್ಟರ ಮಟ್ಟಿಗೆ ಇಂದು ಭ್ರಷ್ಟಾಚಾರ ವ್ಯಾಪಕವಾಗಿದೆ. ಭ್ರಷ್ಟರನ್ನು ಶಿಕ್ಷಿಸಲು ಸಾಧ್ಯವೇ ಇಲ್ಲ ಎಂದಾದರೆ ಭ್ರಷ್ಟರಲ್ಲದವರು ಈ ಭೂಮಿಯ ಮೇಲೆ ಬದುಕುವುದಕ್ಕೆ ಅರ್ಥವಿಲ್ಲ ಎನ್ನುತ್ತಾರೆ. ಜನ ಪರಮ ಭ್ರಷ್ಟ ಮಂತ್ರಿಯನ್ನು ಬೆಂಬಲಿಸಿ ಪುನಃ ಆತನನ್ನು ಚುನಾವಣೆಯಲ್ಲಿ ಗೆಲ್ಲಿಸುವುದನ್ನು ಲೇಖಕರು ವಿರೋಧಿಸುತ್ತಾರೆ. "ದೇಶದ ರಕ್ಷಣೆಗೆ ಬೇಕಾದ ರಕ್ಷಣಾ ಸಾಮಗ್ರಿಗಳನ್ನು, ಆಸ್ಪತ್ರೆಗಳಲ್ಲಿ ಚಿಕಿತ್ಸೆಗೆ ಬೇಕಾದ ಆಧುನಿಕ

ಯಂತ್ರೋಪಕರಣಗಳನ್ನು, ಔಷಧಗಳನ್ನು, ರೈತನಿಗೆ ಬೇಕಾದ ರಾಸಾಯನಿಕ ಗೊಬ್ಬರಗಳನ್ನು ಕೊಳ್ಳುವಾಗ ಐದು ಪರ್ಸೆಂಟ್, ಹತ್ತು ಪರ್ಸೆಂಟ್ 'ಹಿಂದೊಗೆತ' ಎಂದರೆ ಕೋಟಿಗಟ್ಲೆ ಆಗುತ್ತದೆ. ಇದನ್ನು ನ್ಯಾಯಸಮ್ಮತವೆಂಬಂತೆ ಸಂಗ್ರಹಿಸುವ ನಮ್ಮ ಮಂತ್ರಿಗಳು ಅಧಿಕಾರಿಗಳು ಎಂಥವರು? ಇಂಥ ಘೋರ ಅಪರಾಧಗಳನ್ನು ಘೋರವಾಗಿಯೇ ದಂಡಿಸುವ ಕಾನೂನು ಏಕಿಲ್ಲ? ಲಕ್ಷಗಟ್ಲೆ ತೆಗೆದುಕೊಂಡು ನೌಕರಿಗಳನ್ನು ಮಾರುವ ಉದ್ಯೋಗ ನೇಮಕಾತಿ ಮಂಡಳಿಯ ಸದಸ್ಯರ "ಸಂಪಾದನೆ" ಎಲ್ಲಿಗೆ ಹೋಗುತ್ತದೆ ಎಂದು ಪತ್ತೆ ಹಚ್ಚಲು ಸಾಧ್ಯವಿಲ್ಲವೆ? ಅಬಕಾರಿ ಪೋಲೀಸ್, ಸಾರ್ವಜನಿಕ ಕಾಮಗಾರಿ, ಸಾರಿಗೆ ಪರವಾನಗಿ ಮುಂತಾದ ಇಲಾಖೆಗಳಲ್ಲಿ ವ್ಯವಸ್ಥಿತವಾಗಿ ಅನಧಿಕೃತ ಸಂಬಳವೋ ಎಂಬಂತೆ ಸಂಗ್ರಹವಾಗುವ ಮೊತ್ತವನ್ನು ಹೇಗೆ ಬಚ್ಚಿಡಲಾಗುತ್ತದೆ ಎಂದು ಕಂಡುಹಿಡಿಯಲು ಸಾಧ್ಯವಿಲ್ಲವೇ? ಭ್ರಷ್ಟಾಚಾರ ಇಷ್ಟು ಮುಕ್ತವಾಗಿ ರಾಜಾರೋಷವಾಗಿ, 'ಇದೇ ಲೋಕದ ರೀತಿ' ಎಂಬಂತೆ ನಡೆಯುವ ಪರಿಸ್ಥಿತಿ ಉಂಟಾದದ್ದು ಹೇಗೆ? ದೇಶದ ಸಂಪತ್ತು ಕೊಳ್ಳೆ ಹೊಡೆದು ಬಡ ಜನರ ಮಧ್ಯದಲ್ಲಿ ದೇವಲೋಕದಿಂದ ಇಳಿದು ಬಂದವರಂತೆ ಓಡಾಡಲು ಸಾಧ್ಯವಾಗುವುದು ಹೇಗೆ?" ಎಂದು ರಾಜಕೀಯದಲ್ಲಿ, ಸಾರ್ವಜನಿಕ ಸೇವಾ ಇಲಾಖೆಗಳಲ್ಲಿ ನಡೆಯುವ

**(ಅದೇ, ಪುಟ 139)**

ಭ್ರಷ್ಟಾಚಾರಕ್ಕೆ ಪ್ರತಿರೋಧ ವ್ಯಕ್ತಪಡಿಸುತ್ತಾರೆ. ಮಂತ್ರಿಗಳ ಮತ್ತು ಅಧಿಕಾರಿಗಳ ಭ್ರಷ್ಟಾಚಾರ ಸಮಾಜ ಭ್ರಷ್ಟವಾಗಿರುವುದರ ಲಕ್ಷಣ. ಭ್ರಷ್ಟಾಚಾರದ ವಿರುದ್ಧ ಭ್ರಷ್ಟ ರಾಜಕಾರಣಿಗಳು ನಡೆಸುವ ನಿರಂತರ ಹೋರಾಟದಿಂದ ಜನರಿಗೆ ನಿರಂತರವಾಗಿ ಸಮಾಧಾನ ದೊರೆಯುವುದಾದರೆ ಆ ಜನರಿಗೆ ಭ್ರಷ್ಟಾಚಾರದಿಂದ ಎಂದಿಗೂ ಮುಕ್ತಿ ಇಲ್ಲ. ಮುಕ್ತಿ ಬೇಕೆಂದಾದರೆ ಕಾಲಮಿತಿ ಹಾಕಿಕೊಳ್ಳಬೇಕು. ಭ್ರಷ್ಟತೆಯನ್ನು ಹತ್ತಿಕ್ಕುವ, ಭ್ರಷ್ಟರನ್ನು ಶಿಕ್ಷಿಸುವ ಸೂತ್ರಗಳನ್ನು ರೂಪಿಸಬೇಕು ಎಂದು ಗಟ್ಟಿಯವರು ತಿಳಿಸುತ್ತಾರೆ.

'ಸಂಪತ್ತಿನಿಂದ ಸುಖ' ಪ್ರಬಂಧದಲ್ಲಿ ಲೇಖಕರು ಸಂಪತ್ತು ಮನುಷ್ಯನಿಗೆ ವರವೂ ಆಗಬಹುದು ಶಾಪವೂ ಆಗಬಹುದು ಎಂದು ಹೇಳುತ್ತಾರೆ. ಇಡೀ ದೇಶದ ಸಂಪತ್ತು ಕೆಲವೇ ಮಂದಿಯ ಬೊಕ್ಕಸದಲ್ಲಿ ತುಂಬಿಕೊಳ್ಳುವುದು ಅಥವಾ ಊರಿಗೊಬ್ಬನೇ ಶ್ರೀಮಂತ ಉಳಿದವರೆಲ್ಲ ಸಂಬಳಕ್ಕೆ ದುಡಿಯುವವರು ಎಂಬಂಥ ವ್ಯವಸ್ಥೆ ಸಮಾಜಕ್ಕೆ ಹಿತಕರವಾದೀತೆ? ಎಂದು ಗಟ್ಟಿಯವರು ಪ್ರಶ್ನಿಸುತ್ತಾರೆ. ಅನೈತಿಕ ವಿಧಾನಗಳಿಂದ ಸಂಗ್ರಹಿಸಿದ ಹಣದಿಂದ ಪೂಜೆ ಪುರಸ್ಕಾರಗಳನ್ನು ಮಾಡುವುದರ ಮೂಲಕ, ಗುಡಿಗೋಪುರಗಳನ್ನು ನಿರ್ಮಿಸುವುದರ ಮೂಲಕ ದೇವರ ಕೃಪೆಯನ್ನು ಪಡೆಯಲು ಯತ್ನಿಸುವವರಿಗಿಂತ ಹೆಚ್ಚಿನ ವಿವೇಕಹೀನರು ಬೇರೆ ಇರಲಿಕ್ಕಿಲ್ಲ ! ಒಂದು ಸಮಾಜವು

ಭವ್ಯ ಎನಿಸುವುದು ಆರ್ಥಿಕವಾಗಿ, ಸಾಂಸ್ಕೃತಿಕವಾಗಿ ಭವ್ಯವಾದ ರೀತಿಯಲ್ಲಿ ಬದುಕುವುದರ ಮೂಲಕ; ಮದುವೆ ಮುಂಜಿ ಮುಂತಾದ ಆಚರಣೆಗಳಲ್ಲಿ ಭವ್ಯತೆಯನ್ನು ಪ್ರದರ್ಶಿಸುವ ಮೂಲಕ ಅಲ್ಲ. ಅದೃಷ್ಟವೆಂದರೆ ಅನಿವಾರ್ಯವೆಂಬಂತೆ ಈ ಭವ್ಯತೆಯ ಪ್ರದರ್ಶನವನ್ನೇ ಆರ್ಥಿಕ ಶ್ರೇಷ್ಠತೆ, ಸಾಂಸ್ಕೃತಿಕ ಶ್ರೇಷ್ಠತೆ ಎಂದು ನಂಬುವ ಸಮಾಜವು ಎಂದೂ ಉದ್ಧಾರವಾಗಲಾರದು ಎಂಬುದು ಕೆ.ಟಿ.ಗಟ್ಟಿಯವರು ಅಭಿಪ್ರಾಯವಾಗಿದೆ.

'ಬದಲಾಯಿಸಲಾಗದ ಭವಿಷ್ಯ' ಪ್ರಬಂಧದಲ್ಲಿ ಲೇಖಕರು ಜಾತಕವನ್ನೋ, ಹಸ್ತವನ್ನೋ ನೋಡಿ ವ್ಯಕ್ತಿಯ ಭವಿಷ್ಯ ಹೇಳುವುದನ್ನು ವಿರೋಧಿಸುತ್ತಾರೆ. ಈ ತಿಂಗಳಲ್ಲಿ ನಿನಗೆ ವಾಹನಾಪಘಾತ ಯೋಗವಿದೆ. ಅದನ್ನು ತಪ್ಪಿಸಿಕೊಳ್ಳಬೇಕಾದರೆ ನೀನು ಮನೆಯಿಂದ ಹೊರ ಹೋಗಬಾರದು ಎಂದು ಜಾತಕವನ್ನೋ, ಹಸ್ತವನ್ನೋ ನೋಡಿ ಒಬ್ಬ ಜ್ಯೋತಿಷ್ಯ ಹೇಳುವುದಾದರೆ, 'ನಿನಗೆ ವಾಹನಾಪಘಾತ ಯೋಗವಿದೆ' ಎಂಬ ಮಾತು "ಭವಿಷ್ಯ" ಹೇಗಾಗುತ್ತದೆ? ಹೀಗೆ ಹೇಳುವಾತ ಮತ್ತು ಅದನ್ನು ನಂಬುವಾತ ಇಬ್ಬರೂ ಮಂದಮತಿಗಳೇ ಅಲ್ಲವೇ? ಮೃತ್ಯುಂಜಯ ಹೋಮ ಮಾಡಿ ಮೃತ್ಯುವನ್ನು ತಪ್ಪಿಸಿಕೊಳ್ಳಬಹುದು ಎಂದಾದರೆ, ಅದು ಇಲ್ಲದ ಮೃತ್ಯು ಎಂದೇ ಅರ್ಥವಲ್ಲವೇ? ಎಂದು ಪ್ರಶ್ನಿಸುತ್ತಾರೆ. "ಯಾವುದೇ ಪೂಜೆ, ಹೋಮ, ಹವನ, ಯಜ್ಞ ಯಾಗಗಳಿಂದ ಈ ತನಕ ಏನನ್ನೂ ಸಾಧಿಸಲಾಗಿಲ್ಲ. ಅಪಘಾತದಲ್ಲಿ ಸಾಯುವವರು ಸತ್ತಿದ್ದಾರೆ. ನಷ್ಟ, ಅಪಘಾತ, ಮೃತ್ಯು ಇತ್ಯಾದಿ ಜಾತಕದಲ್ಲಿಯೂ ಇರುವುದಿಲ್ಲ. ಅವೆಲ್ಲ ಭವಿಷ್ಯಕಾರನ ನಾಲಗೆಯಲ್ಲಿ ಮಾತ್ರ ಇರುತ್ತದೆ. ಮಂದಮತಿಗಳಿಗೆ ಅದು ತಿಳಿಯುವುದಿಲ್ಲ. ನಮ್ಮ ಹಳ್ಳಿಯಲ್ಲಿರುವ ಅನಕ್ಷರಸ್ಥರಲ್ಲಿ ಅರೆವಾಸಿ ಮಂದಿ ಸರ್ವ ಕಷ್ಟ ನಷ್ಟಗಳಿಗೂ ಪ್ರೇತಾತ್ಮಗಳು ಕಾರಣ ಎಂದು ಭಾವಿಸುವ ಜೀವಂತ ಪ್ರೇತಗಳಂತಾಗಲು ಜ್ಯೋತಿಷರುಗಳು, ಪ್ರಶ್ನಾಕಾರರು, ಮಂತ್ರವಾದಿಗಳು ಕಾರಣ" ಎಂದು ಹೇಳುತ್ತಾರೆ. ಭವಿಷ್ಯದಲ್ಲಿ

**(ಅದೇ ಪುಟ 147)**

ಸಂಭವಿಸುವಂಥದ್ದನ್ನು ತಿಳಿದು ಅದನ್ನು ಬದಲಾಯಿಸಲು ಸಾಧ್ಯವಿದ್ದರೆ ಅದು ವಿಜ್ಞಾನವಾಗುತ್ತದೆ ಎನ್ನುತ್ತಾರೆ.

'ನಾಯಕಾದರ್ಶ' ಪ್ರಬಂಧದಲ್ಲಿ ಗಟ್ಟಿಯವರು ನಮ್ಮ ದೇಶದಲ್ಲಿ ರಾಜಕಾರಣಿಯ ಸ್ವಂತ ವಿಚಾರದ ಬಗ್ಗೆ ಜನರು ತಲೆ ಕೆಡಿಸಿಕೊಳ್ಳುವುದಿಲ್ಲ. ಆದರೆ ಒಬ್ಬ ಲೇಖಕ, ಒಬ್ಬ ಸಮಾಜ ಸುಧಾರಕ, ಒಬ್ಬ ಸ್ವಾಮೀಜಿ ಏನೋ ಅನೈತಿಕವಾದುದನ್ನು ಮಾಡಿದ ಎಂಬ ಸುದ್ದಿಗೆ ಜನ ಭಾರೀ ಆಘಾತಕ್ಕೊಳಗಾದವರಂತೆ ತತ್ತರಿಸುತ್ತಾರೆ ಎನ್ನುತ್ತಾರೆ. ಒಬ್ಬ ಸಾಂಸ್ಕೃತಿಕ ನಾಯಕ ಅಥವಾ ಒಬ್ಬ ಧಾರ್ಮಿಕ ನಾಯಕ ರಾಜಕಾರಣದ

ನಾಯಕನಾಗುವುದನ್ನು ಜನ ಅಪೇಕ್ಷಿಸುವುದಿಲ್ಲ! ನಮ್ಮ ನಿರೀಕ್ಷೆಯ ನಾಯಕಾದರ್ಶಕ್ಕೆ ಒಪ್ಪುವಂತಹ ಪ್ರಜಾಪ್ರತಿನಿಧಿಗಳು ನಮಗೆ ಬೇಕು ಎಂಬ ಬಯಕೆ ನಿರಂತರವಾಗಿದೆ.

'ಆರ್ಥಿಕ ಸ್ವಾತಂತ್ರ್ಯದ ಅರ್ಥ' ಎಂಬ ಪ್ರಬಂಧದಲ್ಲಿ ಕೆ.ಟಿ.ಗಟ್ಟಿಯವರು ಆರ್ಥಿಕ ಸ್ವಾತಂತ್ರ್ಯ ಎಂಬ ಶಬ್ದದ ನಿಜವಾದ ಅರ್ಥವು ಏನು ಎಂಬುದು ಪ್ರತಿಯೊಬ್ಬ ಪ್ರಜೆಗೂ ಮನದಟ್ಟಾಗುವಂತೆ ತಿಳಿಸುವ ಪ್ರಯತ್ನವನ್ನು ನಮ್ಮ ಜನಪ್ರತಿನಿಧಿಗಳಾಗಲಿ, ಆಡಳಿತವಾಗಲಿ ಮಾಡಿಲ್ಲ ಎಂದು ಹೇಳುತ್ತಾರೆ. ಲಕ್ಷಗಟ್ಟಲೆ, ಕೋಟಿಗಟ್ಟಲೆ ಸಂಪಾದಿಸಿ ಮಿತಿಯೆಂಬುದು ಇಲ್ಲದ ಆರ್ಥಿಕ ಸ್ವಾತಂತ್ರ್ಯವನ್ನು ಅನುಭವಿಸುವ ಹಂಬಲದಿಂದ ಸತತವಾಗಿ ಹಣ ಕೂಡಿ ಹಾಕುವ ವ್ಯಾಪಾರಿಗಳು, ಉದ್ಯಮಿಗಳು, ವೈದ್ಯರು, ತಂತ್ರಜ್ಞರು, ಅಧಿಕಾರಿಗಳು, ಬೆಳ್ಳಿತೆರೆಯ ಲೋಕದವರು ತಾವೆಲ್ಲ ಸಮಾಜದ ಅಂಗ, ತಮ್ಮನ್ನು ಈ ಸಮಾಜವೇ ಸೃಷ್ಟಿಸಿದೆ, ಈ ಸಮಾಜವೇ ಪೋಷಿಸುತ್ತಿದೆ, ತಾವು ಇರುವುದು ಸಮಾಜಕ್ಕಾಗಿ, ಸಮಾಜವಿಲ್ಲದೆ ತಾವಿಲ್ಲ ಎಂಬುದನ್ನು ಮರೆಯುತ್ತಾರೆ. ಉದ್ಯಮದಲ್ಲಿ ದ್ರವ್ಯರೂಪದ ಸಂಪತ್ತು ಸೃಷ್ಟಿಯಾಗುತ್ತದೆ. ಶ್ರಮಜೀವಿಗಳನ್ನು ಶೋಷಿಸದ ಉದ್ಯಮಿ ಕೂಡ ಕೋಟಿಗಟ್ಟಲೆ ಸಂಪಾದನೆ ಮಾಡುತ್ತಾನೆ. ಉದ್ಯಮದ ಗುಣವೇ ಅದು! ಅದು ಮತ್ತೆ ಮತ್ತೆ ಬಂಡವಾಳವಾಗಿ ರಾಷ್ಟ್ರದ ಆರ್ಥಿಕ ಪ್ರಗತಿಯನ್ನು ಸಾಧಿಸುತ್ತದೆ. ಅದು ಕಪ್ಪು ಹಣವಾಗಿ ಪರಿವರ್ತನೆಗೊಳ್ಳುವುದೆಂದಾದರೆ, ಅದಕ್ಕೆ ದೇಶದ ಆರ್ಥಿಕ ನೀತಿ ಮತ್ತು ಆಡಳಿತ ದೋಷಪೂರಿತವಾಗಿರುವುದೇ ಕಾರಣ ಎಂಬುದು ಕೆ.ಟಿ.ಗಟ್ಟಿಯವರ ಅಭಿಪ್ರಾಯ.

'ಏಕತೆಯಲ್ಲಿ ಅನೇಕತೆ' ಪ್ರಬಂಧದಲ್ಲಿ "ಧಾರ್ಮಿಕತೆ, ಧರ್ಮನಿಷ್ಠೆ, ಮನುಷ್ಯನ ವ್ಯಕ್ತಧರ್ಮ. ಅವನ ಜೀವನ ವಿಧಾನ, ಪ್ರಾರ್ಥನೆ, ದೇವರ ಮೇಲಿನ ನಂಬಿಕೆ ಒಂದು ಖಾಸಗಿ ಕ್ರಿಯೆ. ಮೌನದಲ್ಲಿ ನಡೆಯುವಂಥದ್ದು ಅದು ಆರ್ಭಟಿಸುವ ಅಥವಾ ಪ್ರದರ್ಶಿಸಿಕೊಳ್ಳುವ ಸಾರ್ವಜನಿಕ ಕ್ರೀಯೆಯಲ್ಲ. "ಸದ್ಧರ್ಮ"ದಲ್ಲಿ ಜೀವಿಸೋಣ ಎಂದು ಜೀವಿಸಿ ತೋರಿಸಬೇಕೇ ವಿನಾ "ನನ್ನ ಧರ್ಮವೇ ಸರಿಯಾದ ಧರ್ಮ" ಎಂಥು ಘೋಷಿಸುವುದು ಧರ್ಮಾನುಷ್ಠಾನವಲ್ಲ. ಇತರ ಮತದವರನ್ನು ತುಚ್ಛೀಕರಿಸುವಂಥ, "ನಿಮ್ಮ ಮತಕ್ಕಿಂತ ನಮ್ಮ ಮತ ಮೇಲು" ಎಂದು ಬಿಂಬೀಕರಿಸಿ ತೋರಿಸುವಂಥ ಆಚರಣೆಗಳು ದೇವರ ಮೇಲಿನ ನಂಬಿಕೆಯಾಗಲಿ, ಧಾರ್ಮಿಕತೆಯಾಗಲಿ ಅಲ್ಲ. ಅದು ಒಂದು ಬಗೆಯ ಸಾಮುದಾಯಿಕ ಡಂಭಾಚಾರ ಮತ್ತು ಸಮಾಜಿಕ ದೋಷ ಪ್ರದರ್ಶನ".

**(ಅದೇ ಪುಟ 167)**

"ಸಾಲು ಕಟ್ಟಿ ಧಾರ್ಮಿಕ ಮುದ್ರಾ ವಾಕ್ಯಗಳನ್ನು ಕೂಗುತ್ತಾ ರಸ್ತೆಯುದ್ದಕ್ಕೂ ಹೋಗುವುದರಲ್ಲಿ ಏನು ಧಾರ್ಮಿಕತೆಯಿದೆ? ತಮ್ಮ ಕೋಮಿನವರು ಈ ಊರಿನಲ್ಲಿ ಇಷ್ಟು ದೊಡ್ಡ ಸಂಖ್ಯೆಯಲ್ಲಿದ್ದಾರೆ ಎಂದು ತೋರಿಸುವ ಬೀದಿ ಪ್ರದರ್ಶನ ತುಂಬಾ ಅಸಹ್ಯ! ವಾಹನ ಸಂಚಾರಕ್ಕೆ ಅಡ್ಡಿ ಮಾಡಿ, ಪೋಲೀಸರನ್ನೆಲ್ಲ ಇದರ ರಕ್ಷಣೆಗಾಗಿ ಬೀದಿಗಿಳಿಸಿ ಸಾರ್ವಜನಿಕರನ್ನು ರೇಗಿಸಿ ಗಮನ ಸೆಳೆಯುವುದಕ್ಕಿಂತ ಹೆಚ್ಚಿನ ಸಾಧನೆ ಇದರಲ್ಲಿ ಕಾಣಿಸುವುದಿಲ್ಲ. ನಗರದ ರಸ್ತೆಗಳ ಕಾಲು ಹಾದಿಗಳಲ್ಲಿ ದೇವಾಲಯಗಳೇಳುವುದು ಆಕ್ಷೇಪಾರ್ಹ. ಲಕ್ಷಗಟ್ಟಲೆ ವೆಚ್ಚದ ದೈವಿಕ ಇಮಾತರುಗಳನ್ನು ಏರಿಸುವುದರ ಹಿಂದೆ ಸಾಮುದಾಯಿಕ ಶಕ್ತಿಯ ಪ್ರದರ್ಶನದ ಮನೋಧರ್ಮ ಕೆಲಸ ಮಾಡುತ್ತದೆ. ಜನ ದೇವರಿಗೆ ದೇವ ಮಂದಿರ ನಿರ್ಮಾಣಕ್ಕೆ, ಯಜ್ಞ ಯಾಗಾದಿಗಳಿಗೆ ಎಂದು ಮೀಸಲಿಟ್ಟ ಹಣವನ್ನು ಬೇರೆ ಯಾವುದಕ್ಕೂ ಉಪಯೋಗಿಸುವವರಲ್ಲ. ಆ ಹಣ ಬಳಸಿ ಒಂದು ಹಳೆಯ ಶಾಲೆಯನ್ನು ಹೊಸದು ಮಾಡಲಾರರು. ಹೊಸ ಶಾಲೆಯನ್ನು ಕಟ್ಟಲಾರರು. ಸಾಮುದಾಯಿಕ ಸಾಂಸ್ಕೃತಿಕ, ಶೈಕ್ಷಣಿಕ ಅಭಿವೃದ್ಧಿ ಮಾಡಲಾರರು. ದೇವರ ಕಡೆಯವರು ಬಂದು ಕೇಳದಿದ್ದರೆ, ಗಂಟುಕಟ್ಟಿ ದೇವರ ಹುಂಡಿಗೆ ಎಸೆದಾರು."

**(ಅದೇ ಪುಟ 171)**

ಒಂದೊಂದು ವಿಶ್ವವಿದ್ಯಾನಿಲಯಗಳಿಗೆ ಒಂದೊಂದು ಜಾತಿಯಲ್ಲಿ ಆಗಿಹೋದ ಶ್ರೇಷ್ಠ ಪುರುಷರ ಹೆಸರುಗಳನ್ನಿರಿಸುವ ಕೂಗು, ಬೀದಿಗಳಿಗೆ ಒಂದೊಂದು ಶಾಲೆಯ ಶ್ರೇಷ್ಠ ಪುರುಷನ ಮೂರ್ತಿಯನ್ನು ನಿಲ್ಲಿಸುವ ಕಾರ್ಯಕ್ರಮ ಶಿಕ್ಷಣ, ಸಾಹಿತ್ಯ, ಸಂಸ್ಕೃತಿ ಮೊದಲಾದ ಕ್ಷೇತ್ರಗಳಲ್ಲಿ ಜಾತೀಯ ಆಧಾರದಲ್ಲಿ, ಮೀಸಲಾತಿ ಆಧಾರದಲ್ಲಿ ಪ್ರತಿಭಾವಂತರನ್ನು ಗುರುತಿಸುವ ವ್ಯವಸ್ಥೆ, ಮಂತ್ರಿ ಮಹೋದಯರು ಮತೀಯ ಮುದ್ರೆಗಳನ್ನು ಹಚ್ಚಿಕೊಂಡು ಓಡಾಡುತ್ತಾ ಚುನಾವಣೆ ಬಂದೊಡನೆ ಜನರನ್ನು ಜಾತಿ, ಮತಗಳ ಆಧಾರದಲ್ಲಿ ವಿಭಾಗೀಯ ಓಟುಗಳನ್ನು ಲೆಖ್ಖ ಹಾಕಿ ನೋಡಿ ಗೆಲ್ಲುವ ಅಭ್ಯರ್ಥಿಯಾಗಲು ಪ್ರಯತ್ನಿಸುವುದು. ಏಕತೆಯಲ್ಲಿ ಅನೇಕತೆಯನ್ನು ಕಾಣುವ ಇಂಥ ನೂರಾರು ಪ್ರಯೋಗಗಳನ್ನು ಕೆ.ಟಿ.ಗಟ್ಟಿಯವರು ಈ ಪ್ರಬಂಧದಲ್ಲಿ ವಿರೋಧಿಸುತ್ತಾರೆ.

'ದುಶ್ಚಟ ಒಂದು ಬಗೆಯ ಆತ್ಮಹತ್ಯೆ' ಎಂದು ಪ್ರಬಂಧದ ಮೂಲಕ ತಿಳಿಸುವ ಲೇಖಕರು ಜನರನ್ನು ತಂಬಾಕು ಸೇವನೆ ದುಶ್ಚಟದಿಂದ ದೂರವಿರಿಸಲು ನಡೆಸುವ ಸರಕಾರೀ ಪ್ರಯತ್ನದಲ್ಲಿ ಪ್ರಮಾಣಿಕತೆ ಕಾಣಿಸುವುದಿಲ್ಲ ಎಂದು ಹೇಳುತ್ತಾರೆ. "ನೋ ಸ್ಮೋಕಿಂಗ್" ಎಂದು ಬಸ್ಸುಗಳಲ್ಲಿ ಬರೆಸುವ ಕಾಟಾಚಾರ ಏನು ಸಾಧಿಸಿದೆ? ಎಂದು ಲೇಖಕರು ಪ್ರಶ್ನಿಸುತ್ತಾರೆ.

'ಸ್ವಯಂ ಚಿಕಿತ್ಸೆ' ಮಾಡಿಕೊಳ್ಳಬೇಡಿ ಎಂದು ಪ್ರಬಂಧದ ಮೂಲಕ ಲೇಖಕ ಕೆ.ಟಿ.ಗಟ್ಟಿಯವರು ತಿಳಿಸುತ್ತಾರೆ. ಮುಖ್ಯವಾಗಿ ಆಲೋಪತಿ ಔಷಧಿ ಸೇವನೆಯ ವಿಚಾರದಲ್ಲಿ ಮಾತ್ರ ಸ್ವಯಂ ಚಿಕಿತ್ಸೆ ಅತ್ಯಂತ ಅಪಾಯಕಾರಿ ಎನ್ನುತ್ತಾರೆ. ಮಂದ ಉಸಿರಾಟ, ಆಸೀನತೆ ಮತ್ತು ನಿರ್ಲಕ್ಷ್ಯ ಮನೋಭಾವ – ಇವು ಮೂರು ಆಧುನಿಕ ಜೀವನ ಕ್ರಮಕ್ಕೆ ಅಂಟಿದ ಶಾಪಗಳು ಎನ್ನುತ್ತಾರೆ.

'ಇಂದಿನ ಮಕ್ಕಳ ಪರಿಸರ'ದ ಬಗ್ಗೆ ಪ್ರಬಂಧದಲ್ಲಿ ಲೇಖಕರು ಚರ್ಚಿಸುತ್ತಾರೆ. ಮಕ್ಕಳು ಬೌದ್ಧಿಕವಾಗಿ ವಿಕಾಸಗೊಳ್ಳಬೇಕಾದರೆ ಶಾಲೆ ಕಾಲೇಜು ಓದುವ ವಿದ್ಯಾರ್ಥಿಗಳಿರುವ ಮನೆಗಳಲ್ಲಿ ಪಠ್ಯೇತರ ಪುಸ್ತಕಗಳಿರಬೇಕು ಎಂದು ತಿಳಿಸುತ್ತಾರೆ. ಟಿ.ವಿ.ಯಿಂದಾಗಿ ತಾಯ್ತಂದೆಯರೊಡನೆ ಮತ್ತು ಒಡಹುಟ್ಟಿದವರೊಡನೆ ಸಂವಹನ ಸಂಪರ್ಕ ಕಡಿಮೆಯಾಗಿದೆ. ಪತ್ರಿಕೆ, ಪುಸ್ತಕಗಳನ್ನು ಗಂಭೀರವಾಗಿ ಓದುವ ಅಭ್ಯಾಸ ಹೊರಟುಹೋಗಿದೆ. ಇವತ್ತು ಎಷ್ಟೋ ಬೆಳೆಯುತ್ತಿರುವ ಮಕ್ಕಳಿಗೆ ಹದಿಹರೆಯದ ಬಾಲಕ ಬಾಲಕಿಯರಿಗೆ ಇರುವುದು ಟಿ.ವಿ. ಚಾನಲುಗಳು ಮತ್ತು ಫ್ರೆಂಡ್ಸ್ ಮಾತ್ರ. ಯಾವುದು ಸರಿ ಯಾವುದು ತಪ್ಪು ಎಂಬುದು ಫ್ರೆಂಡ್ಸ್ ನಿರ್ಧಾರವಾಗಿರುತ್ತದೆ ಎನ್ನುತ್ತಾರೆ.

'ಸ್ನಾತಕ್ಕೋತ್ತರ ಶಿಕ್ಷಣ' ಪ್ರಬಂಧದಲ್ಲಿ ನಮ್ಮ ದೇಶದ ಪ್ರತಿಭೆಗಳು ಅಮೇರಿಕಾದಂತಹ ರಾಷ್ಟ್ರಗಳಲ್ಲಿ ಇವೆ ಎಂದು ಹೇಳುತ್ತಾ, "ವಸ್ತುನಿಷ್ಠವಾಗಿ ನೋಡುವುದಾದರೆ, ನಮ್ಮ ಹೆಚ್ಚಿನ ವಿಶ್ವವಿದ್ಯಾನಿಲಯಗಳ ಪ್ರಯೋಗ ಶಾಲೆಗಳನ್ನು ಅಮೇರಿಕಾ ಯೋರೋಪ್ ದೇಶಗಳ ಉತ್ತಮವಾದ ಒಂದು ಹೈಸ್ಕೂಲಿನ ಪ್ರಯೋಗ ಶಾಲೆಗೆ ಹೋಲಿಸಲೂ ಸಾಧ್ಯವಿಲ್ಲ! ಇಂಥ ವಿಶ್ವವಿದ್ಯಾನಿಲಯಗಳಲ್ಲಿ ಎಂಥ ಸಂಶೋಧನೆ ನಡೆಯಲು ಸಾಧ್ಯ? ಎಷ್ಟೋ ವಿಶ್ವವಿದ್ಯಾನಿಲಯಗಳ ಸ್ನಾತಕೋತ್ತರ ಅಧ್ಯಯನ ವಿಭಾಗಗಳು ವಿದ್ಯಾರ್ಥಿಗಳ ವೇಷದಲ್ಲಿ ವರ್ಷ ಗಟ್ಟಲೆ ನೆಲೆಸುವ ಸಮಾಜ ಘಾತಕರ ಅಡ್ಡೆಗಳಾಗಿರುತ್ತವೆ. ಪರೀಕ್ಷೆಯಲ್ಲಿ ತಮಗೆ ಎಷ್ಟು ಅಂಕಗಳನ್ನು ಹಾಕಬೇಕೆಂದು ವಿದ್ಯಾರ್ಥಿಗಳೇ ಆಜ್ಞಾಪಿಸಿ ಆ ರೀತಿ ಅಂಕಗಳನ್ನು ಹಾಕಿಕೊಳ್ಳುತ್ತಾರೆ. ನಮ್ಮ ದೇಶಕ್ಕೆ ಎಲ್ಲಕ್ಕಿಂತ ಮುಖ್ಯವಾಗಿ ಉತ್ತಮ ಅಧ್ಯಾಪಕರು, ಉತ್ತಮ ವಿಜ್ಞಾನಿಗಳು, ಉತ್ತಮ ಆಡಳಿತಾಧಿಕಾರಿಗಳು, ಉತ್ತಮ ಶಿಕ್ಷಣ ತಜ್ಞರು, ಅರ್ಥಶಾಸ್ತ್ರಜ್ಞರು ಬೇಕು. ಆದರೆ ಅಂಥವರು ತಯಾರಾಗಬೇಕಾದಂಥ ಉಚ್ಚ ಶಿಕ್ಷಣ ವಿಭಾಗದಲ್ಲಿ ಅದಕ್ಕೆ ತಕ್ಕ ಪ್ರೋತ್ಸಾಹ ಇಲ್ಲ. ಸ್ಕಾಲರ್‌ಶಿಪ್‌ಗಳಿಲ್ಲ. ಇದ್ದರೂ ತಂಟೆ ತಕರಾರಿಲ್ಲದೆ ಕೊಡುವ ವ್ಯವಸ್ಥೆ ಇಲ್ಲ ಎಂದು ಲೇಖಕರು ಶಿಕ್ಷಣದ ಅವ್ಯವಸ್ಥೆಯನ್ನು ವಿರೋಧಿಸುತ್ತಾರೆ.

'ಎಂಥ ಶಿಕ್ಷಣ ಬೇಕು' ಪ್ರಬಂಧದಲ್ಲಿ "ಪ್ರಸ್ತುತ ದಿನಗಳಲ್ಲಿ ನಿಜವಾಗಿ ನಡೆಯುವ ಶಿಕ್ಷಣಕ್ಕಿಂತ ಹೆಚ್ಚು ಮಹತ್ವವಿರುವುದು ಅಂಕಪಟ್ಟಿಗೆ ಮತ್ತು ಪ್ರಮಾಣ ಪತ್ರಕ್ಕೆ ಎನ್ನುತ್ತಾರೆ. ಇವತ್ತು ವ್ಯಕ್ತಿಯನ್ನು ಪೂರ್ಣ ಶಿಕ್ಷಿತನನ್ನಾಗಿ, ಪೂರ್ಣಪ್ರಜ್ಞನನ್ನಾಗಿ, ಬದುಕಿಗೆ ಸ್ವಯಂಸಿದ್ಧನನ್ನಾಗಿ ಮಾಡುವ ಶಿಕ್ಷಣ ಕ್ರಮ ಎಲ್ಲಿದೆ ?. ಅತ್ಯುತ್ತಮ ಪ್ರಮಾಣ ಪತ್ರವನ್ನು ಗಳಿಸುವುದೇ ಇಂದಿನ ಶಿಕ್ಷಣದ ಗುರಿಯಾಗಿದೆ. ಇವತ್ತು ವೃತ್ತಿ ಶಿಕ್ಷಣ ಅಥವಾ ತಾಂತ್ರಿಕ ಶಿಕ್ಷಣ ಮಾತ್ರವೇ ನಿಜವಾದ ಶಿಕ್ಷಣ. ಮತ್ತುಳಿದುದೆಲ್ಲ ಶಿಕ್ಷಣವೇ ಅಲ್ಲ ಎಂದು ಭಾವಿಸಲಾಗುತ್ತದೆ. ವಾಣಿಜ್ಯ ಸಂಸ್ಥೆಯಂತಿರುವ ಶಿಕ್ಷಣ ಸಂಸ್ಥೆಯಲ್ಲಿ ಎಜುಕೇಶನ್ ಇರುವುದಿಲ್ಲ. ಕೇವಲ ಇನ್ಸ್ಟ್ರಕ್ಷನ್ ಇರುತ್ತದೆ. ಒಬ್ಬ ಉತ್ತಮ ಪ್ರಜೆಯಾಗಿ ಬದುಕುವುದು ಹೇಗೆ ಎಂಬುದನ್ನು ವಿದ್ಯಾರ್ಥಿ ಶಾಲೆಯಲ್ಲಿ ಕಂಡುಕೊಳ್ಳಬೇಕು. ಉದ್ಯೋಗಾವಕಾಶ ಇಲ್ಲದಂಥ ಸನ್ನಿವೇಶದಲ್ಲಿ ಸ್ವಾವಲಂಬಿಯಾಗಿ ಹೇಗೆ ಬದುಕಬಹುದು ಎಂಬ ಜ್ಞಾನ ಮತ್ತು ಮಾಹಿತಿಯನ್ನು ಅವನು ಇಲ್ಲಿ ಪಡೆಯಬೇಕು.

ವ್ಯಕ್ತಿಯ ಸರ್ವತೋಮುಖ ವಿಕಾಸವು ಬ್ರಿಟಿಷರು ರೂಪಿಸಿದ ಶಿಕ್ಷಣದ ಗುರಿಯಾಗಿರಲಿಲ್ಲ. ಆ ಶಿಕ್ಷಣದ ಗುರಿ ಬ್ರಿಟಿಷ್ ಆಡಳಿತಕ್ಕೆ ಕಾರಕೂನರನ್ನು ತಯಾರು ಮಾಡುವುದೇ ಆಗಿತ್ತು. ಔಪಚಾರಿಕ ಶಿಕ್ಷಣವು ವ್ಯಕ್ತಿಯನ್ನು ಒಂದು ವಿಷಯದಲ್ಲಿ ಪರಿಣತನನ್ನಾಗಿ ಮಾಡಬಹುದಲ್ಲದೆ ವ್ಯಕ್ತಿಯನ್ನು ಸತ್ಯವಂತನನ್ನಾಗಿ, ಪ್ರಾಮಾಣಿಕನನ್ನಾಗಿ, ಸುಸಂಸ್ಕೃತನನ್ನಾಗಿ ಮಾಡಲಾರದು. ಪಾಲಕರ ಮೇಲೆ ಈ ಹೊಣೆಗಾರಿಕೆ ಇರುತ್ತದೆ. ಪ್ರತಿಯೊಂದು ಅಧ್ಯಯನ ವಿಷಯದಲ್ಲಿಯೂ ತೊಂಬತ್ತಕ್ಕಿಂತ ಹೆಚ್ಚು ಅಂಕಗಳನ್ನು ಪಡೆಯುವುದು ಪ್ರತಿಭೆ ಎಂಬುದು ತಪ್ಪು ಕಲ್ಪನೆ. ರಾಶಿ ಸಂಬಳದ ಉದ್ಯೋಗವನ್ನು ಪಡೆಯುವುದೊಂದೇ ಪ್ರತಿಭಾವಂತನಿಗಿರುವ ಏಕ ಮಾತ್ರ ಮಾರ್ಗ ಅಲ್ಲ. "ಇವತ್ತು ಶಿಕ್ಷಕರ ಸ್ಥಿತಿ ಏನು? ತರಗತಿಯಲ್ಲಿ ಎಂಬತ್ತು ಮಕ್ಕಳಿರುವಂಥ ಸ್ಥಿತಿಯಲ್ಲಿ ಹೇಗೆ ಪಾಠ ಮಾಡಬೇಕು ಎಂದು ಹೇಳುವ ಹೊಸ ಶಿಕ್ಷಣ ವಿಧಾನ ಎಲ್ಲಿದೆ? ಪರೀಕ್ಷೆಯ ಹೊರೆ, ಪುಸ್ತಕದ ಹೊರೆಯನ್ನು ತಗ್ಗಿಸುವ ಶಿಕ್ಷಣ ನೀತಿ ಎಲ್ಲಿದೆ? ಶಿಕ್ಷಣದ ಬಗ್ಗೆ ಹೊಸ ಅರ್ಥಗಳನ್ನು, ಹೊಸ ಕಲ್ಪನೆಗಳನ್ನು, ಹೊಸ ವಿಧಾನಗಳನ್ನು ಕಟ್ಟಿ ಕೊಡುವ ಶಿಕ್ಷಕ ತರಬೇತಿ ಎಲ್ಲಿದೆ? ಎಷ್ಟು ಶಿಕ್ಷಕರು ಸ್ವಂತ ಆಸಕ್ತಿಯಿಂದ ಬದಲಾವಣೆಗಳನ್ನು ತರಲು ಶಕ್ತರಾಗಿದ್ದಾರೆ? ಹಾಗೆ ಮಾಡಲು ಅವರಿಗೆ ಎಷ್ಟು ಸ್ವಾತಂತ್ರ್ಯವಿದೆ". ಈ ಪ್ರಶ್ನೆಗಳು ಲೇಖಕರ ಮನಸ್ಸಿನಲ್ಲಿ ಮೂಡುತ್ತವೆ. **(ಅದೇ ಪುಟ 200)**

'ಬಿಡುವೇಳೆಯ ಶ್ರೀಮಂತಿಕೆ' ಎಂಬ ಪ್ರಬಂಧದಲ್ಲಿ ಗಟ್ಟಿಯವರು – ಒಬ್ಬ ಮನುಷ್ಯ ಎಂಥವನೆಂದು ತಿಳಿದುಕೊಳ್ಳಲು ಅವನು ತನ್ನ ಬಿಡುವಿನ ವೇಳೆಯನ್ನು ಹೇಗೆ

ಕಳೆಯುತ್ತಾನೆ ಎಂಬುದನ್ನು ಕಂಡುಕೊಂಡರೆ ಸಾಕು ಎಂದು ಹೇಳುತ್ತಾರೆ. ಬಿಡುವು ಒಬ್ಬ ಮನುಷ್ಯನನ್ನು ಸಾಂಸ್ಕೃತಿಕವಾಗಿ ಶ್ರೀಮಂತವಾಗಿಸಬಹುದು, ಸಾಂಸ್ಕೃತಿಕವಾಗಿ ದರಿದ್ರನಾಗಿಸಬಹುದು ಇವೆರಡಕ್ಕೂ ಒಂದಿಷ್ಟು ದಾರಿಗಳಿವೆ ಎನ್ನುತ್ತಾರೆ.

'ಸಾಮಾನ್ಯ ಪ್ರಜೆಯ ದನಿ' ಪ್ರಬಂಧವನ್ನು ಬರೆಯುತ್ತಾ ಗಟ್ಟಿಯವರು "ಒಬ್ಬ ಸಾಮಾನ್ಯ ಪ್ರಜೆ ಅವನಿಗೆ ಎಷ್ಟೇ ಸಾಮಾಜಿಕ ಕಾಳಜಿಯಿರಲಿ, ಅವನು ಎಂಥ ಪ್ರತಿಭಾವಂತನೇ ಇರಲಿ ಅವನ ಮಾತನ್ನು ನಮ್ಮ ಅಧಿಕಾರಿಗಳಾಗಲಿ, ಮಂತ್ರಿ ಮಹೋದಯರಾಗಲಿ ಆಲಿಸುವ ಪದ್ಧತಿ ನಮ್ಮ ದೇಶದಲ್ಲಿಲ್ಲ. ದೊಡ್ಡ ಅಧಿಕಾರಿಗಳಿಗೆ, ಮಂತ್ರಿಗಳಿಗೆ ಬರೆದ ಪತ್ರಗಳಿಗೆ ಎಂದೂ ಉತ್ತರ ಸಿಗುವುದಿಲ್ಲ. ಸಾಮಾನ್ಯ ಪ್ರಜೆಯನ್ನು ನಮ್ಮ ರಾಜಕಾರಣಿಗಳು ಮತ್ತು ನೌಕರಶಾಹಿ ಎಷ್ಟು ಅಸಡ್ಡೆಯಿಂದ ಮತ್ತು ತಾತ್ಸಾರದಿಂದ ನೋಡುತ್ತಾರೆಂದರೆ, ಬ್ರಿಟಿಷ್ ಆಡಳಿತ ಸಹ ಭಾರತೀಯ ಪೌರರನ್ನು ಈ ರೀತಿ ನೋಡುತ್ತಿರಲಿಲ್ಲ. ಒಬ್ಬ ಭಾರತದ ಪ್ರಜೆ ಅಮೆರಿಕಾದ ಅಧ್ಯಕ್ಷನಿಗೊ, ಇಂಗ್ಲೆಂಡಿನ ಪ್ರಧಾನ ಮಂತ್ರಿಗೊ, ಜರ್ಮನಿಯ ಛಾನ್ಸೆಲರಿಗೊ ಒಂದು ಪತ್ರ ಬರೆದರೆ ಉತ್ತರ ಬರುತ್ತದೆ. ನಮ್ಮ ಮುಖ್ಯಮಂತ್ರಿಗೊ, ಜಿಲ್ಲಾಧಿಕಾರಿಗೊ ಬರೆದರೆ ಉತ್ತರ ಬರುವುದಿಲ್ಲ. "ಸರಕಾರದ ಆಡಳಿತವನ್ನು ಎಚ್ಚರದ ಸ್ಥಿತಿಯಲ್ಲಿರಿಸಿಕೊಳ್ಳಬೇಕಾದ್ದು ಪ್ರಜಾತಂತ್ರಕ್ಕೆ ಅತಿ ಅಗತ್ಯ ಮತ್ತು ಇದು ಸಾಧ್ಯ ಪತ್ರಿಕೆಗಳ ಮೂಲಕ ಮಾತ್ರ. ಉತ್ತಮ ಆಡಳಿತ ದೊರೆಯಬೇಕು, ಬದುಕಿನ ಗುಣಮಟ್ಟ ಹೆಚ್ಚಬೇಕು ಎಂದಿದ್ದರೆ ಹೆಚ್ಚು ಹೆಚ್ಚು ಮಂದಿ ಪತ್ರಿಕೆಗಳ ಮೂಲಕ ಲೇಖನಿಯ ಶಕ್ತಿಯನ್ನು ತೋರಿಸಬೇಕು. ರಾಜಕಾರಣಿಗಳ ಭಾಷಣಗಳನ್ನು ಅವರು ಪ್ರತಿದಿನವೂ ಹೇಳಿದ್ದನ್ನೇ ಹೇಳಿದ್ದನ್ನು "ಹಾಗೆ ಹೇಳಿದರು ಹೀಗೆ ಹೇಳಿದರು" ಎಂಬ ಏನೂ ಅಲ್ಲದ್ದನ್ನು, ಪ್ರತಿದಿನ ಪ್ರಧಾನ ವಾರ್ತೆಯಾಗಿ ಭಾವಿಸುವ ಪತ್ರಿಕೆಗಳ ಕಂದಾಚಾರ ಕೂಡ ಬದಲಾಗಬೇಕಾದ ಅಗತ್ಯವಿದೆ. ರಾಜಕಾರಣಿ ನಿಂತಲ್ಲಿ, ಕುಳಿತಲ್ಲಿ, ಮಲಗಿದಲ್ಲಿ, ಆತನನ್ನು ನೊಣಗಳಂತೆ ಮುತ್ತಿಕೊಳ್ಳುವುದರ ಮೂಲಕ ಪತ್ರಿಕೆ ಏನನ್ನು ಸಂಪಾದಿಸಿ ಜನರಿಗೆ ನೀಡುತ್ತದೆ, ದೇಶದಲ್ಲಿ ಬೇರೆ ಮುಖ್ಯವಾದ ಸಂಗತಿಯೇ ಇಲ್ಲವೆ?"

**(ಅದೇ ಪುಟ 213)**

ಎಂದು ಗಟ್ಟಿಯವರು ಪ್ರಶ್ನಿಸುತ್ತಾರೆ. ಪತ್ರಿಕೆ ಸಾಮಾನ್ಯ ಪ್ರಜೆಯ ದನಿಯಾಗಬೇಕು ಎನ್ನುತ್ತಾರೆ.

'ರಾಜಕೀಯ ಶಿಕ್ಷಣ' ಪ್ರಬಂಧದಲ್ಲಿ ಲೇಖಕರು ಪ್ರಜಾಪ್ರಭುತ್ವ ಯಶಸ್ವಿಯಾಗಲು ಪ್ರಜೆಗಳು ಮತದಾನದ ಮಹತ್ವವನ್ನು ತಿಳಿದಿರಬೇಕಾದ ಅಗತ್ಯವಿದೆ ಎನ್ನುತ್ತಾರೆ. ನಮಗೆ 'ಬೆಟರ್ ಡೆಮಾಕ್ರಸಿ' ಸಿಗಬೇಕಾದರೆ ರಾಜಕೀಯ ಶಿಕ್ಷಣ, ರಾಜಕಾರಣ ಶಿಕ್ಷಣ ದೊರೆಯಬೇಕು. ಕಾಲೇಜು ವಿದ್ಯಾರ್ಥಿಗಳಿಗೆ "ರಾಜಕೀಯ ಕೊಳಕು, ರಾಜಕೀಯದಿಂದ

ದೂರವಿರಿ!" ಎಂದು ಬೋಧಿಸುವ ಈ ರಾಜಕಾರಣಿಗಳು ಕೊಳಕಿನಲ್ಲೇ ತಮಗೆ ಬೇಕಾದುದನ್ನು ಪುಷ್ಕಳವಾಗಿ ಬೆಳೆಸಿಕೊಳ್ಳುತ್ತಾರೆ. ತಮ್ಮ ನಂತರ ತಮ್ಮ ಹೆಂಡತಿ ಮಕ್ಕಳನ್ನು ಕೂಡ ರಾಜಕೀಯದ ಗದ್ದುಗೆಗೇರಿಸುತ್ತಾರೆ. ಕಾಲೇಜುಗಳಲ್ಲಿ ಯೂನಿವರ್ಸಿಟಿಗಳಲ್ಲಿ ಇರುವವರನ್ನೆಲ್ಲಾ "ರಾಜಕೀಯ ಕೊಳಕು" ಎಂದು ದೂರವಿಟ್ಟರೆ ದೇಶವನ್ನು ತಮಗಿಷ್ಟ ಕಂಡಂತೆ ಆಳಲು ಸಾಧ್ಯವಾಗುತ್ತದೆ!. ಪೋಲಿಗಳು, ಗೂಂಡಾಗಳು, ದರೋಡೆಕೋರರು, ನಮ್ಮ ದೇಶದಲ್ಲಿ ಎಂ.ಎಲ್.ಎ., ಎಂ.ಪಿ., ಮಂತ್ರಿ ಆಗುತ್ತಾರೆ. ಅರೆ ಮರುಳ ಅಶಿಕ್ಷಿತ ಭೂಮಾಲಿಕ ಮಂತ್ರಿಯಾಗುತ್ತಾನೆ. ಸಿನಿಮಾ ನಟರು ಪ್ರಜಾ ಪ್ರತಿನಿಧಿಗಳಾಗಿ ಸರಕಾರವನ್ನು ಮತ್ತು ಜನತೆಯನ್ನು ಮನ ಬಂದಂತೆ ಕುಣಿಸುತ್ತಾರೆ. ನೆಟ್ಟಗೆ ನಿಲ್ಲಲಾಗದ ಎಂಭತ್ತು ವರ್ಷದ ರೋಗಿಯೂ ಸರಕಾರ ನಡೆಸುವ ಸಾಮರ್ಥ್ಯವುಳ್ಳವನಾಗಿರುತ್ತಾನೆ!. ಇಂಥವರಿಗೆ ಓಟು ಹಾಕುವ ಜನರು ಪ್ರಮಾಣಿಕನಾದ, ಬುದ್ಧಿವಂತನಾದ, ಒಂದು ಅಧ್ಯಯನ ಅಥವಾ ಸೇವಾ ಕ್ಷೇತ್ರದಲ್ಲಿ ಬಹಳ ವರ್ಷಗಳ ಅನುಭವ – ಪರಿಶ್ರಮವುಳ್ಳ ವಿದ್ಯಾವಂತನಿಗೆ ಓಟು ಹಾಕುವುದಿಲ್ಲ" ಎಂದು ಭ್ರಷ್ಟ

**(ಅದೇ ಪುಟ 218)**

ರಾಜಕೀಯ ಪರಿಸ್ಥಿತಿಯನ್ನು ವಿರೋಧಿಸುತ್ತಾರೆ.

'ಸ್ವಾತಂತ್ರ್ಯದ ಇತಿಮಿತಿ' ಪ್ರಬಂಧದಲ್ಲಿ "ಜನ ಸ್ವಾತಂತ್ರ್ಯದ ನಿಯಮ ನಿಬಂಧನೆಗಳನ್ನು ಸರಿಯಾಗಿ ಪಾಲಿಸದಿರುವುದರ ಪರಿಣಾಮವಾಗಿ ಸ್ವಾತಂತ್ರ್ಯವನ್ನು ಅಸಭ್ಯರು ಮತ್ತು ದುಷ್ಟರು ಮಾತ್ರ ಅನುಭವಿಸುತ್ತಾರೆ. ಸಭ್ಯರಿಗೆ, ಸಜ್ಜನರಿಗೆ ಯಾವ ಸ್ವಾತಂತ್ರ್ಯವೂ ಇರಲಾರದು ಎಂದು ಗೋಳಾಡುವಂತಹ ಸ್ಥಿತಿ ಬಂದಿದೆ ಎನ್ನುತ್ತಾರೆ. ಸಮಾಜದ ಮೇಲೆ ಹೊರಗಿನಿಂದ ಹೇರಲ್ಪಟ್ಟ ಒಂದು ಕ್ರೂರ ವ್ಯವಸ್ಥೆಯಂತೆ ಬಹಳ ಸಂದರ್ಭಗಳಲ್ಲಿ ಹಿಂಸೆಯಲ್ಲಿ ವಿಜೃಂಭಿಸುವ ಪೋಲೀಸ್ ವ್ಯವಸ್ಥೆ ಸುಧಾರಣೆಗೊಳ್ಳದೆ ಯಾವುದು ಸ್ವಾತಂತ್ರ್ಯ ಯಾವುದು ಸ್ವಾತಂತ್ರ್ಯ ಅಲ್ಲ ಎಂಬುದು ಸಾಮಾನ್ಯ ನಾಗರಿಕರಿಗೆ ಸ್ಪಷ್ಟವಾಗದು. ಪ್ರಜಾಪ್ರಭುತ್ವದಲ್ಲಿ ವ್ಯಕ್ತಿಗೆ ದೊರೆಯುವಷ್ಟು ಸ್ವಾತಂತ್ರ್ಯ ಯಾವ ಸತ್ತೆಯಲ್ಲಿಯೂ ದೊರೆಯಲಾರದು. ರಾಜಾಧಿಪತ್ಯ, ಸ್ವಜನಾಧಿಪತ್ಯ, ಪುರೋಹಿತಾಧಿಪತ್ಯ, ಕಮ್ಯೂನಿಸಮ್ ಯಾವುದರಲ್ಲಿಯಾದರೂ ನನ್ನ ನಂಬಿಕೆ ಹೀಗೆ, ನಾನು ಬದುಕುವ ರೀತಿ ಹೀಗೆ ಎಂದು ವ್ಯಕ್ತಿ ಬದುಕಲು ಸಾಧ್ಯವೇ? ಪ್ರಜಾಪ್ರಭುತ್ವವಲ್ಲದೆ ವ್ಯಕ್ತಿಗೆ ಸ್ವಾಭಿಮಾನದಿಂದ ಬದುಕುವ ಹಕ್ಕನ್ನು ಅಭಿಪ್ರಾಯವನ್ನು ವ್ಯಕ್ತಪಡಿಸುವ ಹಕ್ಕನ್ನು ನೀಡುವ ಬೇರೊಂದು ಪ್ರಭುತ್ವ ಇದೆಯೇ?" ಎನ್ನುತ್ತಾರೆ.

**(ಅದೇ ಪುಟ 222)**

'ನ್ಯಾಯಕ್ಕಾಗಿ ಹೋರಾಟ' ಪ್ರಬಂಧದಲ್ಲಿ ಕೆ.ಟಿ.ಗಟ್ಟಿಯವರು ಎರಡು ಬಸ್ಸುಗಳು ಪರಸ್ಪರ ಡಿಕ್ಕಿ ಹೊಡೆದು ಒಬ್ಬ ವ್ಯಕ್ತಿ ಮೃತನಾದರೆ, ಆ ಬಸ್ಸುಗಳಿಗೆ, ಹತ್ತಿರದ ಮನೆಗಳಿಗೆ ಮತ್ತು ಕಟ್ಟಡಗಳಿಗೆ ಬೆಂಕಿಯಿಡುವುದರಲ್ಲಿ ಯಾವ ರೀತಿಯ "ನ್ಯಾಯಕ್ಕಾಗಿ ಹೋರಾಟ" ಇದೆ ಎಂದು ಪ್ರಶ್ನಿಸುತ್ತಾರೆ. "ಜನರ ಮತ ಪಡೆದು 'ಜನ ಪ್ರತಿನಿಧಿ'ಯಾಗಿ ತೆರಳಿದ ವ್ಯಕ್ತಿ ಮತ್ತೆ ಕಾಣಿಸಿಕೊಳ್ಳುವುದಿಲ್ಲ. ಕಾಣಿಸಿಕೊಂಡರೂ ಜನರಿಂದ ಸಂಪರ್ಕಿಸಲಾರದಷ್ಟು 'ಮೇಲೆ' ಅಥವಾ 'ದೂರ' ಇರುತ್ತಾನೆ. ಒಂದು ಪಂಚಾಯತಿ ಮಟ್ಟದಲ್ಲಿ ಯಾವ ಭಯವೂ ಇಲ್ಲದೆ ನಡೆಯುವ ಭ್ರಷ್ಟಾಚಾರವನ್ನು ನೋಡಿದರೆ ಸ್ಥಳೀಯ ಆಡಳಿತದಲ್ಲಿ ಕೂಡ ಜನಪ್ರತಿನಿಧಿಗಳು ಮತ್ತು ಆಡಳಿತ ವರ್ಗ ಒಂದು ದುಷ್ಟಕೂಟವಾಗಿ ಬ್ರಿಟಿಷ್ ಅಧಿಕಾರಿಗಳ ಮಾದರಿಯಲ್ಲಿ ತಮ್ಮ ಮತ್ತು ಜನರ ನಡುವೆ ಒಂದು ಅಂತರ ಅಥವಾ ಗೋಡೆ ಇರಿಸಿಕೊಂಡು ಆಡಳಿತ ನಡೆಸುತ್ತಾರೆ ಎಂದು ಅರ್ಥ. ಭ್ರಾಷ್ಟಾಚಾರ ನಡೆಯುತ್ತಿದೆ ಎಂದು ಎಲ್ಲರಿಗೂ ತಿಳಿದಿದ್ದರೂ ವೈಯಕ್ತಿಕ ನೆಲೆಯಲ್ಲಿ ವಿಚಾರಿಸಲು ಅಗುವುದಿಲ್ಲ. ಕೆಲವು ಪ್ರಾಣಗಳು ಹೋಗದೆ ಹತ್ತಾರು ವಾಹನಗಳು, ಮನೆಗಳು ಬೆಂಕಿಗಾಹುತಿಯಾಗದೆ ಸರಕಾರಕ್ಕೆ ತಮ್ಮ ದನಿ ಕೇಳಿಸುವುದಿಲ್ಲ ಎಂಬ ನಂಬಿಕೆ ಜನತೆಯಲ್ಲಿ ನೆಲೆ ನಿಂತರೆ ಒಂದು ಹೊಸ ಅನಾಗರಿಕ ಸಮಾಜ ಸೃಷ್ಟಿಯಾಗಬಹುದು!" ಎಂದು ಅಭಿಪ್ರಾಯ ಪಡುತ್ತಾರೆ. **(ಅದೇ ಪುಟ 226)**

'ಸಾಹಿತ್ಯ ಸಮ್ಮೇಳನದಿಂದ ಸಮ್ಮೇಳನಕ್ಕೆ' ಪ್ರಬಂಧದಲ್ಲಿ – ಸಾಹಿತ್ಯ ಸಮ್ಮೇಳನದ ಸ್ವರೂಪ ಮತ್ತು ವ್ಯಾಪ್ತಿ ಏನೇ ಆಗಿದ್ದರೂ ಅದರ ಕೇಂದ್ರ ಬಿಂದು ಪುಸ್ತಕವಾಗಿರಬೇಕು ಎಂದು ಕೆ.ಟಿ.ಗಟ್ಟಿಯವರು ತಿಳಿಸುತ್ತಾರೆ. ಲೇಖಕರು ಮತ್ತು ವಿದ್ವಾಂಸರ ಯಾಜಮಾನ್ಯದ ಗೋಷ್ಠಿಗಳಿಲ್ಲದೆ ಬೇರೆ ರೀತಿಯ ಗೋಷ್ಠಿಯ ಪ್ರಯೋಗ ಸಾಧ್ಯವಿಲ್ಲವೇ? ಓದುಗರೇ ವೇದಿಕೆಯೇರಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವ ಮುಕ್ತ ಗೋಷ್ಠಿಗಳನ್ನು ಏರ್ಪಡಿಸಲು ಏಕೆ ಸಾಧ್ಯವಿಲ್ಲ? ಒಂದು ಸಾಹಿತ್ಯ ಸಮ್ಮೇಳನದಲ್ಲಿ ಅಂಥ ಒಂದು ಗೋಷ್ಠಿಯನ್ನು ಇಟ್ಟುಕೊಳ್ಳಲು ಖಂಡಿತ ಅವಕಾಶ ಮಾಡಿಕೊಳ್ಳಬಹುದು. ಸಾಹಿತ್ಯ ಸಮ್ಮೇಳನಕ್ಕೆ ಹಿರಿಯ ಲೇಖಕನೊಬ್ಬನನ್ನು ಅಧ್ಯಕ್ಷನನ್ನಾಗಿ ಮಾಡಲಾಗುತ್ತದೆ. ಆದರೆ ಎಷ್ಟೋ ಬಾರಿ ಅವನ ಪುಸ್ತಕಗಳಾವುವೂ ಸಾಹಿತ್ಯ ಸಮ್ಮೇಳನದ ಮಳಿಗೆಗಳಲ್ಲಿ ಇರುವುದಿಲ್ಲ. ಇಂಥ ಸ್ಥಿತಿಯಲ್ಲಿ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಪಟ್ಟ ಸಾಹಿತ್ಯದ ಹೆಸರಿನಲ್ಲಿ ತೋರಿಸಲಾಗುವ ಪ್ರೀತಿ ಗೌರವ ಎಂದು ಭಾವಿಸುವುದು ಹೇಗೆ?"

**(ಅದೇ ಪುಟ 231)**

ಎಂದು ಪ್ರಶ್ನಿಸುತ್ತಾ ಸಮ್ಮೇಳನದ ಅಧ್ಯಕ್ಷನು ಮೆಚ್ಚಿದ ಪುನರ್ಮುದ್ರಣ ಕಾಣದ ಕೃತಿ ಯನ್ನು ಮುದ್ರಿಸಿ ಆತನ ಹಸ್ತಾಕ್ಷರ ಹಾಕಿಸಿ ಮಾರಾಟಕ್ಕಿರಿಸಬೇಕು ಎಂದು ಪುಸ್ತಕ ಪ್ರೀತಿಯನ್ನು ಲೇಖಕರು ವ್ಯಕ್ತಪಡಿಸುತ್ತಾರೆ.

'ಕನ್ನಡ ಪುಸ್ತಕದ ಭವಿಷ್ಯ' ಎಂಬ ಕೆ.ಟಿ.ಗಟ್ಟಿಯವರ ಪ್ರಬಂಧದಲ್ಲಿ ಮೂರ್ಖ ಪೆಟ್ಟಿಗೆಯ ಸಹವಾಸದಲ್ಲಿ ಬೆಳೆಯುತ್ತಿರುವ ತಲೆಮಾರು ಪುಸ್ತಕದ ಮಹತ್ವವನ್ನು ಅರಿತುಕೊಳ್ಳಲು ಅವಕಾಶವೇ ಇಲ್ಲದಂಥ ಪರಿಸ್ಥಿತಿ ಸೃಷ್ಟಿಯಾಗಿದೆ ಎಂದು ಹೇಳುತ್ತಾರೆ. "ನಮ್ಮವರೇ ಆದ ನಮ್ಮ ಇಂಗ್ಲಿಷ್ ಮಾಧ್ಯಮ ಶಾಲೆಯ ಮುಕ್ಕಾಲು ಪಾಲು ಶಿಕ್ಷಕರು ಕನ್ನಡ ಗೊತ್ತಿಲ್ಲದವರಂತೆ, ಇಂಗ್ಲೆಂಡಿನವರಂತೆ ನಡೆದುಕೊಳ್ಳುತ್ತಾರೆ. ಕನ್ನಡ ಪುಸ್ತಕಗಳೆಂದರೆ ಅಸಹ್ಯ ಪಡುವವರಿಗೇನೂ ಕೊರತೆಯಿಲ್ಲ. ಬಹುಶಃ ಇವತ್ತು ಕನ್ನಡದ ಅತೀ ದೊಡ್ಡ ಶತ್ರುವೆಂದರೆ ಈ ಶಿಕ್ಷಕರು ಮತ್ತು ಇವರಿಗೆ ನೌಕರಿ ನೀಡುವ ವಿದ್ಯಾಸಂಸ್ಥೆಗಳು. ಇವರ ದೃಷ್ಟಿಯಲ್ಲಿ ಕನ್ನಡ ಒಂದು ಕೊಳಕು ಭಾಷೆ. ಇದು ಭಾಷೆಯ ಪ್ರಶ್ನೆ ಮಾತ್ರವಲ್ಲ, ಸಂಸ್ಕೃತಿಯ ಪ್ರಶ್ನೆಯೂ ಆಗಿದೆ!" ಇಂದು ನವ್ಯವೊ, ಬಂಡಾಯವೊ,

**(ಅದೇ ಪುಟ 235)**

ದಲಿತವೊ ಎಂದೆಲ್ಲ ವಿಚಾರಿಸುವವರಲ್ಲಿ ಅಂಥ ವಿಚಾರಣೆಯ ಅಗತ್ಯದ ದಿನಗಳು ಕೂಡ ದಾಟಿ ಹೋಗಿವೆ. ಸಾಹಿತ್ಯ ಮುಖ್ಯ ವಾಹಿನಿಯಲ್ಲಿ ಉಳಿದುಕೊಂಡಿರುವ ಮೌಲಿಕ ಕೃತಿ ಯಾವುದು ಎಂಬುದು ಮುಖ್ಯ. ಲೇಖಕ ಯಾರು, ಆತನ ಜಾತಿ, ಮತ, ಲಿಂಗ ಯಾವುದು ಎಂಬುದು ಮುಖ್ಯವಾಗುವುದು ಸಾಹಿತ್ಯೇತರ ಪರಿಗಣನೆಗೆ ಹೊರತು ಸಾಹಿತ್ಯಕ್ಕಲ್ಲ. ಸೃಜನಶೀಲ, ಸೃಜನೇತರ, ಮಾನವಿಕ ಮತ್ತು ಅಂಥದೇ ಹೆಸರಿನ ವರ್ಗೀಕರಣ ಕೂಡ ಅರ್ಥಹೀನ ಎಂಬುದನ್ನು ಗಟ್ಟಿಯವರು ಪ್ರಬಂಧದಲ್ಲಿ ಪ್ರತಿಪಾದಿಸುತ್ತಾರೆ.

'ಸಂಸ್ಕೃತಿಯ ಭಾಷೆ' ಪ್ರಬಂಧದಲ್ಲಿ ಕೆ.ಟಿ.ಗಟ್ಟಿಯವರು ನಿಜವಾದ ಸದ್ಧರ್ಮಿ ಸುಸಂಸ್ಕೃತನೂ ಆಗಿರುತ್ತಾನೆ. ನಿಜವಾದ ಸುಸಂಸ್ಕೃತ ಸದ್ಧರ್ಮಿಯೂ ಆಗಿರುತ್ತಾನೆ ಎಂದು ನಿಸ್ಸಂದೇಹವಾಗಿ ಹೇಳಬಹುದು ಎನ್ನುತ್ತಾರೆ. ಸಾಂಸ್ಕೃತಿಕವಾಗಿ ವಿಕಾಸ ಹೊಂದದ ಎಷ್ಟೋ ಜನಸಮುದಾಯಗಳು ಜಗತ್ತಿನಲ್ಲಿವೆ. ಅಂಥ ದೇಶಗಳಲ್ಲಿ ಭಾಷೆ ಮತ್ತು ಸಾಹಿತ್ಯ ಶೈಶವಾವಸ್ಥೆಯಲ್ಲಿಯೇ ಇದೆ. ಒಂದು ಸಮುದಾಯಕ್ಕೆ ಅದರದೇ ಆದ ಭಾಷೆಯಿರಬಹುದು. ಕರ್ನಾಟಕದಲ್ಲೂ ಅಂಥ ಹಲವಾರು ಭಾಷೆಗಳಿವೆ. ಆದರೆ ಒಂದು ಸಮುದಾಯ ಕನ್ನಡ ಭಾಷೆಯನ್ನು ತಿರಸ್ಕರಿಸಿ ತನ್ನ ಮನೆಯ ಅಥವಾ ಧರ್ಮದ ಭಾಷೆಯನ್ನು ಮಾತ್ರ ಬಳಸಿದರೆ ಸಮುದಾಯಕ್ಕೆ ಆಗುವ ನಷ್ಟ ಅಪಾರವಾದುದು ಎಂದು ತಿಳಿಸುತ್ತಾರೆ.

'ಇಂಗ್ಲಿಷ್ ಮಾಧ್ಯಮದ ಮಿತಿ' ಪ್ರಬಂಧವು ಇಂಗ್ಲಿಷ್ ಮಾಧ್ಯಮದಲ್ಲಿ ಓದುವ ಮಕ್ಕಳು ಕನ್ನಡ ಮಾಧ್ಯಮದಲ್ಲಿ ಓದುವ ಮಕ್ಕಳಿಗಿಂತ ಬುದ್ಧಿವಂತರು ಎಂದು ಭಾವಿಸುವುದಾದರೆ ಇಂಗ್ಲೆಂಡಿನ ಎಲ್ಲಾ ಮಕ್ಕಳು ಬುದ್ಧಿವಂತರು ಎಂದು ತಿಳಿದುಕೊಳ್ಳಬೇಕಾಗುತ್ತದೆ ಎಂಬ

ತಾರ್ಕಿಕ ವಿಚಾರದಿಂದ ಆರಂಭಗೊಳ್ಳುತ್ತದೆ. ಶಾಲೆ ಅಥವಾ ಕಾಲೇಜಿನಿಂದ ಹೊರಬಂದ ಮೇಲೆ ಇಂಗ್ಲಿಷ್ ಉಪಯೋಗವಿಲ್ಲ ಎಂದು ಅರಿವು ಇರುವ ಪಾಲಕರು ಯಾಕೆ ಇಂಗ್ಲಿಷ್ ಮಾಧ್ಯಮದಲ್ಲಿ ಓದಿಸಬೇಕು? ಇಂಗ್ಲಿಷ್ ಮಾಧ್ಯಮದಲ್ಲಿ ಓದುವ ಮಕ್ಕಳಿಗಾಗುವ ನಷ್ಟದ ಪರಿವೆ ಎಷ್ಟು ತಾಯ್ತಂದೆಯರಿಗಿದೆ? ವೈದ್ಯಕೀಯ, ಇಂಜಿನಿಯರಿಂಗ್ ಕಲಿಯಲು ಹತ್ತು ಹನ್ನೆರಡು ವರ್ಷಗಳ ಇಂಗ್ಲಿಷ್ ಶಿಕ್ಷಣವೇನೂ ಬೇಕಾಗಿಲ್ಲ. ಅಥವಾ ಭಾಗಶಃ ಇಂಗ್ಲಿಷ್, ಭಾಗಶಃ ಕನ್ನಡದಲ್ಲಿ ಕಲಿಸಿದರೂ ಡಾಕ್ಟರಾಗಲು, ಇಂಜಿನಿಯರ್ ಆಗಲು ಅಡ್ಡಿಯೇನೂ ಅಗಲಿಕ್ಕಿಲ್ಲ. ಶೇಕಡಾ ತೊಂಬತ್ತು ತಾಂತ್ರಿಕ ಪದಗಳನ್ನು ಇಂಗ್ಲಿಷ್‌ನಲ್ಲೇ ಇರಿಸಿಕೊಂಡು ಕನ್ನಡ ವಾಕ್ಯ ಬಂಧದಲ್ಲಿ ಕಲಿಸಬಹುದು. ಯಾವುದೇ ಅಗತ್ಯಕ್ಕೆ ಯಾವುದೇ ಭಾಷೆಯನ್ನು ಕಲಿಯಬಹುದು. ಆದರೆ ಕನ್ನಡವನ್ನು ತೊರೆದು ಇನ್ನೊಂದು ಭಾಷೆಯನ್ನು ಯಾಕೆ ಕಲಿಯಬೇಕು? ಇಂಗ್ಲಿಷ್ ಮಾಧ್ಯಮದಲ್ಲಿ ಓದಿದವರು ಬ್ರಿಟಿಷ್ ರಾಣಿಯ ಪ್ರಜೆಗಳಾಗಿರುತ್ತಾರೆಯೇ? ಇಂಗ್ಲಿಷ್ ಮೀಡಿಯಂ ಕೂಪ ಮಂಡೂಕಗಳಿಗೆ ಇಂಗ್ಲಿಷ್ ಸಂಸ್ಕೃತಿ ಲಭ್ಯವಾಗುತ್ತದೆಯೇ? ಕರ್ನಾಟಕದ ಮಕ್ಕಳು ಕನ್ನಡ ಭಾಷೆ ಮತ್ತು ಈ ಮಣ್ಣಿನ ಸಂಸ್ಕೃತಿಯನ್ನು ತೊರೆದರೆ ಅವರು ಸಂಸ್ಕೃತಿ ಹೀನರಾಗುತ್ತಾರೆ. ಒಂದು ದಿನ ಸಾಂಸ್ಕೃತಿಕ ಅನಾಥ ಪ್ರಜ್ಞೆ ಅವರನ್ನು ಕಾಡುತ್ತದೆ. "ಕನ್ನಡವನ್ನು ಉದ್ಧರಿಸಲು ಹುಟ್ಟುಹಾಕಿದ ವಿಶೇಷ ಪ್ರಾಧಿಕಾರಗಳಿಂದ ಆದ ಉದ್ಧಾರ ಅಷ್ಟಕ್ಕೇ ಇದೆ. ಸರಕಾರಿ ಅಧಿಕಾರಿಗಳನ್ನು ಉಪಯೋಗಿಸಿಕೊಂಡು ಮಾಡುವ ಕನ್ನಡ ಜಾಗೃತಿ ಕಾರ್ಯಕ್ರಮಗಳಿಂದ ಯಾರ್ಯಾರದ್ದೋ, ಯಾವುದ್ಯಾವುದರದೋ ಉದ್ಧಾರ ಆಗಬಹುದು. ಕನ್ನಡದ ಉದ್ಧಾರ ಆಗುವುದಿಲ್ಲ. ಎಲ್ಲಾ ಶಾಲೆಗಳಿಗೆ ಅದರಲ್ಲೂ ಮುಖ್ಯವಾಗಿ ಇಂಗ್ಲಿಷ್ ಮಾಧ್ಯಮ ಶಾಲೆಗಳಿಗೆ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಬಾಗಿಲನ್ನು ತೆರೆಯುವುದರ ಮೂಲಕ ಕನ್ನಡ ಜಾಗೃತಿ ಮತ್ತು ಇಂಗ್ಲಿಷ್ ಭಾಷಾ ವ್ಯಾಮೋಹದಿಂದ ಮುಕ್ತಿ ಸಾಧ್ಯ. ಪ್ರತಿ ಶಾಲೆಯಲ್ಲಿಯೂ ನಿರಂತರವಾಗಿ ಯೋಜನಾ ಬದ್ಧವಾಗಿ ಸಾಹಿತ್ಯಿಕ, ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಜರುಗಿಸುವುದರ ಮೂಲಕ ಇದನ್ನು ಸಾಧಿಸಬಹುದು. ಕೇವಲ ಕನ್ನಡ ಅಂಕಿಗಳನ್ನು ಬಳಸುವುದರ ಮೂಲಕ ಬಸ್ಸು, ಅಂಗಡಿ, ಹೋಟೆಲುಗಳಲ್ಲಿ ಕನ್ನಡ ನಾಮ ಫಲಕವನ್ನು ಏರಿಸುವುದರ ಮೂಲಕ, ಆಫೀಸು ಕಾರ್ಯಾಲಯಗಳು ಬಿಲ್ಲು ನೋಟೀಸುಗಳನ್ನು ಕನ್ನಡದಲ್ಲಿ ಹೊರಡಿಸುವುದರ ಮೂಲಕ ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಯ ಉದ್ಧಾರ ಆಗುವುದಿಲ್ಲ. ಬೆಂಗಳೂರಿನಲ್ಲಿರುವ ಅನ್ಯಭಾಷಿಕರನ್ನು ದ್ವೇಷಿಸುವುದರ ಮೂಲಕವೂ ಕನ್ನಡತನಕ್ಕೆ ಬಲ ಬರುವುದಿಲ್ಲ. ಸಂಬಳ ಮತ್ತು ಭತ್ಯೆಯಲ್ಲಿ ಬದುಕಿನ ಸಕಲ ಶ್ರೇಯಸ್ಸನ್ನೂ ಕಂಡಿರುವ ಸರಕಾರಿ ಅಧಿಕಾರಿಗಳ ಅರೆ ಮನಸ್ಸಿನ ಫರ್ಮಾನುಗಳಿಂದಲೂ ಕನ್ನಡ ಡಿಂಡಿಮ ಮೊಳಗುವುದಿಲ್ಲ." ಎಂದು

**(ಅದೇ ಪುಟ 250)**

ಕೆ.ಟಿ.ಗಟ್ಟಿಯವರು ಇಂದಿನ ಕನ್ನಡ ವಿರೋಧೀ ಧೋರಣೆಯ ವಿರುದ್ಧ ಧ್ವನಿ ಎತ್ತುತ್ತಾರೆ.

'ಕನ್ನಡ ಶಬ್ದದ ಚೆಲುವು' ಪ್ರಬಂಧದಲ್ಲಿ ಕೆ.ಟಿ.ಗಟ್ಟಿಯವರು ಕನ್ನಡ ಭಾಷೆಯ ಸೊಗಸನ್ನು ತಿಳಿಸುತ್ತಾ ಕೆಲವು ಶಬ್ದಗಳನ್ನು ಉಚ್ಚರಿಸಲು ಕಷ್ಟವೆನಿಸುವುದು ಅವುಗಳನ್ನು ಬಳಸದಿರುವುದರಿಂದಲೇ ಹೊರತು, ನಾಲಗೆ ಸತ್ಯಾಗ್ರಹ ಹೂಡುತ್ತದೆ ಎಂದಲ್ಲ ಎನ್ನುತ್ತಾರೆ. "ಚಿಕ್ಕ ಮಕ್ಕಳಿಂದ ತೊಡಗಿ, ವಿದ್ಯಾವಂತರು ಅವಿದ್ಯಾವಂತರು ಎಂಬ ಭೇದವಿಲ್ಲದೆ, ಅಧ್ಯಾಪಕರು ವಿದ್ಯಾರ್ಥಿಗಳು ಎಲ್ಲರ ಬಾಯಿಯಲ್ಲಿಯೂ ದಿನಾ ಉರುಳುವ ಫಸ್ಟ್, ಲಾಸ್ಟ್, ಸ್ಟಾರ್ಟ್, ಟೈಮ್, ಲೇಟ್, ಫೈಲ್, ಕಟ್, ಕಾಸ್ಲಿ, ಚೀಪ್, ಲೂಸ್, ಟೈಟ್, ಕ್ಲೀನ್, ಓಪನ್, ಕ್ಲೋಸ್, ಸೇಲ್, ಡಿಸೈಡ್, ಬಿಹೇವ್, ಕನ್‌ಸ್ಟ್ರಕ್ಟ್, ಸೋ, ಬಟ್ ಮುಂತಾದ ಶಬ್ದಗಳನ್ನು ಕನ್ನಡ ಭಾಷೆಯಿಂದ ಹೊರಹಾಕಿದರೆ ಕನ್ನಡ ಭಾಷೆಯ ಸೌಂದರ್ಯ ಹೆಚ್ಚುವುದರಲ್ಲಿ ಅನುಮಾನವಿಲ್ಲ. ಇವುಗಳಿಗೆಲ್ಲ ಸಂವಾದಿಯಾಗಿ ಸುಂದರವಾದ ಕನ್ನಡ ಪದಗಳು ಇವೆಯಲ್ಲ? ಯಾಕೆ ಪಾಯಸಕ್ಕೆ ಒಣಮೀನು ಹಾಕುವ ಕೆಲಸ? 'ಲಾಸ್ಟಿಗೆ ಅವನು ಬಂದ' ಎಂದು ಯಾಕೆ ಹೇಳಬೇಕು? ಕೊನೆಗೆ ಎಂಬ ಪದ ಇಲ್ಲವೆ? ಮನೆಯನ್ನು 'ಕನ್‌ಸ್ಟ್ರಕ್ಟ್' ಮಾಡಲು 'ಡಿಸೈಡ್' ಮಾಡುವುದು ಯಾಕೆ? ಮನೆಕಟ್ಟಲು ತೀರ್ಮಾನಿಸಿದರೆ ಸಾಲದೆ? 'ಬಿಹೇವ್' ಮಾಡುವುದು ಯಾಕೆ? ವರ್ತಿಸಿದರೆ ಅಥವಾ ನಡ್ಕೊಂಡ್ರೆ ಸಾಲದೆ?" ಎಂದು ಕನ್ನಡ ಭಾಷೆಯ ನಿಜವಾದ

**(ಅದೇ ಪುಟ 250)**

ಸೌಂದರ್ಯವನ್ನು ತಿಳಿಸುತ್ತಾರೆ. "ಸಂಬಂಧ ಸೂಚಕ ಪದಗಳನ್ನು ಮಾತೃಭಾಷೆಯಲ್ಲಿ ಹೇಳಲು ಯಾಕೆ ಅಭಿವ್ಯಕ್ತಿ ವೇದನೆಯುಂಟಾಗುತ್ತದೆ? ಯಾಕೆ ಲಿಂಗಭೇದ ಮುಚ್ಚುವ ಪ್ರಯೋಗ? ಬಹುಶಃ ಇದರ ಹಿಂದೆ ಲೈಂಗಿಕ ಕೀಳರಿಮೆ ಇದೆ. ಆದ್ದರಿಂದಲೇ ನನ್ನ ಹೆಂಡತಿ, ನನ್ನ ಗಂಡ ಎನ್ನಲು ಕಷ್ಟವಾಗುತ್ತದೆ. ನನ್ನ ಅಮ್ಮ, ನನ್ನ ಅಪ್ಪ ಎನ್ನುವುದರಲ್ಲಿ ಎಷ್ಟು ಇಂಪು ಎಷ್ಟು ಖುಷಿ ಇದೆ ಎಂದು ಕಂಡುಕೊಳ್ಳಲು ಒಂದೇ ದಿನ ಸಾಕು ಎನ್ನುತ್ತಾರೆ. ಕನ್ನಡ ಇಂಗ್ಲಿಷ್‌ನಷ್ಟೇ ಜೀವಂತವಾದ ಭಾಷೆ. ಇಂಗ್ಲಿಷ್ ಪ್ರತಿದಿನ ಬೆಳೆಯುತ್ತದೆ. ಒಂದು ವರ್ಷದಲ್ಲಿ ಸಾವಿರಾರು ಹೊಸ ಶಬ್ದಗಳು ಸೇರ್ಪಡೆಯಾಗುತ್ತವೆ. ಕನ್ನಡವು ಕೂಡ ಬೆಳೆಯಬೇಕಿದೆ. ಮುಖ್ಯವಾಗಿ ಬೀದರಿನಿಂದ ಬಂಡಿಪುರದವರೆಗೆ, ಮಂಗಳೂರಿನಿಂದ ಬಂಡಿಪುರದವರೆಗೆ, ಮಂಗಳೂರಿನಿಂದ ಬಳ್ಳಾರಿಯವರೆಗೆ ಎಲ್ಲರಿಗೂ ಆಗುವ ಕನ್ನಡವಾಗಿ ಹಿಗ್ಗಬೇಕಿದೆ. ಹೀಗೆನ್ನುವುದು ಸರಿ ಅಂತ ಇನ್ನೊಂದು ಪ್ರದೇಶದವರು ಹಟ ಹಿಡಿದರೆ ಕನ್ನಡ ಹಿಗ್ಗಲಿಕ್ಕಿಲ್ಲ. ಹುಗ್ಗಿ ಅಂದರೂ ಸರಿ, ಪಾಯಸ ಅಂದರೂ ಸರಿ, ರೊಕ್ಕ ಅಂದರೂ ಸರಿ, ಹಣ ಅಂದರೂ ಸರಿ, ಒಜ್ಜೆ ಅಂದರೂ ಸರಿ, ಭಾರ ಅಂದರೂ ಸರಿ ಅಂತ ಎಲ್ಲರೂ ಒಪ್ಪಿಕೊಳ್ಳಬೇಕು. ಮಾತಿನಲ್ಲಿಯೂ

ಬರಹದಲ್ಲಿಯೂ ಅದು ಕಾಣಿಸಿಕೊಳ್ಳಬೇಕು. ಹಾಗಾದರೆ ಎಲ್ಲರಿಗೂ ಇಷ್ಟವಾಗುವ ಎಲ್ಲರೂ ಮೆಚ್ಚುವ ಕನ್ನಡವಾಗುತ್ತದೆ."

**(ಅದೇ ಪುಟ 256)**

'ನಮ್ಮ ಬದುಕಿನ ಪುಟಗಳು' ವೈಚಾರಿಕ ಲೇಖನದಲ್ಲಿ ಇರುವ ಐವತ್ತು ಪ್ರಬಂಧಗಳಲ್ಲಿಯೂ ಲೇಖಕರು ಸಮಾಜದಲ್ಲಿನ ಒಂದು ವ್ಯವಸ್ಥೆಯನ್ನು ವಿವರಿಸುತ್ತಾ ಅದನ್ನು ಪ್ರಶ್ನಿಸುತ್ತಾ ಹೋಗುತ್ತಾರೆ. ಆ ಪ್ರಶ್ನೆಗಳಲ್ಲಿ ಅಂತಹ ವ್ಯವಸ್ಥೆಯ ಕುರಿತಾದ ಪ್ರತಿರೋಧದ ಬೇರೆ ಬೇರೆ ನೆಲೆಗಳಿರುವುದನ್ನು ಕಂಡುಕೊಳ್ಳಬಹುದಾಗಿದೆ. ಲೇಖಕರು ಮುನ್ನುಡಿಯಲ್ಲಿ ಈ ಸಂಕಲನದ ಬಗ್ಗೆ ಹೇಳುವುದು ಹೀಗೆ "ನನ್ನ ಮೂರನೆಯ ಧ್ವನಿ ಮತ್ತು 'ನಿನ್ನೆ ನಾಳೆಯ ನಡುವೆ' ಲೇಖನ ಸಂಕಲನಗಳಿಗಿಂತ ಇದು ತುಸು ಭಿನ್ನವಾದರೂ ಇದರಲ್ಲಿ ಕೂಡಾ 'ವಿಚಾರ'ವೇ ಮುಖ್ಯ ವಸ್ತುವಾಗಿದ್ದು ನಾವೆಲ್ಲಾ ಸೇರಿ ಈ ವಿಚಾರಗಳ ಕುರಿತು ಇನ್ನಷ್ಟು ವಿಚಾರ ಮಾಡೋಣ ಎಂಬ ಆಶಯವೇ ಪ್ರಧಾನವಾಗಿದೆ. ಕೇವಲ ಚಿಂತನೆ ಸಾಲದು; ಸಂವಹನ ನಡೆಯಬೇಕು; ಸಂಹವನ ಕ್ರಿಯೆಯಾಗಬೇಕು. ಈ ದೆಸೆಯಲ್ಲಿ, ಯಾರೋ ಮಾಡಬೇಕಾದ ಕೆಲಸವನ್ನು ಲೇಖಕ ಮಾಡುತ್ತಾನೆ, ಅಷ್ಟೆ. ಸಮಾಜ ಜೀವಿಯಾಗಿ ಲೇಖಕನ ನೆಲೆಯಲ್ಲಿ ಇದು ಅವನು ಮಾಡಬೇಕಾದ ಒಂದು ಜವಾಬ್ದಾರಿಯುತವಾದ ಕೆಲಸ ಎಂಬುದು ನನ್ನ ನಂಬಿಕೆ. ಈ ನಂಬಿಕೆಯೇ ಈ ಸಂಕಲನದ ಹಿಂದಿರುವ ಪ್ರೇರಣೆ. ಇವು ನಮ್ಮ ಬದುಕಿನ ಕೆಲವು ಪುಟಗಳು ಮಾತ್ರ. ಬದುಕಿನ ಪುಟಗಳು ಕೊನೆಯಾಗುವುದಿಲ್ಲ. ಹಾಗೆಯೇ 'ವಿಚಾರ'ವನ್ನು ಕೂಡ ಮಾಡಿ ಮುಗಿಸಲು ಸಾಧ್ಯವಿಲ್ಲ. ಮುಗಿಸುವ ಅಗತ್ಯವೂ ಇಲ್ಲ. ನಾವು ವಿಚಾರ ಮಾಡುತ್ತಾ ಬದುಕುತ್ತಿರುತ್ತೇವೆ ಮತ್ತು ವಿಚಾರಮಾಡುತ್ತಿರುವುದರಿಂದಲೇ ಮನುಷ್ಯರಾಗಿ ಬದುಕಿರುತ್ತೇವೆ." ಎಂದು ತಿಳಿಸುತ್ತಾ ತಮ್ಮ ಪ್ರಬಂಧವನ್ನು ವೈಚಾರಿಕವಾಗಿ ಬರೆಯುತ್ತಾರೆ.

****************

# ಅಧ್ಯಾಯ–೮
# ಸಮಾರೋಪ

ಕೆ.ಟಿ. ಗಟ್ಟಿಯವರು ದಕ್ಷಿಣ ಕನ್ನಡದ ಮಹತ್ವದ ಸಾಹಿತಿಗಳಲ್ಲಿ ಒಬ್ಬರು. ಇವರು ಸೃಜನಶೀಲ ಮತ್ತು ಸೃಜನೇತರ ವಲಯದಲ್ಲಿ ಸಾಕಷ್ಟು ಕೃತಿಗಳನ್ನು ರಚಿಸಿದ್ದಾರೆ. ಯಾವುದೇ ಪಂಥ–ಪಂಗಡದೊಂದಿಗೆ ಗುರುತಿಸಿಕೊಳ್ಳದೆ ತನ್ನಷ್ಟಕ್ಕೆ ತಾನೇ ಸಾಹಿತ್ಯದ ಕೆಲಸವನ್ನು ಮಾಡಿಕೊಂಡು ಬಂದವರು. ತುಂಬಾ ವಾಸ್ತವತಾವಾದಿಯೂ ನಿಷ್ಠುರ, ನೇರ ನಡೆ ನುಡಿಯ ಗಟ್ಟಿಯವರು ಪ್ರಶಸ್ತಿ ಪುರಸ್ಕಾರಗಳಿಗಾಗಿ ಹೆಣಗಾಡಲಿಲ್ಲ. ಇವರು ಒಂಬತ್ತು ವರ್ಷಗಳ ಕಾಲ ಇಥಿಯೋಪಿಯಾದಲ್ಲಿ ಇಂಗ್ಲಿಷ್ ಅಧ್ಯಾಪಕರಾಗಿಯೂ ಹದಿನೈದು ವರ್ಷಗಳ ಕಾಲ ಭಾರತದ ವಿವಿಧೆಡೆ ಅಧ್ಯಾಪಕರಾಗಿ ಕೆಲಸ ಮಾಡಿದವರು. ಅಧ್ಯಾಪಕ ವೃತ್ತಿಗೆ ರಾಜೀನಾಮೆಯನ್ನು ಸಲ್ಲಿಸಿ ತನ್ನ ಜೀವನವನ್ನು ಪೂರ್ಣವಾಗಿ ಬರವಣಿಗೆಗಾಗಿ ಮೀಸಲಾಗಿಟ್ಟವರು. ಸೃಜನಶೀಲ ಮತ್ತು ವೈಚಾರಿಕ ಎಂಬ ವರ್ಗೀಕರಣ ಅನಗತ್ಯ ಎನ್ನುವ ಗಟ್ಟಿಯವರು ವೈಚಾರಿಕ ಸೃಜನಶೀಲತೆಯ ಪ್ರತಿಸ್ಪರ್ಧಿಯಲ್ಲ. ವಿಚಾರಗಳೆಲ್ಲವೂ ಮನುಷ್ಯನ ಮನಸ್ಸಿನ ಸೃಷ್ಟಿಯೇ ಎನ್ನುತ್ತಾರೆ.

ಸ್ವಾತಂತ್ರ್ಯಾನಂತರದ ಕಾಲಘಟ್ಟದಲ್ಲಿ ಭಾರತೀಯರ ಬದುಕಿನಲ್ಲಿ ಸಾಕಷ್ಟು ಬದಲಾವಣೆಗಳು ಉಂಟಾದವು. ಇಲ್ಲಿನ ಆರ್ಥಿಕ ಬದುಕು, ಶೈಕ್ಷಣಿಕ ಅವಕಾಶಗಳು, ಪ್ರೀತಿ–ಪ್ರೇಮ, ಗಂಡು ಹೆಣ್ಣಿನ ಸಂಬಂಧಗಳು, ಕೆಳವರ್ಗದ, ಮಧ್ಯಮ ವರ್ಗದ ಬದುಕು, ಸಮಸ್ಯೆ, ಕನಸು ಅಭಿಲಾಶೆಗಳು ಇವರ ಕೃತಿಗಳಲ್ಲಿ ಜೀವ ಪಡೆದುಕೊಂಡವು. ತಮ್ಮ ವಿದೇಶ ವಾಸದ ಅನುಭವದ ಹರವು, ಬಾಲ್ಯದಲ್ಲಿ ಅನುಭವಿಸಿದ ಬಡತನ, ಊಳಿಗಮಾನ್ಯ ಪದ್ಧತಿಗೆ ಸರಿಸಮನಾದ ಧಣಿ–ಒಕ್ಕಲು ಸಂಬಂಧ, ಭೂತದ ಕೋಲ, ಯಕ್ಷಗಾನ, ಮುಂತಾದ ಜಾನಪದ ಪರಿಸರ ಗಟ್ಟಿಯವರ ಬರಹಗಳು ಗಟ್ಟಿಗೊಳ್ಳಲು ಕಾರಣವಾಯಿತು. ಜಟಿಲವಾದ ಆಧುನಿಕ ವ್ಯಕ್ತಿಯ ಮನಸ್ಸು ಮತ್ತು ಅವನಲ್ಲಿ ಕಂಡುಬರುವ ವಿಕೃತಿ, ಯೌವನದ ರೋಮಾಂಚಕತೆ, ಪ್ರೀತಿ–ಪ್ರೇಮ, ಲೈಂಗಿಕ ಸಂಬಂಧಗಳನ್ನು ಹಿಡಿದಿಡುವ ಪ್ರಯತ್ನ ಇವರ ಸಾಹಿತ್ಯ ಕೃಷಿಯಲ್ಲಿ ನಡೆದಿದೆ. ಗ್ರಾಮೀಣ ಹಾಗೂ ನಗರ ಜೀವನದ ಸಮಸ್ಯೆಗಳು, ಅಸಹಾಯಕತೆ, ನೋವು, ಬಂಡಾಯ ಮನೋಭಾವದ ವ್ಯಕ್ತಿಗಳು ಹಳೆಯ ವ್ಯವಸ್ಥೆಯ ವಿರುದ್ಧ ನೇರವಾಗಿ ಪ್ರತಿಭಟಿಸುವುದು ಮೊದಲಾದ ವಿಭಿನ್ನ ರೀತಿಯ ವಸ್ತುಗಳು ಇವರ ಕೃತಿಯೊಳಗೆ ಸ್ಥಾನವನ್ನು ಪಡೆದುಕೊಂಡಿವೆ. ತಾನು ಆಯ್ಕೆ ಮಾಡಿಕೊಂಡ ಕಥಾವಸ್ತುವನ್ನು ಯಾವ

ರೀತಿಯಲ್ಲಿ ನಿರೂಪಿಸಬೇಕೆಂಬುದರ ಬಗ್ಗೆ ಹಲವಾರು ಬಾರಿ ಚಿಂತಿಸಿ, ಆಲೋಚಿಸಿ ಬರೆಯುತ್ತಾರೆ. ಹಾಗಾಗಿ ಅವರ ಕೃತಿಗಳು ಉತ್ತಮ ಗುಣಮಟ್ಟದವುಗಳಾಗಿವೆ. ಇವರ ಕೃತಿಗಳಲ್ಲಿ ಎಂತಹುದೇ ಸನ್ನಿವೇಶ ಬಂದರೂ ಅದರ ಹಿನ್ನೆಲೆಯಲ್ಲೊಂದು ಒಳ್ಳೆಯ ಸಂದೇಶ, ಗುರಿ ಇರುತ್ತದೆ.

ಕನ್ನಡ ವಿಮರ್ಶಕಲೋಕ ಗಟ್ಟಿಯವರನ್ನು ಮುಖ್ಯ ಬರಹಗಾರರೆಂದು ಪರಿಗಣಿಸಿ ಅವರ ಕೃತಿಗಳನ್ನು ಚರ್ಚಿಸಿದ್ದೇ ಕಡಿಮೆಯೆನ್ನಬಹುದು. ಅವರು ಜನಪ್ರಿಯ ಕಾದಂಬರಿಕಾರರು, ಅವರ ಕೃತಿಗಳು ಜನಪ್ರಿಯ ಕೃತಿಗಳು ಎಂದು ವಿಮರ್ಶಕರು ಪರಿಗಣಿಸಿದ್ದೇ ಇದಕ್ಕೆ ಕಾರಣವಿರಬಹುದು. ಇವರ ಕೃತಿಗಳು ಪತ್ರಿಕೆಗಳಲ್ಲಿ ಧಾರಾವಾಹಿಗಳಾಗಿ ಬಂದುದರಿಂದ ಅಂತಹ ಕೃತಿಗಳನ್ನು ವಿಮರ್ಶಕರು ಪರಿಗಣಿಸಲಿಲ್ಲ. ಇಂತಹ ಕೃತಿಗಳು ಕಡಿಮೆ ಗುಣಮಟ್ಟದವುಗಳು ಎಂಬ ಪೂರ್ವಾಗ್ರಹವೂ ಇದಕ್ಕೆ ಕಾರಣ ಎನ್ನಬಹುದು. ಕನ್ನಡ ವಿಮರ್ಶೆಯಲ್ಲಿ "ಓದುಗರ ಪ್ರತಿಕ್ರಿಯಾ ಸಿದ್ಧಾಂತ" ಇಲ್ಲಿಯವರೆಗೆ ಕಾಣಿಸಿಕೊಳ್ಳದ ಕಾರಣದಿಂದಾಗಿಯೂ ಓದುಗರ ಮೆಚ್ಚುಗೆಯನ್ನು ಗಳಿಸುವಲ್ಲಿ ಯಶಸ್ವಿಯಾದ ಕೆ.ಟಿ.ಗಟ್ಟಿಯವರ ಕೃತಿಗಳು ಹೆಚ್ಚಿನ ಅಧ್ಯಯನಕ್ಕೆ ಒಳಗಾಗಲಿಲ್ಲ. ಭಾಷೆಯ ಸಾವಯವ ಸಂಬಂಧದಿಂದ ಮೈದಾಳುವ ಕೃತಿಯ ಆಕೃತಿಯ ಬಗ್ಗೆ ಮಾತನಾಡುತ್ತಾ ಕೃತಿಯ ಗಂಭೀರತೆಯನ್ನು ನಿರ್ಧರಿಸುವ ನವ್ಯದ ತಾಂತ್ರಿಕ ಗುಣ ಇಲ್ಲದಿರುವ ಗಟ್ಟಿಯವರ ಬರವಣಿಗೆಗಳನ್ನು ನವ್ಯ ವಿಮರ್ಶಕರು ಗಂಭೀರವಾಗಿ ಚರ್ಚಿಸಲಿಲ್ಲ. "ಜನಪ್ರಿಯ ಸಾಹಿತ್ಯಕ್ಕೆ ಅಪಾರ ಓದುಗರಿದ್ದರೂ ಆ ವರ್ಗವನ್ನು ಸಾಹಿತ್ಯಿಕ ಸಂಸ್ಥೆಗಳು ಮತ್ತು ವಿಮರ್ಶಕರು ಸಂಪೂರ್ಣವಾಗಿ ನಿರ್ಲಕ್ಷಿಸಿದ್ದಾರೆ; ಮತ್ತು ಇಂತಹ ನಿರ್ಲಕ್ಷ್ಯಕ್ಕೆ ಕಾರಣ ಮುಖ್ಯವಾಗಿ, ನವ್ಯ ವಿಮರ್ಶೆ. ನವ್ಯ ವಿಮರ್ಶೆಯ ಸಿದ್ಧ ಪಡಿಯಚ್ಚುಗಳಾದ ಸಾಹಿತ್ಯಿಕ ಪರಂಪರೆ, ಯುಗಧರ್ಮ, ಶ್ರೇಷ್ಠ ಹಾಗೂ ಶ್ರೇಷ್ಠೇತರ ಇತ್ಯಾದಿ ಶ್ರೇಣೀಕರಣ–ಇವೆಲ್ಲವನ್ನು ಮರೆತು 'ಜನಪ್ರಿಯ' ಸಾಹಿತ್ಯವನ್ನು ಗಂಭೀರವಾಗಿ ಪರಿಗಣಿಸುವ ಕಾಲ ಬಂದಿದೆಯೆ? ಮುಖ್ಯವಾಗಿ, ಜನಪ್ರಿಯ ಸಾಹಿತ್ಯಕ್ಕೆ ಒಂದು ಕಾಲದ ಸಮಾಜ ಏಕೆ ಜನಪ್ರಿಯತೆಯನ್ನು ಗಳಿಸಿ ಕೊಡುತ್ತದೆ; ಜನಪ್ರಿಯ ಸಾಹಿತ್ಯದ ತುಡಿತಗಳೇನು? ಇವೇ ಮುಂತಾದ ಸಮಾಜ ಶಾಸ್ತ್ರೀಯ ವಿಶ್ಲೇಷಣೆ ಈ ಹೊಸ ಶತಮಾನದ ಅಗತ್ಯವೆಂದು ಕಾಣುತ್ತದೆ".

**(ರಾಮಚಂದ್ರ ಸಿ.ಎನ್, 2002. ಪುಟ 7)**

ಕೆ.ಟಿ. ಗಟ್ಟಿಯವರ ಇತ್ತೀಚಿನ ಬರಹಗಳಲ್ಲಿ ಒಳಗಿನ ಶತ್ರುಗಳಾದ ಜಾತಿ ಪದ್ಧತಿ, ಅಸ್ಪೃಶ್ಯತೆ, ಅಸಮಾನತೆ, ಜಮೀನ್ದಾರಿ ಪದ್ಧತಿಗಳ ಕುರಿತಾದ ಪ್ರತಿರೋಧಗಳ ಅಭಿವ್ಯಕ್ತಿ

ಕಡಿಮೆಗೊಂಡಿದ್ದು ಆಧುನಿಕ ವಸಾಹತೀಕರಣದ ಒಲವುಗಳು ಪ್ರಕಟವಾಗುತ್ತಿರುವುದು ಕಂಡುಬರುತ್ತದೆ. ಇಪ್ಪತ್ತನೇ ಶತಮಾನದ ಕೊನೆಗೆ ವಸಾಹತೀಕರಣ ಹಾಗೂ ನಿರ್ವಸಾಹತೀಕರಣದ ಚರ್ಚೆಗಳು ಹೆಚ್ಚು ಹಬ್ಬತೊಡಗಿದಂತೆ ಹೊರಗಿನ ಶತ್ರುಗಳ ಕುರಿತು ಹೆಚ್ಚು ಒತ್ತು ಸಿಗತೊಡಗಿರುವುದನ್ನು ಗಮನಿಸಬಹುದು.

'ಕೆ.ಟಿ. ಗಟ್ಟಿಯವರ ಕೃತಿಗಳಲ್ಲಿ ಪ್ರರೋಧದ ನೆಲೆಗಳು' ಎಂಬ ಈ ಮಹಾಪ್ರಬಂಧದಲ್ಲಿ ಕೆ.ಟಿ.ಗಟ್ಟಿಯವರು ತಮ್ಮ ಕೃತಿಗಳಲ್ಲಿ ಚಿತ್ರಿಸಿರುವ ಕತೆ ಹಾಗೂ ಪಾತ್ರಗಳಲ್ಲಿ ಕಂಡುಬರುವ ಬೇರೆ ಬೇರೆ ರೀತಿಯ ಪ್ರತಿರೋಧಗಳ ನೆಲೆಗಳನ್ನು ಗುರುತಿಸುವ ಹಿನ್ನೆಲೆಯಲ್ಲಿ ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ. ಕೃತಿಕಾರರ ಬದುಕು-ಬರಹಗಳ ತಾತ್ವಿಕತೆಯನ್ನು ಅವರ ಕೃತಿಗಳ ಮೂಲಕ ಶೋಧಿಸಲಾಗಿದೆ.

ಕೆ.ಟಿ.ಗಟ್ಟಿಯವರ ಬಾಲ್ಯ, ಕೌಟುಂಬಿಕ ಹಿನ್ನೆಲೆ, ವಿದ್ಯಾಭ್ಯಾಸ, ವೃತ್ತಿಜೀವನ, ಸಂದರ್ಶನದ ಮೂಲಕ ಅವರು ಬರಹಗಾರರಾಗಿ ಹೇಗೆ ರೂಪುಗೊಂಡರೆಂಬುದನ್ನು ವಿವೇಚಿಸಲಾಗಿದೆ. ಅವರ ಬದುಕು ಅವರ ಕೃತಿಗಳ ಅಧ್ಯಯನಕ್ಕೆ ಸಹಕಾರಿಯಾಗಿದೆ. ಬಾಲ್ಯದಲ್ಲಿ ತಂದೆಯನ್ನು ಕಳೆದುಕೊಂಡಾಗ ಅವರ ಮೇಲೆ ಬಂದ ಹೊಣೆಗಾರಿಕೆ, ಬಡತನ, ಹದಗೆಟ್ಟ ಕೌಟುಂಬಿಕ ಸ್ಥಿತಿ, ವಿದ್ಯಾಭ್ಯಾಸವನ್ನು ಮುಂದುವರಿಸಲಾಗದ ಪರಿಸ್ಥಿತಿ, ಧಣಿ ಒಕ್ಕಲು ಸ್ಥಿತಿ ಇಂತಹ ಬದುಕಿನ ಪರಿಸ್ಥಿತಿ ಗಟ್ಟಿಯವರನ್ನು ಮುಂದಿನ ಬದುಕಿನಲ್ಲಿ ಚಿಂತಿಸುವಂತೆ ಮಾಡಿತು. ಪರಂಪರಾಗತವಾಗಿ ಸಮಾಜದಲ್ಲಿ ನೆಲೆಯೂರಿರುವ ಅಸಮಾನತೆಯನ್ನು ಆಳುವ ವ್ಯವಸ್ಥೆಯ ಅಹಂಕಾರವನ್ನು ವಿರೋಧಿಸುವ ಧೈರ್ಯವನ್ನು ನೀಡಿತು. ಬದುಕಿನಲ್ಲಿ ನೋಡಿದ, ಅನುಭವಿಸಿದ, ನೋವಿನಿಂದ ತಾತ್ವಿಕ ವಿಚಾರಧಾರೆಯೊಂದು ಸೃಷ್ಟಿಯಾಯಿತು. ಇದರ ಮೂಲಕ ಕಾಲಘಟ್ಟದ ನಿಲುವುಗಳನ್ನು ಲೇಖಕರಾಗಿ ತರ್ಕಬದ್ಧವಾಗಿ ಗ್ರಹಿಸುವುದು ಸಾಧ್ಯವಾಯಿತು.

ಮೊದಲ ಅಧ್ಯಾಯದಲ್ಲಿ ಕೆ.ಟಿ.ಗಟ್ಟಿಯವರ ಕೃತಿಗಳಲ್ಲಿ ಕಂಡುಬರುವ ಪ್ರತಿರೋಧದ ನೆಲೆಗಳನ್ನು ಶೋಧಿಸುವ ಉದ್ದೇಶವನ್ನಿರಿಸಿಕೊಂಡು ಅವರು ಬೇರೆ ಬೇರೆ ಕಾಲಘಟ್ಟದಲ್ಲಿ ರಚಿಸಿರುವ ಕೃತಿಗಳನ್ನು ಆಯ್ಕೆಮಾಡಿಕೊಳ್ಳಲಾಗಿದೆ. ಕೆ.ಟಿ.ಗಟ್ಟಿಯವರ ಕೃತಿಗಳ ಅಧ್ಯಯನದ ಅಗತ್ಯವನ್ನು ಇಲ್ಲಿ ಚರ್ಚಿಸಲಾಗಿದೆ. ಗಟ್ಟಿಯವರು ಬರೆದ ಕೃತಿಗಳ ಸಂಖ್ಯೆ ಮತ್ತು ಅಧ್ಯಯನ ಅವಧಿಯ ಕಾಲಮಿತಿಯನ್ನು ಗಮನದಲ್ಲಿರಿಸಿಕೊಂಡು ಸೀಮಿತ ವ್ಯಾಪ್ತಿಯೊಳಗೆ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಎರಡನೆಯ ಅಧ್ಯಾಯದಲ್ಲಿ ಕೆ.ಟಿ.ಗಟ್ಟಿಯವರ ಬರಹಗಳ ಹಿನ್ನೆಲೆಯನ್ನು ಕುರಿತು ಶೋಧನೆ ನಡೆಸಲಾಗಿದೆ. ಕೆ.ಟಿ.ಗಟ್ಟಿಯವರ ಬಾಲ್ಯ, ಕೌಟುಂಬಿಕ ಹಿನ್ನೆಲೆಯನ್ನು ಕುರಿತು ಅಧ್ಯಯನ ನಡೆಸಲಾಗಿದೆ. ಕೆ.ಟಿ.ಗಟ್ಟಿಯವರ ಬಾಲ್ಯ, ಕೌಟುಂಬಿಕ ಹಿನ್ನೆಲೆ, ವಿದ್ಯಾಭ್ಯಾಸ, ವೃತ್ತಿಜೀವನ ಇವುಗಳನ್ನು ಗಮನಿಸಿದಾಗ ಕೆ.ಟಿ.ಗಟ್ಟಿಯವರ ಬದುಕಿಗೂ ಬರಹಕ್ಕೂ ಸಂಬಂಧವಿರುವುದನ್ನು ಕಂಡುಕೊಳ್ಳಲಾಗಿದೆ. ಬಾಲ್ಯದಲ್ಲಿ ತಾವು ಗಮನಿಸಿದ ಕನ್ನಡ ಭಾಷಾ ಹೋರಾಟ ಮುಂದೆ ಅವರು ಕನ್ನಡ ಭಾಷೆಯ ಬಗ್ಗೆ ಚಿಂತಿಸುವಂತೆ, ಬರೆಯುವಂತೆ ಮಾಡಿತು. ಬಾಲ್ಯದಲ್ಲಿ ಯಕ್ಷಗಾನ ಕಲಾವಿದರಾದ ತನ್ನ ತಂದೆಯವರು ಮನೆಯಲ್ಲಿ ಸಂಗ್ರಹಿಸಿದ ಮಹಾಕಾವ್ಯಗಳು ಕೆ.ಟಿ.ಗಟ್ಟಿಯವರನ್ನು ನಿರಂತರ ಓದು, ಬರವಣಿಗೆಗೆ ಸೆಳೆಯಿತು. ತಂದೆಯ ಸಾವು, ತನ್ನ ಹೆಗಲೇರಿದ ಜವಾಬ್ದಾರಿ, ಬಡತನ ಅವರ ಬರಹಗಳಲ್ಲಿ ಜೀವಂತಿಕೆಯನ್ನು ಮೂಡಿಸಿತು. ತಾವು ಆಯ್ಕೆಮಾಡಿಕೊಂಡ ಅಧ್ಯಾಪಕ ವೃತ್ತಿ ಸತತ ಅಭ್ಯಾಸವನ್ನು ಬಯಸಿತು. ಹಾಗಾಗಿ ಅಧ್ಯಯನ, ಅಧ್ಯಾಪನ, ಬರವಣಿಗೆ ಗಟ್ಟಿಯವರ ಬದುಕನ್ನು ರೂಪಿಸಿತು. ಇಥಿಯೋಪಿಯಾಕ್ಕೆ ಹೋದ ಸಂದರ್ಭದಲ್ಲಿ ಒಂಬತ್ತು ವರ್ಷಗಳ ಕಾಲ ಜಾಂಬಿಯಾ, ನೈಜೀರಿಯಾ ಮೊದಲಾದ ವಿದೇಶೀ ಸ್ಥಳಗಳಲ್ಲಿ ಸುತ್ತಾಡಿದ ಅವರ ಪ್ರವಾಸದ ಅನುಭವಗಳು ಪ್ರವಾಸ ಕಥನವಾಗಿ, ಕಾದಂಬರಿಯಾಗಿ ಪ್ರಕಟವಾಗುವುದಕ್ಕೆ ಕಾರಣವಾದವು ಎಂಬುದನ್ನು ಕಂಡುಕೊಳ್ಳಲಾಗಿದೆ. ಮುಖ್ಯವಾಗಿ ಅವರು ತಮ್ಮ ಬದುಕಿನಲ್ಲಿ ಅಳವಡಿಸಿಕೊಂಡಿದ್ದ ಶಿಸ್ತು ಬರಹಗಳಲ್ಲಿಯೂ ಕಂಡು ಬರುತ್ತದೆ. ಬದುಕಿನಲ್ಲಿ ನೋಡಿದ, ಅನುಭವಿಸಿದ ನೋವು, ಅದರಿಂದಾಗಿ ಹುಟ್ಟಿದ ತಾತ್ವಿಕ ವಿಚಾರಧಾರೆ, ಕಾಲಘಟ್ಟದ ನಿಲುವುಗಳಿಗೆ ಪ್ರತಿಕ್ರಿಯಿಸುವ ರೀತಿ ಇವುಗಳನ್ನು ಅವರು ತರ್ಕಬದ್ಧವಾಗಿ ಗ್ರಹಿಸಲು ಸಾಧ್ಯವಾದುದರಿಂದ ಅವರು ಬರಹಗಾರರಾಗಿ ರೂಪುಗೊಳ್ಳುವುದು ಸಾಧ್ಯವಾಯಿತು. ಉತ್ತಮ ಸಾಹಿತ್ಯ ಜನಪ್ರಿಯವಾಗಬೇಕಾದ್ದು ಅತಿ ಅಗತ್ಯ ಎಂಬುದನ್ನು ಪ್ರತಿಪಾದಿಸುವ ಗಟ್ಟಿಯವರ ನಿಲುವನ್ನು ಅವರ ಕೃತಿಗಳಲ್ಲಿ ಕಂಡುಕೊಳ್ಳಲಾಗಿದೆ.

ಮೂರನೆಯ ಅಧ್ಯಾಯದಲ್ಲಿ ಕೆ.ಟಿ.ಗಟ್ಟಿಯವರ ಕಾವ್ಯಗಳ ಕುರಿತು ಅಧ್ಯಯನ ನಡೆಸಲಾಗಿದೆ. ಇವರ ಕತೆ, ಕಾದಂಬರಿಗಳಂತೆ ಕಾವ್ಯದಲ್ಲಿಯೂ ವ್ಯಕ್ತಿಯ ಮೌಲ್ಯರಹಿತ ಬದುಕನ್ನು ವಿರೋಧಿಸುವುದು ಕಂಡುಬರುತ್ತದೆ. ಇಲ್ಲಿ ಕೆ.ಟಿ.ಗಟ್ಟಿಯವರ 'ಝೇಂಕಾರದ ಹಕ್ಕಿ' ಕವನ ಸಂಕಲನವನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಅವರ ಕವನಗಳಲ್ಲಿ ಸಾಮಾಜಿಕ ಬದ್ಧತೆಯಿದೆ. 'ವಿರೋಧಾಭಾಸಗಳು' ಕವನವು ಪುರೋಹಿತಶಾಹಿಗಳ, ಆಳುವ ವರ್ಗದವರ ಸೋಗಿನ ವರ್ತನೆಯನ್ನು ವಿರೋಧಿಸುತ್ತದೆ, ಟೀಕಿಸುತ್ತದೆ. ಅವರ ಕವನಗಳಲ್ಲಿ ವೈಚಾರಿಕತೆಯಿದೆ, ಸರಳ ಸಂವಹನ ಗುಣವಿದೆ, ಸೃಜನಶೀಲತೆಯ

ಕಾತರವಿದೆ. ಬಡ ಹುಡುಗಿಯ ಪ್ರೀತಿ, ಬಾಲಕರ ಮುಗ್ಧತೆ, ಬಡವನ ಬಡತನ, ಬಂಡವಾಳಶಾಹಿಗಳ ಕ್ರೂರ ವರ್ತನೆ, ಶ್ರೀಮಂತರ ವಂಚಕತನ ಮತ್ತು ಭಾರತೀಯ ಸಾಮಾಜಿಕ ವ್ಯವಸ್ಥೆಯಲ್ಲಿನ ಮುಖವಾಡಗಳನ್ನು ಕವಿತೆಗಳಲ್ಲಿ ತೀಕ್ಷ್ಣವಾಗಿ ವಿಶ್ಲೇಷಣೆ ನಡೆಸಿದ್ದಾರೆ.

ನಾಲ್ಕನೆಯ ಅಧ್ಯಾಯದಲ್ಲಿ ಕೆ.ಟಿ.ಗಟ್ಟಿಯವರ ಕಾದಂಬರಿಗಳಲ್ಲಿ ಪ್ರಾತಿನಿಧಿಕವಾಗಿ ಹದಿನಾಲ್ಕು ಕಾದಂಬರಿಗಳನ್ನು ಆಯ್ಕೆ ಮಾಡಿಕೊಂಡು ವಿವೇಚಿಸಲಾಗಿದೆ. ಅವರ ಕಾದಂಬರಿಗಳಲ್ಲಿ ಪ್ರತಿರೋಧದ ಬೇರೆ ಬೇರೆ ನೆಲೆಗಳಿರುವುದನ್ನು ಕಂಡುಕೊಳ್ಳಲಾಗಿದೆ. ಆಳುವ ವ್ಯವಸ್ಥೆಯಾದ ಯಜಮಾನ ವ್ಯವಸ್ಥೆಯ ಕ್ರೌರ್ಯ, ಜಾತಿಯ ಕಾರಣದಿಂದಾಗಿ ಅನ್ಯಾಯಕ್ಕೊಳಗಾಗುವ ಮನುಷ್ಯನ ಸ್ಥಿತಿ, ಬಡತನ ಹಾಗೂ ಅದಕ್ಕೆ ಕಾರಣವಾಗುವ ಸಾಮಾಜಿಕ ರೀತಿ ನೀತಿಗಳು, ಇವುಗಳ ಕುರಿತಾದ ಪ್ರತಿರೋಧ ಕಾದಂಬರಿಗಳಲ್ಲಿ ವ್ಯಕ್ತವಾಗಿದೆ. ಪುರುಷ ಪ್ರಧಾನ ಸಮಾಜದಲ್ಲಿ ಹೆಣ್ಣು ಅನುಭವಿಸುವ ನೋವು, ಶೋಷಣೆಗೆ ಒಳಗಾಗುವ ರೀತಿಯನ್ನು ಚಿತ್ರಿಸಲಾಗಿದೆ. ಕೆ.ಟಿ.ಗಟ್ಟಿಯವರ ಕಾದಂಬರಿಗಳಲ್ಲಿ ದೇವರು, ಧರ್ಮ, ಪವಾಡ ಪುರುಷರ ರಾಜಕೀಯಗಳು ವಿಶ್ಲೇಷಣೆಗೆ ಒಳಗಾಗಿವೆ. ಪರಂಪರಾಗತ ವ್ಯವಸ್ಥೆಯಲ್ಲಿ ಕಟ್ಟಿಕೊಂಡಿದ್ದ ಭಾರತೀಯರ ಸಾಮಾಜಿಕ ಬದುಕು ಆಧುನಿಕ ಶಿಕ್ಷಣಕ್ಕೆ ತೆರೆದುಕೊಂಡಾಗ ಹುಟ್ಟಿದ ಆತಂಕ, ತಲ್ಲಣ, ಪರಿವರ್ತನೆಯ ಚಿತ್ರಣವನ್ನು ಇವರ ಕಾದಂಬರಿಗಳು ಮಾಡುತ್ತವೆ. 'ಪೂಜಾರಿ' ಕಾದಂಬರಿಯಲ್ಲಿ ಬರುವ "ಈಗಿರುವ ದೇವಾಲಯ, ಮಸೀದಿ, ಇಗರ್ಜಿಗಳು ಸಾಕು. ಹೊಸದಾಗಿ ಬೇಕಾದ್ದು ಶಾಲೆಗಳು, ಮನೆಗಳು. ಜನರಿಗೆ, ದೇಶಕ್ಕೆ ಶಾಂತಿ ಸಮಾಧಾನ" ಎನ್ನುವ ಮಾತುಗಳೇ ಅವರ ಕಾದಂಬರಿಗಳ ಧೋರಣೆಗೆ ಸಾಕ್ಷಿಯಾಗಿವೆ. ಆಧುನಿಕ ಶಿಕ್ಷಣದಿಂದ ಮಾತ್ರ ಇಲ್ಲಿನ ಜಾತಿ ವ್ಯವಸ್ಥೆಯನ್ನು ಒಡೆದು ಜಾತ್ಯತೀತ ಸಮಾಜವೊಂದರ ನಿರ್ಮಾಣವಾದೀತು ಎಂಬ ಆಶಯ 'ಮೃತ್ಯೋರ್ಮಾ ಅಮೃತಂಗಮಯ' ಮೊದಲಾದ ಕಾದಂಬರಿಗಳಲ್ಲಿ ಕಂಡುಬರುತ್ತದೆ. ಭಾರತೀಯ ಸಮಾಜದಲ್ಲಿ ಬೇರೂರಿರುವ ಜಾತಿ ಪದ್ಧತಿಯನ್ನು ಹೊಡೆದೋಡಿಸುವಲ್ಲಿ ಸಾಹಿತಿಯ ಜವಾಬ್ದಾರಿಯೂ ಇದೆ. ಡಾ.ಸಿದ್ಧಲಿಂಗಯ್ಯನವರು ಹೇಳುವಂತೆ "ದಲಿತರ ಕೊಲೆಯಾಗದ ಅವರ ಹೆಣ್ಣು ಮಕ್ಕಳ ಮೇಲೆ ಅತ್ಯಾಚಾರ ಮಾಡದ ಅವರ ಗುಡಿಸಲಿಗೆ ಬೆಂಕಿ ಇಡದ ಒಂದು ದಿನವನ್ನು ನೀವು ಇಂಡಿಯಾ ಚರಿತ್ರೆಯಲ್ಲಿ ಹುಡುಕಲಾರಿರಿ. ರಕ್ತ ಸಿಕ್ತವಾದ ಇಂಡಿಯಾದ ಇತಿಹಾಸದ ಪುಟಗಳಲ್ಲಿ ಮನುಷ್ಯನ ದರ್ಶನ ದುರ್ಲಭವಾದುದು. ಜಮೀನುದಾರಿ ಮತ್ತು ಬಂಡವಾಳಶಾಹಿ ಪದ್ಧತಿಯ ಸೈಜುಕಲ್ಲಿನಡಿಯಲ್ಲಿ ಸಿಕ್ಕಿ ಜಜ್ಜಿ ಹೋಗುತ್ತಿರುವ ಮಾನವೀಯತೆಯನ್ನು ರಕ್ಷಿಸುವ ಜವಾಬ್ದಾರಿ ಸಾಹಿತಿಗಳ ಮೇಲಿದೆ. ಯಾಕೆಂದರೆ

ಸಾಹಿತಿ ಸಮಾಜದ ಅವಿಭಾಜ್ಯ ಅಂಗ. ಭಾರತದ ಜಾತಿಪದ್ಧತಿ ಮನುಷ್ಯರಲ್ಲಿ ಪರಸ್ಪರ ಪ್ರೀತಿ ವಿಶ್ವಾಸವನ್ನು ಅಸಾಧ್ಯವಾಗಿಸಿದೆ. ಇದರ ವಿರುದ್ಧ ಉಗ್ರ ಹೋರಾಟ ಆಗಬೇಕಾಗಿದೆ. ಮೂಲ ಬದಲಾವಣೆಗಳಿಗಾಗಿ ಕ್ರಿಯಾಶೀಲನಾಗುವುದು ಸಾಹಿತಿಯ ಸಾಮಾಜಿಕ ಜವಾಬ್ದಾರಿ. ಬರವಣಿಗೆಯ ಮೂಲಕ ನಡೆಯುವ ನಮ್ಮ ಹೋರಾಟ ಹೆಚ್ಚು ಪರಿಣಾಮಕಾರಿಯಾದದ್ದು". ಕೆ.ಟಿ.ಗಟ್ಟಿಯವರು ಸಾಹಿತಿಯ ಈ ಜವಾಬ್ದಾರಿಯನ್ನು

**(ಸಿದ್ದಲಿಂಗಯ್ಯ, 2009, ಪುಟ 29).**

ತಮ್ಮ ಕೃತಿಗಳ ಮೂಲಕ ಸಮರ್ಥವಾಗಿ ನಿರ್ವಹಿಸಿರುವುದನ್ನು ಇಲ್ಲಿ ಕಂಡುಕೊಳ್ಳಲಾಗಿದೆ. ವರ್ತಮಾನದ ಬದುಕಿನ ಬಿಕ್ಕಟ್ಟುಗಳು ಇವರ ಕಾದಂಬರಿಗೆ ಮೂಲ ಸ್ವರೂಪವನ್ನು ಒದಗಿಸಿಕೊಟ್ಟಿವೆ. ಸಾಂಪ್ರದಾಯಿಕ ಕೌಟುಂಬಿಕ ರಚನೆಯಲ್ಲಿ ಆಗುತ್ತಿರುವ ಬದಲಾವಣೆಗಳನ್ನು ಇವರ ಕಾದಂಬರಿಗಳು ತೋರಿಸಿಕೊಡುತ್ತವೆ. ಜಾತಿ, ಮತ, ವರ್ಗಗಳ ಭೇದ ಭಾವವಿಲ್ಲದೆ ಪ್ರೀತಿಯೇ ಗೆಲ್ಲುವಲ್ಲಿ ಇವರ ಕಾದಂಬರಿಯ ಪ್ರಗತಿಪರತೆಯ ಆಯಾಮವನ್ನು ಕಂಡುಕೊಳ್ಳಬಹುದು. ಆದರೆ ಹಿರಿಯ ತಲೆಮಾರು ಪ್ರೀತಿ ಪ್ರೇಮಗಳಿಗೆ ಪ್ರತಿರೋಧ ಒಡ್ಡುವುದನ್ನು ಕಾದಂಬರಿಗಳು ಚಿತ್ರಿಸುತ್ತವೆ. 'ಪರಮಾರ್ಥ', 'ಮೃತ್ಯೋರ್ಮಾ ಅಮೃತಂಗಮಯ', 'ಅಭಿಚಾರ' ಮುಂತಾದ ಕಾದಂಬರಿಗಳಲ್ಲಿ ಈ ಬಗೆಯ ಪ್ರತಿರೋಧವನ್ನು ಗುರುತಿಸಬಹುದು. ಗಂಡ ದಾರಿ ತಪ್ಪಿ ನಡೆಯಲು ಹೆಂಡತಿಯೇ ಕಾರಣ ಎನ್ನುವುದನ್ನು 'ಪರಮಾರ್ಥ' ಕಾದಂಬರಿ ತೋರಿಸಿಕೊಡುತ್ತದೆ. 'ಅಬ್ರಾಹ್ಮಣ', 'ಪೂಜಾರಿ', 'ಗ್ಲಾನಿ', 'ಹೇಕಾಪುರುಷ' ಕಾದಂಬರಿಗಳಲ್ಲಿ ಜಾತ್ಯತೀತ ಸಮಾಜ ನಿರ್ಮಾಣದ ತುಡಿತವಿದೆ. ಇವರ ಕಾದಂಬರಿಗಳು ದೇವಾಲಯ, ದೇವರು, ಮಠ, ಸ್ವಾಮಿಗಳ ಕುತಂತ್ರ, ವಂಚನೆ, ಮೋಸ ಮೊದಲಾದ ಭ್ರಷ್ಟ ಮುಖಗಳನ್ನು ತೋರಿಸಿ ಜಾತಿ ವ್ಯವಸ್ಥೆಯನ್ನು ನಿರಾಕರಿಸುತ್ತವೆ. ಪವಾಡ ಪುರುಷರೆಂದು ನಟನೆ ಮಾಡುವವರು ಮತ್ತು ವಿಚಾರವಾದಿಗಳ ನಡುವಿನ ಸಂಘರ್ಷವನ್ನು 'ಹೇಕಾಪುರುಷ' ಕಾದಂಬರಿ ತಿಳಿಸುತ್ತದೆ. ಇವರ ಕಾದಂಬರಿಗಳಲ್ಲಿ ಜಾತಿ, ಮತ, ವರ್ಗ ಭೇದವಿಲ್ಲದೆ ಈ ದೇಶದಲ್ಲಿ ಎಲ್ಲರೂ ಸಮಾನವಾಗಿ ಬಾಳಬೇಕೆಂಬ ಆಶಯವಿದೆ. 'ಕಾರ್ಮುಗಿಲು', 'ಪುನರಪಿ ಜನನಂ' ಕೃತಿಗಳಲ್ಲಿ ಜಾತೀಯತೆಯ ನಿರ್ಮೂಲನ ಹಾಗೂ ಮಾನವ ಸಬಂಧಗಳ ಪ್ರಾಮುಖ್ಯತೆಯ ಕುರಿತಾದ ವಿವರಗಳಿವೆ. 'ಪುನರಪಿ ಜನನಂ' ಮಾನವ ಸಂಬಂಧಗಳನ್ನು ಶೋಧಿಸುತ್ತದೆ. 'ಇತಿಹಾಸದ ಮೊಗಸಾಲೆಯಲ್ಲಿ' ಕಾದಂಬರಿಯಲ್ಲಿ ದೊಡ್ಡಮನೆಯ ದುರಾಡಳಿತದ ವಿವರಗಳಲ್ಲಿ ಪ್ರತಿರೋಧದ ಧ್ವನಿಯಿದೆ. ಗ್ರಾಮ ಸಂಸ್ಕೃತಿಯು ಆಧುನಿಕತೆ, ಜಾಗತೀಕರಣಕ್ಕೆ ಮುಖಾಮುಖಿಯಾಗುತ್ತಿರುವ ದೃಶ್ಯವಿದೆ. ವರ್ತಮಾನ ಕಾಲದಲ್ಲಿ ಕಾಡುತ್ತಿರುವ ಬಿಕ್ಕಟ್ಟುಗಳಲ್ಲೊಂದಾದ ಅರ್ಥಕೇಂದ್ರಿತ ಸ್ಥಿತಿ ಮತ್ತು ಸಾಮಾಜಿಕ ಮೌಲ್ಯಗಳ ಮೂಲಕ

ಬದುಕುತ್ತಿರುವ ವ್ಯಕ್ತಿಗಳ ನಡುವಿನ ಸಂಘರ್ಷ ಆಧುನಿಕತೆಯೊಂದಿಗೆ ಬಂದುಬಿಟ್ಟಿದೆ. ಸ್ವಜನ ಪಕ್ಷಪಾತ, ಸ್ವಾರ್ಥ ಜನರಲ್ಲಿ ಸೇರಿಕೊಂಡಿದೆ. ಸಮಾಜದ ಈ ರೀತಿಯ ಅಧಃಪಥನವನ್ನು 'ಯುಗಾಂತರ' ಕಾದಂಬರಿಯಲ್ಲಿ ವಿಶ್ಲೇಷಿಸಲಾಗಿದೆ. ಹೀಗೆ ಇವರ ಕಾದಂಬರಿಯು ಜಾತೀಯ, ಐಶ್ವರ್ಯದ, ಲಿಂಗದ ನೆಲೆಯಲ್ಲಿ ಮನುಷ್ಯನನ್ನು ಗುರುತಿಸುವ ಪ್ರವೃತ್ತಿಯನ್ನು ವಿರೋಧಿಸುತ್ತದೆ. ವ್ಯವಸ್ಥೆಯ ಭ್ರಷ್ಟ ಮುಖಗಳನ್ನು ಅನಾವರಣ ಗೊಳಿಸುತ್ತಲೇ ಜಾತಿ ವ್ಯವಸ್ಥೆ, ಸ್ವಾಮಿಗಳ ಮೋಸ, ಸಂಪ್ರದಾಯದ ಹೆಸರಿನಲ್ಲಿ ನಡೆಯುವ ಶೋಷಣೆ, ಅತಿಯಾದ ಕಾಮ, ದೇವರನ್ನು ಸ್ವಾರ್ಥಕ್ಕಾಗಿ ಬಳಸಿಕೊಳ್ಳುವ ಮಾನವ ಪ್ರವೃತ್ತಿ, ಮೇಲು ಕೀಳನ್ನು ಪ್ರತಿಪಾದಿಸುವ ಬ್ರಾಹ್ಮಣ್ಯ, ಗಂಡು ಹೆಣ್ಣಿನ ನಡುವಿನ ಅಸಮಾನತೆ, ಮೌಲ್ಯರಹಿತ ಬದುಕು ಇವುಗಳನ್ನು ವಿರೋಧಿಸುತ್ತಿರುವುದನ್ನು ಈ ಅಧ್ಯಾಯದಲ್ಲಿ ಕಂಡುಕೊಳ್ಳಲಾಗಿದೆ.

ಅಧ್ಯಾಯ ಐದರಲ್ಲಿ ಕೆ.ಟಿ.ಗಟ್ಟಿಯವರ ಸಣ್ಣಕತೆಗಳ ಕುರಿತು ಅಧ್ಯಯನ ನಡೆಸಲಾಗಿದೆ. ಇವರ ನಾಲ್ಕು ಕಥಾ ಸಂಕಲನಗಳನ್ನು ಅಧ್ಯಯನಕ್ಕಾಗಿ ಆಯ್ಕೆ ಮಾಡಿಕೊಂಡು ಒಟ್ಟು ಕತೆಗಳ ಧೋರಣೆಯನ್ನು ಗುರುತಿಸಲಾಗಿದೆ. ಕತೆಗಳು ಸಮಕಾಲೀನ ಸ್ಥಿತಿಗೆ ವೈಚಾರಿಕವಾಗಿ ತೆರೆದುಕೊಳ್ಳುವ ಬಗೆಯನ್ನು ಗುರುತಿಸಲಾಗಿದೆ. ಇವರ ಕತೆಗಳಲ್ಲಿ ಬದುಕು ಮತ್ತು ಪ್ರೀತಿಯ ಅರ್ಥಗಳು ವಿಶ್ಲೇಷಣೆಗೆ ಒಳಗಾಗಿರುವುದನ್ನು ಕಂಡುಕೊಳ್ಳಲಾಗಿದೆ. ಸುಂದರವಾಗಿ ಕಾಣುವ ಸಮಾಜದ ಒಳಗೆ ಸೇರಿಕೊಂಡಿರುವ ಕೊಳಕುಗಳನ್ನು ಇವರ ಕತೆಗಳು ಚಿತ್ರಿಸುತ್ತವೆ. ಮಾನವ ಸಮಾಜದಲ್ಲಿ ಮೌಲ್ಯಗಳು ಅಪಮೌಲ್ಯಗೊಳ್ಳುತ್ತಿರುವುದನ್ನು 'ಮೌಲ್ಯಗಳು' ಕತೆ ವಿವರಿಸುತ್ತದೆ. 'ಸವೆತ'ದಲ್ಲಿ ಸ್ತ್ರೀಶೋಷಣೆಯ ವಿರುದ್ಧದ ಧ್ವನಿಯಿದೆ. 'ಜೊಲಿಂಪ'ದಲ್ಲಿ ಅನ್ಯಾಯದ ವಿರುದ್ಧದ ಪ್ರತಿಭಟನೆಯ ಧ್ವನಿಯಿದೆ. 'ಸೆಳೆತ' ಶೂದ್ರನ ಆಹಾರ ಕ್ರಮದ ಸೆಳೆತಕ್ಕೊಳಗಾಗಿ ಬ್ರಾಹ್ಮಣ್ಯವನ್ನು ಮರೆಯುವ ವ್ಯಕ್ತಿಯ ತುಡಿತವನ್ನು ಧ್ವನಿಸುತ್ತದೆ. 'ಮನುಷ್ಯ ವಾಸನೆ'ಯಲ್ಲಿ ಲೈಂಗಿಕತೆಯೇ ಮನುಷ್ಯನ ಪ್ರತಿನಿಧಿಯಾಗಿದೆ. ಇವರ ಕತೆಗಳಲ್ಲಿ ಸಹಜವಾದ ಭಾವನೆಗಳಿವೆ. 'ಯಾರದೂ ಅಲ್ಲದ ಕತೆ'ಯಲ್ಲಿ ಬಡವರ ಮೇಲೆ ನಡೆಸುವ ದೌರ್ಜನ್ಯಕ್ಕೆ ಪ್ರತಿರೋಧವಿದೆ. 'ಕತೆಯಿಂದ ಬಂದವನು' ಕತೆಯಲ್ಲಿ ಮೇಲ್ವರ್ಗದ ವ್ಯಕ್ತಿಗಳ ಅಟ್ಟಹಾಸದ ವಿರುದ್ಧ ಪ್ರತಿರೋಧದ ಧೋರಣೆ ವ್ಯಕ್ತವಾಗಿದೆ. 'ಸಮಕೋಣದ ಮೂಲೆ' ಮಠಗಳಲ್ಲಿ ಸ್ವಾಮಿಗಳು ನಡೆಸುವ ಅವ್ಯವಹಾರಗಳ ವಿರುದ್ಧ ಧ್ವನಿಯೆತ್ತುತ್ತದೆ. 'ಲೋಹ ಚುಂಬಕ ಚಿಕಿತ್ಸೆ' ಸಮಾಜದ ಭ್ರಷ್ಟತೆಯನ್ನು ಚಿತ್ರಿಸುತ್ತದೆ. ಇವರ ಕತೆಗಳಲ್ಲಿ ಸಮಾಜದ ವಿಡಂಬನೆಯಿದೆ, ಒಳವ್ಯವಸ್ಥೆಯಾದ ಸಾಮಾಜಿಕ ರಾಜಕೀಯದ ಅರಿವು ಇದೆ. ಕೆ.ಟಿ.ಗಟ್ಟಿಯವರು ವ್ಯಕ್ತಿಯ ಬಾಹ್ಯ ಬದುಕಿಗೆ ಮಾತ್ರ ಒತ್ತು ಕೊಟ್ಟಿರುವುದರಿಂದ

ಇಲ್ಲಿನ ಕತೆಗಳಲ್ಲಿ ಮನುಷ್ಯನ ಮಾನಸಿಕ ಒಳತೋಟಿಯ ನಗ್ನಚಿತ್ರ ಅನಾವರಣಗೊಂಡಿರುವುದನ್ನು ಸ್ಪಷ್ಟವಾಗಿ ಕಾಣುತ್ತೇವೆ. ವಿಶಿಷ್ಟ ಫ್ಯಾಂಟಸಿಯ ಬಳಕೆ, ವಿವಿಧ ಪ್ರಯೋಗಶೀಲತೆ, ವಸ್ತುವೈವಿಧ್ಯಗಳನ್ನು ಕೆ.ಟಿ.ಗಟ್ಟಿಯವರ ಕತೆಗಳಲ್ಲಿ ಕಂಡುಕೊಳ್ಳಲಾಗಿದೆ.

ಆರನೆಯ ಅಧ್ಯಾಯದಲ್ಲಿ ಕೆ.ಟಿ.ಗಟ್ಟಿಯವರ ನಾಟಕಗಳಲ್ಲಿನ ಪ್ರತಿರೋಧದ ನೆಲೆಗಳನ್ನು ಶೋಧಿಸಲಾಗಿದೆ. ರಂಗನಾಟಕ, ರೇಡಿಯೋ ನಾಟಕ, ಅನುವಾದ ನಾಟಕ, ಮಕ್ಕಳ ನಾಟಕಗಳನ್ನು ಬರೆದಿರುವ ಕೆ.ಟಿ.ಗಟ್ಟಿಯವರ ನಾಟಕಗಳಲ್ಲಿ ವಿಡಂಬನೆಯಿದೆ, ಫ್ಯಾಂಟಸಿಯಿದೆ. ಭಾರತದ ನಗರ ಜೀವನದ ಕ್ರೌರ್ಯ, ಮನುಷ್ಯನ ಸ್ವಾರ್ಥ ಚಿಂತನೆಯಿಂದ ಕೂಡಿದ ಬದುಕು, ರಾಜಕೀಯ ವ್ಯವಸ್ಥೆಯಲ್ಲಿನ ಭ್ರಷ್ಟತೆ, ಸಂಪ್ರದಾಯ, ಮೂಲಭೂತವಾದಿ ಗುಣಗಳನ್ನು ಇವರ ನಾಟಕಗಳು ವಿರೋಧಿಸುವುದನ್ನು ಕಂಡುಕೊಳ್ಳಲಾಗಿದೆ. 'ನಾಟ್ಕ' ಪೋಲೀಸರ ದೌರ್ಜನ್ಯವನ್ನು, ದುಷ್ಟ ರಾಜಕೀಯ ವ್ಯವಸ್ಥೆಯನ್ನು ವಿರೋಧಿಸುತ್ತದೆ. 'ಕೆಂಪುಕಾಗೆ' ಸಾಹಿತ್ಯದ ಕೆಲಸಗಳನ್ನು ರಾಜಕೀಯ ಲಾಭಕ್ಕಾಗಿ ಪ್ರಶ್ನಿಸುವ ರಾಜಕಾರಣದ ವಿಡಂಬನೆಯಿಂದ ಕೂಡಿದೆ. 'ಸತ್ಯಕ್ಕೇ ಜಯ'ದಲ್ಲಿ ಸತ್ಯಕ್ಕಾಗಿ ಪ್ರಾಣತ್ಯಾಗ ಮಾಡುವ ವ್ಯಕ್ತಿಯ ಚಿತ್ರಣವಿದೆ. 'ನಗರಪರ್ವ' ಸಮಾಜ ಜೀವನದ ಸ್ವಾರ್ಥ, ಭ್ರಷ್ಟತೆ, ಮೌಲ್ಯರಹಿತ ಬದುಕಿನ ವಿರುದ್ಧ ಧ್ವನಿಯೆತ್ತುತ್ತದೆ. 'ಬೊಂಬೆಯಾಟ' ಸಮಕಾಲೀನ ಸಾಮಾಜಿಕ ವ್ಯವಸ್ಥೆಯನ್ನು ಪರಿಣಾಮಕಾರಿಯಾಗಿ ತಿಳಿಸುತ್ತದೆ. 'ಭಿನ್ನಮತ'ದಲ್ಲಿ ರಾಜಕೀಯ ವ್ಯವಸ್ಥೆಯ ವಿಡಂಬನೆಯಿದೆ. 'ಹೂವು ಅಲ್ಲ ಗೊಬ್ರ' ಆಡಳಿತ ವ್ಯವಸ್ಥೆಯ ಲೋಪದೋಷಗಳನ್ನು ತಿಳಿಸುತ್ತದೆ. 'ಏಕೋಪಾಧ್ಯಾಯ' ಇಂದಿನ ಶಿಕ್ಷಣ ವ್ಯವಸ್ಥೆಯ ಲೋಪದೋಷಗಳನ್ನು ವಿಡಂಬಿಸುತ್ತದೆ. 'ಟಿಕೇಟು ಸಿಕ್ಕಿತು' ರಾಜಕಾರಣಿಗಳ ಮನಸ್ಥಿತಿಯನ್ನು ಬಯಲು ಮಾಡುತ್ತದೆ. 'ಮಾಯಾಮೃಗ' ಆಧುನಿಕ ಬದುಕು ಮನುಷ್ಯನ ಬದುಕಿನ ಮೇಲೆ ಉಂಟು ಮಾಡುವ ಕೆಟ್ಟ ಪರಿಣಾಮಗಳನ್ನು ವಿರೋಧಿಸುತ್ತದೆ. 'ಆಕಾಶ ಕೆಳಗೆ ಬಿತ್ತು' ನಾಟಕದಲ್ಲಿ ರಾಜಕೀಯ ವಿಡಂಬನೆಯಿದೆ, ಹೆಣ್ಣಿನ ಬದುಕಿನ ಕುರಿತಾದ ಚಿಂತನೆಯಿದೆ. 'ತ್ರಿಶಂಕು ಮತ್ತು ಇತರರು' ಪುರಾಣ ಮತ್ತು ವರ್ತಮಾನ ಹಾಗೂ ಮಾನವ ಮತ್ತು ದೇವತೆಗಳನ್ನು ಅರ್ಥಪೂರ್ಣವಾಗಿ ಸಮೀಕರಿಸುತ್ತದೆ. 'ಓಂ ತಾರ ತೂರಿ ಸ್ವಾಹಾ'ದಲ್ಲಿ ಬದುಕಿನ ಆಂತರ್ಯದ ಸಂಘರ್ಷವಿದೆ. ಕೆ.ಟಿ.ಗಟ್ಟಿಯವರ ನಾಟಕಗಳು ಸಮಾಜದ ಬೇರೆ ಬೇರೆ ಸ್ತರಗಳಲ್ಲಿ ನಡೆಯುವ ಮೋಸ, ವಂಚನೆ, ಭ್ರಷ್ಟಾಚಾರದ ಮುಖಗಳನ್ನು ತಿಳಿಸುತ್ತಾ ವಿಡಂಬನೆಯ ಧಾಟಿಯ ಮೂಲಕ ಪ್ರತಿರೋಧ ವ್ಯಕ್ತಪಡಿಸಿರುವುದನ್ನು ಈ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ.

ಅಧ್ಯಾಯ ಏಳರಲ್ಲಿ ಕೆ.ಟಿ.ಗಟ್ಟಿಯವರ ಇತರ ಬರಹಗಳಾದ ಆತ್ಮಚರಿತ್ರೆ, ಪ್ರವಾಸ ಕಥನ ಮತ್ತು ಪ್ರಬಂಧ ಸಾಹಿತ್ಯದ ಕುರಿತು ಅಧ್ಯಯನ ಕೈಗೊಳ್ಳಲಾಗಿದೆ. ಆತ್ಮಕತೆ 'ತೀರ'ದಲ್ಲಿ ಕೆ.ಟಿ.ಗಟ್ಟಿಯವರು ತಮ್ಮ ಬದುಕಿನ ವಾಸ್ತವಗಳನ್ನು ನೇರ ನುಡಿಗಳ ಮೂಲಕ ಹೇಳಿದ್ದಾರೆ. ಮನುಷ್ಯ ಸೃಷ್ಟಿಸಿದ ನಾನಾ ಜಾತಿಗಳ ಬಗ್ಗೆ ತಮ್ಮ ದುಃಖವನ್ನು ವ್ಯಕ್ತಪಡಿಸುತ್ತಾರೆ. ಹೆಣ್ಣು ಮಕ್ಕಳ ಮೇಲೆ ಲೈಂಗಿಕ ದೌರ್ಜನ್ಯ ನಡೆಸುವ ಅಧ್ಯಾಪಕರ ವಿರುದ್ಧ ಧ್ವನಿಯೆತ್ತುತ್ತಾರೆ. ತಮ್ಮ ಅಧ್ಯಯನ ಮತ್ತು ಅಧ್ಯಾಪನದ ಬಗ್ಗೆ ತಿಳಿಸುತ್ತಾರೆ. ಬದುಕು ನಿಂತ ನೀರಾಗದಿರಲು ಪ್ರಶ್ನಿಸಬೇಕು ಎನ್ನುತ್ತಾರೆ. ಜಾತೀಯ ಶ್ರೇಣೀಕೃತ ವ್ಯವಸ್ಥೆಯನ್ನು ವಿರೋಧಿಸುತ್ತಾರೆ. ಬ್ರಾಹ್ಮಣ ದೈವಾರಾಧನಾ ಪರಂಪರೆಯನ್ನು ಪ್ರಶ್ನಿಸುತ್ತಾರೆ. ಈ ದೇಶದ ಪ್ರತಿಭೆಗಳು ನಮ್ಮ ದೇಶಕ್ಕೆ ದಕ್ಕದೆ ಹೋದುದರ ಬಗ್ಗೆ ವಿಷಾದ ವ್ಯಕ್ತಪಡಿಸುತ್ತಾರೆ. ಮದುವೆಗಾಗಿ ನಡೆಯುವ ದುಂದುವೆಚ್ಚ, ಮಂತ್ರವಾದಿ ಪ್ರೇತ ಓಡಿಸುವುದು, ಆಹಾರವನ್ನು ಸಾಂಸ್ಕೃತಿಕ ಮತ್ತು ಸಾಮಾಜಿಕ ಸಂಬಂಧಕ್ಕೆ ತಳುಕು ಹಾಕುವುದು, ಪ್ರಶಸ್ತಿಗಾಗಿ ಏನೇನೋ ಸರ್ಕಸ್ಸು ಮಾಡುವುದು, ಸಾಂಪ್ರದಾಯಿಕ ಆಚರಣೆಗಳನ್ನು ವಿರೋಧಿಸುತ್ತಾರೆ. ಯಾವುದೋ ಕಾಲದಲ್ಲಿ ಹುಟ್ಟಿದ ಮತ, ಧರ್ಮ, ಸಿದ್ಧಾಂತಗಳನ್ನು ಎಲ್ಲಾ ಕಾಲದಲ್ಲೂ ವಿಚಾರಹೀನವಾಗಿ ಅನುಸರಿಸುವುದನ್ನು ಕೆ.ಟಿ.ಗಟ್ಟಿಯವರು ತಮ್ಮ ಆತ್ಮಕತೆಯಲ್ಲಿ ವಿರೋಧಿಸುತ್ತಾರೆ. ಇಲ್ಲಿ ಅವರು ಸಮಾಜಮುಖಿಯಾಗಿ ಚಿಂತಿಸಿರುವ ಅಂಶಗಳನ್ನು ಕಂಡುಕೊಳ್ಳಬಹುದಾಗಿದೆ.

ಕೆ.ಟಿ.ಗಟ್ಟಿಯವರ ಪ್ರವಾಸ ಸಾಹಿತ್ಯ 'ನಿಸರ್ಗ ಕನ್ಯೆ ಅಂಡಮಾನ್' ತಾವು ಅಂಡಮಾನ್‌ಗೆ ಪ್ರವಾಸ ಹೋದ ಸಂದರ್ಭದ ವಿಚಾರಗಳನ್ನು ಇಲ್ಲಿ ದಾಖಲಿಸುತ್ತಾ ಅದರೊಂದಿಗೆ ಅಂಡಮಾನಿನ ಹಿನ್ನೆಲೆ, ಸಂಸ್ಕೃತಿ, ಜನಾಂಗಗಳ ವಿವರಗಳನ್ನು ತಿಳಿಸುತ್ತಾರೆ. ಕೆ.ಟಿ.ಗಟ್ಟಿಯವರು ನಿಸರ್ಗವನ್ನು ಎಷ್ಟು ತನ್ಮಯತೆಯಿಂದ ನೋಡಿದ್ದಾರೋ ಅಷ್ಟೇ ಆಳವಾಗಿ ಅಧ್ಯಯನ ದೃಷ್ಟಿಯಿಂದ ಪರಿಶೀಲಿಸಿರುವುದು ಈ ಕೃತಿಯನ್ನು ಓದಿದಾಗ ಕಂಡುಬರುತ್ತದೆ. ಅಂಡಮಾನಿನಲ್ಲಿ ಕೋಮು ಘರ್ಷಣೆ ಇಲ್ಲ. ಜಾತಿ ಮತಗಳ ಭೇದವಿಲ್ಲ, ಭಯೋತ್ಪಾದಕರ ಕಾಟವಿಲ್ಲ, ವಿದ್ಯುತ್ ವೈಫಲ್ಯವಿಲ್ಲ. ಅದು ಅಮೇರಿಕಕ್ಕಿಂತಲೂ ಚೆನ್ನಾಗಿದೆ ಎಂದು ತಿಳಿಸುತ್ತಾರೆ. ಅಂಡಮಾನ್ ಕಂಡಂತಹ ಕರಾಳ ದಿನಗಳನ್ನು ನೆನಪಿಸುತ್ತಾರೆ. ಅಂಡಮಾನಿನಲ್ಲಿ ಇತ್ತೀಚೆಗೆ ಆಡಳಿತದಲ್ಲಿ ಲಂಚ ಮತ್ತು ಭ್ರಷ್ಟಾಚಾರ ತುಂಬಿಕೊಂಡಿರುವ ವಿಚಾರವನ್ನು ಪ್ರಸ್ತಾಪಿಸುತ್ತಾರೆ. ಅಂಡಮಾನಿನ ಅಪಾರ ಸಸ್ಯರಾಶಿ ಹಾಗೂ ಮೀನುಗಳನ್ನು ಕದಿಯುವ ಕಡಲ್ಗಳ್ಳರ ಹಾವಳಿಯ ಬಗ್ಗೆ ಆತಂಕ ವ್ಯಕ್ತಪಡಿಸುತ್ತಾರೆ.

ಕೆ.ಟಿ.ಗಟ್ಟಿಯವರ ಮೂರು ಪ್ರಬಂಧ ಸಂಕಲನಗಳನ್ನು ಪ್ರಾತಿನಿಧಿಕವಾಗಿ ಅಧ್ಯಯನ ನಡೆಸಲಾಗಿದೆ. ಕೆ.ಟಿ.ಗಟ್ಟಿಯವರು ಪ್ರಬಂಧಗಳನ್ನು ಲಲಿತ ಪ್ರಬಂಧಗಳು, ಸಾಹಿತ್ಯ ಚಿಂತನೆ, ಸಾಮಾಜಿಕ ಚಿಂತನೆ ವೈಚಾರಿಕ ಪ್ರಬಂಧಗಳೆಂದು ವಿಂಗಡಿಸಿಕೊಂಡಿದ್ದಾರೆ. ಕೆ.ಟಿ.ಗಟ್ಟಿಯವರ ಚಿಂತನೆಯ ಆಳವನ್ನು ಅವರ ಪ್ರಬಂಧ ಸಂಕಲನಗಳ ಅಧ್ಯಯನದಿಂದ ಗುರುತಿಸಬಹುದು. ಪ್ರಬಂಧ ಸಂಕಲನಗಳು ಅವರ ಆಲೋಚನೆ ಬೆಳೆದು ಬಂದ ಹಂತಗಳನ್ನು ಪ್ರತಿನಿಧಿಸುತ್ತವೆ. ಸಾಹಿತ್ಯ, ಧರ್ಮ, ರಾಜಕಾರಣ, ಇತಿಹಾಸವನ್ನು ತಮ್ಮ ಲೇಖನಗಳಲ್ಲಿ ವೈಚಾರಿಕವಾಗಿ ಮಂಡಿಸುತ್ತಾರೆ. 'ಮೂರನೆಯ ಧ್ವನಿ' ಸಂಕಲನದಲ್ಲಿ ಬದುಕು ಮತ್ತು ಸಾಹಿತ್ಯದ ನಡುವಿನ ಸಂಬಂಧದ ಕುರಿತಾದ ಚಿಂತನೆಯನ್ನು ನಡೆಸುತ್ತಾರೆ. ಬದುಕುವ ಕುರಿತಾದ ಚಿಂತನೆಯೊಂದಿಗೆ ಬದುಕಿನ ಕುರಿತಾದ ಚಿಂತನೆಯ ಅಗತ್ಯವನ್ನು ತಿಳಿಸುತ್ತಾರೆ. ಮಾನವನ ದ್ವಿಮುಖ ಜೀವನ ಧರ್ಮದ ಸ್ಥಿತಿಯನ್ನು ವಿರೋಧಿಸುತ್ತಾರೆ. 'ಸಾಹಿತ್ಯಿಕ ಗುಣ' ಲೇಖನದಲ್ಲಿ ಸಾಹಿತ್ಯವನ್ನು ಜಾತಿಯ ಮೂಲಕ ನೋಡುವುದನ್ನು ವಿರೋಧಿಸುತ್ತಾರೆ. ಕಂದಾಚಾರ ಮೂಢನಂಬಿಕೆಗಳನ್ನು ಸಮರ್ಥಿಸಿ ಜನರನ್ನು ಮಂಕು ಮಾಡುವ ವಿದ್ಯಾವಂತರು, ಪಂಡಿತರು ಮತ್ತು ಸಾಹಿತಿಗಳಿಂದಾಗುವ ಸಾಮಾಜಿಕ ಹಾನಿಯನ್ನು ವಿರೋಧಿಸುತ್ತಾರೆ. ದೇವರಿಗೂ ಜೀವನಧರ್ಮಕ್ಕೂ ಸಂಬಂಧವಿಲ್ಲ ಎನ್ನುತ್ತಾರೆ. ಅನುಭವಿಸಿದವನೇ ಬರೆಯಬೇಕು ಎಂಬ ಷರತ್ತು ಸಾಹಿತ್ಯ ಸಂದರ್ಭದಲ್ಲಿ ಎಷ್ಟು ಸಮಂಜಸ ಎಂದು ಪ್ರಶ್ನಿಸುತ್ತಾರೆ. 'ಕಾದಂಬರಿಯ ಇತಿಮಿತಿ' ಲೇಖನದಲ್ಲಿ ಕೃತಿ ವಿಮರ್ಶೆಯ ಸಂದರ್ಭದಲ್ಲಿ ಕೃತಿಕಾರನ ಜಾತಿ, ಮತ, ಲಿಂಗ ಇತ್ಯಾದಿ ಖಾಸಗಿ ಬದುಕಿಗೆ ಸಂಬಂಧಿಸಿದ ಮಾಹಿತಿಗಳನ್ನು ಸಂಗ್ರಹಿಸಿ ಚರ್ಚಿಸುವ ಅಗತ್ಯತೆಯನ್ನು ಪ್ರಶ್ನಿಸುತ್ತಾರೆ. 'ನಿನ್ನೆ ನಾಳೆಯ ನಡುವೆ' ಸಂಕಲನದಲ್ಲಿ ಸಾಮಾಜಿಕ ಚಿಂತನೆಯಿದೆ. ಶಿಕ್ಷಣ, ಸಂಸ್ಕೃತಿ, ವಿಚಾರ ಜಾಗೃತಿಯನ್ನು ತಿಳಿಸುತ್ತಾರೆ. ಪ್ರಜಾಪ್ರಭುತ್ವದ ಬಗ್ಗೆ ಚಿಂತನೆ ನಡೆಸುತ್ತಾರೆ. ಪ್ರಜಾಪ್ರಭುತ್ವದಲ್ಲಿ ಜನರ ಸರಕಾರ ಎಂಬ ಹೇಳಿಕೆಯ ಹಿಂದಿರುವ ಸತ್ಯವನ್ನು ಶೋಧಿಸುತ್ತಾರೆ. ಸ್ತ್ರೀಯರ ಕುರಿತು ವ್ಯಾಪಕವಾಗಿ ಚರ್ಚಿಸುತ್ತಾರೆ. 'ಸ್ತ್ರೀಯ ಸಾಮಾಜಿಕ ನೆಲೆ'ಯನ್ನು ತಿಳಿಸುತ್ತಾ ಸ್ತ್ರೀ-ಪುರುಷ ಸಮಾನತೆಯನ್ನು ಪ್ರತಿಪಾದಿಸುತ್ತಾರೆ. ಸ್ವಾಮೀಜಿಗಳ, ದೇವರ ಬಗ್ಗೆ ವಿವರಿಸುತ್ತಾರೆ. ದೇವರು ಮತ್ತು ದೇವರನ್ನು ನಂಬುವವರ ನಡುವೆ ಇರುವ ಸ್ವಾಮಿಗಳು ಸಾಮಾಜಿಕವಾಗಿ ಪ್ರತಿಗಾಮಿಗಳು. ದೇವಾಲಯ ಎಂದರೆ ದೇವರ ಹೆಸರಿನಲ್ಲಿ ವ್ಯವಹಾರ ನಡೆಸುವ ಮಂದಿರ ಎಂದು ಅಭಿಪ್ರಾಯ ಪಡುತ್ತಾರೆ. ಚಲನಚಿತ್ರಗಳು ಸೃಷ್ಟಿಸುವ ಗೊಂದಲಗಳನ್ನು ಪ್ರಸ್ತಾಪಿಸುತ್ತಾರೆ. ಮೂಢನಂಬಿಕೆಗಳು ಮತ್ತು ಕುರುಡು ಸಂಪ್ರದಾಯಗಳು ಪರೋಕ್ಷವಾಗಿ ಶೋಷಣೆಗೆ ಕಾರಣವಾಗುತ್ತವೆ ಎನ್ನುತ್ತಾ ಇಂತಹ ಆಚರಣೆಗಳನ್ನು ವಿರೋಧಿಸುತ್ತಾರೆ. ಪೋಲೀಸ್ ದೌರ್ಜನ್ಯಕ್ಕೆ

ಗಟ್ಟಿಯವರ ವಿರೋಧವಿದೆ. ಆಧುನಿಕತೆ ತಂದ ಅಪಾಯಗಳನ್ನು 'ಪ್ರಗತಿ ಮತ್ತು ನಿಧಾನ ಸಾವು' ಲೇಖನದಲ್ಲಿ ತಿಳಿಸುತ್ತಾರೆ. ಗಟ್ಟಿಯವರ 'ನಮ್ಮ ಬದುಕಿನ ಪುಟಗಳು' ವೈಚಾರಿಕ ಲೇಖನಗಳ ಸಂಗ್ರಹ. ಧ್ಯಾನದ ಅಗತ್ಯತೆ, ಧನಾತ್ಮಕ ಚಿಂತನೆಯನ್ನು ಬೆಳೆಸಿಕೊಳ್ಳಬೇಕಾದ ಅನಿವಾರ್ಯತೆ, ಓದಿನ ಅಗತ್ಯತೆ, ಆರೋಗ್ಯಪೂರ್ಣ ಪರಿಸರದ ಅಗತ್ಯ, ಆತ್ಮವಿಮರ್ಶೆ ಮಾಡಿಕೊಳ್ಳಬೇಕಾದ ಅಗತ್ಯಗಳನ್ನು ತಮ್ಮ ಪ್ರಬಂಧಗಳಲ್ಲಿ ತಿಳಿಸುತ್ತಾರೆ. ಉದ್ಯೋಗದ ಹೆಸರಿನಲ್ಲಿ ನಡೆಯುವ ಭ್ರಷ್ಟಾಚಾರ, ದೌರ್ಜನ್ಯಗಳನ್ನು ವಿರೋಧಿಸುತ್ತಾರೆ. ಕೆ.ಟಿ,ಗಟ್ಟಿಯವರ ಪ್ರಬಂಧಗಳಲ್ಲಿ ಕೆಲವೆಡೆ ಭಾವಾವೇಶ ಕಂಡುಬರುತ್ತದೆಯಾದರೂ ವಿಷಯ ನಿರೂಪಣೆಗೆ ಕೆಲವೊಮ್ಮೆ ಅದು ಅಗತ್ಯವೂ ಎನಿಸುತ್ತದೆ.

ಕೆ.ಟಿ.ಗಟ್ಟಿಯರ ಬರಹಗಳಲ್ಲಿ ಸರಳ ನಿರೂಪಣೆಯಿದೆ. ಇವರ ಕೃತಿಗಳಲ್ಲಿ ಬರುವ ಪಾತ್ರಗಳಿಗೆ ಜೀವನದಲ್ಲಿ ಬದಲಾವಣೆ ಮುಖ್ಯವಾಗಿರುವುದರಿಂದ ಯಾರನ್ನೂ, ಏನನ್ನೂ ಲೆಕ್ಕಿಸುವುದಿಲ್ಲ. ಅವು ಸಂಪ್ರದಾಯಬದ್ಧ ನಿಲುವುಗಳನ್ನು ಕಿತ್ತೊಗೆದು ಹೊಸ ಬದುಕಿನತ್ತ ತುಡಿಯುವುದನ್ನು ಕಾಣುತ್ತೇವೆ, ಜೀವನದ ಹಾಗೂ ಸಮಾಜದ ಬದಲಾವಣೆಗಾಗಿ ಹೋರಾಡುವುದನ್ನು ಕಾಣುತ್ತೇವೆ. ಸಾಮಾನ್ಯ ಓದುಗನಿಗೆ ಅರ್ಥವಾಗುವ ಕಥಾ ಸಂವಿಧಾನವನ್ನು ಅವರು ಕೃತಿಗಳಿಗೆ ಬಳಸಿಕೊಂಡಿದ್ದಾರೆ. ಗಂಭೀರವಾದ ವಿಚಾರಗಳನ್ನು ಸರಳವಾದ ಭಾಷೆಯಲ್ಲಿ, ನಿರೂಪಣೆಯಲ್ಲಿ ಚರ್ಚಿಸುತ್ತಾರೆ. ಜಾತಿ, ಧರ್ಮ, ದೇವರು, ದಾಂಪತ್ಯ, ಸ್ತ್ರೀ, ವ್ಯಕ್ತಿ, ಕುಟುಂಬ ಇವುಗಳ ಬಗ್ಗೆ ಪ್ರಗತಿಪರ ಚಿಂತನೆಯನ್ನು ಕಟ್ಟಿಕೊಡುತ್ತಾರೆ. ಈ ವಿಚಾರಗಳ ಕುರಿತು ಹಳೆಯ ಸಾಂಪ್ರದಾಯಿಕ ನಿಲುವುಗಳನ್ನು ಅವರು ಒಪ್ಪಿಕೊಳ್ಳುವುದಿಲ್ಲ. ಇವುಗಳ ಬಗ್ಗೆ ಅವರು ನಡೆಸುವ ವಿಶ್ಲೇಷಣೆಯ ಹಿಂದೆ ಪ್ರಗತಿಪರ ಚಿಂತನೆಯಿದೆ. ಸಾಮಾಜಿಕ ಸಮಾನತೆಯನ್ನು ಕಾಣುವ ಹಂಬಲ ಅವರಲ್ಲಿದೆ. ಮನುಷ್ಯನನ್ನು ಕೇವಲ ಮನುಷ್ಯನನ್ನಾಗಿ ಕಾಣಬೇಕೆಂಬ ನಿಲುವನ್ನು ಸಮರ್ಥಿಸಿದ್ದಾರೆ. ಐಶ್ವರ್ಯ, ಲಿಂಗ, ಜಾತಿ, ಮತ, ಪಂಥಗಳನ್ನು ಮೀರಿ ಬದುಕುವ ಮನುಷ್ಯನ ಹಾಗೂ ಸಮಾಜದ ಅಸ್ತಿತ್ವವನ್ನು ಪ್ರತಿಪಾದಿಸಿರುವುದನ್ನು ಇವರ ಕೃತಿಗಳ ಮೂಲಕ ಕಂಡುಕೊಳ್ಳಲಾಗಿದೆ. ಭಾರತೀಯ ಸಂಸ್ಕೃತಿಯ ಅಧಃಪತನದ ಕಾರಣವನ್ನು ಹುಡುಕುತ್ತಾ ಮನುಷ್ಯನ ಆಚಾರ, ವಿಚಾರ, ನಡವಳಿಕೆ, ಚಿಂತನೆಗಳಲ್ಲಿ ಭಾರತದ ಸ್ವದೇಶೀ ಪರಂಪರೆಯನ್ನು ಉಳಿಸಿಕೊಳ್ಳಬೇಕೆಂಬ ವಿಚಾರವನ್ನು ಪ್ರತಿಪಾದಿಸಿದ್ದಾರೆ.

"ಸಂಶೋಧನೆ ಮನರಂಜನೆಯಲ್ಲ. ಧೂಳು ಕೊಡವಿ ಸ್ವರೂಪವನ್ನು ಖಚಿತಪಡಿಸಿ ತೋರಿಸುವ ಪರಿಶ್ರಮ ಪರಿಚಾರಿಕೆ, ಕತ್ತಲೆಯತ್ತ ಬಿಡುಗಣ್ಣು ಹಾಯಿಸಿ ಕ್ಷ-

ಕಿರಣ ಬೀರುವ ಸಂಶೋಧನೆಯೂ ಒಂದು ಶಿಸ್ತು, ಶಾಸ್ತ್ರ ದರ್ಶನ ಕಣ್ಣಿಗೆ ಕಾಣುವುದರ ಹಿಂದಿರುವ ಅದ್ಭುತವನ್ನು ಅನಾವರಣ ಮಾಡುವ ಆತ್ಮವಿಶ್ವಾಸವಿರಬೇಕು" ಎಂಬ

**(ಹಂಪ ನಾಗರಾಜಯ್ಯ; 2007; ಪುಟ 264)**

ಹಂಪ ನಾಗರಾಜಯ್ಯ ಅವರ ಹೇಳಿಕೆಯಂತೆ ಕತ್ತಲೆಯತ್ತ ಬಿಡುಗಣ್ಣು ಹಾಯಿಸಿ ಕ್ಷ-ಕಿರಣ ಬೀರುವ ಪ್ರಯತ್ನವನ್ನಿಲ್ಲಿ ನಡೆಸಲಾಗಿದೆಯೇ ಹೊರತು ಅವರ ಎಲ್ಲಾ ಕೃತಿಗಳ ವಿಶ್ಲೇಷಣೆ ನಡೆಸುವುದು ಸಾಧ್ಯವಾಗಿಲ್ಲ. ಕೆ.ಟಿ.ಗಟ್ಟಿಯವರ ಕೃತಿಗಳ ನಿರಂತರ ಅಧ್ಯಯನದಿಂದ ಮತ್ತೆ ಹೊಸ ಹೊಸ ದೃಷ್ಟಿಕೋನಗಳ, ವಿಚಾರಗಳ, ಅನಾವರಣ ಸಾಧ್ಯವಿದೆ.

********************

# ಅನುಬಂಧ

## ೧. ಛಾಯಾಚಿತ್ರಗಳು



ಕೆ.ಟಿ.ಗಟ್ಟಿಯವರು



ಪತ್ನಿ ಯಶೋದಾರೊಂದಿಗೆ ಕೆ.ಟಿ.ಗಟ್ಟಿಯವರು



ಕರ್ನಾಟಕ ಸಾಹಿತ್ಯ ಅಕಾಡೆಮಿಯಿಂದ ಸನ್ಮಾನ



ಕರ್ನಾಟಕ ಸಾಹಿತ್ಯ ಅಕಾಡೆಮಿಯ ಗೌರವ ಪ್ರಶಸ್ತಿ



ಸಂದೇಶ ಪ್ರಶಸ್ತಿ ಸ್ವೀಕಾರ



ಸಮತೆಂತೊ ನಾಟಕ ಪ್ರಶಸ್ತಿ ಸ್ವೀಕಾರ




ಕೆ.ಟಿ.ಗಟ್ಟಿಯವರ ಅಭಿನಂದನ ಗ್ರಂಥ 'ನೆಲದ ಬದುಕು' ಬಿಡುಗಡೆ

# ೨. ಪರಾಮರ್ಶನ ಗ್ರಂಥಸೂಚಿ

1. ಕನ್ನಡ ರತ್ನಕೋಶ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು; 2001
2. ಕನ್ನಡ ವಿಶ್ವಕೋಶ ಸಂಪುಟ 3; ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ; 1971
3. ಕುರ್ತಕೋಟಿ ಡಿ.ಕೆ; ಯುಗಧರ್ಮ ಹಾಗೂ ಸಾಹಿತ್ಯ ದರ್ಶನ; ಮನೋಹರ ಗ್ರಂಥಮಾಲಾ, ಧಾರವಾಡ; 1962
4. ಕೋದಂಡರಾಮ ಎನ್.ಕೆ; ಕನ್ನಡ ಸಾಹಿತ್ಯದಲ್ಲಿ ಸಾಂಸ್ಕೃತಿಕ ಸಂಘರ್ಷ; ಗಾಯತ್ರಿ ಸ್ಮಾರಕ ಗ್ರಂಥಮಾಲೆ, ಮೈಸೂರು; 1996
5. ಗಟ್ಟಿ ಕೆ.ಟಿ; ಅಬ್ರಾಹ್ಮಣ; ಕರ್ನಾಟಕ ಬುಕ್ ಏಜನ್ಸಿಸ್, ಬೆಂಗಳೂರು; 1980
6. ಗಟ್ಟಿ ಕೆ.ಟಿ; ಅಭಿಚಾರ; ಸಾಹಿತ್ಯ ಪ್ರಕಾಶನ, ಹುಬ್ಬಳ್ಳಿ; 1987
7. ಗಟ್ಟಿ ಕೆ.ಟಿ; ಇತಿಹಾಸದ ಮೊಗಸಾಲೆಯಲ್ಲಿ; ವನಶ್ರೀ ಪ್ರಕಾಶನ, ಉಜಿರೆ; 1991
8. ಗಟ್ಟಿ ಕೆ.ಟಿ; ಎಂಟು ನಾಟಕಗಳು; ಭಾಗೀರಥಿ ಪ್ರಕಾಶನ, ಬೆಂಗಳೂರು; 2001
9. ಗಟ್ಟಿ ಕೆ.ಟಿ; ಓಂ ತಾರ ತೂರಿ ಸ್ವಾಹಾ; ವನಶ್ರೀ ಪ್ರಕಾಶನ, ಉಜಿರೆ; 1995
10. ಗಟ್ಟಿ ಕೆ.ಟಿ; ಕರ್ಮಣ್ಯೇವಾಧಿಕಾರಸ್ತೇ; ಬಾಪ್ಕೋ ಪ್ರಕಾಶನ; ಬೆಂಗಳೂರು; 1981
11. ಗಟ್ಟಿ ಕೆ.ಟಿ; ಕಾರ್ಮುಗಿಲು; ಭಾಗೀರಥಿ ಪ್ರಕಾಶನ, ಬೆಂಗಳೂರು; 1993
12. ಗಟ್ಟಿ ಕೆ.ಟಿ; ಕುರುಡರು; ವನಶ್ರೀ ಪ್ರಕಾಶನ, ಉಜಿರೆ; 1992
13. ಗಟ್ಟಿ ಕೆ.ಟಿ; ಕೆಂಪು ಕಾಗೆ; ವನಶ್ರೀ ಪ್ರಕಾಶನ; 1988
14. ಗಟ್ಟಿ ಕೆ.ಟಿ; ಕೆ.ಟಿ ಗಟ್ಟಿಯವರ ಮೂರು ನಾಟಕಗಳು; ಸುಧಾ ಎಂಟರ್‌ಪ್ರೈಸಸ್; 2003,
15. ಗಟ್ಟಿ ಕೆ.ಟಿ; ಝೇಂಕಾರದ ಹಕ್ಕಿ; ವನಶ್ರೀ ಪ್ರಕಾಶನ, ಉಜಿರೆ; 1994
16. ಗಟ್ಟಿ ಕೆ.ಟಿ; ತೀರ; ವಸಂತ ಪ್ರಕಾಶನ, ಬೆಂಗಳೂರು; 2003
17. ಗಟ್ಟಿ ಕೆ.ಟಿ; ತ್ರಿಶಂಕು ಮತ್ತು ಇತರರು; ಸುಧಾ ಎಂಟರ್‌ಪ್ರೈಸಸ್; 2003
18. ಗಟ್ಟಿ ಕೆ.ಟಿ; ನಗರಪರ್ವ; ವನಶ್ರೀ ಪ್ರಕಾಶನ, ಉಜಿರೆ; 1992
19. ಗಟ್ಟಿ ಕೆ.ಟಿ; ನಾಟ್ಯ; ವನಶ್ರೀ ಪ್ರಕಾಶನ, ಉಜಿರೆ; 1987
20. ಗಟ್ಟಿ ಕೆ.ಟಿ; ನಿನ್ನೆ ಇಂದು ನಾಳೆ; ಸುಮುಖ ಪ್ರಕಾಶನ, ಬೆಂಗಳೂರು; 2008
21. ಗಟ್ಟಿ ಕೆ.ಟಿ; ನಿನ್ನೆ ನಾಳೆಯ ನಡುವೆ; ಭಾಗೀರಥಿ ಪ್ರಕಾಶನ ಬೆಂಗಳೂರು; 1996
22. ಗಟ್ಟಿಕೆ.ಟಿ; ನೀಲಿ ಗುಲಾಬಿ; ನಿಸರ್ಗ ಪ್ರಕಾಶನ; ಉಜಿರೆ; 1995

23. ಗಟ್ಟಿ ಕೆ.ಟಿ; ನಿಸರ್ಗಕನ್ಯೆ ಅಂಡಮಾನ್; ಭಾಗೀರಥಿ ಪ್ರಕಾಶನ, ಬೆಂಗಳೂರು; 1996
24. ಗಟ್ಟಿ ಕೆ.ಟಿ; ಪರಮಾರ್ಥ; ವನಶ್ರೀ ಪ್ರಕಾಶನ, ಉಜಿರೆ; 1989
25. ಗಟ್ಟಿ ಕೆ.ಟಿ; ಪರುಷ; ಗೀತಾಬುಕ್ ಹೌಸ್, ಮೈಸೂರು; 1985
26. ಗಟ್ಟಿ ಕೆ.ಟಿ; ಪುನರಪಿ ಜನನಂ; ಪ್ರದೀಪ ಪ್ರಕಾಶನ, ಬೆಂಗಳೂರು; 1985
27. ಗಟ್ಟಿ ಕೆ.ಟಿ; ಪೂಜಾರಿ; ಗೀತಾ ಬುಕ್ ಹೌಸ್, ಮೈಸೂರು; 1983
28. ಗಟ್ಟಿ ಕೆ.ಟಿ; ಭೂಗತ ಮತ್ತು ಇತರ ಕಥೆಗಳು; ನೆಮ್ಮದಿ ಪ್ರಕಾಶನ, ಬೆಂಗಳೂರು; 2001
29. ಗಟ್ಟಿ ಕೆ.ಟಿ; ಬೊಂಬೆಯಾಟ; ವನಶ್ರೀ ಪ್ರಕಾಶನ, ಉಜಿರೆ; 1992
30. ಗಟ್ಟಿ ಕೆ.ಟಿ; ಮನುಷ್ಯನ ವಾಸನೆ; ಗೀತಾ ಬುಕ್ ಹೌಸ್, ಮೈಸೂರು; 1986.
31. ಗಟ್ಟಿ ಕೆ.ಟಿ; ಮೂರನೆಯ ಧ್ವನಿ; ಭಾಗೀರಥಿ ಪ್ರಕಾಶನ, ಬೆಂಗಳೂರು; 1994
32. ಗಟ್ಟಿ ಕೆ.ಟಿ; ಮೃತ್ಯೋರ್ಮಾ ಅಮೃತಂಗಮಯ; ಬಾಪ್ಕೋ ಪಬ್ಲಿಕೇಶನ್, ಬೆಂಗಳೂರು; 1981
33. ಗಟ್ಟಿ ಕೆ.ಟಿ; ಯುಗಾಂತರ; ಬಾಪ್ಕೋ ಪ್ರಕಾಶನ, ಮೈಸೂರು; 1983
34. ಗಟ್ಟಿ ಕೆ.ಟಿ; ಯುದ್ಧ; ಭಾಗೀರಥಿ ಪ್ರಕಾಶನ, ಬೆಂಗಳೂರು; 1992
35. ನಗುವನಹಳ್ಳಿ ಪಿ. ರತ್ನ; ಎಂ. ಆರ್. ಶ್ರೀನಿವಾಸಮೂರ್ತಿ– ಒಂದು ಅಧ್ಯಯನ; ಪ್ರಶಾಂತಿ ಪ್ರಕಾಶನ, ಮೈಸೂರು; 1995
36. ನಾಗರಾಜಪ್ಪ ಕೆ.ವಿ; ಗೊರೂರು ಸಾಹಿತ್ಯದಲ್ಲಿ ಗ್ರಾಮಸಮಾಜ; ಯದುಕುಲ ಪ್ರಕಾಶನ, ಮೈಸೂರು; 2009
37. ನಟರಾಜ್ ಹುಳಿಯಾರ್; ಆಫ್ರಿಕನ್ ಹಾಗೂ ಕನ್ನಡ ಸಾಹಿತ್ಯಗಳಲ್ಲಿ ಆಧುನಿಕತೆ ಮತ್ತು ಪರಂಪರೆ ತೌಲನಿಕ ಅಧ್ಯಯನ; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ; 2004
38. ಬಿರಾದಾರ ಎಂ.ಜಿ.(ಸಂ); ಗುಲಬರ್ಗಾ ವಿಶ್ವವಿದ್ಯಾಲಯ ಸಂಶೋಧನ ಪತ್ರಿಕೆ, ಸಂಪುಟ1, ಸಂಚಿಕೆ 2; 1988
39. ಮರಿಯಪ್ಪ ಭಟ್ಟ ಎಂ; ಸಂಕ್ಷಿಪ್ತ ಕನ್ನಡ ಸಾಹಿತ್ಯ ಚರಿತ್ರೆ; ಭಾರತಿ ಪ್ರಕಾಶನ, ಮೈಸೂರು; 1960
40. ರಾಮಚಂದ್ರ ಸಿ.ಎಸ್; ಪರಂಪರೆ–ಪ್ರತಿರೋಧ; ಸಂವಾದ ಪ್ರಕಾಶನ, ಮಲ್ಲಾಡಿ ಹಳ್ಳಿ; 2002
41. ರಾಮಚಂದ್ರನ್ ಸಿ.ಎನ್; ಆಶಯ ಆಕೃತಿ; ಅಭಿನವ ಪ್ರಕಾಶನ, ಬೆಂಗಳೂರು; 1995
42. ವರದಾ ಶ್ರೀನಿವಾಸ್(ಸಂ); ಹಿಂದುಳಿದವರು; ಅನು ಪ್ರಕಾಶನ, ಬೆಂಗಳೂರು; 2010
43. ವಾಸುದೇವ ಬಿ; ಕೆ.ಟಿ.ಗಟ್ಟಿಯವರ ಕಾದಂಬರಿಗಳು–ಅಪ್ರಕಟಿತ ಸಂಪ್ರಬಂಧ; ಮಂಗಳೂರು ವಿ.ವಿ; 1997

44. ವೀರಣ್ಣ ರಾಜೂರ, ಹಿರೇಮಠ ಬಿ.ಆರ್(ಸಂ); ಆಧುನಿಕ ಕನ್ನಡ ಸಾಹಿತ್ಯದ ರೂಪಗಳು; ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ 1996,
45. ಶ್ರೀಧರ್ ಹೆಚ್.ಜಿ.(ಸಂ); ನೆಲದ ಬದುಕು; ಕರ್ನಾಟಕ ಸಂಘ, ಪುತ್ತೂರು; 2009
46. ಶೇಷಗಿರಿರಾವ್ ಎಲ್.ಎಸ್; ಹೊಸಗನ್ನಡ ಸಾಹಿತ್ಯ; ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು; 1993
47. ಶೇಷಗಿರಿ ರಾವ್ ಎಲ್.ಎಸ್; ಹೊಸಗನ್ನಡ ಸಾಹಿತ್ಯ; ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು; 1975
48. ಶೇಷಗಿರಿ ರಾವ್ ಎಲ್. ಎಸ್; ಹೊಸಗನ್ನಡ ಸಾಹಿತ್ಯ ಚರಿತ್ರೆ; ಅಂಕಿತ ಪುಸ್ತಕ, ಬೆಂಗಳೂರು; 1999
49. ಸಿದ್ಧಲಿಂಗಯ್ಯ; ಉರಿಕಂಡಾಯ; ಅಂಕಿತ ಪುಸ್ತಕ ಬೆಂಗಳೂರು; 2009
50. ಹರಿಕೃಷ್ಣ ಭರಣ್ಯ; ಹೊಸಗನ್ನಡ ಸಾಹಿತ್ಯದ ಉಗಮ ಮತ್ತು ವಿಕಾಸ 1860–1920; ಪ್ರಭಸ ಬಿಡುಗಡೆ, ಮಧುರೈ; 1990
51. ಹಾ.ಮಾ.ನಾಯಕ; ಸಾಹಿತ್ಯ ಸಲ್ಲಾಪ; ಸುರುಚಿ ಪ್ರಕಾಶನ, ಮೈಸೂರು; 1970
52. ಹಂಪ ನಾಗರಾಜಯ್ಯ; ಕಡೆಗೋಲು; ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ; 2007

************

## ೩. ಕೆ.ಟಿ.ಗಟ್ಟಿಯವರ ಈವರೆಗಿನ ಸಾಹಿತ್ಯ ಕೃತಿಗಳ ವಿವರ

### ಕಾದಂಬರಿ

1. ಶಬ್ದಗಳು (1976, 79, 85. 2007:– 'ಸುಧಾ' ಧಾರಾವಾಹಿ)
2. ಕರ್ಮಣ್ಯೇ ವಾಧಿಕಾರಸ್ತೇ (1982, 87; – 1975 'ಸುಧಾ' ಧಾರಾವಾಹಿ)
3. ಸಾಫಲ್ಯ (1978, 80; 1975–'ಸುಧಾ' ಧಾರಾವಾಹಿ)
4. ಅಬ್ರಾಹ್ಮಣ (1980, 88, 2001; 1976–'ಸುಧಾ' ಧಾರಾವಾಹಿ)
5. ಬಿಸಿಲ್ಗುದುರೆ (1980, 1985; 1979–'ಸುಧಾ' ಧಾರಾವಾಹಿ)
6. ಅಮುಕ್ತ (1979)
7. ಮನೆ (1980; 1975–'ತುಷಾರ' ಧಾರಾವಾಹಿ)
8. ಮೃತ್ಯೋರ್ಮಾ ಅಮೃತಂ ಗಮಯಾ (1982; 1981–'ಸುಧಾ' ಧಾರಾವಾಹಿ)
9. ಕೂಪ (1981)
10. ಪೂಜಾರಿ (1983; 1981–'ಗೆಳತಿ' ಧಾರಾವಾಹಿ)
11. ಹೇ ಕಾಪುರುಷ (1983)
12. ಯುಗಾಂತರ (1983; 1982–'ಸುಧಾ' ಧಾರಾವಾಹಿ)
13. ಅವಿಭಕ್ತರು (1981, 2007; 1982–'ಕಾದಂಬರಿ' ಧಾರಾವಾಹಿ)
14. ಶಿಲಾತಪಸ್ವಿ (1982)
15. ಅಶ್ರುತಗಾನ (1985; 1983–'ಸುಧಾ' ಕಾದಂಬರಿ ಸ್ಪರ್ಧೆ ಪುರಸ್ಕೃತ ಪುಸ್ತಕ)
16. ರಾಗ ಲಹರಿ (1983, 86,87)
17. ಸ್ವರ್ಣ ಮೃಗ (1983)
18. ಅರಗಿನ ಅರಮನೆ (1984)
19. ಕಾಮಯಜ್ಞ (1985; 1984–'ತುಷಾರ' ಧಾರಾವಾಹಿ)
20. ನಿರಂತರ (1984; 'ತರಂಗ' ಧಾರಾವಾಹಿ)
21. ಪರಿಧಿ (1984)
22. ಪುರುಷ (1985)
23. ಒಂದು ಕಿಲೋ ಬಂಗಾರ ಏಳು ಮಲ್ಲಿಗೆ ತೂಕದ ಹುಡುಗಿ (1985)
24. ಪುನರಪಿ ಜನನಂ (1983; 1985–'ಸುಧಾ' ಧಾರಾವಾಹಿ)
25. ಉರಿ (1985)
26. ಅಂತರಂಗದ ಅತಿಥಿ (1986)
27. ಭೂಮಿಗೀತೆ (1986)
28. ಅಭಿಚಾರ (1986)
29. ಅಪೂರ್ಣ (1986)
30. ಸುಖಾಂತ (1986; 1975–'ಸುಧಾ' ಧಾರಾವಾಹಿ)
31. ಮೂಕ ಮನ (1987)
32. ಅನಂತರ (1989)
33. ಗ್ಲಾನಿ (1989)
34. ಪರಮಾರ್ಥ (1989)

35. ನವಂಬರ 10, 2010 (1990; 1975–'ಮಲ್ಲಿಗೆ' ಧಾರಾವಾಹಿ)
36. ಕಾರ್ಮುಗಿಲು (1993, 2003; 1990–'ಪ್ರಜಾವಾಣಿ'ವಾರ್ಷಿಕ ವಿಶೇಷಾಂಕ ಪುಸ್ತಕ)
37. ಇತಿಹಾಸದ ಮೊಗಸಾಲೆಯಲ್ಲಿ (1991)
38. ಯುದ್ಧ (1993; 1991–'ಸುಧಾ' ಧಾರಾವಾಹಿ)
39. ಸನ್ನಿವೇಶ(1993; 1992–'ಕರ್ಮವೀರ' ಧಾರಾವಾಹಿ)
40. ಚಕ್ರಬಂಧ (1995; 1994–'ಸುಧಾ' ಧಾರಾವಾಹಿ)
41. ರಸಾತಳ (1998; 1997–'ಮಂಗಳ' ಧಾರಾವಾಹಿ)
42. ಮಿತಿ (1998)
43. ಕಾಮರೂಪಿ (2002; 2001–'ಸುಧಾ' ಧಾರಾವಾಹಿ)
44. ನನ್ನ ಆತ್ಮಕಥೆ (2004; 2002–'ಸುಧಾ' ಧಾರಾವಾಹಿ)
45. ನಿನ್ನೆ ಇಂದು ನಾಳೆ (2007)
46. ಕೆಂಪು ಕಳವೆ (2011)

## ಆತ್ಮಕಥೆ

ತೀರ (2003)

## ಕಥಾ ಸಂಕಲನ

1. ಮನುಷ್ಯನ ವಾಸನೆ ಮತ್ತು ಇತರ ಕತೆಗಳು (1986)
2. ನೀಲಿ ಗುಲಾಬಿ ಮತ್ತು ಇತರ ಕತೆಗಳು (1995)
3. ಭೂಗತ ಮತ್ತು ಇತರ ಕತೆಗಳು (2001)
4. ವಿಶ್ವಸುಂದರಿ ಮತ್ತು ಇತರ ಕತೆಗಳು (2007)

## ಪ್ರಬಂಧ

1. ಗುಳಿಗೆಗಳು (ಲಲಿತ ಪ್ರಬಂಧಗಳು) (1972)
2. ಮೂರನೆಯ ಧ್ವನಿ (ಸಾಹಿತ್ಯ ಚಿಂತನೆ) (1994)
3. ನಿನ್ನೆ ನಾಳೆಯ ನಡುವೆ (ಸಾಮಾಜಿಕ ಚಿಂತನೆ) (1996)
4. ನಮ್ಮ ಬದುಕಿನ ಪುಟಗಳು (ವೈಚಾರಿಕ) (2005)
5. ನಮ್ಮೊಳಗಿನ ಆಕಾಶ (ವೈಚಾರಿಕ) (2005)
6. ನಾಲ್ಕು ದಿಕ್ಕು (ವೈಚಾರಿಕ) (2005)
7. ಅಂತರಾಳದ ತಂತಿ (ವೈಚಾರಿಕ) (2007)

## ಪ್ರವಾಸ ಸಾಹಿತ್ಯ

ನಿಸರ್ಗ ಕನ್ಯೆ ಅಂಡಮಾನ್ (1996)

## ಕಾವ್ಯ

1. ಝೇಂಕಾರದ ಹಕ್ಕಿ (ಕವನ ಸಂಕಲನ) (1994)

2. ನನ್ನ ಪ್ರೇಮದ ಹುಡುಗಿ–ಇಂಗ್ಲಿಷ್ ಕವಿತೆಗಳ ಅನುವಾದ (2001)

## ರಂಗ ನಾಟಕಗಳು

1. ನಾಟ್ಕ (1987)
2. ಕೆಂಪು ಕಾಗೆ (1988)
3. ಸತ್ಯಕ್ಕೇ ಜಯ (1991)
4. ಕುರುಡರು (1992)
5. ನಗರ ಪರ್ವ (1992)
6. ಬೊಂಬೆಯಾಟ (1992)
7. ಒಂದು ಗೋವಿನ ಕಥೆ (1993)
8. ಮಾಯಾಮೃಗ (1994)
9. ಓಂ ತಾರ ತೂರಿ ಸ್ವಾಹಾ (1994)
10. ಹೂವು ಅಲ್ಲ ಗೊಬ್ರ (1996)
11. ಭಿನ್ನ ಮತ (1997)
12. ಆಕಾಶ ಕೆಳಗೆ ಬಿತ್ತು (1997)
13. ತ್ರಿಶಂಕು ಮತ್ತು ಇತರರು (1997)
14. ಅದಲು ಬದಲು (1988)
15. ಏಕೋ ಉಪಾಧ್ಯಾಯ (1998)
16. ಟಿಕೇಟು ಸಿಕ್ಕಿತು (1999)
17. ಸೂಪರ್ ಮ್ಯಾನ್ (1998)
18. ಜುಜುಬಿ ದೇವರ ಜುಗಾರಿ (1997)

## ಪ್ರಸಾರವಾಗಿರುವ ಬಾನುಲಿ ನಾಟಕಗಳು

1. ಸತ್ಯಕ್ಕೇ ಜಯ (1991)
2. ಕುರುಡರು (1992)
3. ಒಂದು ಗೋವಿನ ಕಥೆ (1993)
4. ಮಾಯಾಮೃಗ (1994)
5. ಪ್ರೇಮಾರಂಭ (1995)
6. ಹೂವು ಅಲ್ಲ ಗೊಬ್ರ (1996)
7. ಭಿನ್ನ ಮತ (1997)
8. ಅದಲು ಬದಲು (1988)
9. ಏಕೋ ಉಪಾಧ್ಯಾಯ (1998)
10. ಟಿಕೇಟು ಸಿಕ್ಕಿತು (1999)
11. ಕವಿ ಸಮಯ (2002)
12. ಕಾಕಾಯಣ (2003)
13. ಈ ದೇಶಕ್ಕೆ ಭವಿಷ್ಯ ಇದೆ! (2004)

## ಬಾನುಲಿ ಸರಣಿ ನಾಟಕಗಳು

1. ಕತೆ ಇನ್ನೂ ಇದೆ (2000)
2. ಅನುಭವದಡಿಗೆಯ ಮಾಡಿ (2005)

## ಮಕ್ಕಳ ನಾಟಕ ಸಂಕಲನಗಳು

1. ಸತ್ಯದ ಕುಣಿತ (ಐದು ಮಕ್ಕಳ ನಾಟಕಗಳು) (2005)
2. ನೆರಳು ಮಾರಿದ ಸಿರಿವಂತ (ಐದು ಮಕ್ಕಳ ನಾಟಕಗಳು) (2005)
3. ಹಾಡುವ ಡೋಲು, ಸಂಚರಿಸುವ ಮರ, ಕುಂಬಾರನ ಪಿಟೀಲು, ಕುಂಬಳಕಾಯಿ ಚೆಲುವೆ ಮತ್ತು ಮಕ್ಕಳ ತೋಟ (ಈ ಐದು ನಾಟಕಗಳು ಇಂಗ್ಲಿಷ್, ಹಿಂದಿ, ತೆಲುಗು, ತಮಿಳು, ಪಂಜಾಬಿ ಮುಂತಾದ ಎಂಟು ಭಾಷೆಗಳಲ್ಲಿ ಅಚ್ಚಿನಲ್ಲಿವೆ. ಇತರ 15 ಮಕ್ಕಳ ನಾಟಕಗಳು ಕನ್ನಡದಲ್ಲಿ, ಮತ್ತು 25 ನಾಟಕಗಳು ಇಂಗ್ಲಿಷಿನಲ್ಲಿ ಮುದ್ರಣಗೊಳ್ಳುತ್ತಿವೆ.

## ತುಳು ಭಾಷೆಯಲ್ಲಿ

1. ಬೊಂಬಾಯಿದ ಇಲ್ಲ್ (ಕಾದಂಬರಿ–1994)
2. ಎನ್ನ ಮೋಕೆದ ಪೊಣ್ಣು (ಇಂಗ್ಲಿಷ್ ಕವಿತೆಗಳ ಅನುವಾದ–2000)

## ಶಿಕ್ಷಣ

1. English Kannada bilingual
   ಗುರುಗಳಾಗಿ ತಾಯಿ–ತಂದೆ
   Parents as Educators (2002, 2005)
2. In Kannada
   ಉತ್ಕೃಷ್ಟತೆಗಾಗಿ ತಾಯಿ ತಂದೆ(2005)
3. In English
   Parenting for Excellence (2005)

## ಭಾಷೆ ಕಲಿಕೆಯ ಪುಸ್ತಕಗಳು
ಇಂಗ್ಲಿಷ್–ಕನ್ನಡ ಉಭಯ ಬಾಷಾ ಕೃತಿಗಳು

English-Kannada Bilingual books
ಇಂಗ್ಲಿಷ್ ಮತ್ತು ಕನ್ನಡ ಭಾಷಾಧ್ಯಯನ

1. The Bilingual Master
   ದ ಬೈಲಿಂಗ್ವಲ್ ಮಾಸ್ಟರ್

2. ನಿಮ್ಮ ಮಗುವಿಗೆ ಇಂಗ್ಲಿಷ್ ಮತ್ತು ಕನ್ನಡ ಕಲಿಸುವ ವಿಧಾನ (2002)
How to Teach Your Child English and Kannada

3. Learn Kannada through English
ಕನ್ನಡ-ಆಲಿಸಿ ಆಡಿ ಓದಿ ಬರೆದು ಕಲಿಯಿರಿ (ವೆಬ್‌ನಲ್ಲಿ ಲಭ್ಯ)
Learn Kannada Naturally (2007)

4. Learn English through Kannada
ಇಂಗ್ಲಿಷ್-ಆಲಿಸಿ ಆಡಿ ಓದಿ ಬರೆದು ಕಲಿಯಿರಿ
Learn English Naturally (2007)

*****************

## ೪. ಕೆ.ಟಿ. ಗಟ್ಟಿಯವರೊಂದಿಗೆ ಸಂದರ್ಶನ:

ದಿನಾಂಕ 8–8–2010 ರಂದು ಕೆ.ಟಿ.ಗಟ್ಟಿಯವರ ಮನೆಯಾದ ಉಜಿರೆಯ ವನಶ್ರೀಯಲ್ಲಿ ಅವರ ಸಂದರ್ಶನ ನಡೆಸಿದ್ದು ಅವರು ನೀಡಿದ ಮಾಹಿತಿಗಳನ್ನು ಇಲ್ಲಿ ನೀಡಲಾಗಿದೆ.

**ಪ್ರಶ್ನೆ 1 :** ನೀವು ನಿಮ್ಮ ಕುಟುಂಬ, ವಿದ್ಯಾಭ್ಯಾಸ, ವೃತ್ತಿಜೀವನಗಳ ಬಗ್ಗೆ ತಿಳಿಸಿಕೊಡುವಿರಾ?

**ಉತ್ತರ :** ನನ್ನ ತಂದೆ ದೂಮಪ್ಪಗಟ್ಟಿ, ತಾಯಿ ಪರಮೇಶ್ವರಿ. ಕೃಷಿ ಮಾಡುವ ಕುಟುಂಬ. ತಂದೆಯವರಿಗೆ ನಾವು ಐದು ಜನ ಮಕ್ಕಳು. ತಂದೆ ಎಲ್ಲರಿಗೂ ಪ್ರಾಥಮಿಕ ಶಿಕ್ಷಣ ಕೊಡಿಸಿದರು. ನಂತರ ಬಡತನದಿಂದಾಗಿ ಹೈಸ್ಕೂಲಿಗೆ ಕಳಿಸಲು ಅವರಿಗೆ ಆಗಲಿಲ್ಲ. ಮದರಾಸು ಸರಕಾರ ನಡೆಸುತ್ತಿದ್ದ ಪರೀಕ್ಷೆಗೆ ಕುಳಿತು ಎಂಟನೆಯ ತರಗತಿಯಲ್ಲಿ ಉತ್ತೀರ್ಣನಾದೆ. ಎರಡು ವರ್ಷ ಟೀಚರ್ ಟ್ರೈನಿಂಗ್ ಮುಗಿಸಿ 1955ರಲ್ಲಿ ಅಧ್ಯಾಪಕ ವೃತ್ತಿಗೆ ಸೇರಿದೆ. ಮತ್ತೆ ಅದೇ ರೀತಿ ಮನೆಯಲ್ಲಿ ಕುಳಿತುಕೊಂಡು ಅಭ್ಯಾಸ ಮಾಡಿದೆ. ಯಾವುದೇ ಟ್ಯುಟೋರಿಯಲ್ ಕಾಲೇಜು ಆ ಕಾಲದಲ್ಲಿ ಇರಲಿಲ್ಲ. ನಂತರ 1959ರಲ್ಲಿ ಹತ್ತನೇ ತರಗತಿ, ಪದವಿ ಪೂರ್ವ ಶಿಕ್ಷಣ, 1963ರಲ್ಲಿ ಬಿ.ಎ. ಪದವಿ ಮುಗಿಸಿದೆ. ಕೆಲವೇ ದಿನಗಳಲ್ಲಿ ಬಿ.ಎಡ್. ಟ್ರೈನಿಂಗ್‌ಗೆಂದು ಸರಕಾರವೇ ನನ್ನನ್ನು ಕಳುಹಿಸಿತು. ಇಂಗ್ಲಿಷ್ ಆಸಕ್ತಿಯ ವಿಷಯ. ಆಗ ಟೀಚರ್‌ಗೆ ಸಂಬಳ 49 ರೂಪಾಯಿ. ವರ್ಷಕ್ಕೆ ಒಂದು ರೂಪಾಯಿ ಇಂಕ್ರಿಮೆಂಟ್. ಅದು ಆಗಿ 80–90 ರೂಪಾಯಿ ನನಗೆ ಸಿಗುತ್ತಿತ್ತು. ಅದರಲ್ಲಿ ಹೋಗಿ ಪರೀಕ್ಷೆಗೆ ಕುಳಿತುಕೊಳ್ಳಲು ಆಗುತ್ತಿರಲ್ಲ. ದೂರ ಪರೀಕ್ಷೆಗೆ ಹೋಗಿ ಕುಳಿತುಕೊಳ್ಳಲು ಖರ್ಚು ಭರಿಸಲು ಕಷ್ಟ. ಮೇನಲ್ಲಿ ತ್ರಿವೆಂಡ್ರಂನ ಯೂನಿವರ್ಸಿಟಿ ಕಾಲೇಜಿನಲ್ಲಿ ಪರೀಕ್ಷೆಗೆ ಕುಳಿತುಕೊಂಡೆ. ಕೂಡಲೇ ಕಾಸರಗೋಡು ಸರಕಾರಿ ಹೈಸ್ಕೂಲಿಗೆ ನೇಮಿಸಿದರು. ಅಲ್ಲಿಯೇ ಕೆಲಸ ಸಿಗಬೇಕೆಂದು ನಾನು ಹಠ ಹಿಡಿದಿದ್ದೆ. ಏಕೆಂದರೆ ನನ್ನ ತಮ್ಮಂದಿರು ತಂಗಿಯಂದಿರ ವಿದ್ಯಾಭ್ಯಾಸಕ್ಕೆ ಅನುಕೂಲವಾಗಬೇಕೆಂಬುದು ನನ್ನ ಉದ್ದೇಶವಾಗಿತ್ತು. ನಾನು ಎಸ್.ಎಸ್.ಎಲ್.ಸಿ. ಪಾಸಾಗುವ ಹೊತ್ತಿಗೇನೇ ತಂದೆಯವರು ತೀರಿಕೊಂಡಿದ್ದರು. ಕುಟುಂಬದ ಪೂರ್ತಿ ಜವಾಬ್ದಾರಿ ನನ್ನ ಮೇಲೆ ಮತ್ತು ನನ್ನ ತಾಯಿಯ ಮೇಲೆ ಬಂದಿತ್ತು. ಸಹೋದರರನ್ನು ಓದಿಸಬೇಕೆಂದು ನಾನು ಬಹಳ ಕಷ್ಟ ಪಟ್ಟೆ. ಅವರ ಓದು ನಡೆಯುತ್ತಿತ್ತು, ಜೊತೆಗೆ ನಾನೂ ಓದುತ್ತಿದ್ದೆ. ನನಗೆ ಮೊದಲಿನಿಂದಲೂ ಒಂದರಲ್ಲೆ ಕಟ್ಟಿಕೊಂಡಿರುವುದು ನನ್ನ ಮನಸ್ಸಿಗೆ ಇಷ್ಟವಿರಲಿಲ್ಲ. ಅದರಲ್ಲಿಯೇ ಸ್ವಲ್ಪ ಸಮಯ ಕಳೆದಿದ್ದರೆ ನನಗೆ ಎಜುಕೇಶನ್ ಆಫೀಸರ್ ಆಗಿ ಪ್ರಮೋಶನ್ ಸಿಗುತ್ತಿತ್ತು. ಹಿಂದಿನ ಸರ್ವಿಸ್ ತುಂಬಾ ಇದ್ದುದರಿಂದ ಅದರಲ್ಲಿಯೇ ಮುಂದುವರಿದಿದ್ದರೆ ಪೆನ್‌ಷನ್ ಬೆನಿಫಿಟ್ ಎಲ್ಲಾ ಸಿಗುತ್ತಿತ್ತು. ಅಥವಾ ಡಿ.ಓ. ಆಗಿ ಇನ್ನೂ

ಮುಂದಕ್ಕೆ ಹೋಗಬಹುದಿತ್ತು. ನಾನು ಬಿ.ಎಡ್. ನಲ್ಲಿರುವಾಗ ತುಂಬಾ ಲೇಖನಗಳನ್ನು ಬರೆದಿದ್ದೆ. ಆಗ ಇದ್ದ ಕಷ್ಟಗಳನ್ನು ಮರೆಯಲಿಕ್ಕೆಂದೇ ಬರೆಯುತ್ತಿದ್ದೆ. ದುಃಖ ತುಂಬಾ ಇತ್ತು, ಕಷ್ಟ ತುಂಬಾ ಇತ್ತು. ಒಂದು ರೀತಿಯಲ್ಲಿ ಎಸ್ಕೇಪಿಸಂ ಅಂತ ಹೇಳಬಹುದು. ನಾನು ಚಿಕ್ಕಂದಿನಿಂದಲೇ ತುಂಬಾ ಓದುತ್ತಿದ್ದೆ, ಬರೆಯುತ್ತಿದ್ದೆ. ಎಲ್ಲಾ ಕವಿಗಳ ಬಗ್ಗೆ ಓದುತ್ತಿದ್ದೆ. ಕವಿತೆ, ಕಾದಂಬರಿ ಓದುತ್ತಿದ್ದೆ. ಬೇಂದ್ರೆಯವರನ್ನು ನಾನು ಕಡಿಮೆ ಓದಿದ್ದು. ಏಕೆಂದರೆ ಅರ್ಥ ಆಗುತ್ತಿರಲಿಲ್ಲ. ಎಲ್ಲಾ ಲೇಖಕರ ಪ್ರತಿಯೊಂದು ಕಾದಂಬರಿಕಾರರ ಕಾದಂಬರಿಯನ್ನೂ ನಾನು ಓದಿದ್ದೇನೆ. ಆಗ ಸರಕಾರದ ಸರ್ಕ್ಯುಲೇಟಿಂಗ್ ಲೈಬ್ರರಿಯೊಂದಿತ್ತು. ಹಾಗಾಗಿ ಓದಲು ನನಗೆ ಬೇಕಾದಷ್ಟು ಪುಸ್ತಕ ಸಿಗುತ್ತಿತ್ತು. 4 ವರ್ಷ ಹೈಸ್ಕೂಲಿನಲ್ಲಿ ಕೆಲಸ ಮಾಡಿದ ಮೇಲೆ ಅದನ್ನು ನನಗೆ ಬಿಡಬೇಕು ಅನಿಸಿತು. ಸರಕಾರಿ ಉದ್ಯೋಗ ಆದರೂ ಅದರಲ್ಲೇ ಕಟ್ಟಿಕೊಂಡಿರುವುದು ನನಗೆ ಇಷ್ಟವಾಗಲಿಲ್ಲ. ಟೀಚಿಂಗ್ ನನಗೆ ಇಷ್ಟ, ಆದರೆ ಅದರಲ್ಲಿರುವಂತಹ ಮೇಲಿನ ಅಧಿಕಾರಿಗಳ ಧೋರಣೆಗಳು ಇಷ್ಟವಾಗುತ್ತಿರಲಿಲ್ಲ. ಅವರಿಗೆ ಬಗ್ಗಿ ನಡೆಯುವ ಸ್ವಭಾವ ನನ್ನದಾಗಿರಲಿಲ್ಲ. ಸ್ವತಂತ್ರವಾಗಿರಬೇಕು ಎಂದು ನನಗನ್ನಿಸುತ್ತಿತ್ತು. ಮಣಿಪಾಲದ ಇಂಜಿನಿಯರಿಂಗ್ ಕಾಲೇಜು, ಬಿ.ಎಡ್. ಕಾಲೇಜಿನಲ್ಲಿದ್ದಾಗ ಇದ್ದವರೆಲ್ಲಾ ಈಗ ಆರಾಮವಾಗಿದ್ದಾರೆ. ನಮ್ಮ ಪೈಗಳು ಹೇಳುತ್ತಿದ್ದರು–ಇದೊಂದು ಮಿನಿ ವರ್ಲ್ಡ್ ಅಂತ. ಮಿನಿ ವರ್ಲ್ಡ್‌ನಲ್ಲಿ ಇರುವುದೇ ನನಗೆ ಇಷ್ಟವಿಲ್ಲ. ಬಾವಿ ಕೂಡಾ ಮಿನಿ ವರ್ಲ್ಡ್. ಆ ಸಂದರ್ಭದಲ್ಲಿ ಕೇಂದ್ರ ಸರಕಾರ ಡೆವಲಪಿಂಗ್ ಕಂಟ್ರಿಸ್‌ಗೆ ಡಾಕ್ಟರ್ಸ್, ಇಂಜಿನಿಯರ್ಸ್ ಮೊದಲಾದ ಪರಿಣತರನ್ನು ಕಳುಹಿಸುವ ಯೋಜನೆ ಹಮ್ಮಿಕೊಂಡಿತ್ತು. ಅದು ಬೇರೆ ಬೇರೆ ದೇಶಗಳಿಗೆ ಕಳುಹಿಸಲಾಗುತ್ತಿತ್ತು. ನಾನು ಅದಕ್ಕೆ ಅಪ್ಲೈ ಮಾಡಿದೆ. ಅವರು ನನ್ನನ್ನು ಸೆಲೆಕ್ಟ್ ಮಾಡಿದರು. ಮೊದಲು ಆಫ್‌ಘಾನಿಸ್ಥಾನ, ನಂತರ ಸೊಮಾಲಿಯಾಕ್ಕೆ ಹೋಗಲು ಹೇಳಿದರು. ನಂತರ ಆಫ್ರಿಕಾದ ಇಥಿಯೋಪಿಯಾಕ್ಕೆ ಹೋಗುವ ಅವಕಾಶ ಸಿಕ್ಕಿತು, ಒಪ್ಪಿಕೊಂಡೆ. ನನ್ನ ಸಹೋದರನೊಬ್ಬ ತೀರಿಕೊಂಡ ನಂತರ ನನ್ನ ಮಕ್ಕಳ ವಿದ್ಯಾಭ್ಯಾಸದೊಂದಿಗೆ ಅವನ ಮಕ್ಕಳ ವಿದ್ಯಾಭ್ಯಾಸದ ಜವಾಬ್ದಾರಿಯೂ ನನ್ನ ಮೇಲೆ ಬಂತು. ನನ್ನ ಮೂರು ಮಂದಿ ಮಕ್ಕಳಲ್ಲಿ ಇಬ್ಬರು ಹೆಣ್ಣು ಮಕ್ಕಳು ವಿದೇಶದಲ್ಲಿ ನೆಲೆಸಿದ್ದಾರೆ. ಮಗ ಬೆಂಗಳೂರು ವಿಶ್ವವಿದ್ಯಾಲಯದ ಭೌತಶಾಸ್ತ್ರ ವಿಭಾಗದಲ್ಲಿ ಸಂಶೋಧನೆಯಲ್ಲಿ ನಿರತನಾಗಿದ್ದಾನೆ.

**ಪ್ರಶ್ನೆ 2 :** ದೂರದ ಕೇರಳದ ಮೂಲದ ನೀವು ಈಗ ಉಜಿರೆಯನ್ನು ಆಯ್ಕೆ ಮಾಡಿಕೊಂಡು ವಾಸಿಸುತ್ತಿರಲು ಕಾರಣವೇನು?

**ಉತ್ತರ :** ಕಾಸರಗೋಡಿನಲ್ಲಿ ನನಗೆ ಸ್ವಲ್ಪ ಜಾಗ ಇತ್ತು. ಕಾಸರಗೋಡಿನಲ್ಲಿ ನಮ್ಮ ಸಂಸ್ಕೃತಿ ಹೊರಟು ಹೋಗಿದೆ. ಕನ್ನಡ ಭಾಷೆಗೆ ಅಲ್ಲಿ ಯಾವುದೇ ಪ್ರಾತಿನಿಧ್ಯ ಇಲ್ಲ.

ನನ್ನ ತಮ್ಮ ಅಲ್ಲಿ ಓದಲು ಬಹಳ ಕಷ್ಟ ಪಟ್ಟಿದ್ದಾನೆ. ಉಡುಪಿಯಲ್ಲಿ ನಾವಿದ್ದಾಗ ಅಲ್ಲೇ ಮನೆ ಮಾಡಬೇಕೆಂಬ ಯೋಚನೆಯಿತ್ತು. ಅದಕ್ಕೆ ನನಗೆ ಕನಿಷ್ಠ 2–3 ಲಕ್ಷ ರೂಪಾಯಿ ಬೇಕಾಗಿತ್ತು. ಅಲ್ಲಿ ಜಾಗವನ್ನು ಖರೀದಿಸಿದ್ದೆ. ಐದು ಸೆಂಟ್ಸ್ ಜಾಗದಲ್ಲಿ ಸುಮ್ಮನೆ ಕುಳಿತುಕೊಂಡಿರಲು ನನಗೆ ಇಷ್ಟವಿರಲಿಲ್ಲ. ಅದಕ್ಕಿಂತ ದೊಡ್ಡ ಜಾಗ ಖರೀದಿಸಿ ವಾಸಿಸುವುದು ನನ್ನ ಬಜೆಟ್‌ನೊಳಗೆ ಬರುತ್ತಿರಲಿಲ್ಲ. ಕಾಪುವಿನವರೆಗೆ ಸ್ಥಳ ಹುಡುಕಿದೆ. ಸರಿಯಾಗಿ ಸಿಗಲಿಲ್ಲ. ಪತ್ರಿಕೆಯಲ್ಲಿ ಬಂದ ಜಾಹೀರಾತನ್ನು ನೋಡಿ ಇಲ್ಲಿಗೆ ಬಂದು ಸ್ಥಳ ನೋಡಿದಾಗ ನನಗೆ ಇದು ಇಷ್ಟವಾಯಿತು. ಅಲ್ಲದೆ ಹಿಂದೊಮ್ಮೆ ಈ ಸ್ಥಳವನ್ನು ನಾನು ಕಂಡಿದ್ದೆ. ನಾನು ಹಳ್ಳಿಯವನಾದುದರಿಂದ ಈ ಪರಿಸರ ನನಗೆ ತುಂಬಾ ಇಷ್ಟವಾಯಿತು. ನಾನು ಇಲ್ಲಿ ಮೊದಲು ನೋಡಿದ್ದು ಮಕ್ಕಳಿಗೆ ಶಾಲೆ, ವಿದ್ಯಾಭ್ಯಾಸ. ನಾನು ಎಲ್ಲಿ ಬೇಕಾದರೂ ಇರಬಹುದು. ಆದರೆ ಮಕ್ಕಳ ವಿದ್ಯಾಭ್ಯಾಸ ಮುಖ್ಯ. ಅದಕ್ಕೆ ಈ ಸ್ಥಳ ಆಯ್ಕೆ ಮಾಡಿಕೊಂಡೆ. ನನ್ನೊಳಗಿನ ಲೋಕವೇ ನನ್ನ ಬರವಣಿಗೆ. ಅದಕ್ಕೆ ಪರಿಸರ ಹೀಗೆಯೇ ಇರಬೇಕೆಂದೇನೂ ಇಲ್ಲ. ಮನೆಯವರೆಲ್ಲಾ ಓಡಾಡುತ್ತಿದ್ದರೂ, ಮಾತಾಡುತ್ತಿದ್ದರೂ ನನಗೇನೂ ತೊಂದರೆ ಆಗುವುದಿಲ್ಲ. ಯಾವುದಾದರೂ ಇತರ ಕೆಲಸವಿದ್ದ ಸಂದರ್ಭದಲ್ಲಿ ಮಧ್ಯದಲ್ಲಿ ಎದ್ದು ಅದನ್ನು ಮುಗಿಸಿ ಪುನಃ ನನ್ನ ಬರವಣಿಗೆಯನ್ನು ಮುಂದುವರಿಸುತ್ತೇನೆ. ಜೋರಾದ ಶಬ್ದ ಕೆಲವೊಮ್ಮೆ ತೊಂದರೆ ಕೊಡುತ್ತದೆ. ಕಿವಿ ಮುಚ್ಚಿಕೊಂಡಿದ್ದರೆ ಎಲ್ಲಿದ್ದರೂ ಬರೆಯಬಹುದು.

**ಪ್ರಶ್ನೆ 3 :** ನಿಮ್ಮ ಆಸಕ್ತಿಯ ಕ್ಷೇತ್ರಗಳ ಬಗ್ಗೆ ತಿಳಿಸಿ.

**ಉತ್ತರ :** ಗಾರ್ಡನಿಂಗ್ ನನಗೆ ಆಸಕ್ತಿ. ಅದು ಬಿಟ್ಟರೆ ಬರವಣಿಗೆ. ಮನೆಯಲ್ಲಿ ತಂದೆಯವರಲ್ಲಿ ಬೇಕಾದಷ್ಟು ಪುಸ್ತಕಗಳಿದ್ದವು. ಕೆಲವು ಪುಸ್ತಕಗಳು ನನಗೆ ಅರ್ಥವಾಗದಿದ್ದರೂ ಓದುತ್ತಿದ್ದೆ. ಹಾಗಾಗಿ ಚಿಕ್ಕಂದಿನಿಂದಲೂ ಓದುವುದು ಎಂದರೆ ನನಗೆ ಆಸಕ್ತಿ. ಎರಡನೇ, ಮೂರನೇ ಕ್ಲಾಸಿನಲ್ಲಿರುವಾಗಲೇ ನಾನು ಬಹಳಷ್ಟು ಆಸಕ್ತಿಯಿಂದ ಓದುತ್ತಿದ್ದೆ. ಗಾಂಧೀಜಿಯವರ ತತ್ವಾಧಾರಿತ ಶಿಕ್ಷಣ ಜಾರಿಗೊಂಡ ಸಂದರ್ಭದಲ್ಲಿ ಅಂದರೆ ಗಾಂಧೀಜಿ ಒಂದು ಕಡೆ ಹೇಳಿದಂತೆ – ಮಾತೃಭಾಷೆಯಲ್ಲಿಯೇ ಶಿಕ್ಷಣ ಆಗಬೇಕು. ಮಕ್ಕಳೊಡನೆ ತಾಯಿ ತಂದೆಯವರು ಇಂಗ್ಲಿಷ್ ಮಾತನಾಡಬಾರದು ಎಂಬ ವಿಚಾರವನ್ನು ನಕಲು ಮಾಡಿದ್ದರು. ನಿಜವಾಗಿ ಇಂಗ್ಲಿಷ್ ಬೇಡವೆಂದು ಅವರೇನೂ ಹೇಳಲಿಲ್ಲ. ಆಗ ತಯಾರಿಸಲಾದ ಸಿಲೆಬಸ್‌ನಲ್ಲಿ ಎರಡು ವರ್ಷ ಇಂಗ್ಲಿಷನ್ನು ನೋಡಲಿಕ್ಕಿಲ್ಲ ಎಂದಾಗಿತ್ತು. ನನಗಾಗ ಸುಮಾರು 15 ವರ್ಷವಾಗಿರಬೇಕು. ನಂತರ 2–3 ವರ್ಷ ಕನ್ನಡವನ್ನು ಓದಿದೆ. ಹೈಸ್ಕೂಲಿನಲ್ಲಿದ್ದಾಗ ಒಬ್ಬರು ಮೇಷ್ಟ್ರೊಂದಿಗೆ ನಾನು ಇಂಗ್ಲಿಷನ್ನು ಹೇಗೆ ಅಭ್ಯಾಸಮಾಡಬೇಕೆಂದು ಕೇಳಿದೆ. ಅವರು ಇಂಗ್ಲಿಷನ್ನು ಕನ್ನಡ

ಅರ್ಥಕೋಶ ಇಟ್ಟುಕೊಂಡು ಅಭ್ಯಾಸ ಮಾಡುವುದಲ್ಲ. ಇಂಗ್ಲಿಷನ್ನು ಇಂಗ್ಲಿಷ್‌ನಲ್ಲಿಯೇ ಅರ್ಥಮಾಡಿಕೊಳ್ಳಲು ತಿಳಿಸಿದರು. ಅದು ನನಗೆ ಬಹಳ ಸಹಾಯವಾಯಿತು. ನಾನೊಬ್ಬನೇ ಕಲಿತು ಓದುತ್ತಿದ್ದುದರಿಂದ ಗಣಿತ ನನಗೆ ಕಷ್ಟವಾಗುತ್ತಿತ್ತು. ಆಗ ನಾನು ಮುಖ್ಯೋಪಾಧ್ಯಾಯನಾಗಿ ಇದ್ದುದರಿಂದ ವಿದ್ಯಾರ್ಥಿಗಳ ಜವಾಬ್ದಾರಿ ಜಾಸ್ತಿ ಇತ್ತು. ಹೇಗೋ ಕಲಿತೆ. ಕಲಿಯುವುದೆಂದರೆ ಕಲಿಯುವುದು ಅಷ್ಟೆ. ಬಿ.ಎ. ಮುಗಿಸಿದ ಬಳಿಕ ಎಂ.ಎ. ಅರ್ಥಶಾಸ್ತ್ರ ಮಾಡುವುದೆಂದು ನಿರ್ಧರಿಸಿದೆ. ಆಗ ನನ್ನ ಸಹೋದ್ಯೋಗಿ ಹೇಳಿದರು ನೀವು ಅರ್ಥಶಾಸ್ತ್ರ ಎಂ.ಎ. ಯಾಕೆ ಮಾಡುತ್ತೀರಿ? ನಿಮ್ಮ ಅಭಿರುಚಿ ನೋಡಿದರೆ ನೀವು ಎಂ.ಎ. ಇಂಗ್ಲಿಷ್ ಮಾಡಬೇಕೆಂದು ತಿಳಿಸಿದರು. ಆಗ ನಾನು ಎಂ.ಎ. ಇಂಗ್ಲಿಷ್ ಮಾಡುವುದೆಂದು ತೀರ್ಮಾನಿಸಿದೆ. ಮನುಷ್ಯನಿಗೊಂದು ಪ್ರತ್ಯೇಕವಾದಂತಹ ಪ್ರತಿಭೆ ಅಂತ ಇದೆ. ಅಂತಾದ್ರೂ ಕೂಡಾ ನೀವದನ್ನು ಬಳಸದೆ ಇದ್ದರೆ ಅದು ಬೆಳೆಯುವುದೇ ಇಲ್ಲ. ಎಲ್ಲಾ ಪ್ರತಿಭೆಗಳೂ ಒಂದು ಗಿಫ್ಟ್ ಅಂತ ಹೇಳಿದ್ರೂ ಕೂಡಾ ಅವಕಾಶ ಸಿಕ್ಕಿದ್ರೆ ಆ ಪ್ರತಿಭೆಗಳು ಇವೆ ಅಂತ ಗೊತ್ತಾಗ್ತದೆ ಅಷ್ಟೆ. ಎಲ್ಲರೊಂದಿಗೆ ಗಿಫ್ಟ್ ಇರಬಹುದು. ಆ ಪ್ರತಿಭೆ ಎನ್ನುವುದು ಹಲವು ರೀತಿಯಲ್ಲಿ ಇರುತ್ತದೆ. ಯಾರೋ ಒಬ್ಬ ಸಂಗೀತಗಾರ ಇರುತ್ತಾನೆ. ಅವಕಾಶ ಸಿಕ್ಕಿದುದರಿಂದ ಅವನು ಮೇಲಕ್ಕೆ ಬಂದಿದ್ದಾನೆ. ಸಿಕ್ಕದವರು ಮೂಲೆ ಗುಂಪಾದದ್ದಿದೆ. ಅವರು ಮೇಲೆ ಬರಲಿಲ್ಲ, ಮತ್ತು ಒತ್ತಡ. ಯಾವುದೇ ಒಂದು ರೀತಿಯ ಒತ್ತಡ. ನನಗೆ ಒಳಗಿನ ಒಂದು ಒತ್ತಡ. ಒಂದು ಬಾಗಿಲು ಮುಚ್ಚಿದರೆ ಇನ್ನೊಂದನ್ನು ಮೆಟ್ಟಿಯಾದರೂ ತೆರೆಯಬೇಕು, ತೆರೆಯಲೇ ಬೇಕು. ಯಾಕೆ ಎನ್ನುವುದು ಬದುಕಿನ ಒತ್ತಡ ಸಹಾ. ಒಳಗಿನ ಒತ್ತಡ ಎನ್ನುವುದು ಸ್ಫೂರ್ತಿ ಅಥವಾ ಇನ್ಸ್‌ಪಿರೇಷನ್ ಅಥವಾ ಗಿಫ್ಟೆಡ್‌ನೆಸ್ ಏನಲ್ಲ. ಅದು ಬದುಕಿನ ಒತ್ತಡ ಕೂಡಾ ಹೌದು. ಬದುಕಿನ ಒತ್ತಡದಲ್ಲಿ ಒಂದು ಆಯ್ಕೆ ಬಂದಾಗ, (ಎರಡು ಇರುವಾಗ ಒಂದು ಆಯ್ಕೆ) ಅಲ್ಲಿ ವಿಶೇಷವಾದ ಆಯ್ಕೆ ಇಂಗ್ಲಿಷ್. ಕನ್ನಡವನ್ನೂ ನಾನು ಓದಿಕೊಂಡಿದ್ದೆ. ಒಂದು ಭಾಷೆಯನ್ನು ಚೆನ್ನಾಗಿ ಕಲಿತುಕೊಂಡ ಮೇಲೆ, ಅದರ ಬಗ್ಗೆ ಪ್ರೀತಿಯಿದೆ ಎಂದಾದ ಮೇಲೆ ಇನ್ನೊಂದು ಭಾಷೆಯನ್ನು ಕಲಿಯುವುದು ತುಂಬಾ ಕಷ್ಟವೇನಲ್ಲ. ಅದನ್ನು ಕರಗತ ಮಾಡಿಕೊಳ್ಳುವುದು ಅದೊಂದು ಪ್ರತ್ಯೇಕವಾದ ಒಲವು. ಒಲವಿನಿಂದ ಆ ಸಾಮರ್ಥ್ಯ ಬೆಳೆಯುತ್ತದೆ. ಅನಂತರ ಇನ್ನೊಂದು ಭಾಷೆಯನ್ನು ಕಲಿಯುವುದು ಕೂಡಾ. ಇದನ್ನು ಕೂಡಾ ಕಲಿಯಬಹುದೆಂಬ ಮನಸ್ಸೇ ಹಾಗಿರುತ್ತದೆ. ನಾವು ಇಥಿಯೋಪಿಯಾದಿಂದ ಬಂದು ಸುಮಾರು 40 ವರ್ಷ ಆಗಿರಬಹುದು ಅಷ್ಟು ವರ್ಷ ನಾವು ಅಲ್ಲಿ ವ್ಯವಹಾರಕ್ಕಾಗಿ ಎಷ್ಟೆಲ್ಲಾ ಮಾತಾಡುತ್ತಿದ್ದೆವೋ ಅದನ್ನು ನಾನು ಈಗ ಕೂಡಾ ಮಾತನಾಡಬಲ್ಲೆ. ಭಾಷೆಗೆ ಸಂಬಂಧಪಟ್ಟ ಪ್ರತ್ಯೇಕವಾದ ಮೆಮೊರಿ ಅದು ಅಷ್ಟೆ. ಹಾಗಾಗಿ ಸ್ವಾಭಾವಿಕವಾಗಿ ನಾನು ಇಂಗ್ಲಿಷ್ ಕಲಿಸಲು ಇಷ್ಟಪಟ್ಟೆ.

**ಪ್ರಶ್ನೆ 4 :** ನಿಮ್ಮ ಸಾಹಿತ್ಯ ಸೃಷ್ಟಿಗೆ ಪ್ರೇರಣೆ ಏನು?

**ಉತ್ತರ :** ಪುಸ್ತಕವೇ ನನಗೆ ಪ್ರೇರಣೆ.

**ಪ್ರಶ್ನೆ 5 :** ಪ್ರಕಟಗೊಂಡ ನಿಮ್ಮ ಮೊದಲ ಕೃತಿ ಯಾವುದು – ಆ ಸಂದರ್ಭದ ನಿಮ್ಮ ಅನುಭವ ಏನು?

**ಉತ್ತರ :** ನಿಜವಾಗಿ ಪ್ರಕಟಗೊಂಡ ಮೊದಲ ಕೃತಿ ಇಂಗ್ಲಿಷ್ ಫೊನೆಟಿಕ್ಸ್‌ನಲ್ಲಿ 'ಕರೆಕ್ಟ್ ಯುವರ್ ಸ್ಪೀಚ್' ಅಂತ. 1967ರಲ್ಲಿ ಆ ಪುಸ್ತಕ ನಾನೇ ಪ್ರಕಟ ಮಾಡಿದ್ದು. ಇಂಗ್ಲಿಷ್ ಫೊನೆಟಿಕ್ಸ್ ನನಗೆ ಬಹಳ ಆಸಕ್ತಿಯ ವಿಷಯ. ಅದು ಉಚ್ಚಾರ ಶಾಸ್ತ್ರ. ಫಿನಾಲಜಿ ಅಲ್ಲ, ಫೊನೆಟಿಕ್ಸ್ ಅಂತ. ಇಂಗ್ಲಿಷ್ ಫೊನೆಟಿಕ್ಸ್ ಭಾಷೆ ಅಲ್ಲದಿದ್ದುದರಿಂದ ಫೊನೆಟಿಕ್ ಆಗಿ ಕಲಿಸಬೇಕಾಗುತ್ತದೆ. ಅದಕ್ಕೆ ಸಂಬಂಧಿಸಿದಂತಹ ಪುಸ್ತಕ ನಾನು ಬರೆದದ್ದು. ಆಗ ನಾನು ಹೈಸ್ಕೂಲಿನಲ್ಲಿದ್ದೆ. ನಾವು ಯಾವುದೇ ಪುಸ್ತಕ ಪ್ರಕಟಪಡಿಸಬೇಕಿದ್ದರೂ ಸರಕಾರದ ಒಪ್ಪಿಗೆ ಬೇಕು. ನಾನು ಅದನ್ನು ಸರಕಾರಕ್ಕೆ ಕಳುಹಿಸಿದೆ. ಅವರು ಒಪ್ಪಿಗೆ ಕೊಡಲು ಒಂದು ವರ್ಷ ತೆಗೆದುಕೊಂಡರು. ಲೇಖಕನಾದವನಿಗೆ ಈ ನಿಯಮ ಕಷ್ಟ. ಹಾಗಿದ್ದ ಮೇಲೆ ಒಬ್ಬ ಲೇಖಕನಾಗುವುದು ಹೇಗೆ? ಅವನಿಗೆ ಸರಕಾರವನ್ನು ದೂರಬಾರದು ಹೀಗಿರಬಾರದು ಎಂದು ಲಿಮಿಟೇಷನ್ ಹಾಕಿದ ಮೇಲೆ ಲೇಖಕ ಹೇಗೆ ಬರೆಯುವುದು? ನಂತರ ಅದನ್ನು ತೆಗೆದು ಹಾಕುತ್ತಾರೆಂದು ನಮಗೆ ಗೊತ್ತಿರಲಿಲ್ಲ. 1966–67ರ ಹೊತ್ತಿಗೆ ಅದು ಪ್ರಕಟವಾಯಿತು. ಅದು ಬರುವಷ್ಟರಲ್ಲಿ ಆ ಶಾಲೆ ಬಿಟ್ಟು ನಾನು ಮಣಿಪಾಲಕ್ಕೆ ಬಂದಿದ್ದೆ. ಇಲ್ಲಿ ಬಂದ ಮೇಲೆ ಮಂಗಳೂರಿನಲ್ಲಿ ಒಂದು ಮುದ್ರಣವನ್ನು ಹುಡುಕಿ ಪರಿಚಯ ಮಾಡಿಕೊಂಡು ಮೌಲ್ಡ್ ಮಾಡಿ ಟೈಪ್ ಮಾಡಿಸಿ ಪ್ರಿಂಟ್ ಮಾಡಿಸಿದೆ. ಆಗ ನಾನು ಜೂನಿಯರ್ ಚೇಂಬರ್‌ನಲ್ಲಿದ್ದೆ. ಪ್ರಥಮ ಪ್ರತಿಗಳು ಬೇಗನೇ ಮುಗಿದು ಹೋಗಿದ್ದವು. ಮೂರನೇ ಪ್ರತಿ ಹಾಕಿಸಿದ್ದೆ. ನನ್ನ ಎರಡನೇ ಪುಸ್ತಕ ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದ ಪ್ರಬಂಧಗಳನ್ನೊಳಗೊಂಡ ಪ್ರಬಂಧ ಸಂಕಲನ 'ಗುಳಿಗೆಗಳು'. ಕನ್ನಡದಲ್ಲಿ ಪ್ರಕಟವಾದ ನನ್ನ ಮೊದಲ ಕೃತಿಯಿದು. ನಂತರ ಪುಸ್ತಕ ಎಂಬುದಾಗಿ ಮೊದಲು ಬಂದದ್ದು "ಶಬ್ದಗಳು" ಎಂಬ ಕಾದಂಬರಿ.

**ಪ್ರಶ್ನೆ 6 :** ನಿಮ್ಮ ಪ್ರಾರಂಭದ ಲೇಖನ ಪ್ರಕಟಣೆಯ ಬಗ್ಗೆ ತಿಳಿಸಿ?

**ಉತ್ತರ :** ನಾನೊಂದು ಕಥೆ ಬರೆದಿದ್ದೆ. ಅದು ನವಭಾರತ ಎಂಬ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ನಂತರ ಉದಯವಾಣಿಯಲ್ಲಿ ಬರೆದಿದ್ದೇನೆ. ಗೋಕುಲ, ನವಯುಗ,

ಪ್ರಪಂಚ, ಸಂಗಮ, ಇಂದ್ರಧನುಸ್ಸು, ಜನಯುಗ ಹೀಗೆ ಹಲವು ಪತ್ರಿಕೆಗಳಿಗೆ ನಾನು ಬರೆಯುತ್ತಿದ್ದೆ. ಅವರೊಂದು ಪ್ರತಿ ಕಳುಹಿಸುತ್ತಿದ್ದರು, ಖುಷಿಯಾಗುತ್ತಿತ್ತು. ಕೆಲವರು ವರ್ಷವಿಡೀ ಕಳುಹಿಸುತ್ತಿದ್ದರು. ನವಯುಗ ಪತ್ರಿಕೆಯವರು ವರ್ಷವಿಡೀ ಕಳುಹಿಸುತ್ತಿದ್ದರು. ಮೊದಲು ನನಗೆ ಸಂಭಾವನೆ ಬಂದದ್ದು ನಾನು ಮಣಿಪಾಲಕ್ಕೆ ಬಂದ ಮೇಲೆ. ಉದಯವಾಣಿಯಿಂದ 'ಕತ್ತೆ' ಎಂಬ ಒಂದು ಹರಟೆಗೆ. ಬರವಣಿಗೆಗೆಂದು ನನಗೆ ಸಿಕ್ಕಿದ ಮೊದಲ ರಾಯಲ್ಟಿ ಎಂದರೆ ಐದು ರೂಪಾಯಿ. 'ಮೈ ಮ್ಯಾಗಜಿನ್ ಆಫ್ ಇಂಡಿಯಾ' ಎಂಬ ಮದರಾಸಿನಿಂದ ಪ್ರಕಟವಾಗುತ್ತಿದ್ದ ತಿಂಗಳ ಪತ್ರಿಕೆಯಲ್ಲಿ ಇಂಗ್ಲಿಷ್‌ನಲ್ಲಿ ನಾನು ಕಥೆ ಬರೆದಿದ್ದೆ. ಆಗ ಬಹಳ ಕಷ್ಟದ ಶಬ್ದ ಹಾಕಿ ಬರೆಯುವ ಫ್ಯಾನ್ಸಿ ನನಗಿತ್ತು. ತುಂಬಾ ಅಭ್ಯಾಸ ಮಾಡಿ ಕಷ್ಟದ ಶಬ್ದ ಹಾಕುತ್ತಿದ್ದೆ. ವಿಶ್ವವಿದ್ಯಾನಿಲಯ ಮಟ್ಟದ ಸ್ಪರ್ಧೆಯಲ್ಲಿ ಭಾಗವಹಿಸಿದ್ದೆ. ನಗೆ ಲೇಖನ ಅದು. ಅದಕ್ಕೆ ನನಗೆ ದ್ವಿತೀಯ ಬಹುಮಾನ ಬಂದಿತ್ತು. ಸರಳವಾಗಿ ಬರೆಯುತ್ತಿದ್ದರೆ ಪ್ರಥಮ ಬಹುಮಾನ ಬರುತ್ತಿತ್ತೆಂದು ನಂತರ ಪ್ರೊಫೆಸರ್ ಒಬ್ಬರು ಹೇಳಿದರು. ಬರ್ಟ್ರೆನ್ ರೂಸೆಲ್ ಬಗ್ಗೆ ಓದಿದ್ದೆ. ಆತ ಸರಳವಾಗಿ ಬರೆಯುವವನೆಂದು ಅವನನ್ನು ಬಹಳ ಕೀಳಾಗಿ ಕಾಣುತ್ತಿದ್ದರು. ನಂತರ ಅವನಿಗೆ ನೊಬೆಲ್ ಪ್ರಶಸ್ತಿ ಬಂತು. ಹೇಗೆ ಅದ್ಭುತವಾದ ದೃಶ್ಯಗಳನ್ನು ಬರೆಯುತ್ತಿದ್ದ ಎಂದು ಯೋಚಿಸುತ್ತಿದ್ದೆ. ಹೀಗೆ ಓದಿನಿಂದಲೇ ನನಗೆ ಎಲ್ಲಾ ಪ್ರಭಾವಗಳಾಯಿತು. ಹಾಗೆ ನಾನು ಸರಳವಾಗಿ ಬರೆಯಲು ಶುರು ಮಾಡಿದೆ. ನಂತರ ಅದರಲ್ಲಿ ಇನ್ನೊಂದು ಕಥೆ ಬಂತು. ಅದಕ್ಕೆ ಮೂರು ರೂಪಾಯಿ ಸಂಭಾವನೆ ಬಂತು. ನಂತರ ಮದರಾಸಿನಿಂದ ಬರುತ್ತಿದ್ದ ಕಹಾನಿಯಾ ಎಂಬ ಇಂಗ್ಲಿಷ್ ಮಾಸ ಪತ್ರಿಕೆಯಲ್ಲಿ ಎರಡು ಕತೆ ಬರೆದಿದ್ದೆ. ಅದಕ್ಕೆ ಮೂರು ರೂಪಾಯಿ ಕಳುಹಿಸಿದ್ದರು. 1971ನೇ ಇಸವಿಯಲ್ಲಿ ಬೇಸಿಗೆ ರಜೆಯಲ್ಲಿ ಕುಳಿತುಕೊಂಡು ಕಾದಂಬರಿ ಬರೆದದ್ದು. ನನ್ನ ಹೆಂಡತಿ ಹೇಳುತ್ತಿದ್ದಳು, ನೀವು ಪತ್ರಿಕೆಗಳಲ್ಲಿ ಎಲ್ಲೆಲ್ಲೋ ಬರೆಯುತ್ತೀರಿ ಅದನ್ನು ಜನ ಅಂಬಡೆ ತಿಂದು ಕೈ ಒರೆಸಿ ಎಸೆಯುತ್ತಾರೆ. ನೀವು ಪುಸ್ತಕ ಬರೆಯಬಹುದಲ್ಲ ಎಂದು. ಆಗ ಬರೆಯುತ್ತೇನೆಂದು ಬರೆಯಲು ಕುಳಿತೆ, ಬರೆದೆ. ಅದು ಸ್ಫೂರ್ತಿ, ಗಿಫ್ಟ್, ದೇವರು ಕೊಟ್ಟದ್ದು ಎಂಥದೂ ಇಲ್ಲ.

**ಪ್ರಶ್ನೆ 7 :** ನಿಮಗೆ ಗೆಳೆಯರ ಪ್ರೋತ್ಸಾಹ ಅಥವಾ ಇತರರ ಪ್ರೋತ್ಸಾಹ ಸಿಕ್ಕಿದೆಯೇ?
**ಉತ್ತರ :** ಗೆಳೆಯರ ಪ್ರೋತ್ಸಾಹ ಇಲ್ಲ, ಶೂನ್ಯ. ಮೇಷ್ಟ್ರ ಪ್ರೋತ್ಸಾಹ ಇಲ್ಲ. ಪ್ರಾಥಮಿಕ ಶಾಲೆಯ ಮೇಷ್ಟ್ರಿಗೆ ಏನಾಗುತ್ತಾನೆಂದು ಏನೂ ಗೊತ್ತಿರಲಿಲ್ಲ. ಆಗಿನ ಶಿಕ್ಷಣ ಎಂದರೆ ಪೆಟ್ಟು ಮಾತ್ರಾ. ತಪ್ಪಿಗೆ ಪೆಟ್ಟು. ಕನ್ನಡದಲ್ಲಿ ಬಹಳ ಅದ್ಭುತವಾಗಿ ಓದುತ್ತಿದ್ದೆ ಎಂದು ತರಗತಿಯಲ್ಲಿ ಸ್ಪೆಷಲ್ ರೆಸ್ಪೆಕ್ಟ್ ಇತ್ತು ಅಷ್ಟೆ. 6, 7, 8 ಹಿರಿಯ ಪ್ರಾಥಮಿಕ ಶಾಲೆಯಲ್ಲಿ

ಸಿಕ್ಕಿದ ಮೇಷ್ಟ್ರು ತುಂಬಾ ಒಳ್ಳೆಯವರು. ಓದಿನಲ್ಲಿ ಖುಷಿ ಇತ್ತು. ಯಾವ ಸ್ನೇಹಿತನೂ ಇಲ್ಲ, ಯಾವ ಗುರುವೂ ಇಲ್ಲ, ಯಾರೊಬ್ಬರು ಸಂಬಂಧಿಕರೂ ಇಲ್ಲ. ನೀನು ಚೆನ್ನಾಗಿ ಬರೆಯುತ್ತಿ, ಏನು ಬರೆಯುತ್ತಿ ಎಂದು ಯಾವ ಪ್ರಶ್ನೆ ಕೇಳುವವರೂ ನಮ್ಮ ಸರಹದ್ದಿನಲ್ಲಿ ಇಲ್ಲ, ಸಾಮಾಜಿಕ ಸರಹದ್ದಿನಲ್ಲಿ ಇಲ್ಲ. ಕಾರಣವೆಂದರೆ ಈ ಜಾತಿಯ ಒಂದು ಚೌಕಟ್ಟಿನೊಳಗೆ ಆ ಎಕ್ಸ್‌ಪೋಜರ್ ಬ್ರಾಹ್ಮಣ ಕಮ್ಯೂನಿಟಿಯವರಿಗೆ ಮಾತ್ರ ಇರುವುದು. ಅವರ ಸಾಮಾಜಿಕ ಸರಹದ್ದು ಹೇಗಿರುತ್ತದೆಯೆಂದರೆ ಅಲ್ಲಿ ಎಲ್ಲರೂ ಓದಿದವರು ಇರುತ್ತಾರೆ. ಓದಿದವರು ಮತ್ತು ಮನೆಯಲ್ಲಿ ಓದುವವರು. ಮನೆಯಲ್ಲಿ ಪುಸ್ತಕಗಳನ್ನು ಇಟ್ಟುಕೊಂಡು ಪುಸ್ತಕಗಳ ಬಗ್ಗೆ ಮಾತಾನಾಡುವವರು. ಪರಸ್ಪರ ಬೇರೆ ಪಂಗಡಗಳಲ್ಲಿ ಯಾರೂ ಓದುವವರು ಇಲ್ಲ. ಓದಿ ಟೀಚರ್ ಆದವರ ಮನೆಯಲ್ಲೂ ಆಗ ಒಂದು ಪುಸ್ತಕ ಕಾಣುವುದಿಲ್ಲ. ಪುಸ್ತಕ ಕೊಂಡುಕೊಳ್ಳುವ ಸಂಸ್ಕೃತಿ ನಮ್ಮಲ್ಲಿ ಇನ್ನೂ ಬೆಳೆದಿಲ್ಲ. ಊರಿಗೆ ಹೋದರೆ ಸಂಬಂಧಿಕರ ಮನೆಗೆ ಹೋಗಿ ಮಾತನಾಡಿಸಿ ಬರುವುದು ಅಷ್ಟೆ. ಓದುವ ಚಟುವಟುಕೆ, ಬರೆಯುವ ಚಟುವಟಿಕೆ ಅಥವಾ ಸಾಹಿತ್ಯಿಕ, ಸಾಂಸ್ಕೃತಿಕ ಚಟುವಟಿಕೆ ಅದರ ಬಗ್ಗೆ ಮಾತುಕತೆ ಇಲ್ಲ. ಆ ಲೋಕವೇ ಬೇರೆ ಅವರಿಗೆ. ಆ ಲೋಕಕ್ಕೂ ಅವರಿಗೂ ಯಾವ ಸಂಪರ್ಕವೂ ಇಲ್ಲ. ಹಾಗಾಗಿ ಅದು ಒಂದು. ಎರಡನೆಯದಾಗಿ ಸಹೋದ್ಯೋಗಿಗಳಲ್ಲಿ ಕೂಡಾ, ನೀವು ಓದಿದರೆ ಚೆನ್ನಾಗಿತ್ತು ಎಂದು ಹೇಳುವವರು ಇದ್ದಾರೆ. ಅಥವಾ ಚೆನ್ನಾಗಿಲ್ಲ ಅಂಥ ಹೇಳುವವರು ಇದ್ದಾರೆ ಅಷ್ಟೆ. ಅದರಲ್ಲಿ ನಮಗೆ ಉತ್ತೇಜನ ಅಂತ ಏನೂ ಇಲ್ಲ. ಉತ್ತೇಜನ ಎನ್ನುವುದು ನನಗೆ ಪುಸ್ತಕಗಳಿಂದಲೇ. ಪುಸ್ತಕಗಳೇ ನನ್ನ ಲೋಕ ಮತ್ತು ನನ್ನೊಳಗೆ ನನ್ನ ಮನಸ್ಸು. ನನಗೆ ಸುತ್ತಮತ್ತ ಕಾಣುವ ಮನುಷ್ಯರೇ ನನಗೆ ಉತ್ತೇಜನ.

**ಪ್ರಶ್ನೆ 8 :** ನೀವು ಜನಪ್ರಿಯ ಕಾದಂಬರಿಕಾರರು ಹೇಗೋ ಹಾಗೆಯೇ ಗಂಭೀರವಾಗಿ ಪರಿಗಣಿಸಬೇಕಾದ ಬೌದ್ಧಿಕ, ವೈಚಾರಿಕ ಲೇಖಕರೂ ಕೂಡಾ. ನೀವು ಜನಪ್ರಿಯತೆ ಮತ್ತು ವೈಚಾರಿಕತೆ ಅಥವಾ ಬೌದ್ಧಿಕತೆ ಈ ಎರಡನ್ನೂ ಉಳಿಸಿಕೊಂಡಿದ್ದೀರಿ. ನಿಮ್ಮ ಪ್ರತಿಕ್ರಿಯೆ?

**ಉತ್ತರ :** ಹಿಂದೆ ಸಾಹಿತ್ಯ ಅಕಾಡೆಮಿಯವರು ಪುಸ್ತಕ ಬಹುಮಾನ ಕೊಡುವಾಗ ಅಲ್ಲಿ ಎರಡು ವರ್ಗ ಇತ್ತು. ವೈಚಾರಿಕ ಬರಹ ಮತ್ತು ಸೃಜನಶೀಲ ಬರಹ ಎಂಬುದಾಗಿ. ಪ್ರತ್ಯೇಕ ಪ್ರತ್ಯೇಕ ಪ್ರಶಸ್ತಿ ಕೊಡುತ್ತಿದ್ದರು. ಅದರ ಬಗ್ಗೆ ಬಹಳ ಆಕ್ಷೇಪ ಇತ್ತು. ಅದನ್ನು ಬಹಳ ಕಡೆ ಬರೆದಿದ್ದೇನೆ. ಅದು ವೈಚಾರಿಕತೆಯಿಂದಲೇ ಸೃಜನಶೀಲತೆ. ಅದು ಒಂದಕ್ಕೊಂದು ಸಂಬಂಧ ಇದೆ. ಎಲ್ಲ ವಿಚಾರವೂ ಸೃಜನಶೀಲತೆಯೇ. ಅವನು ಒಬ್ಬ ವಿಜ್ಞಾನಿ ಆದರೂ ಕೂಡಾ ಅದನ್ನು ಸೃಜನಶೀಲ ಎಂದು ನಾವು ಪರಿಗಣಿಸಬೇಕಾಗುತ್ತದೆ. ಆದುದರಿಂದ ಸೃಜನಶೀಲತೆ ಮತ್ತು ವೈಚಾರಿಕತೆ ಬೇರೆ ಎಂಬುದಾಗಿ ನನಗೆ ಕಾಣುವುದೇ

ಇಲ್ಲ. ಒಂದು ವಿಚಾರ ನಿಮ್ಮಲ್ಲಿ ಹುಟ್ಟುವುದೆಂದರೆ ಅದೊಂದು ಹುಟ್ಟು. ಸೃಜನಶೀಲತೆ ಎಂದರೆ ಅದೊಂದು ಹುಟ್ಟು, ಸೃಷ್ಟಿಯಾಗುವುದು. ಸೃಷ್ಟಿಯಾಗುವುದು ಅನ್ನುವಂಥದ್ದೊಂದು ಥಾಟ್. ಅದು ಗೆಲಿಲಿಯೋನ ವಿಷಯವನ್ನು ನೀವು ತೆಗೊಳ್ಳಿ, ನ್ಯೂಟನ್‌ನ ವಿಷಯವನ್ನು ನೀವು ತೆಗೊಳ್ಳಿ, ಅವನು ಕುಳಿತುಕೊಂಡಿರುವಾಗ ಅವನಿಗೆ ಹೀಗೆಯೇ ಒಂದು ಯೋಚನೆ ಬಂತು ಎಂದು. ಆ ಪೆಂಡಲಮ್ ಯಾಕೆ ಹೀಗೆ ಎಂದು. ಎಲ್ಲಿಯೋ ಒಂದು ಮನಸ್ಸನ್ನು ಕೇಂದ್ರೀಕರಿಸಿದಾಗ ಅವರಿಗೊಂದು ಯೋಚನೆ ಬರುತ್ತದೆ. ಆ ಯೋಚನೆ ವಿಜ್ಞಾನಕ್ಕೆ ಸಂಬಂಧಿಸಿದ್ದಿರಬಹುದು, ಅದು ಕವಿತೆ ಆಗಬಹುದು. ಮಿಲ್ಟನ್ ಅಥವಾ ಕೀಟ್ಸ್, ಶೆಲ್ಲಿ ಯಾರಿದ್ರೂ ಕೂಡಾ ಅದೊಂದು ಕವಿತೆ ಆಗುತ್ತದೆ. ಅದನ್ನು ನಾಲ್ಕು ಚರಣ ಬರೆದ್ರೆ ಅದೊಂದು ಕವಿತೆ ಆಗುತ್ತದೆ. ಅದು ವಿಜ್ಞಾನಕ್ಕೆ ಸಂಬಂಧಪಟ್ಟಂತಹ ಒಂದು ಪ್ರಶ್ನೆ ಆಗಿದ್ರೆ. ಅದು ಕೂಡಾ ಸೃಷ್ಟಿಯೇ. ಹಾಗೆ ಸುತ್ತುಮುತ್ತಲೂ ಸೃಷ್ಟಿಸಲ್ಪಟ್ಟಂತಹ ಸಾವಿರಾರು ವಸ್ತುಗಳೂ ಸೃಷ್ಟಿಯೇ. ಅದು ವಿಚಾರದಿಂದಲೇ ಹುಟ್ಟಿದ್ದು. ವಿಚಾರವನ್ನು ನೀವು ಹೇಗೆ ಬೇರೆ ಎನ್ನುವುದು? ವಿಚಾರಿಸುವುದು ಎಂದರೆ ಅದು ಥಿಂಕಿಂಗ್. ಎವರಿತಿಂಗ್ ಇಸ್ ಜನರೇಟೆಡ್ ಫ್ರಮ್ ಥಿಂಕಿಂಗ್. ಆ ಯೋಚನೆ ಎಂಬುದು ಸೃಜನಶೀಲತೆಯೂ ಹೌದು, ವಿಚಾರವೂ ಹೌದು. ಆದುದರಿಂದ ಅದನ್ನು ಪ್ರತ್ಯೇಕಿಸಲು ಆಗುವುದಿಲ್ಲ. ಬರವಣಿಗೆ ಎಂಬುದು ಎರಡೂ ಒಂದೇ. ಎರಡನ್ನೂ ಪ್ರತ್ಯೇಕವಾಗಿ ಹೇಳಬಾರದು. ಕವಿತೆ ಎಂಬುದು ಒಂದು ಸೃಷ್ಟಿ ಎಂದು ನೀವು ಹೇಳುತ್ತೀರಿ, ಕವಿತೆ ಎನ್ನುವುದು ಒಂದು ವಿಚಾರ ಎಂದೂ ಹೇಳಬಹುದು. ಎಷ್ಟೋ ಕವಿತೆಗಳನ್ನು ತೆಗೆದು ನೋಡಿ, ಅದರಲ್ಲಿ ಯಾವುದು ಸೃಷ್ಟಿ ?. ಅದು ಒಂದು ವಿಚಾರ ಆಗಿರಬಹುದು. ಯಾವ ಮೋಹನ ಮುರಳಿ ಕರೆಯಿತು ದೂರ ತೀರಕೆ ನಿನ್ನನು – ಎಂಬುದೊಂದು ಥಾಟ್. ಕುವೆಂಪುರವರ 'ಪಕ್ಷಿ' ಎನ್ನುವಂತಹ ಕವನ ತೆಗೆದು ನೋಡಿದಾಗ ಕೂಡಾ ಅದರೊಳಗೆ ಒಂದು ವಿಚಾರ ಬರುತ್ತದೆ. ಆ ವಿಚಾರವನ್ನು ಒಂದು ರೀತಿಯಲ್ಲಿ ಹೇಳುತ್ತಾರೆ. ಅದನ್ನು ಕವಿತೆ ಎಂದು ಯಾಕೆ ಹೇಳುತ್ತೀರಿ? ಕಥೆಯಾಗಿದ್ದರೆ ಕಥೆ, ಕಾದಂಬರಿಯಾಗಿದ್ದರೆ ಕಾದಂಬರಿ ಎಂದು ಹೇಳಬಹುದು. ಆದುದರಿಂದ ಎರಡೂ ಒಂದೇ.

**ಪ್ರಶ್ನೆ 9 :** 'ತೀರ' ಎಂಬುವುದು ನಿಮ್ಮ ಆತ್ಮಕಥೆ ಎಂದು ಹೇಳುತ್ತೀರಿ. ಇನ್ನು ಸಮಗ್ರವಾಗಿ ಬೇರೆ ಆತ್ಮಕಥೆ ಬರೆಯುವ ಯೋಚನೆ ಇದೆಯೋ?

**ಉತ್ತರ :** 'ತೀರ' ನನ್ನ ಆತ್ಮಕಥೆಯೇ. ಅದರಲ್ಲಿ ನನ್ನ ಬಗ್ಗೆ ನಾನು ಯಾಕೆ ಬರೆಯಲಿಲ್ಲ ಎಂದು ಹೇಳಿದರೆ. ನನ್ನ ಬಗ್ಗೆ ನಾನು ಹೇಳಿಕೊಳ್ಳಬಾರದೆಂಬುದು ನನ್ನ ಧೋರಣೆ.

ನೀವು ಆ ಬಗ್ಗೆ ಹೇಳಿ ಎಂದರೆ ನನಗೆ ಹೇಳಿಕೊಳ್ಳಲು ಕಷ್ಟವಾಗುತ್ತದೆ. ನಾನು ಬಹಳ ಕಷ್ಟಪಟ್ಟು ಹೇಳುವುದು, ನಿಮಗೆ ನಾನು ಹೇಳಬೇಕಲ್ಲಾ ಎಂದು ಹೇಳುವುದು ಅಷ್ಟೆ. ಆತ್ಮಕಥೆ ಬರೆಯುವಾಗ ಏನಾಯಿತೆಂದರೆ ನನ್ನ ಬಗ್ಗೆ ಹೇಳಲು ನನಗೆ ವಿಶೇಷವಿದೆ ಅನ್ನಿಸಲಿಲ್ಲ. ನಾನು ಹೆಚ್ಚಾಗಿ ಅದರಲ್ಲಿ ಹೇಳಿರುವುದು ನನಗೆ ಏನು ಸಿಕ್ಕಿಲ್ಲ, ಬದುಕಿನಲ್ಲಿ ಏನು ಸಿಗಬಹುದಾಗಿತ್ತು? ಎಂದು. ಶಿಕ್ಷಣ ಎನ್ನುವುದು ನಾಲ್ಕು ಗೋಡೆಯ ಒಳಗೆ ನಡೆಯುವುದಷ್ಟೇ ಅಲ್ಲ, ಹೊರಗೆ ಕೂಡಾ ಇದೆ. ಕ್ಲಾಸು ನಡೆಯುತ್ತಿರುವ ವೇಳೆಯಲ್ಲಿ ಅಷ್ಟೇ ಅಲ್ಲ, ಬಿಡುವಿನ ವೇಳೆಯಲ್ಲಿ ಕೂಡಾ ಶಿಕ್ಷಣ ಪಡೆಯುತ್ತೇವೆ. ವಿಜ್ಞಾನಿಯಾದವನು 24 ಗಂಟೆ ಕೆಲಸ ಮಾಡುತ್ತಿರುತ್ತಾನೆ. ಅವನು ಪ್ರಯೋಗಾಲಯಕ್ಕೆ ಹೋದರೆ ಅವನಿಗೆ ಊಟವೇ ಮರೆತು ಹೋಗುತ್ತದೆ. ಸದಾ ಕಾಲ ಕಲಿಯುವುದೇ ಶಿಕ್ಷಣ. ಆ ರೀತಿ ಕಲಿಯಲಿಕ್ಕೆ ನನಗೆ ಮನಸ್ಸಿತ್ತು. ಆದರೆ ಅಷ್ಟು ಕಲಿಯಲು ನನಗೆ ಅವಕಾಶ ಸಿಗಲಿಲ್ಲ ಎಂಬುದನ್ನು ನಾನು ಹೇಳಲಿಲ್ಲ. ಆದರೆ ಓದುವವರಿಗೆ ಗೊತ್ತಾಗುತ್ತದೆ. ಕಲಿಯಬೇಕೆಂದಿತ್ತು ಆದರೆ ಅವಕಾಶ ಆಗಲಿಲ್ಲ. ಅದಕ್ಕೆ ಯಾವ ರೀತಿಯ ತೊಂದರೆಗಳಾದುವು?, ಮನುಷ್ಯರಿಂದ ಎಷ್ಟು ತೊಂದರೆಯಾಯಿತು?, ಬಡತನದಿಂದ ಎಷ್ಟು ತೊಂದರೆಯಾಯಿತು?, ಬಡತನ ಮತ್ತು ಕೆಟ್ಟ ಮನುಷ್ಯರು ಬೇರೆ ಏನೂ ಅಲ್ಲ. ಕೆಟ್ಟ ಮನುಷ್ಯರು ಎನ್ನಲಾಗುವುದಿಲ್ಲ, ಒಳ್ಳೆಯವರಲ್ಲದವರು. ಈ ಒಳ್ಳೆಯವರಲ್ಲದ ಮನುಷ್ಯರು ಮತ್ತು ಬಡತನ ಒಂದಕ್ಕೊಂದು ಸಂಬಂಧ ಇದೆ. ಅದರಿಂದಾಗಿ ಬಹಳ ನನಗೆ ಮಾಡಲಾಗಲಿಲ್ಲ. ಅಷ್ಟು ನಾನು ಹೋರಾಡಬೇಕಾಯಿತು. ಹೋರಾಟ ಮಾಡಿ ನಾನು ಕಲಿಯಬೇಕಾಯಿತು. ಹಾಗಾಗಿ ವಾಟ್ ಐ ಮಿಸ್ಸ್‌ಡ್ ಎನ್ನುವುದನ್ನು ಹೆಚ್ಚು ಹೆಚ್ಚಾಗಿ ಹೇಳಬೇಕಾಯಿತು. ಎಲ್ಲಿಯೂ ನಾನು ಗೋಳು ಹೊಯ್ದುಕೊಂಡಿಲ್ಲ. ನಾನು ನೋವಾಯಿತು ಎಂದು ಹೇಳಿಲ್ಲ. ಯಾರಿಗೂ ಹೀಗೆ ಆಗಬಾರದು ಎಂದು ನಾನು ಹೇಳಿದ್ದೇನೆ. ಈ ತರಹ ಬಡತನ ಯಾರಿಗೂ ಇರಬಾರದು. ಈ ಅನ್ಯಾಯ, ತೊಂದರೆಗಳು ಮೇಲಿನಿಂದ ಕೆಳಗಿನವರೆಗೆ ಯಾರಿಗೂ ಯಾರೂ ಕೊಡಬಾರದು. ಪ್ರೀತಿಯಿಂದ ನೋಡಬೇಕು, ಯಾರು ಯಾರನ್ನೂ ದ್ವೇಷಿಸಬಾರದು, ಯಾರಿಗೂ ಹಿಂಸೆ ಕೊಡಬಾರದು ಎಂಬುವುದು ನನ್ನ ಧ್ವನಿ ಮತ್ತು ಇದನ್ನು ಎದುರಿಸುವುದು ಹೇಗೆ ಎಂಬುದನ್ನು ಕೂಡಾ ನಾನು ಹೇಳಲಿಲ್ಲ. ಅದನ್ನು ನಾನು ಎದುರಿಸಿದ್ದೇನೋ ಸೋತಿದ್ದೇನೋ ಎಂದು ನನಗೆ ಹೇಳಲು ಆಗುವುದಿಲ್ಲ. ಯಾವಾಗಲೂ ನಾನು ಗೆದ್ದಿದ್ದೇನೆ, ಸೋತಿದ್ದೇನೆ ಎಂಬ ರೀತಿಯಲ್ಲಿ ಬದುಕನ್ನು ಕಾಣಿಸುವುದಿಲ್ಲ. ಸೋಲು ಗೆಲುವು ಎಲ್ಲ ಭ್ರಮೆಗಳು ಅಷ್ಟೆ. ಹಾಗಾದರೆ ನಾವು ಯಾಕೆ ಬದುಕುತ್ತೇವೆ ಎನ್ನುವುದಕ್ಕೆ ಬೇರೆ ಉತ್ತರ ಇದೆ. ನಾನು ನನ್ನ 'ತೀರ'ದಲ್ಲಿ ಗುರು-ರಾಕ್ಷಸ ಎಂಬುದಾಗಿ ಬರೆದಿದ್ದೇನೆ. ಜೀವನವನ್ನು ಬಹಳ ಕಹಿಯಾಗಿ ಮಾಡಿದ ವ್ಯಕ್ತಿ ಆತ. ನಾನು ಚಿಕ್ಕವನಾಗಿದ್ದಾಗ ನನ್ನ

ಬರಹ ಜ್ಯೋತಿ ಎಂಬ ಪತ್ರಿಕೆಯಲ್ಲಿ ಪ್ರಕಟವಾಗಿತ್ತು. ಅದನ್ನು ಓದಿ ವಾರ್ಡನ್‌ಗೆ ಅವನ ಬಗ್ಗೆ ಬರೆದದ್ದು ಎಂದು ಅನಿಸಿತ್ತು. ಅದರಲ್ಲಿ ಆತ್ಮಹತ್ಯೆ ತಪ್ಪಲ್ಲ ಎಂದು ಪ್ರತಿಪಾದಿಸಿದ್ದೆ. ವಾರ್ಡನ್ ನನ್ನನ್ನು ಡಿಸ್‌ಮಿಸ್ ಮಾಡಿಸಿಬಿಡಬೇಕೆಂದಿದ್ದ. ಆದರೆ ಮೇಸ್ಟ್ರು ಒಬ್ಬರು ಅದಕ್ಕೆ ಒಪ್ಪಲಿಲ್ಲ. ಈ ರೀತಿ ಯಾರಿಗೂ ಆಗಬಾರದು. ಇಂತಹ ವಾರ್ಡನ್‌ಗಳು ಇರಬಾರದು. ಅದರಲ್ಲಿ ಬರೆದ ಒಂದು ಪ್ರಸಂಗ – ನಾನು ಐದನೇ ತರಗತಿಯಲ್ಲಿರುವಾಗ ನನಗೆ ಕಲಿಸಿದ ಮೇಷ್ಟ್ರು ಒಬ್ಬಳು ಹುಡುಗಿಗೆ ಲೈಂಗಿಕವಾಗಿ ಕೀಟಲೆ ಮಾಡುತ್ತಿದ್ದ. ಈ ಕಾರಣದಿಂದ ಎಷ್ಟೋ ಮಕ್ಕಳ ಮನಸ್ಸು ಹಾಳಾಗಿರಬಹುದು. ಸ್ವಾಭಾವಿಕವಾಗಿ ಬೆಳೆಯುವಂತಹ ಅವಕಾಶಕ್ಕೆ ಯಾವುದೇ ಅಡ್ಡಿ ಆತಂಕ ಶಿಕ್ಷಣದಲ್ಲಿ ಉಂಟುಮಾಡಬಾರದು. ಶಿಕ್ಷೆ, ಹಿಂಸೆ, ಎಲ್ಲವೂ ಅದಕ್ಕೆ ವಿರುದ್ಧವಾದುದು. ಇದೆಲ್ಲ ಇರಬಾರದು ಎಂಬ ಧ್ವನಿ ಅದರಲ್ಲಿ ಇದೆ ಅಷ್ಟೆ. ಹಳ್ಳಿಯ ಪರಿಸರದಲ್ಲಿದ್ದಾಗ ನನಗೆ ಬಹಳಷ್ಟು ಅನುಭವ ಆಗಿದೆ. ಅದನ್ನೆಲ್ಲ ನಾನಿಲ್ಲಿ ಬರೆಯಲಿಲ್ಲ. 'ಇತಿಹಾಸದ ಮೊಗಸಾಲೆ'ಯನ್ನು ನಾನು ಹೇಳುವುದು ಅದನ್ನು ಅಮ್ಮನ ಕಥೆ ಎಂದು. 'ಕೆಂಪು ಕಳವೆ' ಎಂಬ ದೊಡ್ಡ ಕಾದಂಬರಿಯಲ್ಲಿ ನನ್ನ ಆ ಕಾಲದ ಬದುಕಿನಲ್ಲಿ ನಾವು ಮಾಡಿದ ಸಾಹಸಗಳು ನಾವು ಪಟ್ಟ ಕಷ್ಟಗಳನ್ನೆಲ್ಲಾ ಬರೆದಿದ್ದೇನೆ.

**ಪ್ರಶ್ನೆ 11 :** ಬರೆಯುವ ಸಂದರ್ಭದಲ್ಲಿ ನಿಮ್ಮ ಗಮನವೆಲ್ಲಾ ಇಡೀ ಅನುಭೂತಿಯನ್ನು ಸಂಪೂರ್ಣವಾಗಿ ಅಭಿವ್ಯಕ್ತಗೊಳಿಸುವುದರ ಕಡೆಗೆ ಇರುತ್ತದೆಯೇ? ಇಲ್ಲ, ಆಗ ನಿಮ್ಮ ಮನಸ್ಸಿನ ಮುಂದೆ ಓದುಗನೂ ಬರುತ್ತಾನೆಯೇ?

**ಉತ್ತರ :** ಇಲ್ಲ. ಓದುಗ ಬರುವುದೇ ಇಲ್ಲ. ಓದುಗ ನನಗೆ ನೆನಪೇ ಇರುವುದಿಲ್ಲ. ಬರವಣಿಗೆ ಎಂಬುವುದೊಂದು ಇದು ಯಾರಿಗೋ ಮೆಚ್ಚುಗೆ ಮಾಡಬೇಕು, ಇದು ಇದೇ ರೀತಿ ಇರಬೇಕು ಈ ರೀತಿ ಕೊನೆಯಾಗಬೇಕೆಂದು ಬರೆಯುವ ಸಂದರ್ಭದಲ್ಲಿ ಅದು ಏನೂ ಗೊತ್ತಿರುವುದಿಲ್ಲ. ಕೆಲವರು ಹೇಳುತ್ತಾರೆ ಒಂದು ಚೌಕಟ್ಟು ಹಾಕಿಕೊಂಡಿರುತ್ತಾರೆ ಎಂದು, ಹಾಗೆ ಏನೂ ಇರುವುದಿಲ್ಲ. ಅದು ಕೃತಿಯಿಂದ ಕೃತಿಗೆ ವ್ಯತ್ಯಾಸವಿರುತ್ತದೆ. ಕೆಲವು ಸಲ ಇಡೀ ಕೃತಿಯ ಚಿತ್ರಣ ನನ್ನ ಮನಸ್ಸಿನ ಮೇಲೆ ಮೂಡುತ್ತದೆ. ಆದರೆ ಕೊನೆ ಹೇಗಾಗುತ್ತದೆ ಎಂದು ಸಾಮಾನ್ಯವಾಗಿ ಗೊತ್ತಿರುವುದಿಲ್ಲ. ಚಿಕ್ಕ ಕತೆ, ಕವಿತೆ ಕಾದಂಬರಿ ಏನೋ ಇರಲಿ ಯಾವಾಗಲೂ ಬರವಣಿಗೆ ಎನ್ನುವಂಥದ್ದು ಅದು ಅದರಷ್ಟಕ್ಕೇ ಬರೆಸಿಕೊಂಡು ಹೋಗುವುದಷ್ಟೇ ಹೊರತು ಇನ್ನೇನು ಇಲ್ಲ. ನಾನು ಬರೆಯುವುದು ಮಾತ್ರ ಹೊರತು ಓದುಗ ಅಲ್ಲಿ ಎಲ್ಲಿಯೂ ಇರುವುದಿಲ್ಲ. ಓದುಗನಿಗೆ ಇಷ್ಟ ಆಗಲಿ ಆಗದಿರಲಿ, ಅವನಿಗೆ ಸಿಟ್ಟು ಬರಲಿ ಏನು ಬೇಕಾದರೂ ಮಾಡಲಿ, ಆ ಪ್ರಶ್ನೆಯೇ ಬರುವುದಿಲ್ಲ.

**ಪ್ರಶ್ನೆ 12 :** ನಿಮ್ಮ ಕಾದಂಬರಿಯಲ್ಲಿನ ಪಾತ್ರಗಳು ಜೀವನದಿಂದ ತೆಗೆದುಕೊಂಡವುಗಳೇ?
**ಉತ್ತರ :** ಜೀವನದಿಂದ ಎತ್ತಿಕೊಂಡ ಪಾತ್ರಗಳು ತುಂಬಾ ಇವೆ. ಕತೆಗಳಲ್ಲಿಯಂತೂ ಬಹಳ ಇವೆ. ಇತ್ತೀಚೆಗೆ ಸುಧಾ ಪತ್ರಿಕೆಯಲ್ಲಿ ಒಂದು ಕಥೆ ಬರೆದಿದ್ದೆ. ಅದರಲ್ಲಿ ಒಬ್ಬ ದಿವಾಳಿ ಆದ ಮನುಷ್ಯ ಅಂಗಡಿ ಇಡಬಾರದು, ಹಂಚಿನ ಮನೆ ಕಟ್ಟಬಾರದೆಂಬ ಕಾನೂನು ಇಂಗ್ಲಿಷರ ಕಾಲದಲ್ಲಿ ಇತ್ತಂತೆ. ಆ ಕಾಲದಲ್ಲಿ ಅವನು ದಿವಾಳಿ ಪಡೆಯುವಂತಹ ಒಂದು ಪ್ರೋಸೆಸ್ ಇದೆ. ಕಛೇರಿಯ ಎದುರುಗಡೆ ಬೆಳಗಿನ ಹೊತ್ತು ಬೆತ್ತಲೆಯಾಗಿ ಬಿಳಿ ಬಟ್ಟೆಯನ್ನು ಹೊದ್ದುಕೊಂಡು ಮಲಗಬೇಕು. ಅವರು ಬಂದು ನೋಡಿ ಅವನು ದಿವಾಳಿ ಎಂದು ಘೋಷಿಸಬೇಕು. ನಂತರ ಅವನು ದಿವಾಳಿ. ಅಂತಹವನು ಒಂದು ಗಿರವಿ ಅಂಗಡಿ ಇಟ್ಟು ಶ್ರೀಮಂತನಾದ ಕತೆ. ಅದು ನಮ್ಮ ಕಣ್ಣ ಮುಂದೆ ಇದ್ದಂತಹ ನಿಜವಾದ ಕತೆ. ಕತೆಗಳಲ್ಲಿ ಇದ್ದದ್ದು ಇದ್ದ ಹಾಗೆ ಬರೆಯಲಿಲ್ಲ. ಹೆಚ್ಚಾಗಿ ಸುತ್ತಮುತ್ತಲಿನ ವಿದ್ಯಮಾನಗಳನ್ನು ಆರಿಸಿಕೊಂಡಿದ್ದೇನೆ. ಅಂತಹ ಕತೆ 'ಇತಿಹಾಸದ ಮೊಗಸಾಲೆ'ಯಲ್ಲಿ ಬರುತ್ತದೆ. ಆದರೆ ಮೂಲತಃ ಇದ್ದ ಹೆಸರುಗಳನ್ನು ನಾನು ಎಲ್ಲಿಯೂ ಉಪಯೋಗಿಸಿಕೊಂಡಿಲ್ಲ–ತೊಂದರೆ ಮಾಡಬಾರದೆಂದು. 'ಅಬ್ರಾಹ್ಮಣ'ದಲ್ಲಿ ನಿಜವಾದ ಉಡುಪಿಯ ಪರಿಸರವೇ ಬರುತ್ತದೆ. ನನ್ನ 'ಶಬ್ದಗಳು' ಕಾದಂಬರಿ ಸಂಪೂರ್ಣ ಕಲ್ಪನೆ. ತುಂಬಾ ಕಾದಂಬರಿಗಳಲ್ಲಿ ಸುತ್ತಮುತ್ತಲಿನ ವಿದ್ಯಮಾನಗಳನ್ನು ಉಪಯೋಗಿಸಿಕೊಂಡಿದ್ದೇನೆ. 50% ಕ್ಕಿಂತ ಹೆಚ್ಚು ಕಲ್ಪನೆ ಇದೆ.

**ಪ್ರಶ್ನೆ 13 :** ನೀವು ಕಾಮಯಜ್ಞ ಮೊದಲಾದ ಕಾದಂಬರಿಗಳಲ್ಲಿ ಸ್ತ್ರೀ ಮನಸ್ಸಿನ ಸೂಕ್ಷ್ಮಗಳನ್ನು ಚಿತ್ರಿಸಿದ್ದೀರಿ. ಆದರೆ ಪುರುಷ ಲೇಖಕರು ಸ್ತ್ರೀ ಪಾತ್ರಗಳಿಗೆ ನ್ಯಾಯ ಕೊಡಲಾರರು ಎಂದು ಹೇಳುತ್ತಾರೆ. ಏಕೆಂದರೆ ಅವರು ಪುರುಷ ದೃಷ್ಟಿಯಿಂದಲೇ ಸ್ತ್ರೀ ಪಾತ್ರಗಳನ್ನು ಚಿತ್ರಿಸುತ್ತಾರೆ. ಈ ಬಗ್ಗೆ ನಿಮ್ಮ ಅಭಿಪ್ರಾಯವೇನು?
**ಉತ್ತರ :** ಪುರುಷ ದೃಷ್ಟಿಯೆಂಬ ಒಂದು ದೃಷ್ಟಿಯಿಲ್ಲ. ಮನುಷ್ಯ ದೃಷ್ಟಿಯೆಂಬುದು ಒಂದು ಇದೆ. ಸ್ತ್ರೀ ಕೂಡಾ ಒಂದು ಮನುಷ್ಯನೇ. ಮಗುವನ್ನು ಹೆರುವವಳು ಸ್ತ್ರೀ. ಆ ಮಗುವನ್ನು ಸಾಕುವ ಸಂದರ್ಭದಲ್ಲಿ ತಂದೆಯೂ ಪ್ರೀತಿ ತೋರಿಸುತ್ತಾನೆ. ತಾಯಿಯೂ ಪ್ರೀತಿ ತೋರಿಸುತ್ತಾಳೆ. ತಂದೆ ಮತ್ತು ತಾಯಿ ಇಬ್ಬರೂ ಮನುಷ್ಯರು. ಮನುಷ್ಯ ದೃಷ್ಟಿಯಿಂದ ಮಗುವನ್ನು ಸಾಕುತ್ತಾರೆಯೇ ಹೊರತು ಪುರುಷ ದೃಷ್ಟಿ ಮತ್ತು ಸ್ತ್ರೀ ದೃಷ್ಟಿಯಿಂದ ಸಾಕುವುದು ಅಲ್ಲ. ಮನುಷ್ಯರಾಗಿ ಇಬ್ಬರೂ ಅದನ್ನು ಬೆಳೆಸುತ್ತಾರೆ. ನಾನು ಬರೆಯುವಾಗ ಮನುಷ್ಯನಾಗಿ ಬರೆಯುವುದು. ಪುರುಷನಾಗಿ ನಾನು ಬರೆಯುವುದಿಲ್ಲ. ಸ್ತ್ರೀಯು ಸ್ತ್ರೀ ಯಾಗಿ ಬರೆಯಬಾರದು. ಸ್ತ್ರೀಯೊಂದು ಮನುಷ್ಯನಾಗಿ ಬರೆಯಬೇಕು.

ಮನುಷ್ಯತ್ವವನ್ನು ಇಟ್ಟುಕೊಂಡು ಬರೆದರೆ ಅದು ನಿಜವಾದ ಬರಹ ಆಗಿರುತ್ತದೆ. ಸ್ತ್ರೀ ದೃಷ್ಟಿಯಿಟ್ಟುಕೊಂಡು ಬರೆದರೆ ಅದು ಸ್ತ್ರೀ ಪರವಾದ ಆರ್ಗ್ಯುಮೆಂಟ್ ಆಗುತ್ತದೆ. ನಾನು ಮನುಷ್ಯ ದೃಷ್ಟಿಯಿಟ್ಟುಕೊಂಡು ಬರೆದರೆ ಅದು ಮನುಷ್ಯ ಪರವಾದ ಆರ್ಗ್ಯುಮೆಂಟ್ ಆಗುತ್ತದೆ. ಬರೆಯುವ ಸಂದರ್ಭದಲ್ಲಿ ನನಗೆ ಗಂಡು ಹೆಣ್ಣೆಂಬ ಯೋಚನೆ ಒಂದು ಸಲವೂ ಬರಲಿಲ್ಲ. ಹೆಂಗಸರಿಗೆ ನೋವಾಗಬಾರದೆಂಬ ಪ್ರಶ್ನೆ ಇಲ್ಲ. ನಾನು ಒಂದು ಪಾತ್ರವನ್ನು ಚಿತ್ರಿಸುವಾಗ ಈ ಹೆಂಗಸು ಹೇಗಿರಬೇಕು. ಈ ಹುಡುಗ ಹೇಗಿರಬೇಕು. ಅಥವಾ ಈ ಹುಡುಗಿ ಹೇಗಿರಬೇಕು ಎನ್ನುವುದನ್ನು ಹಾಗೆಯೇ ಚಿತ್ರಿಸುತ್ತೇನೆ ಅಷ್ಟೆ. 'ನಿನ್ನೆ–ಇಂದು–ನಾಳೆ' ಯ ಬಗ್ಗೆ ವಿಜಯ ಕರ್ನಾಟಕದಲ್ಲಿ ಒಬ್ಬರು ವಿಮರ್ಶೆ ಬರೆದಾಗ ಅದರಲ್ಲಿರುವ ವಾಕ್ಯಗಳನ್ನು ಅವರು ಕೋಟ್ ಮಾಡಿ ಅದು ಗಟ್ಟಿಯವರಿಗೆ ಮಾತ್ರ ಗೊತ್ತಿರುವುದೆಂದು ಬರೆದರು. ಅಥವಾ ಅವರು ಮಾತ್ರ ಇದನ್ನು ಬರೆಯಲು ಸಾಧ್ಯ ಎನ್ನುವ ರೀತಿಯಲ್ಲಿ ಬರೆದಿದ್ದರು. ಅದರಲ್ಲಿರುವ ಒಂದು ವಾಕ್ಯ 'ಹೆಂಗಸು ಪತ್ರಕರ್ತರಿಗೂ ಒಂದು ಅಡ್ವಾಂಟೇಜ್ ಇದೆ ಎಂದು. ಅವರು ಗಂಡಸು ಅಥವಾ ಮಿನಿಸ್ಟರ್‌ಗೆ ಸಂದರ್ಶನ ಮಾಡುವಾಗ ಬಹಳ ಉಡಾಫೆಯ ಪ್ರಶ್ನೆಗಳನ್ನು ಕೇಳುತ್ತಾರೆ. ಆಗ ಹೊಡೆಯುವ ಎನ್ನುವಂತಾಗುತ್ತದೆ. ಆದರೆ ಹುಡುಗಿ ಆದ್ರೆ ಹೊಡೆಯುವುದಿಲ್ಲ. ಈ ಒಂದು ವ್ಯತ್ಯಾಸದಿಂದಾಗಿ ಎಂತಹ ಪ್ರಶ್ನೆಗಳನ್ನೂ ಅವರು ಕೇಳಬಹುದು. ಅಂತಹ ಪ್ರಶ್ನೆ ಕೇಳಿದರೆ ಏನಾಗುವುದಿಲ್ಲವೆಂದು ಕೇಳುವವರಿರುತ್ತಾರೆ. ಇದು ಸತ್ಯ, ಸುಳ್ಳೇನೂ ಅಲ್ಲ. ಅಂತಹ ಒಂದು ಸಂದರ್ಭ ಕಾದಂಬರಿಯಲ್ಲಿ ಬರುತ್ತದೆ. ಅದು ಅವರಿಗೆ ಹಿಡಿಸಲಿಲ್ಲ. ಏಕೆಂದರೆ ಅವರು ಸ್ತ್ರೀ ಪರ ಚಿಂತನೆಯವರು. ಸ್ತ್ರೀ ದೃಷ್ಟಿ, ಪುರುಷ ದೃಷ್ಟಿ ಎಂಬುದಿಲ್ಲ. ಅದು ಲೇಖಕನ ದೃಷ್ಟಿ. ಸೃಷ್ಟಿ ಮಾಡುವ ದೃಷ್ಟಿಯೇ ಅವನಿಗಿರುವುದೆ ಹೊರತು ಈ ಬಗೆಯ ಎರಡು ದೃಷ್ಟಿಯೆಂದು ಇಲ್ಲ. ನ್ಯಾಯ ಕೊಡುವ ಪ್ರಶ್ನೆಯೆಂಬುದೇನೂ ಅಲ್ಲಿ ಇಲ್ಲ. ನಾನು ನ್ಯಾಯ ಒದಗಿಸಲು ಬರೆಯುವುದೇ ಅಲ್ಲ. ಸ್ತ್ರೀ ಅಥವಾ ಪುರುಷ ಪಾತ್ರಗಳಿಗೆ ನ್ಯಾಯ ಒದಗಿಸಲೆಂದು ಬರೆದಿದ್ದರೆ ಅದು ಬೇರೆಯೇ ಆಗುತ್ತದೆ. ನಮ್ಮಲ್ಲಿ ನಾವು ಸೃಷ್ಟಿಸುವ ಪಾತ್ರಗಳ ಬಗ್ಗೆ ಒಂದು ರೀತಿಯ ಮಮತೆ ಇರುತ್ತದೆ. ಆ ಪಾತ್ರ ಬೆಳೆಯುತ್ತಾ ಹೋಗುವಾಗ ಕೆಲವೊಮ್ಮೆ ಪಾತ್ರವನ್ನು ಕೆಟ್ಟವನನ್ನಾಗಿ ಚಿತ್ರಿಸುತ್ತಾ ಇರುತ್ತೇನೆ. ನಂತರ ಬರವಣಿಗೆ ಒಂದು ಹಂತಕ್ಕೆ ಬರುವಾಗ ಕೆಟ್ಟವನಾಗಬಾರದು, ಸರಿಯಲ್ಲ ಎಂದು ಅನ್ನಿಸಬಹುದು. ನಿಜವಾದ ಹೀರೋ ನಿಜವಾದ ವಿಲನ್ ಸಿನಿಮಾಗಳಲ್ಲಿ ಮಾತ್ರ ಇರುವುದು. ಅದು ಬದುಕಿನಲ್ಲಿ ಇಲ್ಲ. 'ನಿನ್ನೆ–ಇಂದು–ನಾಳೆ'ಯಲ್ಲಿನ ಮೇಘಶ್ಯಾಮನ ಬಗ್ಗೆ ಬರೆಯುತ್ತಿದ್ದಾಗ ಅವನು ಹೀಗಾಗಬಾರದೆಂಬ ಭಾವನೆ ಬಂತು. ನಂತರ ಅದನ್ನು ತಿದ್ದಿಕೊಂಡು ಬರೆದೆ. ಅನಂತರ

ಅವನನ್ನು ಮಗು ಬೇಕೆಂದು ಪ್ರೀತಿಸಿದ ಹುಡುಗಿಯ ಗಂಡನ ಪಾತ್ರ, ಅವಳ ಪಾತ್ರ ತಯಾರು ಮಾಡುವಾಗ ಅವಳನ್ನು ಕೆಟ್ಟವಳಾಗಿಯೇ ಆರಂಭ ಮಾಡಿದೆ. ಬರೆಯಲು ಹೋಗುವಾಗ ಇದು ಹೀಗಾಗಬಾರದು, ಅಷ್ಟು ಕೆಟ್ಟವಳಾದರೆ ಅದು ನನ್ನ ಬರಹಕ್ಕೆ ಹೊಂದುವುದಿಲ್ಲ ಎಂದು ನಾನವಳನ್ನು ಪಾಸಿಟಿವ್ ಮಾಡಿದೆ. ಪಾತ್ರ ಒಳ್ಳೆಯದಾಗುವುದು, ಕೆಟ್ಟದಾಗುವುದು ಹಾಗೆ. ಅವಳು ನಿಜವಾಗಿ ಕೆಟ್ಟವಳಲ್ಲ. ಆರಂಭದಲ್ಲಿ ನನಗೆ ಅವಳು ಕೆಟ್ಟವಳಾಗಿಯೇ ಕಂಡದ್ದು. ಇವಳನ್ನು ಪಾಕೆಟ್ ಮಾಡಿ ಹಣ ಮಾಡಬೇಕು, ಮಗು ಪಡೆಯಬೇಕು, ಅವಳ ಗಂಡ ಶಂಢ. ಅವನನ್ನು ಇವಳು ಕೊಲ್ಲಬೇಕೆಂದು ಮಾಡಿದ್ದೆ. ಆಮೇಲೆ ಬರೆಯುತ್ತಾ ಇವಳು ಕೊಲೆಗಾರಳು ಆಗಬಾರದು. ಅವಳಿಗೆ ಬದುಕಿನಲ್ಲಿ ಆಸೆ ಇಲ್ಲವೇ? ಅವಳೇನು ಮಾಡಿದ್ದಾಳೆ? ಅವನು ಕೆಟ್ಟವನು, ಅವನು ಅವಳನ್ನು ಬ್ಲಾಕ್‌ಮೇಲ್ ಮಾಡಲು ಆರಂಭಿಸುತ್ತಾನೆ. ಪ್ರೇಮ ಕಥೆ ಅದು. ಅಲ್ಲಿ ಅವನು ಅವಳನ್ನು ಕೊಲೆ ಮಾಡುತ್ತಾನೆ. ನನ್ನ ದೃಷ್ಟಿಯಲ್ಲಿ ನಾನು ಆ ಸ್ತ್ರೀ ಪಾತ್ರಕ್ಕೆ ನ್ಯಾಯ ಒದಗಿಸಿದ್ದೇನೆ. ಅವಳಿಗೆ ಮಗುವಾಗುತ್ತದೆ. ಅದು ಯೋಗೀಶನ ಮಗು.

**ಪ್ರಶ್ನೆ 14:** ಕಾದಂಬರಿಯನ್ನು ರಚಿಸುವಾಗ ನಿಮ್ಮ ಜೀವನದಲ್ಲಿ ಹೊಸ ತಿರುವು ಅಥವಾ ನಿಮ್ಮ ದೃಷ್ಟಿಕೋನದಲ್ಲಿ ಕ್ರಾಂತಿಕಾರಿಯಾದಂತಹ ಬದಲಾವಣೆಯನ್ನು ತಂದಂತಹ ಕಾದಂಬರಿಯನ್ನು ಹೆಸರಿಸುತ್ತೀರಾ?.

**ಉತ್ತರ :–** ಇಲ್ಲ, ನನ್ನ ಕಾದಂಬರಿಗಳಲ್ಲಿ ಆಕ್ಷೇಪಕರವಾದಂಹದ್ದು ಬಂದಿದೆ. 'ನಿರಂತರ' ಕಾದಂಬರಿ ಬಗ್ಗೆ ಡಾಕ್ಟರೊಬ್ಬರು ನನಗೆ ಪತ್ರ ಬರೆಯುತ್ತಾ 45 ವರ್ಷದ ಹೆಂಗಸಿಗೆ ಅಂತಹ ಕಾಮವಿರಲು ಸಾಧ್ಯ ಇಲ್ಲ ಎಂದು ತಿಳಿಸಿದ್ದರು. ಆದರೆ ಅದು ವ್ಯಕ್ತಿಯಿಂದ ವ್ಯಕ್ತಿಗೆ ವ್ಯಾತ್ಯಾಸ ಇರುವುದಿಲ್ಲವೇ? 45 ಅಲ್ಲ 60ರಲ್ಲಿಯೂ ಸಹ ಇರಬಹುದು. ಹಾಗೆಂದು ನಾನು ಇನ್ನೊಂದು ಕಾದಂಬರಿಯನ್ನು ಬರೆಯುವಾಗ 45 ವರ್ಷದ ಯಾರಿಗೂ ಲೈಂಗಿಕ ಭಾವನೆಗಳು ಬರುವುದಿಲ್ಲ ಎಂದು ನಾನು ಬದಲಾವಣೆ ಮಾಡಿಕೊಳ್ಳಲು ಆಗುವುದಿಲ್ಲ. ಈ ಪಾತ್ರ ಹೀಗೆಯೇ ಎಂದು ನನ್ನಿಂದ ಅದು ಹೊರಗೆ ಹೋಗುತ್ತದೆ. ಈ ಪಾತ್ರ ಹೀಗಿರಬೇಕು, ಒಂದು ವ್ಯಕ್ತಿಯಾಗಿರಬೇಕೆಂದು ನನಗೆ ಕಾಣುತ್ತದೆ. ಅದಕ್ಕೆ ನಾನು ಬೇಕಾದಾಗ ಒಪ್ಪಿಗೆ ಕೊಡುತ್ತೇನೆ ಹೊರತು ಬೇರೆಯವರ ಪ್ರತಿಕ್ರಿಯೆಯಿಂದಾಗಿ ಬದಲಾಗಿಲ್ಲ. ಪ್ರತಿಕ್ರಿಯೆ ತುಂಬಾ ಬರುತ್ತದೆ. ಪ್ರತಿಕ್ರಿಯೆಗೂ ನಾನು ಬದಲಾವಣೆ ಮಾಡಿಕೊಂಡಿರುವುದಕ್ಕೂ ಸಂಬಂಧವೇ ಇಲ್ಲ. ನನ್ನ ಕೆಲಸಕ್ಕೂ, ಪ್ರತಿಕ್ರಿಯೆಗೂ, ವಿಮರ್ಶೆಗೂ ಸಂಬಂಧಪಟ್ಟು ಬರೆಯಲು ಸಾಧ್ಯವೇ ಇಲ್ಲ. ಬರೆಯುವುದು ನನ್ನ ಕೈಯಲ್ಲಿ ಇಲ್ಲ ಅದೇ ಬರೆಸಿಕೊಂಡು ಹೋಗುತ್ತದೆ.

**ಪ್ರಶ್ನೆ 15 :** ನಿಮ್ಮ ಕೃತಿಗಳಲ್ಲಿ ರಂಜಕತೆ ಹೆಚ್ಚು ಇರುತ್ತದೆ ಎಂಬ ಅಭಿಪ್ರಾಯವಿದೆ. ಈ ಬಗ್ಗೆ ನಿಮ್ಮ ಪ್ರತಿಕ್ರಿಯೆ ಏನು?

**ಉತ್ತರ :** ಅದು ಇರಬಹುದು. ಆದರೆ ಎಲ್ಲ ಕಾದಂಬರಿಗಳಲ್ಲಿ ಇದೆಯೆಂದು ಹೇಳಲಾಗುವುದಿಲ್ಲ. ಬರವಣಿಗೆಯಲ್ಲಿ ಒಂದು ಉದ್ದೇಶವಿರುತ್ತದೆ. ಅದು ಸಾಹಿತ್ಯಕ್ಕಿಂತ ಹೊರಗಿನ ಉದ್ದೇಶವೆಂದು ಭಾವಿಸಿಕೊಂಡರೆ ನನಗೇನೂ ಮಾಡಲಿಕ್ಕಾಗುವುದಿಲ್ಲ. ನನಗೆ ಜನಗಳು ಓದಬೇಕು ಎಂಬ ಉದ್ದೇಶವಿರುತ್ತದೆ. ಕಾದಂಬರಿ ಮೂಲೆಗುಂಪಾಗಬಾರದು. ಸಾವಿರಾರು ಮಂದಿ ಓದುತ್ತಾರೆ. ಸಾವಿರ ಮಂದಿಯಾದರು ಓದಬೇಕು. ಪುಸ್ತಕ ಮಾರಾಟವಾಗಬೇಕು, ಜನ ಓದಬೇಕು. ನಾನು ಒಂದು ವಿಚಾರ ಹೇಳಿದರೆ ಅದು ಜನಗಳಿಗೆ ತಿಳಿಯಬೇಕೆಂಬ ಉದ್ದೇಶ ನನಗಿರುತ್ತದೆ. ಅದಕ್ಕೆ ಜನ ಪ್ರತಿಕ್ರಿಯಿಸ ಬೇಕೆಂದೇನೂ ಇಲ್ಲ. ನನ್ನ ಉದ್ದೇಶ ಜನಗಳು ಓದಬೇಕು. ಆದುದರಿಂದ ನೈಜತೆ ಮತ್ತು ರಂಜಕತೆಯನ್ನು ಸ್ವಲ್ಪ ಬೆರಕೆ ಮಾಡುತ್ತೇನೆ. ವಾಸ್ತವವಾದವನ್ನು ಯಾರೂ ಓದುವುದಿಲ್ಲ. ಎಲ್ಲೂ ನಡೆಯದೇ ಇರುವ ಸಂಗತಿಗಳನ್ನೇ ಜನರು ಬಹಳ ಇಷ್ಟ ಪಡುತ್ತಾರೆ. ಅದು ಜನಗಳು ಇಷ್ಟ ಪಡುತ್ತಾರೆ ಎಂಬ ಕಾರಣಕ್ಕಾಗಿಯಲ್ಲ. ನಮಗೆ ಯಾವುದೋ ಒಂದು ವಸ್ತು ಆಕರ್ಷಕ ಅನಿಸಬೇಕಿದ್ದರೆ ಅದು ಮಣ್ಣಿಗೆ ಹತ್ತಿರವಾಗಿರಬೇಕು. ಭಾಗಶಃ ಸ್ವಲ್ಪ ದೂರವೂ ಇರಬೇಕು. ಒಂದು ರೀತಿಯಲ್ಲಿ ಮಾಡರ್ನ್ ಪೈಂಟಿಂಗ್ ಇದ್ದ ಹಾಗೆ. ನನ್ನ ಬರಹಕ್ಕೆ ಸಂಬಂಧ ಪಟ್ಟಂತಹ ಫಿಲಾಸಫಿ ಹೇಳುವುದಿದ್ದರೆ ರಿಯಲಿಸಂ ಮತ್ತು ಫಿಕ್ಷನ್. ನೈಜತೆಯನ್ನು ರಂಜನೀಯವಾಗಿ ಹೇಳುತ್ತಾ ಇದ್ದರೆ ಅದು ಹಾಸ್ಯವಾಗುತ್ತದೆ. ತಮಾಷೆಗಾಗಿ ಚಿತ್ರಿಸುತ್ತಾ ಹೋದರೆ ಅದು ಸಾಹಿತ್ಯವಾಗುವುದಿಲ್ಲ. ನಗು ತರಿಸಲಿಕ್ಕಾಗುತ್ತದೆಯೇ ಹೋರತು ಬೇರೆ ಏನೂ ಇಲ್ಲ. ನಾವೊಂದು ವಿಚಾರವನ್ನು ಹೇಳುವ ಸಂದರ್ಭದಲ್ಲಿ ಕಾದಂಬರಿಯ ಚೌಕಟ್ಟು ತುಂಬಾ ದೊಡ್ಡದು, ಅದನ್ನು ಎಲ್ಲಿಯೂ ಓದಬೇಕೆಂಬ ಉದ್ದೇಶ ನಮಗಿದ್ದರೆ ಓದುವಂತಹ ಅಂಶ ಕೂಡಾ ಅದರೊಳಗೆ ಇರಬೇಕು. ಓದುವಷ್ಟು ಮಂದಿಗಾದರೂ ಇಷ್ಟವಾಗಬೇಕು.

**ಪ್ರಶ್ನೆ 16 :** ಆರಂಭದ ನಿಮ್ಮ ಕೃತಿಗಳಲ್ಲಿ ಬ್ರಾಹ್ಮಣ್ಯದ ವಿರುದ್ಧ, ಪುರೋಹಿತ ಶಾಹಿಯ ವಿರುದ್ಧ ಪ್ರತಿರೋಧ ಕಾಣುತ್ತಿದೆಯಲ್ಲಾ ಈ ಬಗ್ಗೆ ಏನು ಹೇಳುತ್ತೀರಿ?

**ಉತ್ತರ :** ನಾವು ಬರವಣಿಗೆಯಲ್ಲಿ ಯಾವುದೇ ಒಂದು ವಿಷಯವನ್ನು ಎತ್ತಿಕೊಳ್ಳುತ್ತೇವೆ. ಉದಾಹರಣೆಗೆ ಹಿಂದಿನ ಆ ದಿನಗಳಲ್ಲಿ ಇದ್ದಂತಹ ದಲಿತರ ಬರವಣಿಗೆ ಈಗ ಎಲ್ಲಿದೆ? ದಲಿತಪರ ಬರವಣಿಗೆ ಎಲ್ಲಿದೆ? ಹಿಂದೆ ಬರೆಯುತ್ತಿದ್ದಂತಹ ಬರಗೂರು ರಾಮಚಂದ್ರಪ್ಪನಂತಹವರೇ ಈಗ ಬರೆಯುತ್ತಿಲ್ಲ. ಅವರೆಲ್ಲ ಶೋಷಿತರು, ದಲಿತರು ಎಂದು ಅಷ್ಟೆಲ್ಲ ನಡೆಯುತ್ತಿತ್ತಲ್ಲ, ಅದು ಈಗ ಹೋಗಿದೆ. ಬಹಳ ತಣ್ಣಗಾಗಿದೆ. ಬಂಡಾಯ

ಈಗ ಎಲ್ಲಿಗೆ ಹೋಯಿತು? ಯಾವುದೇ ಒಂದು ವಸ್ತು ಹಳತಾಗುತ್ತದೆ. ನನ್ನನ್ನು ಒಂದು ಕಾರ್ಯಕ್ರಮಕ್ಕೆ ಕರೆದುಕೊಂಡು ಹೋಗಲಿಕ್ಕೆ ಬಂದವರು ಇಬ್ಬರು ಕೃಷಿಕ ಬ್ರಾಹ್ಮಣರು ಕಾರಿನಲ್ಲಿ ಮಾತಾನಾಡುತ್ತಿದ್ದರು; ನಮಗೆ ಈಗೇನಿದೆ? ತೋಟದ ಕೆಲಸ ಮಾತ್ರ. ಅಂದರೆ ಅವರು ಹೇಳುವುದು ಮೀಸಲಾತಿಯಿಂದಾಗಿ ಅವರಿಗೆ ಏನು ತೊಂದರೆಯಾಗಿದೆಯೆಂದು. ಇದೂ ಒಂದು ಧ್ವನಿಯಲ್ಲವೇ? ಅಂದರೆ ಆ ವಸ್ತು ಹಳತಾಗಿದೆ. ವಸ್ತು ಹಳತಾದ ಮೇಲೆ ನಮಗೆ ಆಕರ್ಷಣೆ ಇರುವುದಿಲ್ಲ. ಅಂಗಿ ಸ್ವಲ್ಪ ಸಮಯ ತೂತಾಗಿರುವುದನ್ನು ತೇಪೆ ಹಾಕಿಕೊಂಡು ಹಾಕುತ್ತೇವೆ. ಹಾಕಲಿಕ್ಕೂ ಸಾಧ್ಯವಿಲ್ಲವೆಂದಾದಾಗ ಬಿಸಾಡಿ ಬಿಡುತ್ತೇವೆ. ಹೊಸ ಅಂಗಿ ಕೊಂಡುಕೊಳ್ಳುತ್ತೇವೆ. ಹಾಗೆಯೇ ಬರವಣಿಗೆಯೂ ಕೂಡಾ. ವಸ್ತು ಹಳತಾದ ಮೇಲೆ ಅದನ್ನೇ ಹಿಡಿದು ನೇತಾಡುವುದು?. ಅದೇ ಬಂಡಾಯ, ಅದೇ ದಲಿತ ಪರ ಚಿಂತನೆ, ಅದೇ ಬ್ರಾಹ್ಮಣ್ಯ ಇತ್ಯಾದಿ ವಿಷಯ ಅಲ್ಲಿಗೆಯೇ ಮುಗಿಯಿತು. ಆಗ ನೀವು ಹೇಳಬಹುದು ಈ ಕಾಲದಲ್ಲಿಯೂ ಕೂಡಾ ಇವರು ಬ್ರಾಹ್ಮಣ್ಯದ ಬಗ್ಗೆ ಬರೆಯುತ್ತಾರಲ್ಲ ಎಂದು. ಕೆಲವು ಪ್ರಸಿದ್ಧ ಲೇಖಕರು ಈಗ ಬರೆಯುತ್ತಿರುವಾಗಲೂ ಆ ಹಳೆಯ ಕಡತಗಳಿಂದ ಯಾವುದೋ ಒಂದು ವಿಷಯ ತೆಗೆದುಕೊಂಡು ಬರೆಯುತ್ತಾರೆ. ಅದು ಯಾಕೆ ಬರೆಯುತ್ತಾರೆಂದು ಅವರಿಗೆ ಗೊತ್ತು. ಬೈರಪ್ಪನವರು 'ಸಾರ್ಥ' ಯಾಕೆ ಬರೆದರೆಂದು ನನಗೆ ಗೊತ್ತಿಲ್ಲ. ನಿಜವಾಗಿ ಆಶ್ಚರ್ಯವಾಗುತ್ತದೆ. ಇವತ್ತು ಜನರು ಓದುತ್ತಾರೆಂದು ಅವರಿಗೆ ಓದುವವರಿದ್ದಾರೆಂದು ಅವರು ಬರೆದಿರಲಿಕ್ಕೂ ಸಾಕು. ಆ ವಸ್ತು ಇವತ್ತು ಹಳಸಲು ವಸ್ತು. ಇವತ್ತು ನಮಗೆ ಬೇಕಾದ ಸಾಹಿತ್ಯಕ್ಕೆ ಸ್ವಲ್ಪವಾದರೂ ಸಮಕಾಲೀನತೆ ಇರಬೇಕು. ಅದಕ್ಕೆ ಭಾರತೀಯ ಸಾಹಿತ್ಯದ ಬಗ್ಗೆ ಇರುವ ದೊಡ್ಡದಾದ ಆಪಾದನೆ ಸಮಕಾಲೀನತೆ ಬಹಳ ಕಡಿಮೆ, ಸಮಕಾಲೀನತೆ ಇಲ್ಲವೆಂದು. ನಾವು ಯಾಕೆ ಸಮಕಾಲೀನತೆ ಗಮನದಲ್ಲಿ ಇಟ್ಟುಕೊಳ್ಳಬಾರದು? ರಾಮಾಯಣವನ್ನು ಪುನಃ ಬರೆಯುವುದು, ಪುನಃ ಮಹಾಭಾರತವನ್ನು ಬರೆಯುವುದು ಯಾಕೆ?. ಬ್ರಾಹ್ಮಣ್ಯ, ಪುರೋಹಿತಶಾಹಿ ಈಗಲೂ ಇದೆ. ಆದರೆ ನಮಗೆ ಅದು ಆಕರ್ಷಕವಾಗಿ ಕಾಣುತ್ತಿಲ್ಲ. ನನಗೆ ಆ ವಿಷಯ ಇನ್ನು ಬೇಡ. ನಾನು ಆ ಬಗ್ಗೆ ಸಾಕಷ್ಟು ಬರೆದಿದ್ದೇನೆ. ಆ ಬ್ರಾಹ್ಮಣ್ಯದಲ್ಲಿ ಎಷ್ಟು ಬರೆಯಬಹುದೋ ಅಷ್ಟು ಬರೆದಿದ್ದೇನೆ. ಈಗಲೂ ಅದು ಇದೆ. ಈಗಲೂ ಅಷ್ಟೇ ಘೋರವಾಗಿಯೂ ಇದೆ. ಇಲ್ಲಿಯೂ ಸುತ್ತ ಮುತ್ತಲಿದೆ. ಮತ್ತೆ ಅದನ್ನೇ ಬರೆಯುವುದರಿಂದ ಏನೂ ಪ್ರಯೋಜನವಿಲ್ಲ. ಬರೆದದ್ದು ಓದಬೇಕು, ಅದರಿಂದ ಏನಾದರೂ ಪರಿಣಾಮವಾಗಬೇಕೆಂದು ಇರುತ್ತದೆ. ಬರವಣಿಗೆಯಿಂದಲೇ ಕ್ರಾಂತಿಯಾಗದಿದ್ದರೂ ಒಂದು ಪರಿವರ್ತನೆ ಆಗಬೇಕು. 'ಅಬ್ರಾಹ್ಮಣ' ಕಾದಂಬರಿ ಬಗ್ಗೆ ಮಡಿಕೇರಿಯವರೊಬ್ಬರು ಹೇಳಿದರು; ಅವರು ಬ್ರಾಹ್ಮಣರ ಮನೆಗೆ ಹೋದಲ್ಲಿ ಅವರಿಗೆ

ಟೀ ಕೊಟ್ಟು ಆ ಪಾತ್ರೆಯನ್ನು ತೊಳೆದು ಇಡಬೇಕೆಂದು ನಿಯಮ ಆಗಿತ್ತು. ಅವರಿಗೆ ತುಂಬಾ ಬೇಸರ ಆಗಿತ್ತು, ಅವರು ಯಾಕೆ ನನಗೆ ತಿಂಡಿಕೊಡುತ್ತಾರೆ ಎಂದು. ಪಾತ್ರೆ ತೊಳೆದಿಡಬೇಕಲ್ಲಾ ಎಂದು ಬಿ.ಇ. ಓದಿದ ಅವರಿಗೆ ಬೇಸರ ಆಗುತ್ತಿತ್ತು. ಅವರು 'ಅಬ್ರಾಹ್ಮಣ' ಓದಿ ಅವರ ಮನೆಯವರಿಗೆ ಓದಲು ಕೊಟ್ಟರು. ಓದಲು ಕೊಟ್ಟು, ಸ್ವಲ್ಪ ದಿನದ ಬಳಿಕ ಅವರು ಅಲ್ಲಿ ಟೀ ಕುಡಿದ ಸಂದರ್ಭದಲ್ಲಿ ನೀವು ತೊಳೆಯುವುದು ಬೇಡ ತೊಂದರೆಯಿಲ್ಲ ಎಂದರಂತೆ. ಅಂದರೆ ಸ್ವಲ್ಪವಾದರೂ ಇದು ಯಾರಿಗಾದರೂ ಮುಟ್ಟುತ್ತದೆ ಎಂದಾಯಿತಲ್ಲ. ಹೀಗೆ ನೂರಾರು ಪ್ರತಿಕ್ರಿಯೆಗಳು ಬರುತ್ತವೆ. ನಾನು ಅದನ್ನು ರಿಪೇರಿ ಮಾಡಲು ಹೊರಟದ್ದಲ್ಲ. ನಾನು ಪಾತ್ರ ಚಿತ್ರಣ ಮಾಡಿದ್ದರಲ್ಲಿ ನಿಜವಾದ ಇಶ್ಯು ಬೇರೆ. ಅದರಲ್ಲಿ 'ಅಬ್ರಾಹ್ಮಣ'ದಲ್ಲಿರುವ ಇಶ್ಯು ಹೇಗೆಂದರೆ ಒಂದು ಮನುಷ್ಯನ ದುರಂತಕ್ಕೆ ಕಾರಣವಾಗುವಂತಹ ಒಂದು ಧೋರಣೆ ಆ ಕುಟುಂಬದೊಳಗೆ ಇರಬಹುದೆಂದು. 'ಪುನರಪಿಜನನಂ'ನಲ್ಲಿ ಸ್ವಲ್ಪ ರೋಚಕವಾಗಿರಬಹುದು. ಎರಡರಲ್ಲೂ ಜಾತಿಯ ವಿಷಯ ಬರುತ್ತದೆ.

**ಪ್ರಶ್ನೆ 17:** ಯಾವುದಾದರೂ ಚಳುವಳಿಯಲ್ಲಿ ನೀವು ಭಾಗವಹಿಸಿದ್ದೀರಾ?

**ಉತ್ತರ :** ಚಳುವಳಿಗಳಲ್ಲಿ ಭಾಗವಹಿಸಲಿಲ್ಲ. ಕೇರಳದಲ್ಲಿರುವ ಕಾಸರಗೋಡು ಕರ್ನಾಟಕಕ್ಕೆ ಸೇರಬೇಕೆಂಬ ಚಳುವಳಿಯಲ್ಲಿ ನೇರವಾಗಿ ಭಾಗವಹಿಸಲು ಆಗಲಿಲ್ಲ. ಆಗ ನಾನು ಸರಕಾರಿ ಅಧ್ಯಾಪಕನಾಗಿದ್ದೆ. ಆದರೆ ಹಿಂದಿನಿಂದ ನಾನು ಅದರಲ್ಲಿ ತೊಡಗಿಸಿಕೊಂಡಿದ್ದೆ. ಆ ಮೆರವಣಿಗೆಯಲ್ಲಿ ನಾನು ಭಾಗವಹಿಸಿದ್ದೆ. ನಮಗೆ ತೊಂದರೆ ಕೊಡುವವರು ಯಾರು ಗೊತ್ತಾ? ಸರಕಾರವೇನು ಅಲ್ಲಿ ಬಂದು ಕುಳಿತುಕೊಳ್ಳುವುದಿಲ್ಲ. ಮುಖ್ಯೋಪಾಧ್ಯಾಯರು ನೋಡುತ್ತಾರೆ. ನಿಜವಾಗಿ ಅವನೂ ಕನ್ನಡಿಗನಾಗಿರುತ್ತಾನೆ. ಇವನಿಗೆ ತೊಂದರೆ ಕೊಡುವಂತಹ ಒಂದು ಅವಕಾಶ ಸಿಕ್ಕುತ್ತದೆ. ನಮ್ಮಲ್ಲಿ ತೊಂದರೆ ಕೊಡುವ ಅವಕಾಶ ಸಿಕ್ಕಿದರೆ ಅದನ್ನು ಉಪಯೋಗಿಸಿಕೊಳ್ಳುತ್ತಾರೆ. ಕರ್ನಾಟಕದಲ್ಲಿ ಪರಿಸರ ಆಂದೋಲನದಲ್ಲಿ ಭಾಗವಹಿಸಿದ್ದೆ. ಬಂದ ಆರಂಭದಲ್ಲಿ ನನಗೆ ಆಸಕ್ತಿ ಇತ್ತು, ಪರಿಸರ ಚಳವಳಿ ಇತ್ಯಾದಿಗಳಲ್ಲಿ. ನಂತರ ನೋಡುವಾಗ ಅದು ಯಾವುದೋ ಒಂದು ರಾಜಕೀಯ ಪಕ್ಷದವರದ್ದು. ಅದರಲ್ಲಿ ಯಾರದೋ ಒಂದು ಪ್ರಾಬಲ್ಯ. ಅದು ನಿಜವಾಗಿಯೂ ಸರಿಯಿಲ್ಲ ಎಂದೆನಿಸಿತು. ಕಡಬ ಇತ್ಯಾದಿ ಕಡೆಗಳಲ್ಲಿ ಪರಿಸರದ ಬಗ್ಗೆ ಭಾಷಣ ಮಾಡಲು ಹೋಗಿದ್ದೆ. ಮತ್ತೆ ಒಂದು ದೊಡ್ಡ ಜಾತ ಇಲ್ಲಿಗೆ ಬಂತು. ಇಲ್ಲಿ ನಡೆದ ಸಭೆಯಲ್ಲಿ ಅವರು ಮಾತಾನಾಡಿದ ವಿಷಯವೇ ಬೇರೆ. ಪರಿಸರ ಚಳವಳಿಗೂ ಹಿಂದು ಮುಸ್ಲಿಂಗೂ ಏನು ಸಂಬಂಧ ಅನ್ನಿಸಿತು. ಚಳವಳಿಗಳ ಬಗ್ಗೆ ಸಹಾನುಭೂತಿ ನನಗೆ ಇತ್ತು. ಈಗ ನೋಡಿದರೆ ನನ್ನ ಬರವಣಿಗೆ ನನಗೆ ಸಾಕು ಅನ್ನಿಸುತ್ತದೆ.

**ಪ್ರಶ್ನೆ 18 :** ನಿಮಗೆ ತುಂಬಾ ಮೆಚ್ಚುಗೆಯಾದ ಕಾದಂಬರಿ ಯಾವುದು? ಏಕೆ?

**ಉತ್ತರ :** ನನ್ನ ಕಾದಂಬರಿಗಳಲ್ಲಿ ನನಗೆ ಮೆಚ್ಚುಗೆಯಾದಂತಹ ಕಾದಂಬರಿ ಯಾವುದೆಂದು ನನಗೆ ಹೇಳಲಾಗುವುದಿಲ್ಲ. ನಾನು ಯಾವಾಗಲೂ ಹೇಳುತ್ತೇನೆ, ಬರವಣಿಗೆಯ ಸಂದರ್ಭದಲ್ಲಿ, ನಾನು ಪುಸ್ತಕವನ್ನು ಬರೆದು ಮುಗಿಸಿದ ನಂತರ ಇಂತಹ ಕಾದಂಬರಿ ಇಷ್ಟವೆಂದು ನನಗೆ ಹೇಳಲು ಆಗುವುದಿಲ್ಲ. ನಾನು ಬರೆಯುವಾಗ ಯಾವುದು ಹೆಚ್ಚು ಖುಷಿ ಕೊಟ್ಟಿದೆ ಎಂದು ಹೇಳುವುದಾದಾರೆ ನನಗೆ ಸಟೈರ್ ಬರೆಯುವುದೆಂದರೆ ಇಷ್ಟ. ನಾನು 'ನಿರಂತರ' ಬರೆಯುವಾಗ ಬಹಳ ಖುಷಿಯಿಂದ ಅದನ್ನು ಬರೆದೆ. ಅದು ಸಂಪೂರ್ಣ ಫಿಕ್ಷನ್. ಆದರೂ ಕೂಡಾ ಅದು ಬದುಕಿಗೆ ಬಹಳ ಸಂಬಂಧಪಟ್ಟದ್ದು. ಆ ಕಾಲದಲ್ಲಿ ಯುವಜನತೆ ಬಹಳ ಮಂದಿ ಅದನ್ನು ಮೆಚ್ಚಿಕೊಂಡಿದ್ದರು. ಅದು ನೂರಕ್ಕೆ ನೂರು ಕಟ್ಟುಕತೆ. ಹಾಗೆ ನೋಡಿದರೆ ಅದು ಕಟ್ಟು ಕತೆಯಲ್ಲ. ನಿಜವಾದ ಕತೆಯೇ. ಇಂದಿರಾ ಗಾಂಧಿ, ರಾಜೀವ ಗಾಂಧಿ, ಊರುಗಳ ಹೆಸರು ಎಲ್ಲ ಹೆಸರುಗಳನ್ನು ನಾನು ಅದರಲ್ಲಿ ಬಳಸಿದ್ದೇನೆ. ಅದು ಇಡೀ ಕಾದಂಬರಿ ವ್ಯಂಗ್ಯ. ಒಂದು ಸಟೈರ್. ಅಂತಹ ಬರವಣಿಗೆ ನನಗೆ ಇವತ್ತಿಗೆ ಕೂಡಾ ಇಷ್ಟ. ಸಟೈರ್ ತಮಾಷೆಯಲ್ಲ ಸ್ವಲ್ಪ ಬೇರೆ, ನಿಜವಾಗಿಯೂ ಹಾಸ್ಯ ಅಲ್ಲ. 'ಮನೆ' ಕಾದಂಬರಿಯೂ ಹಾಗೆಯೇ. ನನಗೆ ಹೆಚ್ಚು ಇಷ್ಟವಾದದ್ದು 'ನಿರಂತರ' ಕಾದಂಬರಿ.

**ಪ್ರಶ್ನೆ 19 :** ನೀವು ಓದಿದ ಇತರ ಕಾದಂಬರಿಗಳಲ್ಲಿ ನೀವು ಇಷ್ಟಪಟ್ಟದ್ದು? ಕನ್ನಡದ ಯಾವ ಲೇಖಕರ ಕೃತಿಗಳು ನಿಮಗೆ ಇಷ್ಟವಾಗುತ್ತವೆ?

**ಉತ್ತರ :** ನಾನು ಓದಿದ ಕಾದಂಬರಿಗಳಲ್ಲಿ ಒಂದೇ ಒಂದು ಇಷ್ಟ ಎಂದು ನನಗೆ ಹೇಳಲು ಕಷ್ಟವಾಗುತ್ತದೆ. ಕಾರಂತರ ಕೃತಿಗಳೆಂದರೆ ನನಗೆ ಇಷ್ಟ. ಅವರ ಕಾದಂಬರಿಗಳನ್ನು ಹೆಚ್ಚು ಇಷ್ಟಪಡುತ್ತೇನೆ. ಕಾನೂರು ಹೆಗ್ಗಡತಿಯಷ್ಟು ಮಲೆಗಳಲ್ಲಿ ಮದುಮಗಳು ಇಷ್ಟ ಆಗಲಿಲ್ಲ. ಚಿಕ್ಕಂದಿನಲ್ಲಿ 'ಸಂಧ್ಯಾರಾಗ' ಅದ್ಭುತವಾಗಿ ಹಿಡಿಸಿತ್ತು. ಚೋಮನ ದುಡಿ ನನಗೆ ಆ ಕಾಲದಲ್ಲಿ ಇಷ್ಟವಾಗಿತ್ತು. ಕೂಗು ಇಷ್ಟವಾಯಿತು. ಅದರಲ್ಲಿ ಕಲಾತ್ಮಕ ಗುಣಗಳು ಬಹಳ ಕಡಿಮೆ. ಅದರಲ್ಲಿ ಒಳ್ಳೆಯ ಕತೆ ಇದೆ. 'ನಂಬಿದವರ ನಾಕ ನರಕ' ನನಗೆ ತುಂಬಾ ಇಷ್ಟವಾದ ಕಾದಂಬರಿ. 'ಅಳಿದ ಮೇಲೆ' ಇಷ್ಟ. 'ಬೆಟ್ಟದ ಜೀವ' ಆಗ ಇಷ್ಟವಾಗಿತ್ತು. ಈಗ ಇಷ್ಟವಾಗುವುದಿಲ್ಲ. 'ಕುಡಿಯರ ಕೂಸು' ಇಷ್ಟವಾಯಿತು. 'ಸಂಸ್ಕಾರ' ಆಗ ಖುಷಿಯಾಯಿತು. ಪರವಾಗಿಲ್ಲ.

**ಪ್ರಶ್ನೆ 20 :** ಕಾದಂಬರಿಕಾರರಾಗಿ ನಿಮ್ಮ ಗುರಿ ಏನು?

**ಉತ್ತರ :** ಬದುಕುವುದು ಅಷ್ಟೆ

**ಪ್ರಶ್ನೆ 21 :** ನಿಮ್ಮನ್ನು ನೀವು ಯಾವ ಸಾಹಿತ್ಯ ಪಂಥದವರೆಂದು ಗುರುತಿಸಿಕೊಳ್ಳುತ್ತೀರಿ ? ಏಕೆ?

**ಉತ್ತರ :** ನನಗೆ ಯಾವ ಪಂಥವೂ ಇಲ್ಲ. ಬದುಕು ಮಾತ್ರ. ಪಂಥವನ್ನೇ ನಾನು ನಂಬುವುದಿಲ್ಲ. ಒಂದು ಸಾಬೂನಿನ ಮೇಲಿರುವ ಲೇಬಲ್‌ನ ಹಾಗೆ ಪಂಥ. ಲೇಬಲ್ ಕಿತ್ತರೆ ಕೇವಲ ಒಂದು ಸಾಬೂನು, ರಾಸಾಯನಿಕಗಳ ಮಿಶ್ರಣ. ರಾಜಕಾರಣದಲ್ಲಿ ಹೇಗೆ ಒಂದು ಪಂಥದವರು ಇನ್ನೊಂದು ಪಂಥದವರಾಗುತ್ತಾರೆ, ಪಂಥವನ್ನು ಹೇಗೆ ತೊರೆಯುತ್ತಾರೆ, ಯಾವುದಕ್ಕಾಗಿ ತೊರೆಯುತ್ತಾರೆ, ಪಂಥ ಹೇಗೆ ಹೋಗುತ್ತದೆ, ಆ ಪಂಥದವರು ಈ ಪಂಥದವರೆಂದು ಯಾಕೆ ಗುರುತಿಸಿಕೊಳ್ಳುತ್ತಾರೆ ಎಂದು ಎಲ್ಲರಿಗೂ ಗೊತ್ತಿದೆ. ನಮ್ಮಲ್ಲಿ ಸಾಹಿತಿಗಳಲ್ಲಿ ಕೂಡಾ ಅಲ್ಲಲ್ಲಿ ಚಳವಳಿಗಳಲ್ಲಿ ಸುಮ್ಮ ಸುಮ್ಮನೆ ಯಾಕೆ ಸೇರಿಕೊಂಡಿರುತ್ತಾರೆ ಎಂದರೆ ಅವರ ಸ್ನೇಹಿತರು ಕೆಲವು ರಾಜಕಾರಣಿಗಳಿರುತ್ತಾರೆ. ಕಾರಣವಿರುತ್ತದೆ. ಆ ರೀತಿ ಕಾರಣವಿದ್ದೇ ಪಂಥ ಹುಟ್ಟುವುದು. ಪಂಥವನ್ನು ಅಪ್ಪಿಕೊಳ್ಳುವುದಾಗಲಿ, ಇಟ್ಟುಕೊಳ್ಳುವುದಾಗಲಿ, ಯಾವುದೇ ಕಾರಣ ಇಲ್ಲ. ಬದುಕಲಿಕ್ಕೆ ನನಗೆ ಕಾರಣ ಕಾಣುವುದು. ಯಾಕೆ ಬದುಕುತ್ತೀಯ ಎಂದು ಕೇಳಿದರೆ ಏನು ಉತ್ತರ ಕೊಡಲಿ.

**ಪ್ರಶ್ನೆ 22 :** ಇಂದಿನ ಸಾಹಿತ್ಯ ವಿಮರ್ಶೆಯನ್ನು ಗಮನಿಸಿದಾಗ ಇದರಿಂದ ಲೇಖಕನಿಗೆ ಅಥವಾ ಓದುಗನಿಗೆ ಏನಾದರೂ ಪ್ರಯೋಜನ ಸಿಗುತ್ತದೆ ಎಂದು ನಿಮಗೆ ಅನಿಸುತ್ತದೆಯೇ ?

**ಉತ್ತರ :** ಇವತ್ತಿನ ದಿನಗಳಲ್ಲಿ ಸಾಹಿತ್ಯ ವಿಮರ್ಶೆಯೇ ನನಗೆ ಕಾಣುತ್ತಿಲ್ಲ. ಗಾಂಭೀರವಾದ ಮಿಮರ್ಶೆ, ವಿಮರ್ಶಕರೇ ನನಗೆ ಕಾಣಿಸುತ್ತಿಲ್ಲ. ಬಹಳ ವಿಮರ್ಶೆ ಏನೂ ಚೆನ್ನಾಗಿಲ್ಲ. ವಿಮರ್ಶೆಯಲ್ಲಿ ಬಹು ಮಟ್ಟಿಗೆ ಈಗ ವಸ್ತುನಿಷ್ಠತೆ ಕಳೆದು ಹೋಗಿದೆ. ವ್ಯಕ್ತಿನಿಷ್ಠವಾದ ವಿಮರ್ಶೆಯೇ ಬರುತ್ತಿದೆ. ಬೈರಪ್ಪನವರ 'ಕವಲು' ಬಗ್ಗೆ ಬರೆದಾಗಲೂ ಕೂಡಾ ಅದು ಕಾದಂಬರಿ ಬಗ್ಗೆ ಬರೆದರೂ ಕಾದಂಬರಿ ಬಗ್ಗೆ ಬರೆದಂತೆ ಕಾಣುವುದಿಲ್ಲ. ಯಾವುದೋ ಕಾದಂಬರಿ ಎಂಬ ಒಂದು ಪ್ರಕಾರದಲ್ಲಿ ಬಂದಂತಹ ಒಂದು ಸಾಹಿತ್ಯ ಕೃತಿಯ ವಿಶ್ಲೇಷಣೆಯಾಗಿ ಅದು ಕಾಣುತ್ತದೆ. ಅದರೊಳಗೆ ಇರುವ ವಸ್ತುವನ್ನು ಒಂದು ಸಾಹಿತ್ಯಿಕ ವಸ್ತುವಾಗಿ ಪರಿಗಣಿಸದೆ ಒಂದು ಸಾಮಾಜಿಕ ವಸ್ತುವೆಂದೋ ಅಥವಾ ಯಾವುದೋ ಒಂದು ಕೋಮುವಿಗೆ ಸಂಬಂಧಿಸಿದ ವಸ್ತುವೆಂದೋ ಹೀಗೆ ತಗೊಂಡು ಬರೆಯುತ್ತಾರೆ. ಅದರ ಬಗ್ಗೆಯೇ ಬರೆಯುವುದು ಜಾಸ್ತಿ ಆಗುತ್ತದೆ. ಲೇಖಕನ ಬಗ್ಗೆಯೂ ಒಂದಷ್ಟು ಬರೆಯುತ್ತಾರೆ. ಸಾಹಿತ್ಯ ವಿಮರ್ಶೆಯಲ್ಲಿ ಲೇಖಕನ ಬಗ್ಗೆ ಬರೆಯಬೇಕಾಗಿಲ್ಲ. ಕೃತಿಯ ಸಾಹಿತ್ಯಿಕ ಮೌಲ್ಯದ ಬಗ್ಗೆ

ಬರೆಯಬೇಕು. ಗಂಭೀರವಾದ ಸಾಹಿತ್ಯ ವಿಮರ್ಶೆ ಈಗ ಕಾಣಿಸುತ್ತಿಲ್ಲ. ಸಾಹಿತ್ಯ ವಿಮರ್ಶೆಯಿಂದ ಪ್ರಯೋಜನ ಇದೆ. ನಿಜವಾಗಿ ಒಳ್ಳೆಯ ಸಾಹಿತ್ಯ ವಿಮರ್ಶೆಯಿಂದ ಓದುಗನಿಗೆ, ಸಾಹಿತ್ಯ ಅಧ್ಯಯನ ಮಾಡುವವನಿಗೆ ತುಂಬಾ ಪ್ರಯೋಜನ ಇದೆ. ಬರೆಯುವ ಅದೇ ಲೇಖಕನಿಗೆ ಅವನ ಪುಸ್ತಕ ವಿಮರ್ಶೆಯಿಂದ ಪ್ರಯೋಜನವಾಗುತ್ತದೆಯೆಂದು ನನಗೇನೂ ಅನ್ನಿಸುವುದಿಲ್ಲ. ವಿಮರ್ಶೆಯನ್ನು ಗಮನದಲ್ಲಿಟ್ಟುಕೊಂಡು ಯಾವ ಲೇಖಕನೂ ಬರೆಯುವುದಿಲ್ಲ. ನನ್ನ ಪುಸ್ತಕದ ವಿಮರ್ಶೆ ಚೆನ್ನಾಗಿ ಬಂದಿದೆಯೆಂದು ಲೇಖಕನಿಗೆ ಚೆನ್ನಾಗಿ ಬರೆಯಲು ಆಗುವುದಿಲ್ಲ. ಚೆನ್ನಾಗಿ ಬರಲಿಲ್ಲ ಎಂಬ ಕಾರಣಕ್ಕೆ ಅವನು ಬೇಜಾರು ಪಟ್ಟುಕೊಂಡು ಕೆಟ್ಟದಾಗಿ ಬರೆಯಲೂ ಆಗುವುದಿಲ್ಲ. ಬರೆಯುವುದನ್ನು ನಿಲ್ಲಿಸಲೂ ಸಾಧ್ಯವಿಲ್ಲ. ನಿಜವಾದ ಬರವಣಿಗೆಯಲ್ಲಿ ಲೇಖಕನ ಮೇಲೆ ವಿಮರ್ಶೆಯ ಪ್ರಭಾವ ಇರುವುದಿಲ್ಲ. ತಿದ್ದಿಕೊಳ್ಳುವ ವಿಷಯವದಲ್ಲ. ಆದರೆ ಓದುಗನಿಗೆ ತುಂಬಾ ಪ್ರಯೋಜನವಿದೆ.

**ಪ್ರಶ್ನೆ 23 :** ನೀವು ನಾಟಕಗಳನ್ನು ಬರೆಯಲು ಆರಂಭಿಸಿದ್ದು ಯಾವಾಗ? ನಿಮ್ಮ ನಾಟಕಗಳ ಬಗ್ಗೆ ತಿಳಿಸಿ.

**ಉತ್ತರ :** ನಾನು ನಾಟಕಗಳನ್ನು ಬರೆಯಲು ಆರಂಭಿಸಿದ್ದು 1982ರಲ್ಲಿ, ಇಥಿಯೋಪಿಯದಿಂದ ಬಂದ ಮೇಲೆ. ಅದು ಯಾಕೆ ಬರೆಯಲು ಶುರು ಮಾಡಿದೆ ಎಂದು ಹೇಳಿದರೆ, ಹಿಂದೆ ನಾಟಕವನ್ನು ಬರೆಯುತ್ತಿದ್ದೆ, ಬರೆದು ಬಿಸಾಡುತ್ತಿದ್ದೆ. ಇಲ್ಲಿ ಬಂದಾಗ ಆಕಾಶವಾಣಿಯವರು ನನಗೆ ನಾಟಕ ಬರೆದು ಕೊಡಲು ಹೇಳಿದರು. ಹಾಗಾಗಿ ಬರೆಯಲಾರಂಭಿಸಿದೆ. ನಮಗೆ ಕೌಶಲ ಇದ್ರೆ ನಾವೂ ಏನೂ ಬರೆಯಬಹುದು. ಏನು ಹೇಳುತ್ತಾರೆ ಅದನ್ನು ಬರೆಯುತ್ತೇನೆ. ಆ ತರಹದ ಮನುಷ್ಯ ನಾನು. ನನಗೆ ವಿಶೇಷವಾದ ಹುಟ್ಟಿನಿಂದಲೇ ಬಂದ ಗಿಫ್ಟೆಡ್‌ನೆಸ್ ಎಂಬುದಾಗಿ ಏನೂ ಇಲ್ಲ. ನಾನೇನೂ ಅದನ್ನು ನಂಬುವುದಿಲ್ಲ. ಏನು ಸಾಧ್ಯ ಎಂದು ನೋಡುತ್ತೇನೆ. ನನಗೆ ಸಾಧ್ಯವೆಂದಾದರೆ ಸರಿ. ಇಂಗ್ಲಿಷಿನಲ್ಲಿರಬೇಕಾದರೆ ಇಂಗ್ಲಿಷಿನಲ್ಲಿ, ಕನ್ನಡದಲ್ಲಿ ಬೇಕಾದರೆ ಕನ್ನಡದಲ್ಲಿ ಬರೆಯುತ್ತೇನೆ. ಆಗುವುದಿಲ್ಲವೆಂದಾದರೆ ಆ ಕ್ಷಣ ಹೇಳುತ್ತೇನೆ. ಭಾಷಣ ಇರಬಹುದು, ಕಾದಂಬರಿ ಇರಬಹುದು. ಹಾಗೆ ಅವರು ನಾಟಕ ಬರೆಯಬೇಕೆಂದು ಹೇಳಿದರು. ಸರಿಯೆಂದು ಯೋಚನೆ ಮಾಡಿ ನಾಟಕ ಬರೆದೆ. ಅದು ಆರಂಭ. ಹಾಗೆ 10–15 ರೇಡಿಯೋ ನಾಟಕಗಳನ್ನು ಬರೆದೆ. ರೇಡಿಯೋ ನಾಟಕಗಳನ್ನು ಬರೆಯುತ್ತಿದ್ದಾಗ ಬೇರೆ ನಾಟಕಗಳನ್ನು ಯಾಕೆ ಬರೆಯಬಾರದು ಅನ್ನಿಸಿತು. ಹಾಗಾಗಿ ರಂಗನಾಟಕಗಳನ್ನು ಬರೆದೆ. ರೇಡಿಯೋ ನಾಟಕಗಳನ್ನು ರಂಗ ನಾಟಕಗಳಾಗಿ ಬದಲಾಯಿಸಿ ಬರೆದೆ. ಹೀಗೆ ಆರಂಭಿಸಿದೆ. ನಾಟಕಗಳನ್ನು ಬರೆಯುವುದಕ್ಕೆ ಖುಷಿಯಾಗುತ್ತದೆ. ಆ ಮೇಲೆ

ಬೊಂಬೆಯಾಟ ಎಂಬ ನಾಟಕ ಬರೆಯಲು ಏನು ಕಾರಣವೆಂದರೆ ಅದಕ್ಕೊಂದು ಸ್ಪರ್ಧೆ ಇತ್ತು. ಅದು ಕೂಡಾ ಸುಮತೀಂದ್ರ ನಾಡಿಗರು ನನಗೆ ಹೇಳಿದ್ದು. ಒಂದು ಒಳ್ಳೆಯ ಸ್ಪರ್ಧೆ ಇದೆ, ಏಳು ಸಾವಿರ ರೂಪಾಯಿ ಬಹುಮಾನವಿದೆ, ನೀವು ಬರೆಯಿರಿ ಎಂದು ಹೇಳಿದರು. ಹಾಗೆ ಬರೆದೆ. ನನಗೆ ಅದರಲ್ಲಿ ಪ್ರಥಮ ಬಹುಮಾನ ಬಂತು. ನನಗೆ ಪ್ರಶಸ್ತಿ ಕೊಡುವ ಸಂದರ್ಭದಲ್ಲಿ ಭೈರಪ್ಪನವರು, ನಾರತ್ನ ಮೊದಲಾದ ಹಳಬರೆಲ್ಲ ಸೇರಿದ್ರು, ಮೈಸೂರಿನ ಸರಸ್ವತಿಪುರಂನಲ್ಲಿ. ಆ ರೀತಿ ನಾಟಕ ಬರೆಯಲು ಆರಂಭಿಸಿದೆ. ಹಲವು ನಾಟಕಗಳೆಲ್ಲ ರಂಗಕ್ಕೆ ಬಂದಿವೆ. ಅನೇಕ ಕಾಲೇಜುಗಳಲ್ಲಿ, ನೀನಾಸಂನಲ್ಲಿ ಹೀಗೆ ಬೇರೆ ಬೇರೆ ಕಡೆ ನಾಟಕ ಆಡಿದ್ದಾರೆ. ಮಂಗಳೂರಿನವರೆಲ್ಲ ಸರಣಿ ನಾಟಕ ಬರೆದುಕೊಡಲು ತಿಳಿಸಿದರು. ಒತ್ತಾಯ ಮಾಡಿದಾಗ ಬರೆಯಲೊಪ್ಪಿದೆ. ಆಕಾಶವಾಣಿಗೆ ಬೆಳಗಿನ ಚಿಂತನ ಕಾರ್ಯಕ್ರಮಕ್ಕೆ ಹೋಗುತ್ತಿದ್ದೆ. ಹಾಗಾಗಿ ಅವರ ಪರಿಚಯವಾಗಿತ್ತು. ಮೊದಲು 'ಕಥೆಯೊಂದು ಹೀಗೆ' ಎಂಬ ನಾಟಕ ಬರೆದುಕೊಟ್ಟ ನಂತರ ಬಹಳ ಚೆನ್ನಾಗಿದೆ. ಇನ್ನೊಂದು ಬರೆದು ಕೊಡಿ ಎಂದರು. 'ಅನುಭವದಡುಗೆಯ ಮಾಡಿ' ಎಂಬುದನ್ನು ಬರೆದುಕೊಟ್ಟೆ. ಅದು ಕುಂದಾಪುರ ಕನ್ನಡದಲ್ಲಿದ್ದು ಬಹಳ ಪ್ರಸಿದ್ಧಿ ಪಡೆಯಿತು. 13 ವಾರಗಳ ವರೆಗೆ ಬಂತು. ನಂತರ ನಿಲ್ಲಿಸಿದೆ. ಸೀರಿಯಲ್ ಬರೆಯುವುದು ಎಂದರೆ ಬಹಳ ಕಷ್ಟದ ಕೆಲಸ. ಅದು ಹಾಗೆ ನಾನು ಬರೆದುಕೊಟ್ಟೆ. ಕನ್ನಡ ತುಳು ಹವ್ಯಕಭಾಷೆ ಹೀಗೆ ಮೂರು ಭಾಷೆಯನ್ನೊಳಗೊಂಡ 'ತಾಳಮದ್ದಳೆ' ಈಗ ರೇಡಿಯೋದಲ್ಲಿ ಹಾಕುತ್ತಾರೆ. ಅರ್ಧ ಗಂಟೆಯಷ್ಟು ಹಾಕುತ್ತಾರೆ. ಅದನ್ನು ಬರೆದು ಮುಗಿಸಿ ಎರಡು ವರ್ಷ ಆಗಿತ್ತು. ಒಂದು ವಿಲಕ್ಷಣವಾದ ಕಾರಣದಿಂದ ಅದು ಬಂದಿರಲಿಲ್ಲ. ಈಗ ಪುನಃ ಅದಕ್ಕೆ ಜೀವ ಬಂತು. ಹೀಗೆ ಈಗ ಸದ್ಯಕ್ಕೆ ಎಲ್ಲವನ್ನು ಬಿಟ್ಟಿದ್ದೇನೆ. ಈಗ ಒಂದು ಕಾದಂಬರಿ ಅರ್ಧಕ್ಕೆ ಇದೆ. 'ಕೆಂಪು ಕಳವೆ'. ನನ್ನ ಇತ್ತೀಚಿನ ಕಾದಂಬರಿ. ಕೆಂಪು ಕಳವೆ ಎಂದರೆ ಕೆಂಪು ಬಣ್ಣದ ಸುಗಂಧ ಭರಿತ ಭತ್ತ. ಅದಕ್ಕೆ ಗಂಧಸಾಲೆ ಎಂಬುದಾಗಿಯೂ ಹೇಳುತ್ತಾರೆ. ಪರಿಮಳ ಇದೆ. ಅದನ್ನು ನಾವು ಬೆಳೆಸುತ್ತಿದ್ದೆವು. ಈ ಕತೆ ಆರಂಭವಾಗುವುದೇ ಕೆಂಪು ಕಳವೆಯಿಂದ. ನಾನು ಟ್ರೈನಿಂಗ್ ಸ್ಕೂಲ್‌ನಲ್ಲಿರುವಾಗ ಆಗ ನನಗೆ 17 ವರ್ಷವಾಗಿರಬಹುದು. ಅಲ್ಲಿ ಆಗ ನೀನು ಓದಿದ ಮೆಚ್ಚಿನ ಪುಸ್ತಕ ಎಂದು ಪ್ರಬಂಧ ಸ್ಪರ್ಧೆ ಇಟ್ಟಿದ್ದರು. ಆಗ ನಾನು ಆಂಡಯ್ಯನ 'ಕಬ್ಬಿಗರ ಕಾವ'ದ ಬಗ್ಗೆ ಬರೆದೆ. ಅದು ಅಲ್ಲಿಯ ವಾರ್ಡನ್‌ಗೆ ಭಯಂಕರ ಸಿಟ್ಟು ಬಂತು. ಇವನು ಇಷ್ಟುದ್ದದ ಹುಡುಗ ಆಂಡಯ್ಯನ ಕಬ್ಬಿಗರ ಕಾವದ ಮೇಲೆ ಬರೆದಿದ್ದಾನೆ ಎಂದು ಆ ಮನುಷ್ಯ ನನಗೆ ಪ್ರಥಮ ಬಹುಮಾನ ಕೊಡಲಿಲ್ಲ. ದ್ವಿತಿಯ ಬಹುಮಾನ ಕೊಟ್ಟರು. ಬಹುಮಾನ ಕೊಡಲೇ ಬಾರದೆಂದು ಅವನಿಗಿತ್ತು. ಏನೋ ನನ್ನ ಮೇಲೆ ಸಿಟ್ಟಿತ್ತು. ಏಕೆಂದರೆ ಶೂದ್ರರ ಮೇಲೆ ಅವನು ಹಾಗೆಯೇ ಎಂದು ಯಾರೋ

ಹೇಳಿದರು. ಆ ಪುಸ್ತಕ ಓದಿ ನನಗೆ ಬಹಳ ಸಂತೋಷವಾಗಿತ್ತು. ಆಗ ಹುಟ್ಟಿದ ಆಂಡಯ್ಯನ ಪುಸ್ತಕದ ಪ್ರೀತಿ ಇವತ್ತಿಗೂ ನನಗೆ ತೊಲಗಲಿಲ್ಲ. ಅವರು ಅನ್ಯಾಯ ಮಾಡುತ್ತಾರೆಂದು ಎಲ್ಲರಿಗೂ ಗೊತ್ತಿತ್ತು. ನನಗೆ ಬೇಕೆಂದೇ ಕಡಿಮೆ ಅಂಕ ಕೊಡುತ್ತಿದ್ದುದೂ ಗೊತ್ತಿತ್ತು. ಕೊನೆಗೆ ಫೈನಲ್‌ನಲ್ಲಿ ನ್ಯೂ ಟೈಪ್ ಆನ್ಸರ್ ಬರೆಯಲು ಇತ್ತು. ಅದರಲ್ಲಿ ನನಗೆ ಕಡಿಮೆ ಅಂಕ ಕೊಡಲಾಗಲಿಲ್ಲ. ಹಾಗಾಗಿ ನಾನು ತರಗತಿಯಲ್ಲಿ ಪ್ರಥಮ ಸ್ಥಾನ ಪಡೆದೆ. ನನ್ನನ್ನು ಅವರಿಗೆ ಫೈಲ್ ಮಾಡಲಿಕ್ಕೆ ಆಗಲಿಲ್ಲ.

**ಪ್ರಶ್ನೆ 24 :** ನಿಮ್ಮಲ್ಲಿ ಕವನಗಳು ಹುಟ್ಟಿಕೊಂಡದ್ದು ಯಾವಾಗ? ನಿಮ್ಮ ಕವನಗಳ ಬಗ್ಗೆ ತಿಳಿಸಿ.

**ಉತ್ತರ :** ನಾನು ಮೊತ್ತ ಮೊದಲು ಬರೆದದ್ದು ಕವನಗಳನ್ನು. ಶಿಕ್ಷಕ ತರಬೇತಿಯ ಸಂದರ್ಭದಲ್ಲಿ ನಾನು ಕವನಗಳನ್ನು ಬರೆದಿದ್ದೆ. 8ನೇ ಕ್ಲಾಸಿನಲ್ಲಿರುವಾಗ ನಾನು ಸಣ್ಣ ಎರಡು ಚುಟುಕ ಬರೆದಿದ್ದೇನೆ. ಆಗ 'ಬಾಲಬಂಧು' ಎಂಬ ಮಕ್ಕಳ ಮಾಸಪತ್ರಿಕೆ ಬರುತ್ತಿತ್ತು. ಅದರಲ್ಲಿ ಆ ಚುಟುಕ ಪ್ರಕಟವಾಗಿತ್ತು. ಅದು ನಾನು ಮೊದಲು ಬರೆದದ್ದು. ಅನಂತರ ನಾನು ಟ್ರೈನಿಂಗ್ ಸ್ಕೂಲ್‌ನಲ್ಲಿರುವಾಗ ಕವಿತೆಗಳನ್ನು ಬರೆಯುತ್ತಿದ್ದೆ. ಆಮೇಲೆ 'ನವಭಾರತ'ದಲ್ಲಿ ಎರಡು ಮೂರು ಕವಿತೆಗಳು ಬಂದಿವೆ. ಉದಯವಾಣಿಯಲ್ಲಿ ಪ್ರಕಟವಾಗಿವೆ. 'ಗೋಕುಲ' ಎಂಬ ಪತ್ರಿಕೆಯಲ್ಲಿ ದೇಶಭಕ್ತಿಗೆ ಸಂಬಂಧಿಸಿದ ಕವಿತೆಗಳನ್ನು ಬರೆಯುತ್ತಿದ್ದೆ. ಆಕಾಶವಾಣಿಯಲ್ಲಿ ನನ್ನ ಒಂದೆರಡು ಕವಿತೆಗಳನ್ನು ಆ ಕಾಲದಲ್ಲಿ ಸಂಗೀತ ಹಾಕಿ ಹಾಡಿಸಿದ್ದರು. ಹೀಗೆ ಬೇರೆ ಬೇರೆ ಪತ್ರಿಕೆಗಳಲ್ಲಿ ಬಂದಿವೆ. 'ನವಯುಗ' ಎಂಬ ಉಡುಪಿಯ ವಾರ ಪತ್ರಿಕೆಯಲ್ಲಿ ತುಂಬಾ ಕವಿತೆಗಳು ಬಂದಿವೆ. ಕಿನ್ನಿಗೋಳಿಯ 'ಯುಗ ಪುರುಷ' ಪತ್ರಿಕೆಯಲ್ಲಿ ಕವಿತೆ ಬರೆದಿದ್ದೇನೆ ಅಷ್ಟೆ. ಆನಂತರ 17–18 ವರ್ಷದಲ್ಲಿ ಸಂಕಲನ ಮಾಡಿದೆ. ಅದನ್ನು ಬೇಂದ್ರೆಯವರಿಗೆ ಕಳುಹಿಸಿಕೊಟ್ಟೆ. ಅವರು ಅದಕ್ಕೆ ಮುನ್ನುಡಿ ಬರೆದಿದ್ದಾರೆ. ಯಾರಿಗಾದರೂ ಕವಿಯಾಗಬೇಕು ಎಂದು ಇಷ್ಟವಾದವನಿಗೆ ಓದಬೇಕಾದಂತಹ ಮುನ್ನುಡಿ ಅದು. ನಂತರ ಪ್ರಕಟಮಾಡುವ ಸಾಮರ್ಥ್ಯ ನನಗಿರಲಿಲ್ಲ. ಹಾಗಾಗಿ ಮಾಡಲಿಲ್ಲ. ಮುನ್ನುಡಿಯನ್ನು ಗುಲ್ವಾಡಿಯವರು ತೆಗೆದುಕೊಂಡು ಹೋಗಿದ್ದರು. ಅದರ ಜೆರಾಕ್ಸ್ ಪ್ರತಿ ನಂತರ ನನಗೆ ಅವರಿಂದ ಸಿಕ್ಕಿತು. ಅದನ್ನು ಝೇಂಕಾರದ ಹಕ್ಕಿ ಎಂಬ ನನ್ನ ಕವನ ಸಂಕಲನದಲ್ಲಿ ಹಾಕಿದೆ. ಇತ್ತೀಚೆಗೆ ತುಳುವಿನಲ್ಲಿ ಒಂದಷ್ಟು ಕವನಗಳನ್ನು ಬರೆದಿದ್ದೇನೆ.

**ಪ್ರಶ್ನೆ 25 :** ಇಂದಿನ ಶಿಕ್ಷಣದ ಬಗ್ಗೆ ನಿಮಗೆ ಏನನ್ನಿಸುತ್ತದೆ?

**ಉತ್ತರ :** ಇಂದಿನ ಶಿಕ್ಷಣ ಎಲ್ಲಿ ಎಂದು ಗುರುತಿಸಲಾಗುವುದಿಲ್ಲ. ಇವತ್ತು ಇಂಜಿನಿಯರಿಂಗ್ ಮಾತ್ರ ಇರುವುದು. ಇಂಜಿನಿಯರಿಂಗ್ ಒಂದು ಬಿಟ್ಟು ಉಳಿದ ಶಿಕ್ಷಣ

ಹಳೆಯ ಶಿಕ್ಷಣವೇ. ಅದು ನಿನ್ನೆಯದ್ದು ಹೌದು, ನಾಳೆಯದ್ದೂ ಹೌದು. ಜಗತ್ತು ಬದಲಾದ ಹಾಗೆ ಶಿಕ್ಷಣದಲ್ಲೂ ಕಲಿಯಲು ಹೆಚ್ಚು ಹೆಚ್ಚಾಗಿ ಬಂದಿವೆ. ಆದರೆ ಇವತ್ತು ಅದ್ಭುತವಾಗಿ ಕಾಣುತ್ತಿರುವುದು ಇಂಜಿನಿಯರಿಂಗ್. ಏನಾಗಬಹುದೆಂದು ಇದನ್ನು ಊಹಿಸಲೂ ಸಾಧ್ಯವಿಲ್ಲ. ಮುಂದೆ ಒಂದು ಕಡೆ ಇದು ಮುಗ್ಗರಿಸಿ ಬೀಳಬಹುದು. ಇದು ಅವಕಾಶಕ್ಕೆ ಸಂಬಂಧ ಪಟ್ಟು ತಯಾರಾಗುತ್ತಿರುವುದು. ನಾಳೆ ಇಂಜಿನಿಯರಿಂಗ್ ಕಂಪ್ಯೂಟರ್ ಸೈನ್ಸ್ ಅಥವಾ ಇನ್‌ಫಾರ್‌ಮೇಶನ್ ಟೆಕ್ನಾಲಜಿಯವರಿಗೆ ಉದ್ಯೋಗ ಇಲ್ಲ ಎಂದಾದರೆ ಏನಾಗಬಹುದೆಂದು ನಾವು ಊಹಿಸಬಹುದು, ಅದೇ ನಡೆಯುತ್ತದೆ. ಆದರೆ ಸದ್ಯದ ಸ್ಥಿತಿಯಲ್ಲಿ ಹಾಗಾಗಲಿಕ್ಕಿಲ್ಲ. ನೈತಿಕತೆಯ ವಿಷಯವನ್ನು ಈಗ ಯಾರೂ ಯೋಚನೆ ಮಾಡುತ್ತಿಲ್ಲ. ನೈತಿಕತೆ ಎಂಬ ವಿಷಯವೇ ಇಲ್ಲ. ಮೌಲ್ಯಗಳ ಬಗ್ಗೆ ಯಾರೂ ಮಾತಾಡುವುದಿಲ್ಲ. ಶಿಕ್ಷಣಕ್ಕೆ ಸಂಬಂಧ ಪಟ್ಟ ಕಲಿಕೆಯಲ್ಲಿ ಯಾವುದೇ ಸಾಂಸ್ಕೃತಿಕವಾದಂತಹ ಶಿಕ್ಷಣವೇ ಇಲ್ಲ. ಕಲಿಕೆ ಭಾಷೆಗೆ ಸಂಬಂಧ ಪಟ್ಟದ್ದಾಗಲಿ, ಭಾಷೆಗೆ ಸಂಬಂಧ ಪಟ್ಟ ಇತರ ಸಾಂಸ್ಕೃತಿಕವಾದಂತಹ ಬೇರೆ ಆಯಾಮ ಇವತ್ತು ಇಲ್ಲವೇ ಇಲ್ಲ. ಇಂಜಿನಿಯರಿಂಗ್ ಕಾಲೇಜಿನಲ್ಲಿ ವಿಷಯಕ್ಕೆ ಸಂಬಂಧ ಪಟ್ಟದ್ದನ್ನು ಬಿಟ್ಟು ಬೇರೇನು ಕಲಿಸುತ್ತಾರೆ? ಹಾಡಲು, ಕುಣಿಯಲು ಕಲಿಸುತ್ತಾರೋ? ಹೊಸ ಭಾಷೆಯನ್ನು ಕಲಿಸುತ್ತಾರೋ? ಇಂಗ್ಲಿಷ್ ಬಿಟ್ಟರೆ ಬೇರೆ ಯಾವುದೂ ಇಲ್ಲ. ಈಗ ಇರುವಂತಹದ್ದು ಹಣದ ಬೆಳೆ ತರುವಂಥದ್ದು, ಅಂದರೆ ಉದ್ಯೋಗ ಕೊಡುವ ಶಿಕ್ಷಣವನ್ನು ಎಲ್ಲರೂ ಪಡೆಯುತ್ತಿದ್ದಾರೆ. ಬೇರೆ ಯಾವುದೇ ಕ್ಷೇತ್ರದಲ್ಲಿ ಪ್ರಗತಿಯಾದದ್ದು ಕಾಣುವುದಿಲ್ಲ. ಅದು ಮೊದಲಿದ್ದ ಹಾಗೆಯೇ ಇದೆ. ಮೊದಲಿದ್ದ ಎಂ.ಎ., ಎಂ.ಎಸ್‌ಸಿ., ಪಿ.ಹೆಚ್‌ಡಿ. ಇದೆ. ಹೊಸ ಹೊಸ ಅವಕಾಶ ಸಿಗುತ್ತಿದೆ. ಒಳ್ಳೆಯ ಸಂಬಳ ಇದೆ. ಆದುದರಿಂದ ಒಳ್ಳೆಯ ಅಧ್ಯಾಪಕ ಸಿಗಬಹುದು ಅನ್ನಿಸುತ್ತದೆ. ಎಲ್ಲರೂ ಹೋಗಿ ಇಂಜಿನಿಯರ್ ಆಗುವ ಬದಲು ಕೆಲವರಾದರೂ ಅಧ್ಯಾಪಕ ವೃತ್ತಿ ಒಳ್ಳೆಯದೆಂದು ಹೋಗುವವರು ಸಿಗಬಹುದು. ಇಂಜಿನಿಯರಿಂಗ್ ಮತ್ತು ಶಿಕ್ಷಕ ವೃತ್ತಿಗೆ ಹೋಲಿಸಿದರೆ ಶಿಕ್ಷಕ ವೃತ್ತಿಯೆಂಬುದು ಬಹಳ ಅದ್ಭುತ, ಸುಂದರವಾದುದು. ಇಂಜಿನಿಯರಿಂಗ್ ಓದಿ ದಿನದ 14 ಗಂಟೆ ಕೆಲಸ ಮಾಡಿದಾಗ ಆರೋಗ್ಯ ಹಾಳಾಗುತ್ತದೆ. ದೊಡ್ಡ ಸಂಬಳವೇನೋ ಸಿಗುತ್ತದೆ. ಒಂದು ವರ್ಷದಲ್ಲಿ ಗೊತ್ತಾಗುತ್ತದೆ. ಮನೆ, ಮದುವೆ, ಮಗು ಆಯಿತು, ಸಂಬಳ ತಿಂಗಳಿಗೆ ಒಂದುಲಕ್ಷ ಬರುತ್ತಿದೆ, ಏನು ಮಾಡುವುದು ಎಂದು ಸಮಸ್ಯೆ. ಈಗಲೂ ಆ ಸಮಸ್ಯೆ ಬಹಳ ಮಂದಿಯನ್ನು ಕಾಡುತ್ತಿದೆ. ಜೀವನದ ಮೌಲ್ಯವೇ ಹಾಳಾಗುತ್ತದೆ. ಜೀವನ ಎಲ್ಲೆಲ್ಲೋ ಹೋಗುತ್ತದೆ. ಇದು ಬೇಕಾಗಿದೆಯೋ ಎಂದು ಗೊತ್ತಿಲ್ಲದೆ ಏನೆಲ್ಲಾ ಕೊಂಡು ಕೊಳ್ಳುತ್ತಾರೆ. ಈ ಶಿಕ್ಷಣದಿಂದಾಗಿ ಕಾರು, ಮನೆ ಬೇಕೋ ಬೇಡವೋ ಗೊತ್ತಿಲ್ಲ. ಹಣ ಖರ್ಚು ಮಾಡುವ ಒಂದು ಸಮಸ್ಯೆ ಉಂಟಾಗಲು ಸಾಧ್ಯತೆಯಿದೆ. ಅದಕ್ಕೆ ಎಲ್ಲಾ

ಶಿಕ್ಷಣವನ್ನು ಇಂಜಿನಿಯರಿಂಗ್ ಎಂದು ಪರಿಗಣಿಸಬೇಕು. ಎಸ್.ಎಸ್.ಎಲ್.ಸಿ. ಕೂಡಾ ಒಂದು ಇಂಜಿನಿಯರಿಂಗ್. ಅಂದರೆ ಏನು, ಯಾವುದೇ ಒಂದು ಕೌಶಲ್ಯದ ಡಿಸೈನ್ ಮತ್ತು ಎಕ್ಸ್‌ಕ್ಯುಷನ್ ಬಾವಿ ತೋಡುವುದು, ಕುರ್ಚಿ ಮಾಡುವುದು, ಕಟ್ಟಡ ಕಟ್ಟುವುದು ಹೀಗೆ ಪ್ರತಿಯೊಂದು ಕೂಡಾ ಇಂಜಿನಿಯರಿಂಗೇ. ಬರವಣಿಗೆ ಸಹಾ ಇಂಜಿನಿಯರಿಂಗ್, ಇಂಟಲೆಕ್ಚುವಲ್ ಇಂಜಿನಿಯರಿಂಗ್, ಇಂಜಿನಿಯರಿಂಗ್ ವಿತ್ ಸಾಯಿಲ್. ಯಾವುದನ್ನು ತೆಗೆದು ನೋಡಿದರೂ ಅದು ಇದರೊಳಗೆ ಬರುತ್ತದೆ. ಆದುದರಿಂದ ಎಲ್ಲದಕ್ಕೂ ಇಂಜಿನಿಯರಿಂಗ್‌ನ ಬಿಳಿ ಬಣ್ಣ ಕೊಟ್ಟು ಬಿಟ್ಟರೆ ಪ್ರತಿಯೊಂದನ್ನು ಖುಷಿಯಿಂದ ಎಲ್ಲರೂ ಸ್ವೀಕರಿಸಬಹುದು. ನಾಳೆ ಅದು ಆಗದಿದ್ದರೆ ಇದು ಮಾಡಬಹುದೆಂಬ ಬುದ್ಧಿ ಬರುತ್ತದೆ. ಐ.ಟಿ. ಯಲ್ಲಿ ಅವಕಾಶ ಕಡಿಮೆಯಾಗಿದೆ ಎಂದರೆ ಕೃಷಿಗೆ ಹೋಗಿ ಇಂಜಿನಿಯರಿಂಗ್ ಬಳಸಿ ಹೇಗೆ ಒಳ್ಳೆಯ ರೀತಿಯಲ್ಲಿ ಬೆಳೆ ತೆಗೆಯಬಹುದೆಂದು ಯೋಚಿಸಬಹುದು. ಇಂಜಿನಿಯರಿಂಗ್ ಎಂದರೆ ಹೊಸ ಕಲ್ಪನೆ ಬರಬೇಕು. ಹೊಸ ಕಲ್ಪನೆ ಬಂದರೆ ಶಿಕ್ಷಣ ಕ್ಷೇತ್ರ ಒಳ್ಳೆಯದಾಗಬಹುದು.

**ಪ್ರಶ್ನೆ 26 :** ಇತ್ತೀಚಿನ ದಿನಗಳಲ್ಲಿ ನೀವು ಶಿಕ್ಷಣಕ್ಕೆ, ಭಾಷೆಗೆ ಸಂಬಂಧಿಸಿದ ಕೃತಿಗಳನ್ನು ಬರೆಯುತ್ತಿದ್ದೀರಿ. ಈ ರೀತಿಯ ಬರಹಗಳನ್ನು ಬರೆಯಲು ಕಾರಣವೇನಾದರೂ ಇದೆಯೇ?

**ಉತ್ತರ :** ನಾನು ಬೈಲಿಂಗ್ಯುವಲ್ ಪುಸ್ತಕವನ್ನು, ಇಂಗ್ಲಿಷ್ ಕನ್ನಡ ಬೈಲಿಂಗ್ಯುವಲ್ ಪುಸ್ತಕಗಳನ್ನು ಬರೆದಿದ್ದೇನೆ. ಅದು ಭಾಷೆಗೆ ಸಂಬಂಧ ಪಟ್ಟು ಬರೆದಿದ್ದೇನೆ. ಶಿಕ್ಷಣಕ್ಕೆ ಸಂಬಂಧ ಪಟ್ಟು ಬರೆದಿದ್ದೇನೆ. ಶಿಕ್ಷಣಕ್ಕೆ ಸಂಬಂಧಪಟ್ಟ ಬೈಲಿಂಗ್ಯುವಲ್ ಪುಸ್ತಕ ಬರೆಯಲು ಕಾರಣ ಎರಡು ಭಾಷೆಯವರೂ ಓದಬೇಕು ಎಂಬುದು. ಯಾರಿಗೆ ಇಂಗ್ಲಿಷ್ ಎಂದರೆ ಅಲರ್ಜಿ ಇದೆಯೋ, ಪದವಿ ಶಿಕ್ಷಣ ಆಗಿದೆ ಆದರೆ ಇಂಗ್ಲಿಷ್ ಯಾರಿಗೆ ಅರ್ಥವಾಗುವುದಿಲ್ಲ ಅವರು ಕೂಡಾ ಓದಲಿ. ಸರಳವಾದ ಇಂಗ್ಲಿಷ್‌ನಲ್ಲಿದೆ. ಯಾರಿಗೆ ಕನ್ನಡ ಅಲರ್ಜಿ ಇದೆ ಅವರು ಬಲವಂತವಾಗಿಯಾದರೂ ಕನ್ನಡವನ್ನು ನೋಡಲಿ. ಕೆಲವನ್ನು ಇಂಗ್ಲಿಷ್‌ನಲ್ಲಿ ಕೆಲವನ್ನು ಕನ್ನಡದಲ್ಲಿ ಹೇಳಲು ಇದು ಕಾರಣ. ಆ ಪುಸ್ತಕವನ್ನು ಪ್ರಕಟಮಾಡಲು ಪ್ರಕಾಶಕರು ಬಹಳ ಹಿಂದೆ ಮುಂದೆ ನೋಡಿದರು. ಈಗ ಅದು ಬಹಳ ಚೆನ್ನಾಗಿ ಮಾರಾಟವಾಗುತ್ತಿದೆ. ನಾಲ್ಕನೇ ಮುದ್ರಣ ಬಂದಿದೆ. ನನಗೆ ಬಹಳ ಇಷ್ಟವಾದ ವಿಷಯ ಹೆತ್ತವರ ಶಿಕ್ಷಣ. ಹೆತ್ತವರಿಗೆ ಶಿಕ್ಷಣ ಕೊಡಬೇಕು. ಹೆತ್ತವರ ಶಿಕ್ಷಣದ ಬಗ್ಗೆ ಪುಸ್ತಕವೇ ಇಲ್ಲ. ಆ ಕಾರಣದಿಂದ 'ಗುರುಗಳಾಗಿ ತಾಯಿ ತಂದೆ' ಪುಸ್ತಕ ಬರೆದೆ. ಇವತ್ತಿನ ಹೆತ್ತವರಿಗೇ ಮೌಲ್ಯಗಳ ಬಗ್ಗೆ ಎಲ್ಲಾ ರೀತಿಯಲ್ಲೂ ಶಿಕ್ಷಣ ಕೊಡಬೇಕು. ಇಂಗ್ಲಿಷ್ ಕನ್ನಡ ಬೈಲಿಂಗ್ಯುವಲ್ ಪುಸ್ತಕ ಬರೆಯಲು ಕಾರಣವೇನೆಂದರೆ ಕನ್ನಡವನ್ನು

ಸಂಪೂರ್ಣ ತೊರೆದು ಬಿಟ್ಟು ಇಂಗ್ಲಿಷನ್ನು ಅಪ್ಪಿಕೊಳ್ಳುವುದಕ್ಕಿಂತ ಕನ್ನಡ ಮತ್ತು ಇಂಗ್ಲಿಷನ್ನೂ ಒಟ್ಟೊಟ್ಟಿಗೆ ಕಲಿಯಲು ಆಗುತ್ತದೆ. ಅದರ ವ್ಯಾಕರಣಕ್ಕೂ ಇದರ ವ್ಯಾಕರಣಕ್ಕೂ ತುಂಬಾ ದೂರವೇನೂ ಇಲ್ಲ, ಕಲಿತುಕೊಳ್ಳಲಾಗುತ್ತದೆ. ಆ ಕಾರಣದಿಂದ ಬರೆದೆ. ಆ ಪುಸ್ತಕ ಕೂಡಾ ನಾನು ಬರೆಯುವವರೆಗೆ ಬೈಲಿಂಗ್ಯುವಲ್ ಪುಸ್ತಕ ಬಂದಿರಲಿಲ್ಲ. ಅಂತರ್ಜಾಲದಲ್ಲಿ ಕನ್ನಡ ಕಲಿಸುವ ಯೋಚನೆ ಹಾಕಿಕೊಂಡಿದ್ದರು. ಅವರಿಗೆ ಕನ್ನಡವನ್ನು ಇಂಗ್ಲಿಷ್ ಉಪಯೋಗಿಸಿ ಕಲಿಯುವಂತಹ ಕೋರ್ಸ್ ಮಾಡಿಕೊಡಲು ಹೇಳಿದರು. ಅದನ್ನು ಮಾಡಿಕೊಟ್ಟೆ. ಕಲಿಯುವುದಕ್ಕೆ ಸಂಬಂಧಿಸಿದ ಪುಸ್ತಕವನ್ನೂ ಬರೆದುಕೊಟ್ಟೆ. ಅದೂ ಪ್ರಕಟವಾಯಿತು. ತುಳು ಸಾಹಿತ್ಯದವರು ಹೇಳಿದಂತೆ ಇಂಗ್ಲಿಷಿನ ಮೂಲಕ ತುಳು ಕಲಿಯುವುದನ್ನು ಬರೆದೆ. ಅದಕ್ಕೆ ಹೆಚ್ಚು ಬೇಡಿಕೆ ಬಂತು. ಹೀಗೆ ಜೀವನ ಪ್ರವಾಹದಲ್ಲಿ ಹೋಗುವುದು ಅಷ್ಟೆ ಹೊರತು ಏನು ಮಾಡುತ್ತೇನೆ ಎಂದು ಗೊತ್ತಾಗುವುದಿಲ್ಲ.

**ಪ್ರಶ್ನೆ 27 :** ಪುಸ್ತಕ ಪ್ರಕಟಣೆಯ ಇಂದಿನ ಸವಾಲುಗಳ ಬಗ್ಗೆ ತಿಳಿಸಿ.

**ಉತ್ತರ :** ಈಗ ಓದುವವರ ಸಂಖ್ಯೆ ಕಡಿಮೆಯಾಗಲಿಲ್ಲ. ಆದರೆ ಬೆಳೆಯಲಿಲ್ಲ. ಈಗಿನ ಶಿಕ್ಷಣದಲ್ಲಿ ಓದುವ ಆಸಕ್ತಿಯನ್ನು ಸೃಷ್ಟಿಸುವಂತಹ ಆಯಾಮ ಅದಕ್ಕೆ ಇಲ್ಲ. ಆ ಕಾರಣದಿಂದಾಗಿ ಓದುವವರ ಸಂಖ್ಯೆ ಎಷ್ಟು ಇರಬೇಕೋ ಅಷ್ಟು ಇಲ್ಲ. ಕಾರಂತರು ಹೇಳುತ್ತಿದ್ದರು; ನನ್ನ ಸಾವಿರ ಕಾದಂಬರಿಗೆ ಓದುಗರಿದ್ದಾರೆ ಅವರಿಗೇ ನಾನು ಬರೆಯುವುದೆಂದು. 1936ರಲ್ಲಿ ಅವರ 'ಜೋಮನ ದುಡಿ' ಪ್ರಕಟವಾದದ್ದು. ಈಗ 70 ವರ್ಷ ಕಳೆದರೂ ನಾನು ಅದನ್ನೇ ಹೇಳುತ್ತೇನೆ. ಸಾವಿರ ಮಂದಿ ನನ್ನ ಕಾದಂಬರಿಯನ್ನು ಓದುತ್ತಾರೆ. ಆ ಸಾವಿರ ಮಂದಿಗೋಸ್ಕರ ನಾನು ಬರೆಯುತ್ತೇನೆ. ಬರೆದ ಸಾವಿರ ಕಾದಂಬರಿಯನ್ನು ಸರಿಯಾದ ರೀತಿಯಲ್ಲಿ ವಿತರಣೆ ಮಾಡಿದರೆ ಮೂರು-ನಾಲ್ಕು ತಿಂಗಳಲ್ಲಿ ಖರ್ಚಾಗುತ್ತದೆ. ಪುಸ್ತಕವನ್ನು ಬೇಕಾದವರಿಗೆ ತಲುಪಿಸಲು ಸಮರ್ಥರಾದ ಪುಸ್ತಕ ವಿತರಕರು ಕರ್ನಾಟಕದಲ್ಲಿ ಇಲ್ಲ. ಬೆಂಗಳೂರಿನಲ್ಲಿ ಪ್ರಕಾಶನಗೊಂಡಂತಹ ಪುಸ್ತಕ ಮೈಸೂರು ಹುಬ್ಬಳ್ಳಿಗಳಲ್ಲಿ ಸಿಗುವುದಿಲ್ಲ. ಪ್ರಕಾಶಕರು ಬೇರೆ ಇರಬೇಕು, ವಿತರಕರು ಬೇರೆ ಇರಬೇಕು. ಪುಸ್ತಕ ಓದುವವರು ಖಂಡಿತ ಇದ್ದಾರೆ. ಅವರ ಸಂಖ್ಯೆ ಮೊದಲಿಗಿಂತ ಸ್ವಲ್ಪ ಮಟ್ಟಿಗೆ ದೊಡ್ಡದಾಗಿದೆ. ಇಂಗ್ಲಿಷ್ ವ್ಯಾಮೋಹದಿಂದಾಗಿ ಕನ್ನಡದ ಬಗ್ಗೆ ಪ್ರೀತಿ ಕಡಿಮೆಯಾಗಿರುವುದು ಹೌದು. ಮನೆಯಲ್ಲಿ ಅಂತಹ ಓದುವ ಸಂಸ್ಕೃತಿ, ವಾತಾವರಣ ಇದ್ದಲ್ಲಿ ಓದುತ್ತಾರೆ. ಪುಸ್ತಕಗಳನ್ನು ಅಂತಹ ಮನೆಗಳಿಗೆ ತಲುಪಿಸುವಂತಹ ಯೋಜನೆಯನ್ನು ಸರಕಾರ ಅಥವಾ ಪುಸ್ತಕ ಅಕಾಡೆಮಿ, ಕನ್ನಡ ಸಂಸ್ಕೃತಿ ಇಲಾಖೆ ಅಥವಾ ಕನ್ನಡ ಸಾಹಿತ್ಯ ಪರಿಷತ್ತು ಮಾಡಿದರೆ ಒಳ್ಳೆಯದು.

ಪುಸ್ತಕ ಓದುವವರಿದ್ದಾರೆ ಅದು ಅವರ ಎದುರಿಗೆ ಬರಬೇಕು. ಮಾನಸಿಕವಾಗಿ ಟಿ.ವಿ. ನೋಡಿ ಎದುರು ಬರುತ್ತಾರೆ. ಪುಸ್ತಕ ನೋಡಿ ಕೂಡಾ ಹಾಗೆಯೇ ಬರಬೇಕು. ಪುಸ್ತಕ ಹೋಗಿ ನೋಡಿಕೊಂಡು ಕೊಳ್ಳುವ ಸಂಸ್ಕೃತಿ ಬಹಳ ಮಟ್ಟಿಗೆ ಮಾಯವಾಗಿದೆ.

**ಪ್ರಶ್ನೆ 28 :** ಲೇಖಕರಾಗಿ ಪ್ರಶಸ್ತಿ ಪುರಸ್ಕಾರಗಳ ಬಗ್ಗೆ ನಿಮ್ಮ ಅಭಿಪ್ರಾಯವೇನು?
**ಉತ್ತರ :** ಪುರಸ್ಕಾರದಿಂದ ಲೇಖಕನಿಗೆ ಲೇಖಕನಾಗಿ ಅವನ ಅಭ್ಯುದಯಕ್ಕೆ ಅಥವಾ ಅವನ ಸಾಮರ್ಥ್ಯ ಬೆಳೆಯುವುದಕ್ಕೆ ಏನೂ ಪ್ರಯೋಜನ ಆಗುವುದಿಲ್ಲ. ಸ್ವಲ್ಪ ದಿವಸ ಅವನನ್ನು ಕರೆದು ಮಾತನಾಡಿಸಬಹುದು, ಹೊಗಳಬಹುದು ಅದರಲ್ಲಿಯೂ ನನಗೇನೂ ಕಾಣುವುದಿಲ್ಲ. ನನಗೆ ನೀವು ಪ್ರಶಸ್ತಿ ಕೊಟ್ಟರೆ ಹಣವಾಗಿದ್ದರೆ ಅದು ಖರ್ಚಾಗಿ ಹೋಗುತ್ತದೆ. ಆ ನಂತರ ನಾನು ನಾನೇ. ಸ್ವಲ್ಪ ಸಮಯದ ನಂತರ ನನಗೆ ಪ್ರಶಸ್ತಿ ಬಂದುದನ್ನು ಇತರರಿಗೆ ಹೇಳಬೇಕು ಅಷ್ಟೆ. ಅದು ನನಗೇನೂ ಸುಖ ಕೊಡುವುದಿಲ್ಲ. ನೀವಾಗಿ ಹೇಳಿದರೂ ನನಗೇನೂ ಅದು ಅನಿಸುವುದಿಲ್ಲ. ನನಗಂತೂ ಆ ಬಗ್ಗೆ ಆಸಕ್ತಿ ಇಲ್ಲ.

**ಪ್ರಶ್ನೆ 29 :** ಲೇಖಕನಿಂದ ಸಮಾಜದಲ್ಲಿ ಬದಲಾವಣೆಯನ್ನು ತರಲು ಸಾಧ್ಯವಿದೆಯೇ?
**ಉತ್ತರ :** ಸಮಾಜದಲ್ಲಿ ಬದಲಾವಣೆ ತರುವ ಸಂಪೂರ್ಣ ಹೊಣೆಗಾರಿಕೆ ಲೇಖಕನ ಮೇಲೆ ಇಲ್ಲ, ಇರಬೇಕೆಂದೂ ಇಲ್ಲ. ಸಮಾಜದಲ್ಲಿ ಬದಲಾವಣೆ ತರುವ ಕೆಲಸ ಎಲ್ಲರೂ ಮಾಡಬಹುದು. ಲೇಖಕನ ಬರಹದಿಂದ ಸಮಾಜದಲ್ಲಿ ಬದಲಾವಣೆ ಆಗುವುದಿಲ್ಲವೆಂದು ನಾನು ಹೇಳುವುದಿಲ್ಲ. ತ.ರಾ.ಸುಬ್ಬರಾಯರು ಮತ್ತು ಬಸವರಾಜ ಕಟ್ಟೀಮನಿಯವರು ಕಾವಿಧಾರಿಗಳ ಬಗ್ಗೆ ಬಹಳ ಕಾದಂಬರಿಗಳನ್ನು ಬರೆದರು. ಒಮ್ಮೆ ಧೈರ್ಯವಾಗಿ ಬರೆದಿದ್ದಾರೆ. ಆ ದೃಷ್ಟಿಯಿಂದ ನಾವು ಕಾವಿಧಾರಿಗಳನ್ನು ನೋಡುವಂತಹ ದೃಷ್ಟಿಕೋನವನ್ನು ತಂದು ಕೊಟ್ಟವರು. ಹಿಂದೆ ಕಾವಿ ತೊಟ್ಟವರ ಕಾಲು ತೊಳೆದು ನೀರು ಕುಡಿಯುತ್ತಿದ್ದರು. ಈಗ ಕಾವಿ ತೊಟ್ಟವರ ವಿಷಯ ನಮಗೆ ಗೊತ್ತಿದೆ. ಹೇಳುವ ಅವಶ್ಯಕತೆಯಿಲ್ಲ. ಆನಂತರ ಕಾಲದಲ್ಲಿ ಬರಹದಿಂದ ಸಮಾಜದಲ್ಲಿ ಬಹಳ ದೊಡ್ಡ ಬದಲಾವಣೆ ಆಗಿದೆ. ಕಾರಂತರು ಕಾದಂಬರಿಗಳಲ್ಲಿ ಜೀವನಾನುಭವವನ್ನು 'ಕುಡಿಯರ ಕೂಸು'ವಿನಲ್ಲಿ, 'ಚೋಮನ ದುಡಿ'ಯಲ್ಲಿ ಹೇಳುತ್ತಾರೆ. ಅದನ್ನು ಓದಿದ ಜನರಲ್ಲಿ ಏನು ಪ್ರಭಾವ ಆಯ್ತು? ಅಥವಾ ದೇವನೂರು ಮಹಾದೇವನವರ ದಲಿತರ ಕಾದಂಬರಿಗಳು ಒಂದು ಸಂವೇದನೆಯನ್ನು ಸಮಾಜದಲ್ಲಿ ಉಂಟು ಮಾಡುತ್ತದೆ. ಸಂವೇದನೆಯೆಂದರೆ ಚಿಂತನೆಯೂ ಹೌದು. ಇವೆರಡಕ್ಕೂ ಒಂದು ಚಾಲನೆ ಕೊಡುತ್ತದೆ, ಅದು ಹೀಗೂ ಇದೆಯೇ ಎಂದು. ಹೀಗೆ ಸಣ್ಣ ಸಣ್ಣ ಬದಲಾವಣೆಗಳು ಪ್ರತಿಯೊಬ್ಬರ ಮನಸ್ಸಿನಲ್ಲಿ ಆಗುತ್ತದೆ. ಪ್ರತಿಯೊಬ್ಬರಲ್ಲಿ ಅಲ್ಲದಿದ್ದರೂ ಬಹಳ ಮನಸ್ಸುಗಳಲ್ಲಿ ಆಗುತ್ತದೆ. ಅದು

ಒಬ್ಬರಿಂದ ಇನ್ನೊಬ್ಬರಿಗೆ ಆ ಸಂದೇಶ ಹೋಗುತ್ತದೆ. ಅದು ಸಾಹಿತ್ಯದ ಮೂಲಕ ಆಗಬಹುದಾದಂತಹ ಬದಲಾವಣೆ, ಸಾಹಿತ್ಯದ ಮೂಲಕ ಆಗುವ ಸಾಂಸ್ಕೃತಿಕವಾದ ಬದಲಾವಣೆ. ಇನ್ನೊಬ್ಬರಿಗೆ ಹಿಂಸಿಸದೆ ಹೇಗೆ ಬದುಕಬಹುದು ಎಂಬುದೂ ಸಾಹಿತ್ಯದಿಂದ ಬರಬಹುದು. ಹಾಗೆ ಮಾಡಿದುದರಿಂದ ಒಳ್ಳೆಯದಾದದ್ದು ಎಂದು ಸಾಹಿತ್ಯದಲ್ಲಿ ಬರಬಹುದು. ಓದಿ ಓದಿ ಮನುಷ್ಯನಲ್ಲಿ ಬದಲಾವಣೆ ಆಗುತ್ತದೆ. ಆದರೆ ಅದನ್ನೇ ನಾವು ಮುಖ್ಯ ಗುರಿಯನ್ನಾಗಿಟ್ಟುಕೊಂಡು ಪುಸ್ತಕ ಬರೆಯಲು ಆಗುವುದಿಲ್ಲ. ಅದು ಕೇವಲ ಒಂದು ಪ್ರವಚನವಾಗುತ್ತದೆ. ಅಂಥದ್ದನ್ನು ಎಷ್ಟೋ ಮಂದಿ ಬರೆಯುತ್ತಾರೆ. ಅದನ್ನು ನಾನು ಸಾಹಿತ್ಯ ಎಂದು ಕರೆಯುವುದಿಲ್ಲ, ಪುಸ್ತಕ ಅಷ್ಟೆ. ಸಾಹಿತ್ಯ ಎಂದು ಹೇಳುವ ಕಕ್ಷೆಯೊಳಗೆ ಕವಿತೆ, ಕಾದಂಬರಿ, ನಾಟಕ, ಪ್ರಬಂಧ ಎಂದು ಹಾಕಿಕೊಂಡರೆ ಅದು ಹೇಗಿರಬೇಕು, ಏನೇನು ಮಾಡಬೇಕು ಎಂದರೆ ನೇರವಾಗಿ ಇದನ್ನು ಹೇಳದೆ ಇದು ಅದರೊಳಗೆ ಇದ್ದರೆ ಆಯಿತು ಅಷ್ಟೆ. ಅದರಿಂದ ಸಮಾಜದಲ್ಲಿ ಬದಲಾವಣೆ ಆಗಬಹುದು.

**ಪಶ್ನೆ 30 :** ದೇವರು, ಧರ್ಮದ ಬಗ್ಗೆ ನಿಮ್ಮ ಅಭಿಪ್ರಾಯವೇನು?
**ಉತ್ತರ :** ದೇವರನ್ನು ನಾನು ನಂಬುವುದಿಲ್ಲ. ದೇವರನ್ನು ನಂಬುವುದಿಲ್ಲವೆಂದರೆ ನಾನು ದೇವರ ಬಗ್ಗೆ ಮಾತಾನಾಡುವುದೇ ಇಲ್ಲ. ನಾವು ಯಾರೂ ಮಾತಾನಾಡುವುದಿಲ್ಲ. 'ತೀರ'ದಲ್ಲಿ ನಾನು ಬರೆದಿದ್ದೇನೆ ದೇವರ ಬಗ್ಗೆ ಮಾತಾನಾಡುವುದಿಲ್ಲವೆಂದು. ದೇವರನ್ನು ತೋರಿಸಿ ನಾನು ನಂಬುತ್ತೇನೆ. ದೇವರನ್ನೇ ತೋರಿಸಬೇಕೆಂದಿಲ್ಲ. ಇದ್ದಾನೆಂದು ತೋರಿಸಿ, ಭೂತ ಪ್ರೇತ ತೋರಿಸಿ. ಅದು ಅಲ್ಲಿ ನಡೆಯಿತಂತೆ ಇಲ್ಲಿ ನಡೆಯಿತಂತೆ ಅನ್ನುತ್ತಾರೆ. ನಡೆದುದನ್ನ ತೋರಿಸಿ. ನಾನು ಕಿಲ್ಲೂರು, ಉಪ್ಪಿನಂಗಡಿ, ಹೊಸ್ಮಾರು ಹೀಗೆ ತುಂಬಾ ಕಡೆಗೆ ಹೋಗಿದ್ದೆ, ಭೂತ ಚೇಷ್ಟೆಯನ್ನು ನೋಡಲಿಕ್ಕೆ. ಬಂದ ಮೇಲೆ ಆ ಬಗ್ಗೆ ಲೇಖನ ಬರೆದೆ. 'ಸಾವಿನ ಆಚೆಗೆ ಏನಿದೆ' ಎಂದು ತರಂಗದವರು ಆರಂಭ ಮಾಡಿದ್ದರು. ಅಲ್ಲಿ ಬರೆದಿದ್ದೆ. 'ಅನಂತರ' ಕಾದಂಬರಿಯ ಮುನ್ನುಡಿಯಲ್ಲಿ ಈ ಬಗ್ಗೆ ಬರೆದಿದ್ದೇನೆ. ಪುನರ್ಜನ್ಮದ ಬಗ್ಗೆ ಟಿ.ವಿ.ಯಲ್ಲಿ ಬರುತ್ತಿದೆಯಲ್ಲ, ಅದು ತೀರ ಹೊಲಸು, ಅದು ಸುಳ್ಳು. ಹಿಪ್ನಟೈಸ್ ಪ್ರಭಾವಕ್ಕೆ ನೀವು ಒಳಗಾಗಬೇಕಿದ್ದರೆ ಹಿಪ್ನಟೈಸ್ ಮಾಡುವ ವ್ಯಕ್ತಿ ಹೇಳಿದ ಹಾಗೆ ನೀವು ಕೇಳಬೇಕಾಗುತ್ತದೆ. ನಾನು ಕೇಳುವುದಿಲ್ಲ ಎಂದಾದರೆ ಹಿಪ್ನಟೈಸ್ ಮಾಡಲು ಆಗುವುದಿಲ್ಲ. ಎರಡನೆಯದಾಗಿ ನಿಮಗೆ ಗೊತ್ತಿಲ್ಲದಂತೆ ಹಿಪ್ನಟೈಸ್ ಮಾಡಬಹುದು, ನೀವು ದುರ್ಬಲ ಮನಸ್ಸಿನವರಾಗಿರಬೇಕು. ಅವರಾಗಿ ಒಪ್ಪಿಸಿ ಬಿಡುತ್ತಾರೆ. ಮಂತ್ರವಾದಿ ಹೇಗೆ ಮಂತ್ರ ಪ್ರಯೋಗ ಮಾಡುತ್ತಾನೆಂದು ನಾನು ನೋಡಿದ್ದೇನೆ, ಅವನೊಂದಿಗೆ ಪ್ರಶ್ನೆ ಕೇಳಿದ್ದೇನೆ, ಮಾತಾನಾಡಿದ್ದೇನೆ. ನಿಮ್ಮದು

ಪುನರ್ಜನ್ಮ ಎಂದಾಗಿದ್ದರೆ ಒಂದು ಜನ್ಮ ಆಗಿರಬೇಕಲ್ಲ?, ಯಾರದು ಮೊದಲ ಜನ್ಮ, ಯಾರು ಪುನರ್ಜನ್ಮ ಎಂದು ಹೇಗೆ ಹೇಳುತ್ತೀರಿ. ಹಾಗಿದ್ದರೆ ನನ್ನ ಹಿಂದಿನ ಜನ್ಮದ ನೆನಪು ನನಗೆ ಬರಬೇಕಲ್ಲ. ಅವನು ಬರಿಸುವುದೇನೋ?. ಬಂದ ನಂತರ ನಾನು ಹೇಳುವುದನ್ನು ಪುನರ್ಜನ್ಮ ಎಂದು ಹೇಗೆ ಹೇಳುತ್ತೀರಿ?. ಹಿಪ್ನಟೈಸ್ ಮಾಡಿ ಮನುಷ್ಯರು ಅದರ ಪ್ರಕಾರ ನಡೆದುಕೊಳ್ಳುವುದನ್ನು ನಾನು ನೋಡಿದ್ದೇನೆ. ಅದು ಸುಪ್ತ ಮನಸ್ಸಿನಲ್ಲಿದ್ದುದನ್ನು ಪ್ರಜ್ಞಾ ಮನಸ್ಸಿಗೆ ತರಲು ಆಗುತ್ತದೆ. ಸಿಯಾನ್ಸ್ ಎಂದು ಅಮೇರಿಕದಲ್ಲಿ ತುಂಬಾ ಜನಪ್ರಿಯ ಆಗಿದೆ. ನಮ್ಮ ದೇಶದಲ್ಲಿ ಈಗ ಇದೆ. ಸಿಯಾನ್ಸ್‌ನ ತಜ್ಞರೇ ಇದ್ದಾರೆ. ಮನುಷ್ಯನಾಗಿ ಹುಟ್ಟಿದ ಪೂರ್ವಜನ್ಮದ ಮಾಹಿತಿಯನ್ನು ಪಡೆಯಲು ಸಾಧ್ಯವಿಲ್ಲ. ನನ್ನ ಪ್ರಕಾರ ಮನುಷ್ಯನು ಸಾಯುವಾಗ ಅಲ್ಲಿಗೆ ಅದು ಮುಗಿಯಿತು. ಮನುಷ್ಯ ತನಗೆ ತಾನು ಅತೀವವಾದ, ಅನಗತ್ಯವಾದ ಪ್ರಾಮುಖ್ಯತೆ ಕೊಟ್ಟಿದ್ದರಿಂದ ಅವನು ಹೀಗೆ ಭಾವಿಸುವುದು. ನಿಜವಾಗಿ ಯಾರಿಗೂ ಸಾಯಲು ಮನಸಿಲ್ಲ. ನನಗೂ ಇಲ್ಲ. ಆದ್ದರಿಂದ ನನಗೆ ಪುನರ್ಜನ್ಮದ ಬಗ್ಗೆ ಆಸೆ.

ಬದುಕುವ ರೀತಿಯೇ ನಮ್ಮ ಧರ್ಮ. ಧರ್ಮ ಎನ್ನುವಂಥದ್ದು ಹೊರಗೆ ಇಲ್ಲ. ಧರ್ಮ ಎನ್ನುವಂಥದ್ದು ನಿಮ್ಮೊಳಗೇ ಇರುತ್ತದೆ. ನೀವು ನಡೆದುಕೊಳ್ಳುವ ರೀತಿ, ನಿಮ್ಮ ನಡೆ–ನುಡಿ, ನಿಮ್ಮ ಆಚಾರ–ವಿಚಾರ ಅದೇ ನಿಮ್ಮ ಧರ್ಮ. ಮತ್ತು ನೀವು ಇಂಥ ಧರ್ಮಕ್ಕೆ ಸೇರಿದವರೆಂದು ಹೇಳುವುದು ನಿಜವಾಗಿ ಅದಕ್ಕೆ ಅರ್ಥ ಇಲ್ಲ. ನಿಮ್ಮ ಲಾಂಛನ ಅದು, ಧರ್ಮ ಅಲ್ಲ. ನೀವು ಲಾಂಛನದ ಮೂಲಕ ಧರ್ಮವನ್ನು ಗುರುತಿಸಲು ಆಗುವುದಿಲ್ಲ. ಅಥವಾ ಮಾತಿನ ಮೂಲಕ ಆಗುವುದಿಲ್ಲ. ನಿಮ್ಮ ಯಾವುದೇ ಕ್ರಿಯೆಯ ಮೂಲಕ ಆಗುವುದಿಲ್ಲ. ನೀವು ಗುಮಾಸ್ತ ಆಗಿದ್ರೆ ನೀವು ಗುಮಾಸ್ತ, ನೀವು ಮೇಷ್ಟ್ರಾಗಿದ್ರೆ ನೀವು ಮೇಷ್ಟ್ರು, ನೀವು ಕೃಷಿಕರಾಗಿದ್ದರೆ ಕೃಷಿಕ, ಕಲಾಕಾರರಾಗಿದ್ದರೆ ಕಲಾಕಾರರು, ಸಂಗೀತಗಾರರಾಗಿದ್ದರೆ ಸಂಗೀತಗಾರರು, ನೀವು ಕಳ್ಳ ಆಗಿದ್ದರೆ ಕಳ್ಳ. ಅದು ಅವರವರ ಧರ್ಮ. ಕಳ್ಳನಿಗೆ ಕಳ್ಳತನವೇ ಧರ್ಮ, ಬದುಕೇ ಧರ್ಮ. ಅವನ ಕರ್ಮವೇ ಅವನಿಗೆ ದೇವರು. ದೇವರೆಂಬುದು ಕರ್ಮ. ಧರ್ಮ ಎಂಬುದು ಅವನು ಬದುಕುವ ರೀತಿ. ಸಜಾತಿಗಳು ಇವೆ ಎಂದುಗೊತ್ತು. ಜಾತಿಗಳು ಬೇಡ. ಜಾತಿಗಳ ಗುರುತಿಸುವಿಕೆ ಒಂದು ಅಗತ್ಯವಾಗಿರುವ ಕಾರಣದಿಂದ ಗುರುತಿಸಕೊಳ್ಳಬೇಕಾಗಿದೆ ಹೊರತು ನಿಜವಾಗಿ ಜಾತಿ ಎಂಬುದೊಂದು ಇಲ್ಲ. ಜಾತಿಗೆ ವ್ಯಾಖ್ಯಾನ ಇಲ್ಲ. ಅದು ಒಂದು ಕೃತಕವಾದ ವರ್ಗೀಕರಣ. ಮನುಷ್ಯನೊಂದಿಗೆ ವ್ಯವಹರಿಸುವಾಗ ಜಾತಿ, ಹೆಣ್ಣು, ಗಂಡು ಎಂಬುದು ಕೂಡಾ ಬೇಡ. ಕೆಲಸ ಮುಖ್ಯ. ಇದೆಲ್ಲಾ ಬಹಳ ಅಪಕಲ್ಪನೆಗಳು.

*********

